ಜನಪ್ರಿಯ ಪುಸ್ತಕ ಮಾಲೆ

# ಜನಪದ ಕಾವ್ಯ ಕಥೆಗಳು

ಜೀ.ಶಂ.ಪರಮಶಿವಯ್ಯ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

JANAPADA KAVYA KATHEGALU—A critical analysis on Janapada literature by J. S. Paramashivaiah and published by B. Parthasarathy, Director, Directorate of Kannada & Culture, No. 14/3A, Nrupathunga Road, Bangalore-560 002.
Pp : xvi+416



1990

ಬೆಲೆ : ರೂ. 17/-

ಮುದ್ರಕರು : ಅಶೋಕ್ ಕುಮಾರ್, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು-18

# ಅರಿಕೆ

ಕನ್ನಡದಲ್ಲಿ ಪ್ರತಿವರ್ಷವೂ ಪ್ರಕಟವಾಗುತ್ತಿರುವ ಪುಸ್ತಕಗಳ ಸಂಖ್ಯೆಗೆ ಹೋಲಿಸಿದರೆ, ಅದಕ್ಕೆ ಅನುಗುಣವಾಗಿ ಅವುಗಳನ್ನು ಕೊಂಡು ಓದುವ ಸಹೃದಯರು ಸಾಕಷ್ಟಿಲ್ಲವೆಂಬ ಕೊರಗು ಕನ್ನಡ ಪುಸ್ತಕೋದ್ಯಮವನ್ನು ಯಾವತ್ತಿನಿಂದಲೂ ಕಾಡುತ್ತಿರುವ ಸಂಗತಿ. ಇತ್ತೀಚೆಗಂತೂ ದಿನದಿಂದ ದಿನಕ್ಕೆ ಏರುತ್ತಿರುವ ಕಾಗದದ ಬೆಲೆ ಹಾಗೂ ಮುದ್ರಣ ವೆಚ್ಚಗಳಿಂದಾಗಿ ಪುಸ್ತಕದ ಬೆಲೆಯೂ ಒಂದು ಹೊರೆಯಾಗಿ, ಎಂಥ ಪುಸ್ತಕ ಪ್ರೇಮಿಗಳೂ ಪುಸ್ತಕಗಳನ್ನು ಕೊಳ್ಳಲು ಹಿಂಜರಿಯುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿನ್ನೆಲೆಯಲ್ಲಿ ಒಳ್ಳೆಯ ಪುಸ್ತಕಗಳನ್ನು ಆಯ್ದು ಮುದ್ರಿಸಿ, ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ಪುಸ್ತಕಪ್ರೇಮಿಗಳಿಗೆ ತಲುಪಿಸುವ ವ್ಯವಸ್ಥೆಯೊಂದು ರೂಪುಗೊಳ್ಳುವುದಾದರೆ ಅದು ಖಂಡಿತವಾಗಿಯೂ ಕನ್ನಡ ಪುಸ್ತಕೋದ್ಯಮ ಹಾಗೂ ವಾಚನಾಭಿರುಚಿಯನ್ನು ಸಂವರ್ಧನಗೊಳಿಸುವ ದಿಕ್ಕಿನಲ್ಲಿ ಒಂದು ಮಹತ್ವದ ಪ್ರಯತ್ನವಾಗುತ್ತದೆ.

ವಾಸ್ತವದ ಸಂಗತಿ ಎಂದರೆ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು, ಈಗಾಗಲೇ ಹಲವು ಸಲ ಈ ಬಗೆಯ ಪ್ರಯತ್ನದಲ್ಲಿ ತೊಡಗಿ ಅದರ ಮೌಲಿಕತೆಯನ್ನು ಮನದಟ್ಟು ಮಾಡಿಕೊಂಡಿದೆ ಎನ್ನುವುದು. ಹಿಂದೆ ಕನ್ನಡ ಮತ್ತು ಸಂಸ್ಕೃತಿ ಪ್ರಸಾರ ಯೋಜನೆಯ ಅಂಗವಾಗಿ ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಮೊದಲಾದ ಶ್ರೇಷ್ಠ ಜನಪ್ರಿಯ ಕೃತಿಗಳು ಅತ್ಯಂತ ಕಡಿಮೆ ಬೆಲೆಯಲ್ಲಿ ಶ್ರೀ ಸಾಮಾನ್ಯರಿಗೆ ತಲುಪಿದವೆಂಬುದನ್ನು ನೆನೆಯಬಹುದು. ಅನಂತರ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ, 1982ರಲ್ಲಿ ಒಂದು ನೂರಾ ಹದಿನೇಳು ಪುಸ್ತಕಗಳನ್ನು, 1985 ರಲ್ಲಿ ಐವತ್ತು ಪುಸ್ತಕಗಳನ್ನು ಮತ್ತು ಈಚೆಗೆ ಇನ್ನೂ ಮೌಲಿಕವಾದ ಹಲವು ಕೃತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸುಲಭ ಬೆಲೆಯಲ್ಲಿ ಜನಕ್ಕೆ ದೊರೆಯುವಂತೆ ಪ್ರಕಟಿಸಿದೆ. ಈ ಎಲ್ಲ ಸಂದರ್ಭಗಳಲ್ಲಿ ಈ ಪ್ರಕಟಣೆ

ಗಳ ಬಗ್ಗೆ ಸಾರ್ವಜನಿಕರಿಂದ ದೊರೆತ ಪ್ರತಿಕ್ರಿಯೆ ಹಾಗೂ ಬೇಡಿಕೆಯ ಪರಿಣಾಮವಾಗಿ, ಇದೀಗ ಕರ್ನಾಟಕ ಸರ್ಕಾರವು ಪುಸ್ತಕೋದ್ಯಮವನ್ನು ಜನ ಪರವಾಗಿ ಮತ್ತು ದೃಢವಾಗಿ ಬೆಳೆಸುವ ಉದ್ದೇಶದಿಂದ "ಕನ್ನಡ ಪುಸ್ತಕ ಪ್ರಾಧಿಕಾರ" ಎಂಬ ದೀರ್ಘಕಾಲಿಕ ಯೋಜನೆಯೊಂದನ್ನು ರೂಪಿಸಲು ಪರಿಶೀಲಿಸುತ್ತಿದೆ.

ಲೇಖಕ–ಪ್ರಕಾಶಕ–ಓದುಗರ ನಡುವೆ ಒಂದು ಬಗೆಯ ಗಾಢ ಸಂಬಂಧ ವನ್ನು ಏರ್ಪಡಿಸುತ್ತಾ, ಶ್ರೀಸಾಮಾನ್ಯರಲ್ಲಿ ವಾಚನಾಭಿರುಚಿಯನ್ನೂ, ಪುಸ್ತಕ ಪ್ರೀತಿಯನ್ನು ಎಚ್ಚರಗೊಳಿಸುತ್ತಾ, ರಾಜ್ಯಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕ ಗಳು ಭಾರವಾಗದ ಬೆಲೆಯಲ್ಲಿ ದೊರೆಯುವಂಥ ಸ್ಥಾಯೀ ವ್ಯವಸ್ಥೆಯೊಂದನ್ನು ರೂಢಿಸುವುದು ಈ ಯೋಜನೆಯ ಗುರಿಯಾಗಿದೆ.

ಈ ಪ್ರಾಧಿಕಾರವು ಮೂಲತಃ ಒಂದು ಸ್ವಾಯತ್ತ ಮಂಡಳಿಯಂತೆ ಕಾರ್ಯ ನಿರ್ವಹಿಸಬೇಕಾಗಿದೆ. ಇದರ ಮೊದಲ ಹಂತಗಳಲ್ಲಿ ಸರ್ಕಾರವು ಆರ್ಥಿಕ ನೆರವನ್ನು ನೀಡುವುದು ಅಗತ್ಯವಾದರೂ, ಕ್ರಮಕ್ರಮೇಣ ಅದು ತನ್ನ ಸ್ವ ಸಾಮರ್ಥ್ಯ ಹಾಗೂ ಗಳಿಕೆಯ ಮೇಲೆ, ಕೇವಲ ವ್ಯಾಪಾರಬುದ್ಧಿಗೆ ಮೀರಿದ ನಿಲುವಿನಲ್ಲಿ ತನ್ನನ್ನು ತಾನು ಬೆಳೆಸಿಕೊಳ್ಳಬೇಕಾಗಿದೆ.

ಈ ಬಗೆಯ ಆಶಯಗಳಿಂದ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು "ಜನಪ್ರಿಯ ಪುಸ್ತಕ ಮಾಲೆ"ಯ ಸರಣಿಯಲ್ಲಿ ಕನ್ನಡದ ಕೆಲವು ಒಳ್ಳೆಯ ಕೃತಿಗಳನ್ನು ಆಯ್ದು ಪುನರ್‌ಮುದ್ರಿಸಿ ಪ್ರಕಟಿಸುವ ಕಾರ್ಯವನ್ನು ಪ್ರಾರಂಭಿಸುತ್ತಿದೆ. ಈ ಸರಣಿಯಲ್ಲಿ ಸಾಹಿತ್ಯದ ವಿವಿಧ ಪ್ರಕಾರ ಗಳನ್ನು ಪ್ರತಿನಿಧಿಸುವ ಕೃತಿಗಳನ್ನು ಆಯ್ಕೆ ಸಮಿತಿಯ ಸೂಚನೆಯ ಮೇರೆಗೆ ಪ್ರಕಟಣೆಗೆ ತೆಗೆದುಕೊಳ್ಳಲಾಗಿದೆ. ಈ ಕೃತಿಗಳನ್ನು ಕನ್ನಡ ಓದುಗರು ವಿಶ್ವಾಸ ದಿಂದ ಒಪ್ಪಿಕೊಳ್ಳುತ್ತಾರೆಂದು ನಾವು ಭಾವಿಸಿದ್ದೇವೆ.

ಈ "ಜನಪ್ರಿಯ ಪುಸ್ತಕ ಮಾಲೆ"ಯ ಆಯ್ಕೆ ಸಮಿತಿಯ ಸದಸ್ಯರಾದ ಡಾ॥ ಹಾ. ಮಾ. ನಾಯಕ, ಡಾ॥ ಜಿ. ಎಸ್. ಶಿವರುದ್ರಪ್ಪ, ಪ್ರೊ. ಕೀರ್ತಿ ನಾಥ ಕುರ್ತಕೋಟಿ, ಡಾ॥ ಗಿರಡ್ಡಿ ಗೋವಿಂದರಾಜ, ಶ್ರೀ ಪೂರ್ಣಚಂದ್ರ

ತೇಜಸ್ವಿ, ಡಾ॥ ಚಂದ್ರಶೇಖರ ಕಂಬಾರ, ಡಾ॥ ರಾಜೀವ್ ತಾರಾನಾಥ, ಮತ್ತು ಶ್ರೀ ಬರಗೂರು ರಾಮಚಂದ್ರಪ್ಪ ಅವರಿಗೆ, ಅನುಮತಿ ಕೊಟ್ಟ ಎಲ್ಲ ಲೇಖಕರಿಗೆ, ಈ ಪುಸ್ತಕಗಳನ್ನು ನಿಗದಿತ ಅವಧಿಯೊಳಗೆ ಮುದ್ರಿಸಿಕೊಟ್ಟ ಎಲ್ಲ ಮುದ್ರಣಾಲಯಗಳಿಗೆ, ರಕ್ಷಾಪುಟದ ವಿನ್ಯಾಸವನ್ನು ರಚಿಸಿಕೊಟ್ಟ ಕಲಾವಿದ ಶ್ರೀ ಚಿ. ಸು. ಕೃಷ್ಣಶೆಟ್ಟಿಯುವರಿಗೆ ಮತ್ತು ಈ ಯೋಜನೆಗೆ ಮುಕ್ತ ಮನಸ್ಸಿನಿಂದ ಮಂಜೂರಾತಿ ನೀಡಿದ ಕರ್ನಾಟಕ ಸರ್ಕಾರಕ್ಕೆ ನಾನು ಆಭಾರಿಯಾಗಿದ್ದೇನೆ.

25–5–1990 ಬಿ. ಪಾರ್ಥಸಾರಥಿ
ಬೆಂಗಳೂರು ನಿರ್ದೇಶಕರು

# ಅರ್ಪಣೆ

ಒಂದು ಗಿರಿಗ್ಹೋಗಿ ಒಂಬತ್ತ ನಾ ಕಂಡೆ
ಹೆಜ್ಜೆ ಹೆಜ್ಜೆಗೆ ಗುರುಕರುಣೆ-ಬೆಳಕಾಗಿ
ಕಿನ್ನರ ಲೋಕವ ತೆರೆಯಿತು

ಹಗಲೆಲ್ಲ ಕೂದೆ ಮುಗಿಲ ಚೆಂದದ ಹೂವ
ಇರುಳೆಲ್ಲ ದಂಡೆ ಹೆಣೆದೇನು-ಮಾಗುರುವೆ
ಈ ಹೂವ ಕೊಂಡೆನ್ನ ಹರಸೀರಿ

ಜಾನಪದ ಸಿರಿಗುಡಿಯ ಹಿಡಿದೆತ್ತಿದಾಚಾರ್ಯ
ಕನ್ನಡದ ಕಡುಗಲಿಯೆ ತಲೆವಣೆಯೆ-ದೇಜಗೌ
ಈ ಹೂವ ಕೊಂಡೆನ್ನ ಹರಸೀರಿ



ಜುಂಜಪ್ಪನ ಗಣೆಯವರು



ನೀಲಗಾರ ಮಾಳವಳ್ಳಿರಾಚಯ್ಯ


ಕಂಸಾಳೆ ಮರಿಯಯ್ಯ


ಕರಪಾಲದ ಸಿದ್ಧಯ್ಯ


ಕಂಸಾಳೆ ಹನುಮಂತಯ್ಯ, ದೇವರ ಗುಡ್ಡ

# ಹಾಡಿದವರು

**ಕರಪಾಲದ ಕಥೆಗಳು :**

ಸಿದ್ದಯ್ಯ ; ೬೫ ವರ್ಷ; ವೀರಶೈವರು ; ತಿಪಟೂರು ತಾಲ್ಲೂಕು ಮತ್ತಿಹಳ್ಳಿ ; ಈಗ ವಾಸ–ಹಬ್ಬನ ಘಟ್ಟ, ಅರಸೀಕೆರೆ ತಾಲ್ಲೂಕು; ಸಂಗ್ರಹಿಸಿದ ಸ್ಥಳ : ಅಂಚೆ ಕೊಪ್ಪಲು, ಕೊನೆಹಳ್ಳಿ ಅಂಚೆ, ತಿಪಟೂರು ತಾಲ್ಲೂಕು, ೧೯೬೪.

**ಕಂಸಾಳೆ ಕತೆಗಳು ಗುಡ್ಡರ-ಕತೆಗಳು :**

ಹರಿಜನರ ಹನುಮಂತಯ್ಯ, ೫೦ ವರ್ಷ, ಯಲವಾಲ, ಮೈಸೂರು ತಾಲ್ಲೂಕು; ಪರಿವಾರದ ಮಾದಯ್ಯ, ೬೦ ವರ್ಷ, ಪಡುವಾರಹಳ್ಳಿ, ಮೈಸೂರು; ಉಪ್ಪಲಿಗಶೆಟ್ಟರ ಮರಿಶೆಟ್ಟಿ, ೪೦ ವರ್ಷ, ಗೂಳೂರು, ಮೈಸೂರು ತಾಲ್ಲೂಕು ೧೯೬೨.

**ಮಂಟೇಸ್ವಾಮಿ ಕತೆಗಳು–ನೀಲಗಾರರ ಕಥೆಗಳು :**

ಹರಿಜನರ ದೊಡ್ಡರಾಚಯ್ಯ, ೮೫ ವರ್ಷ, ಮೈಸೂರು; ಮಳವಳ್ಳಿ ರಾಚಯ್ಯ. ೮೦ ವರ್ಷ, ಮೈಸೂರು; ಮಂಟೇ ಲಿಂಗಯ್ಯ, ೪೦ ವರ್ಷ, ಮೈಸೂರು; ಲಿಂಗ ಮಾದಯ್ಯ ೪೦ ವರ್ಷ. ಕನಕಪುರ ತಾಲ್ಲೂಕು ೧೯೬೩.

**ಜುಂಜಪ್ಪನ ಕತೆಗಳು :**

ಕಾಡುಗೊಲ್ಲರ ಸೂರಪ್ಪ, ೪೫ ವರ್ಷ, ಶಿವಪುರದ ಹಟ್ಟಿ, ಚೆನ್ನರಾಯ ಪಟ್ಟಣ ತಾಲ್ಲೂಕು; ಸೂರಪ್ಪ, ೮೦ ವರ್ಷ, ಹಾಗಲವಾಡಿ, ಜುಂಜಪ್ಪನ ಹಟ್ಟಿ, ಗುಬ್ಬಿ ತಾಲ್ಲೂಕು; ಹೆಸರು ವಿಳಾಸಗಳನ್ನು ತಿಳಿಸದ ತುಮಕೂರು ಸಮೀಪದ ಓರ್ವ ಗಣೆಯವನು, ಸಂಗ್ರಹ ವರ್ಷಗಳು ೧೯೬೦-೬೫.

**ಹೆಂಗಸರ ಹಾಡ್ಗತೆಗಳು :**

ಒಕ್ಕಲಿಗರ ಚಿಂತಮ್ಮ, ೩೦ ವರ್ಷ ; ಗೊಲ್ಲರ ಸಿದ್ಲಮ್ಮ, ೫೦ ವರ್ಷ; ತರಮು ಕೋಟೆ ಲಕ್ಷ್ಮಮ್ಮ, ೪೦ ವರ್ಷ; ಒಕ್ಕಲಿಗರ ಸುಂದರಮ್ಮ, ೪೦ ವರ್ಷ; ಒಕ್ಕಲಿಗರ ಸಂಜಮ್ಮ, ೫೦ ವರ್ಷ: ಹರಿಜನರ ರಂಗವ್ವ. ಸಂಗ್ರಹ ವರ್ಷಗಳು ೧೯೫೮-೬೩.

ಮೊದಲ ಐದು ಮಂದಿ ನಾಗಮಂಗಲ ತಾಲ್ಲೂಕಿನವರು, ಕೊನೆಯಾಕೆ ಬಳ್ಳಾರಿ ಜಿಲ್ಲೆಯ ಅಣಜಿ ಗ್ರಾಮಕ್ಕೆ ಸೇರಿದವರು.

# ಪರಿವಿಡಿ


| | | |
|---|---|---|
| | ಹಾಡಿದವರು .... .... | ೭ |
| | ಮುನ್ನುಡಿ .... .... | ೯ |
| | ಪ್ರಸ್ತಾವನೆ .... .... | ೧೩ |
| ೧. | ಕರಪಾಲದ ಕಥೆಗಳು .... .... | ೨೫ |
| ೨. | ಕಂಸಾಳೆ ಕಥೆಗಳು .... .... | ೮೯ |
| ೩. | ಮಂಟೇಸ್ವಾಮಿ ಕಥೆಗಳು .... .... | ೧೫೫ |
| ೪. | ಗುಡ್ಡರ ಕಥೆಗಳು .... .... | ೨೧೩ |
| ೫. | ನೀಲಗಾರರ ಕಥೆಗಳು .... .... | ೨೪೯ |
| ೬. | ಜುಂಜಪ್ಪನ ಕಥೆಗಳು .... .... | ೨೯೧ |
| ೭. | ಹೆಂಗಸರ ಹಾಡ್ಗತೆಗಳು .... .... | ೩೪೭ |

# ಮುನ್ನುಡಿ

ಕಳೆದ ಒಂದು ದಶಕದ ನನ್ನ ಜಾನಪದ ಸಂಗ್ರಹಯಾತ್ರೆಯಲ್ಲಿ ವಿಶಿಷ್ಟ ಕಥಾಸಂಪ್ರದಾಯಗಳನ್ನೂ, ಅನೇಕ ಲಾವಣಿಕಾರರ ಪರಂಪರೆಯನ್ನೂ ಗುರುತಿಸುವ ಸದವಕಾಶ ಒದಗಿ ಬಂದಿತು. ನಮ್ಮ ಜನಪದ ಸಾಹಿತ್ಯದ ಉತ್ಕೃಷ್ಟ ಕಾವ್ಯ ಸಂಪತ್ತು ಸುದೀರ್ಘ ಲಾವಣಿಗಳ ರೂಪದಲ್ಲಿ ಹತ್ತಾರು ಬಗೆಯ ವೃತ್ತಿ ಗಾಯಕರ ಬಾಯಲ್ಲಿ ಉಳಿದು ಬಂದಿರುವುದನ್ನೂ, ಪಾಶ್ಚಾತ್ಯ ಅಲೆಮಾರಿ ಲಾವಣಿಕಾರರ (Ministrels) ರೀತಿಯಲ್ಲೇ ನಾಡಿನ ಮೂಲೆ ಮೂಲೆಗಳಲ್ಲಿ ಅಪಾರ ಸಂಖ್ಯೆಯಲ್ಲಿ, ವೈವಿಧ್ಯಮಯ ಜನಪದ ವಾದ್ಯಗಳನ್ನು ಹಿಡಿದು, ಸಂಚರಿಸುವ ಜನಪದ ಕಲಾವಿದರನ್ನು ನೋಡಿ ಸೋಜಿಗವೆನಿಸಿತು. ಈ ಕಥೋಪಜೀವಿಗಳ ಸುವಿಸ್ತಾರ ಜನಪದ ಕಾವ್ಯಗಳನ್ನು ಸಂಗ್ರಹಿಸುತ್ತ ಹೋದಂತೆಲ್ಲ ಆಯಾ ಸಂಪ್ರದಾಯಗಳನ್ನೂ ಮನೋಜ್ಞಕಥಾ ಸಾಹಿತ್ಯವನ್ನೂ ಗದ್ಯಚಿತ್ರಗಳಲ್ಲಿ ಸಂಗ್ರಹಿಸಿ ಪರಿಚಯಿಸಬೇಕೆಂಬ ಉತ್ಕಟವಾದ ಇಚ್ಛೆಯ ಫಲವೇ ಈ ಕೃತಿ. ನಮ್ಮ ಜನಪದ ಕಾವ್ಯದ ಆಕರ್ಷಕವಾದ, ಸಮೃದ್ಧವಾದ ಭಾಗದತ್ತ ಈ ಕೃತಿ ತೋರ್ಬೆರಳಾದರೆ ಸಾಕು.

ಈವರೆಗೆ ಶೋಧಿತವಾಗಿರುವ ಎಲ್ಲ ಸಂಪ್ರದಾಯಗಳ ಲಾವಣ್ಯಸಾಹಿತ್ಯವನ್ನು ಈ ರೂಪದಲ್ಲಿ ಪರಿಚಯಿಸಲು ಇನ್ನೂ ಸಾಧ್ಯವಾಗಿಲ್ಲ. ಇಲ್ಲಿ ಪರಿಚಯಿಸಿರುವ ಸಂಪ್ರದಾಯಗಳಲ್ಲಿಯೂ ಎಲ್ಲ ಕತೆಗಳನ್ನೂ ಆಯ್ಕೆ ಮಾಡಿಕೊಳ್ಳಲು ಅವಕಾಶವಾಗದೆ ಕೆಲವನ್ನು ಮಾತ್ರ ಆರಿಸಿಕೊಂಡಿದ್ದೇನೆ.

ನಮ್ಮ ಲಾವಣಿಕಾರರಲ್ಲಿ ಒಂದೊಂದು ಸಂಪ್ರದಾಯದವರೂ ಹತ್ತಾರು ಸುದೀರ್ಘ ಕಾವ್ಯಗಳನ್ನು ಹಾಡುತ್ತಾರೆ. ಒಂದು ರಾತ್ರಿ ಎರಡು ರಾತ್ರಿ ಮೂರು ರಾತ್ರಿಗಳ ವ್ಯಾಪ್ತಿಗೆ ಒಳಪಡುವ ಕಥೆಗಳೂ ಇವೆ. ಈ ಮೂಲಸಾಹಿತ್ಯದ ಜಾಡನ್ನೇ ಹಿಡಿದು ಅದರ ನೈಜಸ್ವರೂಪಕ್ಕೆ ಧಕ್ಕೆಬರದಂತೆ ಈ ಶಬ್ದ ಚಿತ್ರಗಳನ್ನು ಹೆಣೆಯಲಾಗಿದೆ. ನೂರಾರು ಪುಟಗಳ ಸುದೀರ್ಘ ಕಥೆಗಳನ್ನು ಮೂರುನಾಲ್ಕು ಪುಟಗಳ ಸಣ್ಣ ಭರಣಿಗೆ ತುಂಬುವಲ್ಲಿ ಉತ್ಕೃಷ್ಟ ಭಾಗಗಳೆಷ್ಟೋ ಕೈಬಿಟ್ಟು ಹೋದರೂ ಸಾರವತ್ತಾದ ಭಾಗಗಳನ್ನು ಇಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದೇನೆ.

ನಮ್ಮ ಲಾವಣಿಕಾರರ ಮೂಲ ಸಾಹಿತ್ಯ ಸಹಸ್ರಾರು ಪುಟಗಳ ವ್ಯಾಪ್ತಿಯನ್ನು ಮೀರುತ್ತದೆ. ಆ ಮೂಲ ಕಾವ್ಯಗಳನ್ನೆಲ್ಲಾ ಅನೇಕ ಪಾಠಾಂತರಗಳ ನೆರವಿನಿಂದ ಸಂಪಾದಿಸುವ ಅಗತ್ಯವಿರುವುದರಿಂದ ಅವುಗಳ ಪ್ರಕಟಣಪೂರ್ವದಲ್ಲಿ ಇಂಥ ಒಂದು ಪ್ರಯತ್ನದ ಮೂಲಕ ಆ ಸಾಹಿತ್ಯದ ಶ್ರೀಮಂತಿಕೆಯನ್ನು ಪರಿಚಯಿಸುವುದೇ ನನ್ನ ಮುಖ್ಯಗುರಿಯಾಗಿದೆ. ಆದುದರಿಂದ ಇದನ್ನು ಯಾರೂ ಒಂದು ಜನಪದ ಸಾಹಿತ್ಯ ಸಂಗ್ರಹ ಎಂದು ಪರಿಗಣಿಸಬೇಕಿಲ್ಲ; ಮೂಲ ಸಾಹಿತ್ಯದ ಕೈದೀವಿಗೆ ಎಂಬಷ್ಟಕ್ಕೆ ಮಾತ್ರ ಇದರ ಪರಿಮಿತಿಯನ್ನು ಸೀಮಿತಗೊಳಿಸಿಕೊಂಡರೆ ಸಾಕು. ಏಕೆಂದರೆ ಇಂಥ ಪ್ರಯತ್ನ ಹಾಗೂ ಪ್ರಯೋಗಗಳು ಮೂಲ ಸಾಹಿತ್ಯದ ಪ್ರಚಾರ ಹಾಗೂ ಪ್ರಸಾರಕ್ಕೆ ಉತ್ತಮ ಸಾಧನವಾಗಬಹುದೇ ಹೊರತು ಸಂಶೋಧಕರ ನಿರೀಕ್ಷೆಗೆ ನಿಲುಕುವ ಪ್ರಾಮಾಣಿಕ ಸಂಗ್ರಹವಾಗಲಾರದು. ಸಾಧ್ಯವಾದೆಡೆಯಲ್ಲೆಲ್ಲ ಔಚಿತ್ಯವನ್ನು ಗಮನಿಸಿ ಮೂಲಸಾಹಿತ್ಯವನ್ನು ಧಾರಾಳವಾಗಿ ಉಲ್ಲೇಖಿಸಿದ್ದೇನೆ. ಮೇಳಗಳ ಸ್ವರೂಪವೂ ಪರಿಚಯವಾಗುವಂತೆ ಸಮಗ್ರ ವರ್ಣನೆಯನ್ನು ನೀಡುತ್ತಾ ಹೋಗಿದ್ದೇನೆ. ಲಾವಣಿಗಳು, ಅವುಗಳ ಸ್ವರೂಪ, ಹಿನ್ನೆಲೆ, ಪ್ರಚಲಿತ ನೆಲೆಗಳು ಮುಂತಾದ ಕೆಲವು ಸಂಶೋಧನೆಯ ಅಂಶಗಳೂ ಬೆರೆತು ಬಂದಿವೆ. ಮೇಳಗಳನ್ನು ಪ್ರತ್ಯಕ್ಷವಾಗಿ ಅನುಭವಿಸಿದಂತೆ ನಿರೂಪಿಸಲಾಗಿದೆ. ಆ ರಸಚಿತ್ರವನ್ನು ಕಣ್ಣಿಗೆ ಕಟ್ಟಿಸಲು ಸಮರ್ಥವಾಗಲೆಂದು ಈ ತಂತ್ರವನ್ನು ಅನುಸರಿಸಲಾಗಿದೆ. ಆದರೂ ಇದೊಂದು ಸಾಹಿತ್ಯಿಕ ಕೃತಿಯೇ ಹೊರತು ಜನಪದ ಸಾಹಿತ್ಯಸಂಗ್ರಹ ಎಂದು ಯಾರೂ ಭಾವಿಸಬೇಕಿಲ್ಲ.

ಈ ಕೃತಿಯಲ್ಲಿ ಪ್ರಸ್ತಾಪಿಸಿರುವ 'ನೀಲಗಾರರ ಕತೆಗಳು' 'ಮಂಟೇಸ್ವಾಮಿಯ ಕಥೆಗಳು' ಒಂದೇ ಗುಂಪಿನ ಕತೆಗಾರರನ್ನು ನಿರ್ದೇಶಿಸುತ್ತವೆ. ಧಾರ್ಮಿಕ ಕಥೆಗಳನ್ನೂ ಲೌಕಿಕ ಕಥೆಗಳನ್ನೂ ವಿಭಜಿಸಿಕೊಳ್ಳುವಾಗ ಸೌಲಭ್ಯ ದೃಷ್ಟಿಯಿಂದ ಪ್ರತ್ಯೇಕ ಶೀರ್ಷಿಕೆಗಳನ್ನು ಕೊಡಲಾಯಿತು. ದೇವರಗುಡ್ಡರು, ಕಂಸಾಳೆಯವರು ಎಂಬಲ್ಲಿಯೂ ಇದೇ ಕ್ರಮವನ್ನು ಅನುಸರಿಸಲಾಗಿದೆ. ಮಂಟೇಸ್ವಾಮಿಯ ಸಂಪ್ರದಾಯದ ಕತೆಗಾರರನ್ನು ಮಂಟೇಸ್ವಾಮಿಗಳು, ಮಂಟೇದವರು, ನೀಲಗಾರರು ಎಂದೂ, ಮಾದೇಶ್ವರನ ಸಂಪ್ರದಾಯದ ಕತೆಗಾರರನ್ನು ಕಂಸಾಳೆಯವರು, ದೇವರ ಗುಡ್ಡರು, ಗುಡ್ಡರು ಎಂದೂ ಕರೆಯಲಾಗುತ್ತದೆ. ಈ ಹೆಸರುಗಳ ಪರಿಚಯವೂ ಈ ವಿಭಜನೆಯಿಂದ ಆದಂತಾಗುತ್ತದೆ

ಈ ಜನಪದ ಸಾಹಿತ್ಯ ಚಿತ್ರಗಳ ರಚನೆಗೆ ಮೂಲ ಪ್ರೇರಕರಾದವರು ನನ್ನ ಆತ್ಮೀಯ ಮಿತ್ರರಾದ ಶ್ರೀ ಎಂ. ಬಿ. ಸಿಂಗ್ ಅವರು. ಕೆಲವು ವರ್ಷಗಳ ಹಿಂದೆ 'ಪ್ರಜಾವಾಣಿ'ಯಲ್ಲೂ, ಇತ್ತೀಚೆಗೆ 'ಸುಧಾ' ಪತ್ರಿಕೆಯಲ್ಲೂ ಹೊಸ ಲೇಖನ ಮಾಲೆಯನ್ನೇ ಆರಂಭಿಸಿ ಇಂಥ ಬರವಣಿಗೆಗೆ ತುಂಬುಹೃದಯದಿಂದ ಪ್ರೋತ್ಸಾಹ ನೀಡಿದರು. ಈ ಸನ್ಮಿತ್ರರಿಗೆ ನಾನು ಅನಂತ ಕೃತಜ್ಞನಾಗಿದ್ದೇನೆ. ಅಲ್ಲದೆ ಇವುಗಳನ್ನು ಆಗಾಗ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ 'ಪ್ರಜಾವಾಣಿ' 'ಸುಧಾ' 'ಜನಪ್ರಗತಿ' ಹಾಗೂ 'ಪುಸ್ತಕ ಪ್ರಪಂಚ' ಮುಂತಾದ ಪತ್ರಿಕೆಗಳ ಸಂಪಾದಕರಿಗೂ ನಾನು ಋಣಿಯಾಗಿದ್ದೇನೆ.

ನನ್ನ ಪೂಜ್ಯ ಗುರುಗಳೂ, ಕರ್ನಾಟಕದಲ್ಲಿ ಜಾನಪದ ಸಂಶೋಧನೆ, ಅಧ್ಯಯನಗಳಿಗೆ ಒಂದು ಸ್ಥಿರವಾದ ಬುನಾದಿಯನ್ನು ಹಾಕಿದವರೂ ಆದ ಕುಲ ಪತಿ ಪ್ರೊ. ದೇಜಗೌ ಅವರಿಗೆ ಈ ಕೃತಿಯನ್ನು ಅರ್ಪಿಸಲು ನನಗೆ ಹೆಮ್ಮೆ ಎನಿಸು ತ್ತದೆ. ಈ ಕೃತಿಯನ್ನು ಮೂರು ವರ್ಷಗಳ ಹಿಂದೆ ಅಚ್ಚಿಗೆ ಸಿದ್ಧಗೊಳಿಸುತ್ತಿದ್ದಾಗಲೇ ಇದನ್ನು ತಮಗೆ ಅರ್ಪಿಸುತ್ತಿದ್ದೇನೆ, ದಯಮಾಡಿ ಅನುಮತಿಯನ್ನು ಕೊಡಬೇಕು ಎಂದು ನಾನು ವಿನಯಪೂರ್ವಕವಾಗಿ ಕೇಳಿಕೊಂಡಾಗ ಅವರು ಶಿಷ್ಯವಾತ್ಸಲ್ಯದಿಂದ ಅದಕ್ಕೆ ಸಮ್ಮತಿಸಿ ನನ್ನನ್ನು ಹರಸಿದರು. ನನ್ನ ಇನ್ನೊಬ್ಬ ಪೂಜ್ಯ ಗುರುಗಳಾದ ಡಾ. ಹಾ. ಮಾ. ನಾಯಕರು ಈ ಕಥಾಮಾಲಿಕೆಯನ್ನು ಮೆಚ್ಚಿ ಕೃತಿ ರೂಪದಲ್ಲಿ ಪ್ರಕಟಿಸಲು ಪ್ರೇರೇಪಿಸಿ ಮೇಲಿಂದ ಮೇಲೆ ಇದರ ಪ್ರಕಟಣೆಯ ಬಗ್ಗೆ ಆಸಕ್ತಿಯಿಂದ ವಿಚಾರಿಸಿ ನನ್ನನ್ನು ಪ್ರೋತ್ಸಾಹಿಸಿದ್ದಾರೆ. ಈ ಗುರುವರ್ಯರಿಬ್ಬರಿಗೂ ನನ್ನ ಅನಂತ ವಂದನೆಗಳು ಸಲ್ಲುತ್ತವೆ.

ಇಲ್ಲಿನ ಲಾವಣಿಗಳ ಸಂಗ್ರಹದಲ್ಲಿ, ಆ ಸಂಬಂಧವಾದ ವಿಷಯಗಳ ಸಂಗ್ರಹಣೆಯಲ್ಲಿ ಅನೇಕರು ನನಗೆ ಪ್ರೀತಿಯಿಂದ ನೆರವಾಗಿದ್ದಾರೆ. ಕೆಲವರನ್ನಾದರೂ ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕಾದುದು ನನ್ನ ಕರ್ತವ್ಯ.

ಕಾವೇರಿ ತೀರದ ಕಪ್ಪಡಿ ಕ್ಷೇತ್ರ, ಕೊಳ್ಳೇಗಾಲದಾಚೆಯ ಚಿಕ್ಕಲ್ಲೂರು ಕ್ಷೇತ್ರ, ಮಳವಳ್ಳಿಯ ಬಳಿಯ ಬೊಪ್ಪಗೌಡನಪುರ ಮುಂತಾದ ಕಡೆಗಳಿಗೆ ತಮ್ಮ ಜೊತೆಯಲ್ಲಿ ನನ್ನನ್ನು ಕರೆದುಕೊಂಡುಹೋಗಿ ಮಂಟೇಸ್ವಾಮಿ ಸಂಪ್ರದಾಯದ ಅನೇಕ ವಿವರಗಳನ್ನು ದೊರಕಿಸಿಕೊಟ್ಟ ಮಾನ್ಯರಾದ ಶ್ರೀ ಎಂ. ಎಲ್. ರಾಜೇ ಅರಸಿನವರಿಗೆ ನನ್ನ ಅನಂತ ವಂದನೆಗಳು ಸಲ್ಲುತ್ತವೆ.

ನಾನು ಕರೆದಾಗಲೆಲ್ಲ ಬಂದು, ಬೇಸರ ಪಡದೆ ತಮ್ಮ ಸಂಪ್ರದಾಯಗಳಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನೂ, ಸಾಹಿತ್ಯವನ್ನೂ ಸಂಗ್ರಹಿಸಲು ಸಹಕರಿಸಿದ ಮಳವಳ್ಳಿ ರಾಚಯ್ಯ, ಕರಪಾಲದ ಸಿದ್ಧಯ್ಯ, ಕಂಸಾಳೆ ಮಾದಯ್ಯ, ಈ ಮುಂತಾದ ಅನೇಕ ಹಿರಿಯ ಜನಪದ ಕಲಾವಿದರನ್ನೂ ನಾನಿಲ್ಲಿ ಸ್ಮರಿಸಿಕೊಳ್ಳುತ್ತೇನೆ. ಜುಂಜಪ್ಪನ ಸಾಹಿತ್ಯವನ್ನು ಸಂಗ್ರಹಿಸಲು ನನ್ನೊಡನೆ ತಿರುಗಿ ನೆರವಾದವರು ನನ್ನ ಬಂಧುಗಳಾದ ಶ್ರೀ ಎ.ಬಿ. ಜಸವಪ್ಪನವರು ಹಾಗೂ ನನ್ನ ಸೋದರ ಎ. ಎಸ್. ರಾಮೇಗೌಡ. ಕರಪಾಲದ ಸಾಹಿತ್ಯವನ್ನು ಸಂಗ್ರಹಿಸಲು ಹಾಸನ ಜಿಲ್ಲೆಯ ಅನೇಕ ಗ್ರಾಮಗಳಿಗೆ ನನ್ನನ್ನು ಕರೆದೊಯ್ದು ನೆರವಾದವರು ಅಣ್ಣ ಎನ್. ಸತ್ಯನಾರಾಯಣ ಅವರು. ಕಥಾ ಸಂಗ್ರಹಕ್ಕಾಗಿ ಅನೇಕ ದಿನಗಳ ಕಾಲ ಎಷ್ಟು ಮಂದಿ ಕಲಾವಿದರನ್ನು ಮನೆಗೆ ಕರೆತಂದರೂ ತಾಳ್ಮೆಯಿಂದ ಅವರನ್ನೆಲ್ಲ ಊಟೋಪಚಾರಗಳಿಂದ ಸತ್ಕರಿಸಿ ನನ್ನ ಕೆಲಸದಲ್ಲಿ ನೆರವಾಗಿ ನಿಂತ ನನ್ನಾಕೆಯ ಶ್ರಮವನ್ನು ನಾನು ಮಾತ್ರ ಬಲ್ಲೆ, ಮನೆಗೆ ಬಂದು ಹೋದ ಕಲಾವಿದರು ಮಾತ್ರ ಬಲ್ಲರು. ಇವರೆಲ್ಲರ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ನನ್ನ ಪ್ರಿಯ ಮಿತ್ರರೂ ಗಣ್ಯ ವಿದ್ವಾಂಸರೂ ಆದ ಶ್ರೀ ಸಿ.ಪಿ.ಕೆ. ಅವರು ಈ ಲೇಖನ ಮಾಲಿಕೆಯನ್ನು ಉದ್ದಕ್ಕೂ ಮೆಚ್ಚಿಕೊಂಡು ಹೆಚ್ಚು ಹೆಚ್ಚಾಗಿ ಬರೆಯುವಂತೆ ಪ್ರೋತ್ಸಾಹಿಸಿದ್ದಾರೆ. ಆಪ್ತ ಗೆಳೆಯರಾದ ಕಲಾವಿದ ಪಿ. ಆರ್. ತಿಪ್ಪೇಸ್ವಾಮಿಯವರು ಈ ಲೇಖನ ಮಾಲೆ ಪ್ರಕಟವಾಗಲು, ಈ ಸಂಬಂಧವಾದ ಅನೇಕ ವಿಷಯಗಳನ್ನು ಸಂಗ್ರಹಿಸಲು ಕಾರಣಕರ್ತರಾಗಿದ್ದಾರೆ. ನನ್ನೊಡನೆ ಸುತ್ತೂರು, ಕಪ್ಪಡಿ, ಬೊಪ್ಪಗೌಡನಪುರ, ಚಿಕ್ಕಲ್ಲೂರು ಮುಂತಾದ ಕಡೆಗಳಿಗೆಲ್ಲ ಬಂದು ಸಹಕರಿಸಿದ್ದಾರೆ. ಈ ಕೃತಿಯನ್ನು ತಮ್ಮ ಮಾಲೆಯಲ್ಲಿ ಪ್ರಕಟಿಸುವುದರ ಮೂಲಕ ಒಂದು ವಿಶೇಷ ಗೌರವವನ್ನು ತಂದುಕೊಟ್ಟಿದ್ದಾರೆ ಸುರುಚಿ ಪ್ರಕಾಶನದ ಒಡೆಯರು. ಇದನ್ನು ಇಷ್ಟು ಸುಂದರವಾಗಿ ಅಚ್ಚುಮಾಡಿ ಕೊಟ್ಟಿದ್ದಾರೆ ಉಷಾ ಪ್ರೆಸ್ಸಿನ ಮಾಲಿಕರಾದ ಶ್ರೀ ಆರ್. ಎನ್. ಹಬ್ಬು ಅವರು. ಈ ಎಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು

**ಜೀ. ಶಂ. ಪರಮಶಿವಯ್ಯ**

# ಪ್ರಸ್ತಾವನೆ

## ೧

ವಿಶ್ವದ ಎಲ್ಲ ಭಾಷೆಗಳ ಜನಪದ ಸಾಹಿತ್ಯದಲ್ಲೂ ಲಾವಣಿಗಳು ಒಂದು ಪ್ರಮುಖವರ್ಗವಾಗಿ ನಿಲ್ಲುತ್ತವೆ. ಕನ್ನಡ ಜನಪದ ಸಾಹಿತ್ಯದ ಸತ್ವಯುತ ವಾದ ಭಾಗವೇ ಲಾವಣಿ ಸಾಹಿತ್ಯ. ಜನಪದ ಗದ್ಯ ಕಥನಗಳಲ್ಲಿ ಪುರಾಣ, ಐತಿಹ್ಯ ಹಾಗೂ ಕಟ್ಟು ಕಥೆಗಳು ಪ್ರಧಾನವಾಗಿ ಕಥೆಯನ್ನೇ ಹೇಳುತ್ತವೆ. ಲಾವಣಿಗಳ ಮೂಲ ಉದ್ದೇಶವೂ ಕಥೆ ಹೇಳುವುದೇ. ಆದರೆ ಇದು ಹಾಡಿನ ಮೂಲಕ ನಿರೂಪಿಸಲ್ಪಡುವ ಕತೆ. ಜಾನಪದ ವಿಭಜನೆಯಲ್ಲಿ ಜನಪದ ಗದ್ಯ ಕಥನಗಳ ಅನಂತರ ಜನಪದ ಗೀತಸಾಹಿತ್ಯವನ್ನು ಪರಿಶೀಲಿಸಲಾಗುತ್ತದೆ.[1] ಜನಪದ ಗೀತಸಾಹಿತ್ಯ ಕಥನಾತ್ಮಕ ಹಾಗೂ ಭಾವಗೀತಾತ್ಮಕವಾದುದು. ಕಥನಾತ್ಮಕ ಗೀತೆಗಳನ್ನೆಲ್ಲ ಲಾವಣಿಗಳೆಂದು ಕರೆಯಬಹುದು.[2]

ಲಾವಣಿಕಾರರು ವಿಶಿಷ್ಟವಾದ ಜನಪ್ರಿಯ ಕಥೆಯೊಂದನ್ನು ಅಗತ್ಯ ಕಂಡಾಗ ಹಾಡಿನ ರೂಪಕ್ಕೆ ಪರಿವರ್ತಿಸಿಕೊಳ್ಳುವ ಕೆಲವು ನಿದರ್ಶನಗಳನ್ನು ಬಿಟ್ಟರೆ ಬಹುಪಾಲು ಲಾವಣಿಗಳಲ್ಲಿ ಸಾಹಿತ್ಯ ಮತ್ತು ಸಂಗೀತ ಅವಿಭಾಜ್ಯ ರೂಪದಲ್ಲಿ ಏಕಕಾಲದಲ್ಲಿಯೇ ಸೃಷ್ಟಿಯಾದುವು. ಆದರ ಮಟ್ಟೂ ಕೂಡ ಹಾಡಿ ನಷ್ಟೇ ಹಳೆಯದು ಎಂಬ ಅಂಶವನ್ನು ಇಲ್ಲಿ ಮರೆಯಬಾರದು. ಲಾವಣಿಗಳಲ್ಲಿ

---

1 R. S. Boggs, Types and Classification, *Standard Dictionary of Folklore, Mythology and Legend* pp.1139-1147.

2 Ballad ಎಂಬ ಮಾತಿಗೆ ಸಂವಾದಿಯಾಗಿ ಈಗಾಗಲೇ ಕನ್ನಡದಲ್ಲಿ ಬಳಕೆಗೆ ಬಂದಿರುವ 'ಲಾವಣಿ' ಎಂಬ ಮಾತನ್ನೇ ಕಂಠಸ್ಥ ಸಂಪ್ರದಾಯದ ಎಲ್ಲ ಹಾಡಿನ ರೂಪದ ಕಥೆಗಳಿಗೂ ಅನ್ವಯಿಸಬಹುದಾಗಿದೆ. ಲಾವಣಿಯಲ್ಲಿ ಭಾವಗೀತಾತ್ಮಕ ರಚನೆ ಗಳು ಅಲ್ಪ ಸ್ವಲ್ಪ ಕಂಡುಬಂದರೂ ಕಥಾ ಸಾಹಿತ್ಯಕ್ಕೇ ಹೆಚ್ಚಾಗಿ ಜಾನಪದ ಪರಂಪರೆ ಯಲ್ಲಿ ಈ ಮಾತು ಪ್ರಯೋಗವಾಗುತ್ತಾ ಬಂದಿದೆ. 'ಪಿರಿಯಾಪಟ್ಟಣದ ಲಾವಣಿ', 'ಸರ್ಜಪ್ಪ ನಾಯ್ಕನ ಲಾವಣಿ' ಮುಂತಾದುವನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು.

ಸಂಗೀತಕ್ಕಿಂತಲೂ ಕತೆಯೇ ಪ್ರಧಾನ.[3] ಆದರೆ ತಲೆಮಾರಿನಿಂದ ತಲೆಮಾರಿಗೆ ಸಾಗುವಾಗ ಕಥಾಸಾಹಿತ್ಯದಲ್ಲಿ ಬದಲಾವಣೆ ಕಂಡುಬಂದರೂ ಲಾವಣಿಯು ಮಟ್ಟು ಮಾತ್ರ ಬದಲಾಗದೆ ಉಳಿಯುತ್ತದೆ. ಆದ್ದರಿಂದ ಲಾವಣಿ ಸಾಹಿತ್ಯದಲ್ಲಿ, ತಮ್ಮದೇ ಆದ ಛಂದಶ್ಶರೀರವನ್ನು ಪಡೆದುಕೊಂಡು, ಹೊಸ ಮಟ್ಟುಗಳನ್ನು ಸಾಧಿಸಿ ಕೊಂಡ ವೈವಿಧ್ಯಮಯ ರಚನೆಗಳು ಕುತೂಹಲಕಾರಿಯಾಗಿರುತ್ತವೆ.

ಲಾವಣಿಗಳ ಹಾಡುಗಾರಿಕೆಯಲ್ಲಿ ವಾದ್ಯಗಳ ಪಾತ್ರ ಪ್ರಮುಖವಾದುದೇ. ಆದರೆ ಎಲ್ಲ ಸಂದರ್ಭಗಳಲ್ಲಿಯೂ ವಾದ್ಯಗಳು ಇರಲೇಬೇಕಾದುದಿಲ್ಲ. ಸಾಮಾನ್ಯವಾಗಿ ಹೆಂಗಸರ ಲಾವಣಿಗಳಲ್ಲಿ ವಾದ್ಯಗಳು ವಿರಳ ಎಂದೇ ಹೇಳಬೇಕು.

ಅನಕ್ಷರಸ್ಥ ಸಮಾಜದಲ್ಲಿ ಲಾವಣಿ ಪರಂಪರಾನುಗತವಾಗಿ ಉಳಿದು ಬರುತ್ತದೆ. ಅದರ ಮೂಲ ಕರ್ತೃ ಒಬ್ಬನೇ ಆದರೂ ಕಾಲಕ್ರಮದಲ್ಲಿ ಕವಿ ಮರೆತು ಹೋಗುತ್ತಾನೆ. ಹತ್ತು ಹಲವು ಬಾಯಿಗಳಲ್ಲಿ ಹೊರಳಿ ಹೊರಳಿ ಲಾವಣಿ ಸಾಕಷ್ಟು ಪರಿಷ್ಕಾರಕ್ಕೂ ಒಳಗಾಗುತ್ತದೆ. ಅದರ ಮೇಲೆ ಸಮಷ್ಟಿಯ ಮುದ್ರೆ ಬಿದ್ದು ಜನಪ್ರಿಯ ಲಾವಣಿಯಾಗಿ ಉಳಿಯುತ್ತದೆ. ಜನಪ್ರಿಯ ಮೂಲದಲ್ಲಿ ಉಳಿಯಬಲ್ಲ ಸತ್ವವನ್ನು ಪಡೆದ ಲಾವಣಿಗಳು ಮಾತ್ರ ಅನೇಕ ಕಾಲ ಬದುಕಿರುತ್ತವೆ. ಉಳಿದವು ಕಾಲದ ದವಡೆಯಲ್ಲಿ ಕರಗಿ ಹೋಗುತ್ತವೆ.

---

ಕರ್ನಾಟಕದ ಲಾವಣಿಕಾರರ ಅನೇಕ ಸಂಪ್ರದಾಯಗಳನ್ನು ಪರಿಶೀಲಿಸಿದಾಗ 'ಲಾವಣಿ' ಎಂಬ ಮಾತು ಕಥಾಸಾಹಿತ್ಯಕ್ಕೆ, ವಿಶೇಷವಾಗಿ ಅನ್ವಯವಾಗುತ್ತ ಬಂದಿದೆ. ಅಡಕವಾದ ಔಚಿತ್ಯಪೂರ್ಣವಾದ ಈ ಹೆಸರಿನ ಕೆಳಗೆ ಹಾಡ್ಗತೆಗಳನ್ನೆಲ್ಲ ಗುರುತಿಸಿಕೊಂಡು, ಅತ್ಯಂತ ವಿಸ್ತಾರವಾದ, ಖಂಡಕಾವ್ಯದ ವ್ಯಾಪ್ತಿಯ ರಚನೆಗಳನ್ನು ಜನಪದ ಕಾವ್ಯಗಳೆಂದೇ ಕರೆಯಬಹುದು.

ಈ ಸಂಬಂಧವಾದ ಚರ್ಚೆಗೆ ನೋಡಿ :

(ಅ) ಡಾ. ಹಾ. ಮಾ. ನಾಯಕ, 'ಜನಪದ ಸಾಹಿತ್ಯ, ಅದರ ಸ್ವರೂಪ,' ಸುವರ್ಣ ಸಂಚಯ, ಪು. ೨೮ (1966)

(ಆ) Dr. Praphulla Datta Goswamy-*Ballads and Tales of Assam* (1960) pp, 8-9

3 Mac Edward Leach – *Standard Dictionary of Folklore, Mythology and Legend* p. 107

ಲಾವಣಿಯ ಸ್ವರೂಪವನ್ನು ವಿದ್ವಾಂಸರು ಹೀಗೆ ಸೂತ್ರೀಕರಿಸಲು ಪ್ರಯತ್ನಿಸುತ್ತಾರೆ:[4]

೧. ಲಾವಣಿ ಕಥನಾತ್ಮಕವಾದುದು

೨. ಹಾಡಿನ ರೂಪಕ್ಕೆ ಅಳವಡಿಸಿದ್ದು

೩. ವಸ್ತು,ಶೈಲಿ, ಸ್ವರೂಪಗಳಲ್ಲಿ ಅದು ಜನಪದ ಮೂಲಕ್ಕೆ ಸೇರಿದುದು

೪. ವಸ್ತುನಿಷ್ಠವಾದುದು; ಕ್ರಿಯೆ, ಸಂಭಾಷಣೆ ಹಾಗೂ ಘಟನೆಗಳ ಮೂಲಕ ಅಂತ್ಯವನ್ನು ತೀವ್ರಗತಿಯಲ್ಲಿ ಎಟುಕಿಸಿಕೊಳ್ಳ ತಕ್ಕುದು.

ಲಾವಣಿಗಳ ಕ್ರಿಯೆ, ಪಾತ್ರಪೋಷಣೆ ಹಾಗೂ ವಸ್ತು ನಿರ್ವಹಣೆಗಳಲ್ಲಿ ಕ್ರಿಯೆಯೇ ಪ್ರಧಾನ. 'ಕೊಣಮೇಗೌಡ',[5] 'ಕಲಿಯುಗದ ಬಾಲೆ'[6], 'ಗಂಗೆ ಗೌರಿ ಜಗಳ'[7] 'ಹಿರಿದಿಮ್ಮವ್ವ'[8] ಮುಂತಾದವು ಲಾವಣಿಗಳ ಉತ್ತಮ ಮಾದರಿಗಳು. ಉತ್ತರ ಕರ್ನಾಟಕದ 'ಹರಿದೇಶಿ-ನಾಗೇಶಿ'ಸಂಪ್ರದಾಯದ ಲಾವಣಿಗಳೂ ಸ್ತ್ರೀ ಪುರುಷರು ಹಾಡುವ ಇತರ ಕಿರುಲಾವಣಿಗಳೂ ಈ ಸ್ವರೂಪಕ್ಕೆ ಅಳವಡುತ್ತವೆ. 'ಸರಳವಾದ ಶಕ್ತಿಯುತವಾದ ಸಣ್ಣಸಣ್ಣ ಪದ್ಯಗಳಿಂದ ಕೂಡಿದ ಜನಪ್ರಿಯ ಕತೆಯೊಂದನ್ನು ಹೇಳುವ ಹಾಡುಗಳೇ ಲಾವಣಿಗಳು'[9] ಎಂಬ ಮಾತೂ ಕನ್ನಡದ ಈ ಬಗೆಯ ಸರಳ ರಚನೆಗಳಿಗೂ ಅನ್ವಯವಾಗುತ್ತದೆ.[10]

---

4 *Ibid*-P 105

5 ಕೊಣಮೇ ಗೌಡ ಮತ್ತು ಇತರ ಪದಗಳು–ಸಂ. ಶೇಷಭಟ್ಟ ಮತ್ತು ಸುಂದರೇಶ್ವರ (೧೯೫೪)

6 ಜನಪದ ಕಥನ ಗೀತೆಗಳು–ಕರಾಕೃ, ೧೩೨ (೧೯೫೯)

7 ಅದೇ-ಪು. ೨೭೩

8 ಜನಪದ ಖಂಡ ಕಾವ್ಯಗಳು-ಜೀಶಂಪ, ಪು. ८८ (೧೯೬೮)

9 *Oxford Dictionary*-(1964) P. 140

10 ಕ್ರಿಟ್ರೆಜ್ ಅವರ ಲಾವಣಿಯನ್ನು ಕುರಿತ ಈ ಹೇಳಿಕೆಯನ್ನು ಇಲ್ಲಿ ಗಮನಿಸಬಹುದು—

a short narrative poem, adopted for singing, simple in plot and metrical structure, divided into stanzas, and characterised by complete impersonality so far as the author or singer is concerned.

– *English and Scottish Popular Ballads* 'Introduction'P. xi.

ಆದರೆ ಸುದೀರ್ಘವಾದ, ಸಂಕೀರ್ಣ ಸ್ವರೂಪದ ಲಾವಣಿಗಳು ಭಾರತೀಯ ಜನಪದ ಸಾಹಿತ್ಯದಲ್ಲಿ ಹೇರಳವಾಗಿ ಲಭ್ಯವಾಗುತ್ತವೆ. ಐರೋಪ್ಯ ಲಾವಣಿಗಳಲ್ಲೂ ಸ್ಪೆಯಿನ್, ಫಿನ್‌ಲೆಂಡ್, ರಷ್ಯ ಮುಂತಾದ ಕಡೆಗಳಲ್ಲಿ ಸುದೀರ್ಘ ಲಾವಣಿಗಳನ್ನು ಗುರುತಿಸಲಾಗಿದೆ. 'ಲಾವಣಿ ಸದಾ ಕಥನಾತ್ಮಕವಾದುದು. ವಿಶಿಷ್ಟ ಮಟ್ಟಿನಲ್ಲಿ ಹಾಡಬಹುದಾದುದು, ಗ್ರಂಥಸ್ಥ ಮೂಲಕ್ಕಿಂತ ಕಂಠಸ್ಥ ಮೂಲದಿಂದ ಕಲಿತದ್ದು'[11] ಎಂಬ ಪ್ರೊ. ಗೆರಾಲ್ಡರ ಅಭಿಪ್ರಾಯವನ್ನು ಎಲ್ಲ ಪ್ರಕಾರದ ಲಾವಣಿಗಳಿಗೂ ಅನ್ವಯಿಸಿಕೊಳ್ಳುವುದು ಉಚಿತವೆಂದು ತೋರುತ್ತದೆ.

ಲಾವಣಿಗಳೆಲ್ಲ ಹಾಡುಗಳೇ ಎಂಬ ಅಭಿಪ್ರಾಯ ಸರ್ವಸಮ್ಮತವಾದುದೇ ಆದರೂ ಕೆಲವೊಮ್ಮೆ ಗದ್ಯ ಮಿಶ್ರಿತ ರಚನೆಗಳು ಭಾರತೀಯ ಲಾವಣಿ ಸಾಹಿತ್ಯದಲ್ಲಿ ಗೋಚರಿಸುತ್ತವೆ. ಕರ್ನಾಟಕದಲ್ಲಿ ವೃತ್ತಿಗಾಯಕರ ಬಹುಪಾಲು ಲಾವಣಿಗಳಲ್ಲಿ ಹಾಡಿನಷ್ಟೇ ಪ್ರಧಾನವಾಗಿ, ಒಂದು ಬಗೆಯ ಪದ್ಯಗಂಧಿಯಾದ ಗದ್ಯ ಶೈಲಿ ಕಂಡುಬರುತ್ತದೆ. ಒಂದೇ ಲಾವಣಿಯ ಬೇರೆ ಬೇರೆ ಅಧ್ಯಾಯಗಳನ್ನು ಬೇರೆ ಬೇರೆ ಪಲ್ಲವಿಗಳಿಗೆ ಅಳವಡಿಸಿಕೊಂಡು ವೈವಿಧ್ಯಮಯ ಮಟ್ಟುಗಳಲ್ಲಿ ಹಾಡುವುದನ್ನೂ ಕಾಣಬಹುದು. ಕಂಸಾಳೆ ಸಾಹಿತ್ಯದಲ್ಲಿ ಗದ್ಯದ ಪ್ರಾಚುರ್ಯವೇ ಹೆಚ್ಚು. ಕಂಸಾಳೆಯ ತಾಳಕ್ಕನುಗುಣವಾಗಿ ಗದ್ಯವೂ ಪದ್ಯದ ವಿನ್ಯಾಸದಲ್ಲಿಯೇ ಮೂಡಿ ಬರುತ್ತದೆ. ಗುಣಸಾಗರಿ, ಕಾಳಿಂಗರಾಯ, ಮುಂತಾದ ಸುದೀರ್ಘ ಕೃತಿಗಳಲ್ಲಿ ಒಂದೊಂದು ಅಧ್ಯಾಯಕ್ಕೂ ಬೇರೆ ಬೇರೆ 'ಸೊಲ್ಲ'ನ್ನು ಹಾಕಿಕೊಂಡು ಹಾಡುವುದು ಗಮನಾರ್ಹ ಅಂಶವಾಗಿದೆ.

ಲಾವಣಿಗಳನ್ನು ಹಾಡುವ ಸಂದರ್ಭಗಳೂ ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ಪರಿಶೀಲನಾರ್ಹವಾಗಿರುತ್ತವೆ. ಕರ್ನಾಟಕದ ಅಲೆಮಾರಿ ಲಾವಣಿಕಾರರು ತಮ್ಮ ವಾದ್ಯ, ಬಿರುದುಬಾವಲಿ ಮತ್ತು ಜೋಳಿಗೆಗಳೊಡನೆ ನಿರ್ದಿಷ್ಟಕಾಲವೊಂದರಲ್ಲಿ ಊರಾಡಲು ಹೋಗುವ ಸಂಪ್ರದಾಯ ಇಂದಿಗೂ ನಡೆದು ಬಂದಿದೆ. ದೊಂಬಿದಾಸರು, ತೆಲುಗು ಜಂಗಮರು, ಜೋಗಿಗಳು ಈ ಗುಂಪಿನಲ್ಲಿ ಪ್ರಧಾನವಾಗಿ ಹೆಸರಿಸಬೇಕಾದವರು. ಆದರೆ ಇವರಾರೂ ಹೊಲಮನೆಗಳಿಲ್ಲದ ಶುದ್ಧ ಅಲೆಮಾರಿಗಳಲ್ಲ. ಹೆಂಗಸರು ಮಕ್ಕಳು ವೃದ್ಧರನ್ನು ತಮ್ಮ ಹಳ್ಳಿಗಳಲ್ಲೇ ಬಿಟ್ಟು

---

11 *Quoted* by –P. D. Goswamy, *Ballads and Tales of Assam*, P. 8.

ಕೈಕಾಲುಗಳಲ್ಲಿ ಬಲವಿರುವ ಎಲ್ಲ ಹಾಡುಗಾರರೂ ಅನೇಕ ದಿನಗಳ ಕಾಲ ಊರೂರುಗಳ ಮೇಲೆ ಹೋಗಿ ಕತೆಗಳನ್ನು ಹಾಡಿ, ಸಾಕಷ್ಟು ದವಸಧಾನ್ಯವನ್ನು ಸಂಗ್ರಹಿಸಿಕೊಂಡು ಊರಿಗೆ ಮರಳುತ್ತಾರೆ. ಇವರ ಮೇಳಗಳು ಮನೆ ಮನೆಗಳ ಬಾಗಿಲಲ್ಲಿಯೇ ಆಗಬಹುದು. ವಿಶಿಷ್ಟ ಸಂದರ್ಭಗಳಲ್ಲಿ ವಿಶೇಷ ಆಹ್ವಾನದೊಡನೆ ನೂರಾರು ಶ್ರೋತೃಗಳ ನಡುವೆ ಕುಳಿತು ಹಾಡಲೂಬಹುದು. ಸಂದರ್ಭಕ್ಕನುಗುಣವಾಗಿ ಕತೆಗಳನ್ನು ಹಿಗ್ಗಿಸುವ-ಕುಗ್ಗಿಸುವ ಕೌಶಲವನ್ನು ಪ್ರತಿಯೊಬ್ಬ ಗಾಯಕನೂ ಪಡೆದುಕೊಂಡಿರುತ್ತಾನೆ.

ಕುಣಿತದಿಂದ ಕೂಡಿದ ಮೇಳಗಳಲ್ಲಿ ಚೌಡಿಕೆ ಸಂಪ್ರದಾಯ ಮುಖ್ಯವಾದುದು. ಒಬ್ಬರು ಅಥವಾ ಮೂವರು ಚೌಡಿಕೆಯವರು ಬೆರೆತು ಹಾಡಿ, ಕುಣಿದು, ನಾಟಕೀಯವಾಗಿ ಅಭಿನಯಿಸಿ ಕಥೆಗಳನ್ನು ಮಂಡಿಸುವ ಬಗೆ ಆಕರ್ಷಕವಾಗಿರುತ್ತದೆ. ಕರಪಾಲ ಮೇಳವೂ ಈ ಬಗೆಯದೇ ಆದರೂ ಕರಪಾಲದ ಕತೆಗಳು ಲಾವಣಿಗಳಲ್ಲ. ಸುಂದರ ಜನಪದ ಕತೆಗಳನ್ನು ಅಭಿನಯಪೂರ್ವಕವಾಗಿ ನಿರೂಪಿಸುವ ಕ್ರಮ ಇದರ ವೈಶಿಷ್ಟ್ಯ. ಆದರೆ ವೈವಿಧ್ಯಕ್ಕಾಗಿ ಕತೆಯ ನಡುವೆ ಸೇರಿ ಬರುವ ಕರಪಾಲದ ಪದಗಳೂ, ಅವಕ್ಕೆ ಅನುಗುಣವಾಗಿ ಬರುವ ಕುಣಿತವೂ ಮೇಳದ ಸ್ವಾರಸ್ಯವನ್ನು ದ್ವಿಗುಣಗೊಳಿಸುತ್ತವೆ. ಈ ಹಾಡಿನ ಭಾಗಗಳನ್ನು ಯಾವ ಕತೆಗಳಿಗೆ ಬೇಕಾದರೂ ಅನ್ವಯಿಸಿಕೊಳ್ಳಬಹುದಾದುದರಿಂದ ಕತೆಯೊಡನೆ ಸಾವಯವ ಸಂಬಂಧ ಉಳಿಯದೆ ಅವು ಬಿಡಿಯಾಗಿಯೇ ಉಳಿಯುತ್ತವೆ.[12]

ಸ್ತ್ರೀ ಸಮುದಾಯದ ಕೆಲವು ಸುದೀರ್ಘ ರಚನೆಗಳು ವಿಶೇಷ ಸಂದರ್ಭಗಳಲ್ಲಿ ಹಾಡಿಸಬಹುದಾದ ಪುಣ್ಯ ಕಥೆಗಳೆನಿಸಿವೆ. ಗುಣಸಾಗರಿ, ಅಣಜಿ ಹೊನ್ನಮ್ಮ, ಕಾಳಿಂಗರಾಯ ಮುಂತಾದ ಅತ್ಯಂತ ವ್ಯಾಪಕ ಜನಪದ ಕಾವ್ಯಗಳು ಕರ್ನಾಟಕದ ನಾನಾ ಕಡೆಗಳಲ್ಲಿ ಇಂದಿಗೂ ಈ ಸಂಪ್ರದಾಯದ ಮುಖ್ಯ ಕಥೆಗಳೆನಿಸಿವೆ. ಮುಖ್ಯಗಾಯಕಿಯೊಬ್ಬಳು, ಕೆಲವು 'ಹಿಮ್ಮೇಳಗಾತಿ'ಯರೊಡನೆ

---

12 ಈ ಸಂಬಂಧವಾದ ವಿಷರವಾದ ಪರಿಚಯಕ್ಕೆ ನೋಡಿ :
ಜೀ. ಶಂ. ಪರಮಶಿವಯ್ಯ, 'ದಕ್ಷಿಣ ಕರ್ನಾಟಕದ ಜನಪದ ಸಾಹಿತ್ಯ'. 'ಹೊನ್ನ ಬಿತ್ತೇವು ಹೊಲಕೆಲ್ಲ' ಪು. ೬೫, 'ಜನಪದ ಸಾಹಿತ್ಯ ಸಮೀಕ್ಷೆ' ಪು. ೯-೧೬

ಕಲೆತು ಈ ಕತೆಯನ್ನು ರಾತ್ರಿಯೆಲ್ಲಾ ಹಾಡುತ್ತಾಳೆ. ಅನನ್ಯ ಶ್ರದ್ಧೆಯಿಂದ ಜನ ಕುಳಿತು ಕೇಳುತ್ತಾರೆ.[13]

ಲಾವಣಿಗಳನ್ನು ಹಾಡುವುದೇ ಒಂದು ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡ ಕಥೋಪಜೀವಿಗಳು ವಿಶ್ವದ ಎಲ್ಲ ಕಡೆಗಳಲ್ಲೂ ಇದ್ದಾರೆ. ಪಾಶ್ಚಾತ್ಯ ರಾಷ್ಟ್ರಗಳ ಮಿನಿಸ್ಟ್ರಲ್[14] (Ministrel), ರಷ್ಯಾದ ಸ್ಕೊಮರಾಕ್ಸಿ[15] (Skomoroxi) ಆಫ್ರಿಕಾದ ತಂತೀವಾದ್ಯದ ಅಲೆಮಾರಿಗಾಯಕ[16] ಇವರನ್ನು ಇಲ್ಲಿ ಉಲ್ಲೇಖಿಸಬಹುದು. ಭಾರತದ ಅನೇಕ ಪ್ರಾಂತಗಳಲ್ಲಿ ಇತ್ತೀಚೆಗೆ ಈ ಲಾವಣಿಕಾರರ ಪರಂಪರೆಯನ್ನು ಗುರುತಿಸಲಾಗಿದೆ. ಅಸ್ಸಾಮಿನ 'ಬರಾಗಿ'[17], ಪಂಜಾಬಿನ ಭಟ್, ಧಾದಿ[18], ರಾಜಪುತ್ರಸ್ಥಾನದ ಭೋಪ[19], ಬಂಗಾಳದ ಬಾಉಲ್[20] ಇವರೆಲ್ಲ ವಿಶಿಷ್ಟವಾದ್ಯಗಳನ್ನು ಹಿಡಿದು ಪರಂಪರಾನುಗತ ಲಾವಣಿಗಳನ್ನು ಹಾಡುತ್ತ ಕಂಠಸ್ಥ ಸಂಪ್ರದಾಯದ ಕಾವ್ಯರಾಶಿಯನ್ನು ಉಳಿಸಿಕೊಂಡು ಬಂದವರು. ಭಾರತದಲ್ಲಿ ಇಂಥ ವೃತ್ತಿಗಾಯಕರ ಪರಂಪರೆಯ ಬಗ್ಗೆ ಇನ್ನೂ ಸಾಕಷ್ಟು ಸಂಶೋಧನೆ, ಅಧ್ಯಯನಗಳು ನಡೆಯಬೇಕಾಗಿದೆ.

ರಾಜಪುತ್ರಸ್ಥಾನದ ಭೋಪ ಕರ್ನಾಟಕದಲ್ಲಿಯೂ ಜನಪ್ರಿಯವಾಗಿರುವ 'ಕಿನ್ನರಿ'ಯನ್ನು ಹಿಡಿಯುತ್ತಾನೆ. ಬಂಗಾಳದ ವೃತ್ತಿಗಾಯಕ ನಮ್ಮ ಚೌಡಿಕೆಯನ್ನು ಹೋಲುವ ವಾದ್ಯವನ್ನೇ ಬಳಸುತ್ತಾನೆ.

---

13. ಈ ಸಂಬಂಧವಾದ ಪರಿಚಯಕ್ಕೆ ನೋಡಿ : ಪಿ. ಆರ್. ತಿಪ್ಪೇಸ್ವಾಮಿ, ಪ್ರವಾಸ ಕಥನ, 'ಕಾಳಿಂಗರಾಯ' (೧೯೬೪)

14. Francis B. Gummere-*The Popular Ballad*. Pp. 1-16

15. S. P. Jakobson-Slavic Folklore-*Standard Dictionary of Folklore Mythology and Legend* Vol. II, P. 1021

16. H. W. Odwn—Secular Songs of the Southern Negros, *Folk, Religion and society*, P. 14

17. P. D. Goswamy-*Ballads and Tales of Assam*, P. 15

18. S. S. Bedi-*Folklore of Punjab*, P. 105

19. S. M. Singh-The Rajaputs, *Illustrate Weekly of India*, Nov. 7, 1971, P. 13

20. D. Bhattachary—The Mirror of the Sky,

೨

ಕನ್ನಡ ನಾಡಿನ ಲಾವಣಿಕಾರರ ಬಗ್ಗೆ ಈ ದಶಕದಲ್ಲಿ ಸಾಕಷ್ಟು ಅಧ್ಯಯನ ನಡೆದು ಅನೇಕ ಪರಂಪರೆಯ ವೃತ್ತಿಗಾಯಕರ ಸಾಹಿತ್ಯ ಸಂಗ್ರಹಿತವಾಗಿದೆ[21] ಕಳೆದ ಶತಮಾನದಲ್ಲಿ ಸಂಗ್ರಹಿತವಾದ ಆರೇಳು ಐತಿಹಾಸಿಕ ಲಾವಣಿಗಳು ಕನ್ನಡ ಲಾವಣಿಕಾರರ ಪರಂಪರೆಯ ಕಡೆ[22] ನಮ್ಮ ಲಾವಣಿ ಸಾಹಿತ್ಯದ ಉತ್ಕೃಷ್ಟ ಸಾಹಿತ್ಯಿಕ ಮೌಲ್ಯದ ಕಡೆ ಗಮನವನ್ನು ಸೆಳೆಯುವಂತಿದ್ದರೂ ಅಂಥ ಸಮೃದ್ಧ ಸಾಹಿತ್ಯವನ್ನು ಸಂಗ್ರಹಿಸುವತ್ತ ವಿದ್ವಾಂಸರು ಆಸಕ್ತಿವಹಿಸಲಿಲ್ಲ. ಈ ಶತಮಾನದ ಎರಡನೆಯ ದಶಕದಲ್ಲಿ ಮಾಸ್ತಿಯವರು ಪ್ರಕಟಿಸಿದ ಸಂಶೋಧನಾತ್ಮಕ ಲೇಖನ 'ಕನ್ನಡ ನಾಡಿನ ಲಾವಣಿ ಸಾಂಗತ್ಯ'[23] ಕನ್ನಡ ಲಾವಣಿಗಳ ದೊಡ್ಡ ಭಂಡಾರದತ್ತ ತೋರ್ಬೆರಳಾಗಿ ನಿಂತರೂ, ಶ್ರೇಷ್ಠ ಲಾವಣಿಗಳ ಪ್ರಸ್ತಾಪವನ್ನು ಅವರು ಅಲ್ಲಿ ನಡೆಸಿ ಅನೇಕ ಮಾದರಿಗಳನ್ನು ನೀಡಿದ್ದರೂ ಆ ಕಾಲಕ್ಕೆ ಸಂಗ್ರಹಕರು ಅವುಗಳನ್ನು ಕಲೆಹಾಕಲಿಲ್ಲ. ಸಿಂಪಿ ಲಿಂಗಣ್ಣ ಹಾಗೂ ಪಿ.ಧೂಲಾ ಅವರು ಪ್ರಕಟಿಸಿದ 'ಜೀವನ ಸಂಗೀತ'[24] ಮಾತ್ರ ನವೋದಯ ಕಾಲದಲ್ಲಿಯೇ ಗ್ರಂಥರೂಪದಲ್ಲಿ ಹಿಡಿದಿಟ್ಟ ಉತ್ತಮ ಲಾವಣಿಗಳ ಒಂದು ಸಂಗ್ರಹವೆನಿಸಿ, ಲಾವಣಿಕ್ಷೇತ್ರದ ಒಂದು ಆದ್ಯಕೃತಿಯೆನಿಸಿತು. ದೇವುಡು ಅವರ 'ಕರ್ಣಾಟಕ ಸಂಸ್ಕೃತಿ' [25] ನವೋದಯ ಕಾಲದ ಮತ್ತೊಂದು ಗಮನಾರ್ಹಕೃತಿ. ಕರ್ನಾಟಕದ ಕೆಲವು ಜನಪ್ರಿಯ ಲಾವಣಿಗಳನ್ನು ಅವರು ಉಲ್ಲೇಖಿಸಿದ್ದಾರೆ. ಅಲ್ಲಿ ಪ್ರಕಟವಾಗಿರುವ ಪಿರಿಯಾಪಟ್ಟಣದ ಲಾವಣಿಯ ಭಾಗ ಈಗ ಲಭ್ಯವಾಗಿರುವ

---

21 ನೋಡಿ : ಜೀ. ಶಂ. ಪರಮಶಿವಯ್ಯ, ದಕ್ಷಿಣಕರ್ನಾಟಕದ ಜನಪದ ಸಾಹಿತ್ಯ, 'ಹೊನ್ನಬಿತ್ತೇವು ಹೊಲಕೆಲ್ಲ', ಪು. ೭೪

22 ಫ್ಲೀಟರು ಇಂಡಿಯಾನ್ ಅಂಟಿಕ್ವರಿಯಲ್ಲಿ ತಾವು ಸಂಗ್ರಹಿಸಿದ ಲಾವಣಿಗಳನ್ನು ಪ್ರಕಟಿಸಿದ್ದಾರೆ. ಒಟ್ಟು ಎಂಟು ಲಾವಣಿಗಳನ್ನು ಸಂಗ್ರಹಿಸಿರುವುದಾಗಿ ಅವರು ಹೇಳಿಕೊಂಡರೂ ಈಗ ದೊರೆತಿರುವವು ಐದು ಮಾತ್ರ.

23 ಮಾಸ್ತಿ ವೆಂಕಟೇಶ ಅಯ್ಯಂಗಾರ್, 'ಕನ್ನಡ ಲಾವಣಿ ಸಾಂಗತ್ಯ' ವಿಮರ್ಶೆ ೧, ಪು. ೭೧ (೧೯೨೬)

24 ಸಿಂಪಿಲಿಂಗಣ್ಣ ಮತ್ತು ಪಿ. ಧೂಲಾ-'ಜೀವನ ಸಂಗೀತ' (೧೯೩೩)

25 ದೇವುಡು ನರಸಿಂಹಶಾಸ್ತ್ರಿ-'ಕರ್ಣಾಟಕ ಸಂಸ್ಕೃತಿ' (೧೯೩೫)

ಲಾವಣಿಗಳ ಪಾಠಕ್ಕಿಂತ ಭಿನ್ನಸ್ವರೂಪದ್ದಾಗಿದೆ. 'ಮಲ್ಲಿಗೆ ದಂಡೆ' 'ಹುಟ್ಟಿದ ಹಳ್ಳಿ ಹಳ್ಳಿಯ ಹಾಡು' ಮುಂತಾದ ಆ ದಶಕದ ಆದ್ಯಕೃತಿಗಳಲ್ಲಿ ಅನೇಕ ಸುಂದರ ಲಾವಣಿಗಳು ಬೆಳಕು ಕಂಡವು. 'ನಾಡಪದಗಳು' ೧೯೪೦ ರ ಈಚೆಗೆ ಪ್ರಕಟವಾದ ಕೃತಿ. ಈ ಸಂಕಲನವೂ ಲಾವಣಿ ಸಾಹಿತ್ಯದ ಅಭ್ಯಾಸಿಗಳಿಗೆ ಒಂದು ಅತ್ಯುತ್ತಮ ಆಧಾರ ಗ್ರಂಥವಾಗಿ ನಿಂತಿತು.

ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಲಾವಣಿಸಂಗ್ರಹ ವ್ಯಾಪಕವಾಗಿ ನಡೆದಿದೆ ಯಾದರೂ ಕ್ರಮಬದ್ಧವಾಗಿ ನಡೆದಿಲ್ಲ.ಅನೇಕ ಮಂದಿ ಸಂಗ್ರಾಹಕರು ಕರ್ನಾಟಕ ಲಾವಣಿ ಸಂಪ್ರದಾಯಗಳ, ಹಾಡುಗಾರರ ವಿವರವಾದ ಅಭ್ಯಾಸವನ್ನು ನಡೆಸಿರು ವುದು ಕಾಣಬರುವುದಿಲ್ಲ. ಉತ್ತಮಸಂಗ್ರಹಗಳು ನಮ್ಮ ಕಣ್ಣೆದುರಿಗಿದ್ದರೂ ಅವುಗಳ ಅಧ್ಯಯನಕ್ಕೆ ಪೂರಕವಾಗುವ ಮಹತ್ವದ ವಿಷಯಗಳು ಲ್ಲಿಅ ಕೈಬಿಟ್ಟು ಹೋಗಿವೆ. ಫ್ಲೀಟರ, ಸಿಂಪಿಯವರ ಕ್ರಮದಲ್ಲಿ ಒಂದೊಂದು ಪರಂಪರೆಯ ಲಾವಣಿಗಳನ್ನು ಗುರುತಿಸಲು ಪ್ರಯತ್ನಿಸಿದವರು ವಿರಳವೆಂದೇ ಹೇಳಬೇಕು. ಆದರೂ ಡಾ. ಗದ್ದಿಗೀಮಠ, ಕರಾಕೃ ಮತ್ತು ಪಿ. ಆರ್. ತಿಪ್ಪೇಸ್ವಾಮಿ, ಡಾ. ಎಲ್. ಆರ್. ಹೆಗಡೆ, ದೊಡ್ಡಭಾವೆಪ್ಪಮೂಗಿ, ಕೆ. ವಿ. ಸುಬ್ಬಣ್ಣ ಮುಂತಾದ ವರ ಶ್ಲಾಘನೀಯ ಪ್ರಯತ್ನಗಳನ್ನು ನಿರ್ಲಕ್ಷಿಸುವಂತಿಲ್ಲ.

ಪ್ರಕೃತ ಕೃತಿಯಲ್ಲಿ ಕನ್ನಡ ನಾಡಿನ ಕೆಲವು ಪ್ರಮುಖ ಲಾವಣಿ ಸಂಪ್ರ ದಾಯಗಳ ಸಾಹಿತ್ಯದ ಸ್ವರೂಪ ಹಾಗೂ ಆ ಸಂಪ್ರದಾಯಗಳ ಹಿನ್ನೆಲೆಯ ಸ್ಥೂಲ ಪರಿಚಯ ಲಭ್ಯವಾಗುತ್ತದೆ. ಈವರೆಗೆ ಅಜ್ಞಾತರಾಗಿದ್ದ 'ದೇವರ ಗುಡ್ಡರು', 'ನೀಲಗಾರರು', 'ಜುಂಜಪ್ಪನವರು', 'ಕರಪಾಲದವರು' ಮುಂತಾದ ವಿಶಿಷ್ಟ ವರ್ಗದ ಕಥೋಪಜೀವಿಗಳು ನಮ್ಮ ಜನಪದ ಸಾಹಿತ್ಯದ ದೊಡ್ಡ ಗಣಿಗಳೆಂಬುದು ಈ ಕತೆಗಳಿಂದ ವೇದ್ಯವಾಗುತ್ತದೆ. ಈವರೆಗೆ ಗುರುತಿಸ ಲಾಗಿರುವ ಹನ್ನೆರಡಕ್ಕೂ ಹೆಚ್ಚು ಲಾವಣಿಕಾರರ ಪರಂಪರೆಯಲ್ಲಿ ಈ ನಾಲ್ಕು ಗುಂಪಿನವರೂ ಅತ್ಯಂತ ಗಣ್ಯ ಸ್ಥಾನವನ್ನು ಪಡೆದುಕೊಳ್ಳುತ್ತಾರೆ. ಇವರ ಕಥೆಗಳೆಲ್ಲ ಜನತೆಯ ಕಣ್ಣಲ್ಲಿ 'ಪುಣ್ಯ ಕಥೆಗಳು'. ಅವನ್ನು ಹಾಡಿಸುವುದರಿಂದ ಪುಣ್ಯ ಪ್ರಾಪ್ತಿಯಾಗುತ್ತದೆ, ಕೇಳುವುದರಿಂದ ಪಾಪ ಪರಿಹಾರವಾಗುತ್ತದೆ ಎಂಬ ನಂಬಿಕೆ ಇಂದಿಗೂ ಪ್ರಬಲವಾಗಿರುವುದರಿಂದ ಅಷ್ಟಿಷ್ಟು ಲಾವಣಿ ಸಂಪ್ರದಾಯ ಇನ್ನೂ ಉಸಿರಾಡುತ್ತಿದೆ. ಸಮಗ್ರ ರಾತ್ರಿ ಅಥವಾ ಕೆಲವಾರು

ಗಂಟೆಗಳವರೆಗಾದರೂ ಹಾಡಲೇ ಬೇಕಾದ ಕತೆಗಳಾದುದರಿಂದ ಅವುಗಳ ವಿಸ್ತಾರ ಸಾಮಾನ್ಯ ಲಾವಣಿಗಳಿಗಿಂತ ಹತ್ತುಮಡಿ ಹೆಚ್ಚಾದುದು. ಕಥೆ, ಉಪ ಕಥೆ, ವ್ಯಾಖ್ಯಾನ, ವಿವರಣೆಗಳೆಲ್ಲ ಸೇರುವುದರಿಂದ ಮನರಂಜನೆಯ ಮುಖ್ಯ ಸಾಧನವಾಗಿಯೂ ಇವು ಗಣ್ಯವೆನಿಸಿದ್ದವು. ಧಾರ್ಮಿಕ ಕಥೆ, ಲೌಕಿಕ ಕಥೆಗಳ ಪ್ರಮುಖ ವರ್ಗದಲ್ಲಿ, ಪೌರಾಣಿಕ, ಐತಿಹಾಸಿಕ, ಅತಿಮಾನುಷ, ರಮ್ಯ, ವಾಸ್ತವಿಕ, ಹಾಸ್ಯ, ಮಾಂತ್ರಿಕ ಈ ವರ್ಗಗಳಿಗೆಲ್ಲ ಅಳವಡುವ ಲಾವಣಿಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರಚಲಿತವಾಗಿವೆ. ಒಂದೊಂದು ಖಂಡಕಾವ್ಯದ ವ್ಯಾಪ್ತಿಯ, ಸುವಿಸ್ತಾರ ಲಾವಣಿಗಳು ಸಾಹಿತ್ಯ ದೃಷ್ಟಿಯೊಂದರಿಂದಲೇ ಅಭ್ಯಾಸ ಮಾಡಿದರೆ, ಆಸ್ವಾದಿಸಿದರೆ ಕನ್ನಡ ಸಾಹಿತ್ಯ ಭಂಡಾರದ ಉತ್ಕೃಷ್ಟ ಭಾಗವಾಗಿ ನಿಲ್ಲುವಂತಿವೆ. ಕರ್ನಾಟಕದ ವೃತ್ತಿಗಾಯಕರ ಸಂಖ್ಯೆ, ಲಾವಣಿಗಳ ಬಾಹುಳ್ಯ, ವಾದ್ಯಗಳ ವೈವಿಧ್ಯ ಮುಂತಾದುವನ್ನು ಪರಿಶೀಲಿಸುತ್ತ ಹೋದರೆ ಕನ್ನಡ ಜನಪದ ಸಾಹಿತ್ಯದ ಸಮೃದ್ಧಿ ಆಶ್ಚರ್ಯವನ್ನು ತರುತ್ತದೆ. ಭಾರತದ ಇನ್ನಾವ ನಾಡಿಗೂ ನುಡಿಗೂ ಇಲ್ಲದ ಸೌಭಾಗ್ಯ ಅಪಾರ ಸಂಖ್ಯೆಯ ಜನಪ್ರಿಯ ಲಾವಣಿಕಾರರಿಂದ ಅವರ ಅನಂತ ಕೃತಿಗಳಿಂದ ಕನ್ನಡ ನಾಡಿಗೆ ಲಭ್ಯವಾಗಿದೆ. ಈ ಲಾವಣಿಕಾರರ ಮೂಲ ಕಾವ್ಯಗಳೆಲ್ಲ ತಮ್ಮ ವಿಸ್ತಾರ, ವೈವಿಧ್ಯದಲ್ಲಿ ಪ್ರಕಟವಾದಾಗ ಆ ಜಾನಪದ ಕೃತಿಗಳು ನಮ್ಮ ಸಾರಸ್ವತ ಲೋಕದ ಬೆಲೆ ಬಾಳುವ ಕೃತಿಗಳಾಗಿ ಉಳಿಯುವುದರಲ್ಲಿ ಸಂಶಯವಿಲ್ಲ.

ಈ ಕೃತಿಯಲ್ಲಿ ಹೆಸರಿಸಿರುವ ಲಾವಣಿಕಾರರಲ್ಲಿ ಕಂಸಾಳೆಯವರು ಹಾಗೂ ಮಂಟೇಸ್ವಾಮಿಗಳು ಕರ್ನಾಟಕದ ದಕ್ಷಿಣದ ಗಡಿಗೆ ಹತ್ತಿರವಾಗಿ ಕಾವೇರಿಯ ಆಚೀಚೆಯ ತೋಳಿನಲ್ಲಿ ದಟ್ಟವಾಗಿ ಕಾಣಬರುವ ಕಲಾವಿದರು. ಕಂಸಾಳೆಯ ವರನ್ನು ಮಾದೇಶ್ವರನ ಗುಡ್ಡರು ಎಂದೂ, ದೇವರ ಗುಡ್ಡರು ಎಂದೂ, ಗುಡ್ಡರು ಎಂದೂ ಕರೆಯುವ ವಾಡಿಕೆ. ಮಂಟೇಸ್ವಾಮಿಯ ಶಿಷ್ಯಪರಂಪರೆಗೆ ಸೇರಿದ ವೃತ್ತಿಗಾಯಕರನ್ನು ಮಂಟೇದವರು, ಮಂಟೇದೇವರು, ಮಂಟೇದಯ್ಯ ಗಳೆಂದೂ, ನೀಲಗಾರರೆಂದೂ ಕರೆಯಲಾಗುವುದು. ಈ ಎರಡು ಪರಂಪರೆ ಜೊತೆ ಜೊತೆಯಲ್ಲೇ ಬೆಳೆದು ಬಂದುದರಿಂದ ಪರಸ್ಪರ ಪ್ರಭಾವ ಕಂಡುಬರು ತ್ತದೆ. ಇದನ್ನು ಇವರ ವೇಷಭೂಷಣ, ವಾದ್ಯವಿಶೇಷಗಳಲ್ಲಿ ಗುರುತಿಸಲಾಗ ದಿದ್ದರೂ ಇವರ ಲಾವಣಿ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಮಾದೇಶ್ವರನ ಕಥೆ ಕಂಸಾಳೆಯವರ ಧಾರ್ಮಿಕ ಕಥೆ. ಮಂಟೇಸ್ವಾಮಿಯ ಕಥೆ ನೀಲಗಾರರ ಧಾರ್ಮಿಕ ಕಥೆ. ತಮ್ಮ ಧಾರ್ಮಿಕ ಕಥೆಯ ಜೊತೆಗೆ ಉಳಿದ ಹತ್ತಾರು ಲೌಕಿಕ ಕಥೆಗಳನ್ನು ಮಾತ್ರ ಈ ಎರಡು ಸಂಪ್ರದಾಯದವರೂ ಹಾಡುತ್ತಾರೆ. ಈ ಲೌಕಿಕ ಲಾವಣಿಗಳ ಸಾಲಿನಲ್ಲಿ 'ಪಿರಿಯಾಪಟ್ಟಣದ ಕಾಳಗ'ಕ್ಕೆ ಅಗ್ರಸ್ಥಾನ ದೊರೆಯಬೇಕು.[26] ನೂರಾರು ಪುಟಗಳಷ್ಟು ವಿಸ್ತಾರವಾಗಿರುವ ಈ ಲಾವಣಿಯ ಬಗ್ಗೆ ಕಳೆದ ನಾಲ್ಕು ದಶಕಗಳಿಂದಲೂ ಪ್ರಸ್ತಾಪ ನಡೆಯುತ್ತ ಬಂದು ಸಮಗ್ರವಾಗಿ ಲಭ್ಯವಾಗಿರಲಿಲ್ಲ. ಈ ದಶಕದಲ್ಲಿ ಆ ಲಾವಣಿ ಪೂರ್ಣವಾಗಿ ಲಭ್ಯವಾಗಿದೆ.

ಕಂಸಾಳೆಯವರ ಹಾಗೂ ನೀಲಗಾರರ ಲೌಕಿಕ ಕಥೆಗಳಲ್ಲಿ 'ಸಾರಂಗಧರ', 'ನೀಲವೇಣಿ', 'ಬಾಲನಾಗಮ್ಮ', 'ಚೆನ್ನಿಗೆ ರಾಮಯ್ಯ', 'ಘನಪತಿರಾಯ', 'ನಂಜಯ್ಯ ಚಾಮುಂಡಿ', 'ಬಿಳಿಗಿರಿ ರಂಗಯ್ಯ', 'ಬಂಜೆ ಹೊನ್ನಮ್ಮ' 'ಮೈದುನ ರಾಮಣ್ಣ', 'ಲವಕುಶರ ಕಾಳಗ', 'ಬಸವಣ್ಣನವರು', ಮುಂತಾದುವು ಮುಖ್ಯವಾದುವು. ಇವೆಲ್ಲ ಸಮಗ್ರ ರಾತ್ರಿ ಹಾಡಬೇಕಾದ ಲಾವಣಿಗಳಾದುದರಿಂದ ಒಂದೊಂದೂ ಸಾಕಷ್ಟು ವಿಸ್ತಾರವಾಗಿ ಬೆಳೆದಿವೆ. ದೇವರ ಗುಡ್ಡರ ಕಂಸಾಳೆಯ ಗತ್ತಿಗೆ, ನೀಲಗಾರರ ತಂಬೂರಿಯ ಶ್ರುತಿಗೆ ಈ ಎಲ್ಲ ಕತೆಗಳೂ ಒಗ್ಗಿಕೊಂಡು ಬರುತ್ತವೆ.

'ಕರಪಾಲ ಮೇಳದಲ್ಲಿ' ಕುಳಿತು ಹಾಡುವ ಸಂದರ್ಭವಿಲ್ಲ ; ಕುಣಿದು ಕತೆ ಮಾಡುವ ಸಂಪ್ರದಾಯ ಇಲ್ಲಿ ಬೆಳೆದು ಬಂದಿದೆ. ಇಲ್ಲಿ ಗದ್ಯದ ಪ್ರಾಚುರ್ಯ ಹೆಚ್ಚು. ಬರುವ ಹಾಡುಗಳೆಲ್ಲ ಯಾವ ಕಥೆಗಾದರೂ ಅಳವಡಿಸಬಹುದಾದುವು. ಅಭಿನಯಪೂರ್ವಕವಾಗಿ ಅತ್ಯಂತ ಚಾತುರ್ಯದಿಂದ ಕಥೆಯನ್ನು ನಿರೂಪಿಸುವ ಕರಪಾಲದ ಅಯ್ಯ, ಸಂದರ್ಭಕ್ಕನುಗುಣವಾಗಿ ಔಚಿತ್ಯವರಿತು ಕರಪಾಲ ಗೀತೆಗಳನ್ನು ಅಳವಡಿಸಿ ಅಂದಂದಿನ ಕತೆಯ ಜೊತೆ ಅವಕ್ಕೆ ಸಾವಯವ ಸಂಬಂಧವನ್ನು ಕಲ್ಪಿಸುತ್ತಾನೆ. ಗದ್ಯ ಪದ್ಯ ಮಿಶ್ರಿತ ಕರಪಾಲದ ಕತೆಗಳು ಶುದ್ಧ ಜನಪದ

26. ಈ ಲಾವಣಿಯ ವಿವರವಾದ ಚರ್ಚೆಗೆ ನೋಡಿ :

೧. ಪರಮೇಶ : ಐತಿಹಾಸಿಕ ಕಥನ ಗೀತೆಗಳ ಸಂಗ್ರಹಣೆ, 'ಹೊನ್ನ ಬಿತ್ತೇವು ಹೊಲಕೆಲ್ಲ', ಪುಟ. 573

೨. ಪಿ. ಕೆ. ರಾಜಶೇಖರ 'ಪಿರಿಯಾಪಟ್ಟಣದ ಕಾಳಗ : ಕೆಲವು ಐತಿಹ್ಯಗಳು' ಜಾನಪದ ೩, ಪು. ೧೪

ಮೂಲದ ಕತೆಗಳು. ನೃತ್ಯ, ಸಂಗೀತ, ಅದುಸಾಹಿತ್ಯಗಳ ಸಾಮರಸ್ಯದ್ಭುತ ರೀತಿಯಲ್ಲಿ ಕರಪಾಲ ಮೇಳದಲ್ಲಿ ಸಾಧಿತವಾಗುತ್ತದೆ.

ಜುಂಜಪ್ಪನ ಕತೆ ಕನ್ನಡ ಜನಪದ ಕಾವ್ಯಗಳ ಸಾಲಿನ ಒಂದು ಅನರ್ಘ್ಯ ರತ್ನ. ವಿಸ್ತಾರದ ದೃಷ್ಟಿಯಿಂದ ಇದು ಮೂರು ನಾಲ್ಕು ರಾತ್ರಿಗಳ ಕತೆ. ಮೂರು ತಲೆಮಾರುಗಳ ಕತೆ. ಇತರ ಮೇಳಗಳಂತೆ ಜನಪದ ವಾದ್ಯಗಳ ಅಬ್ಬರ ಇಲ್ಲಿಲ್ಲ. ಇಲ್ಲಿರುವ ವಾದ್ಯ ಗಣೆ. ಎರಡು ಮೊಳ ಉದ್ದದ ಬಿದಿರು ಕೊಳಲು. ಇದನ್ನು ಊದುವವನು ಒಬ್ಬನಾದರೆ, ಅದರ ಮಧುರ ನಾದಕ್ಕೆ ಬೆರೆತುಬರುವಂತೆ ಜುಂಜಪ್ಪನ ಕತೆಯನ್ನು ಅಷ್ಟೇ ಮಧುರವಾಗಿ ಹಾಡುವವನು ಇನ್ನೊಬ್ಬ. ಅವನ ಕಿವಿಯ ಬಳಿಗೆ ವಾಲಿಕೊಂಡು ಸೊಲ್ಲುಕೊಡುವವನು ಮಗದೊಬ್ಬ. ಇದೊಂದು ಪದ್ಯ ಕಾವ್ಯ. ಶುದ್ಧ ತ್ರಿಪದಿಯಲ್ಲಿಯೇ ಸಮಗ್ರ ಕಥೆ ಲಭ್ಯವಾಗುತ್ತದೆ. ಹಾಡುವ ಮಟ್ಟು ಮೋಹಕ. ಮಾಡುವ ಕತೆಯೂ ಆಕರ್ಷಕ. ಕೇಳುವ ಕಿವಿ ಯಕ್ಷಲೋಕದ ಕಲ್ಪನಾಲೋಕದಲ್ಲಿ ತೇಲುತ್ತದೆ ಗಣೆಯ ದಿವ್ಯನಾದದ ಅಲೆಗಳನ್ನೇರಿ.

ಹೆಂಗಸರು ಹಾಡುವ ಕತೆಗಳನ್ನು ವೃತ್ತಿಗಾಯಕರ ಸುವಿಸ್ತಾರ ಕತೆಗಳೊಡನೆ ಹೋಲಿಸಲಾಗದಿದ್ದರೂ, ಕೆಲವು ವಿಸ್ತಾರವಾದ ಜನಪದ ಕಥನಗೀತೆಗಳು ಅವರಲ್ಲಿಯೂ ಲಭ್ಯವಾಗುತ್ತವೆ. ಕಥೋಪಜೀವಿಗಳ ಮೇಳದಂತೆಯೇ ಜನಪದ ಸ್ತ್ರೀಮೇಳಗಳೂ ಕೆಲವು ಕಡೆ ನಡೆಯುವುದುಂಟು. ಇಬ್ಬರು ಅಥವಾ ಮೂವರು ಸ್ತ್ರೀಯರು ವಿಶೇಷ ಸಂದರ್ಭಗಳಲ್ಲಿ ಆಹ್ವಾನದ ಮೇರೆಗೆ ಬಂದು, ದೇವರನ್ನು ಪೂಜಿಸಿ ಪುಣ್ಯಕಥೆಗಳನ್ನು ಅನನ್ಯಶ್ರದ್ಧೆಯಿಂದ ಹಾಡುತ್ತಾರೆ. ಜನ ರಾತ್ರಿಯೆಲ್ಲ ಕುಳಿತು ಆ ಸುರಮ್ಯಕಥೆಗಳನ್ನು ಕೇಳುತ್ತಾರೆ, 'ಅಣಜಿ ಹೊನ್ನಮ್ಮ,' 'ಕಾಳಿಂಗರಾಯ್ಯ' 'ಗುಣಸಾಗರಿ' ಮೊದಲಾದ ಸ್ತ್ರೀಯರ ಕತೆಗಳು ಈ ಸಂಪ್ರದಾಯದಲ್ಲಿ ಜನಪ್ರಿಯವಾಗಿವೆ. 'ಅಣಜಿ ಹೊನ್ನಮ್ಮ' ಕೆರೆಗೆ ಹಾರ ಕತೆಯ ಆಶಯದ ಅಡಿಗಲ್ಲಿನ ಮೇಲೇ ನಿಂತಿರುವ ಸುವಿಸ್ತಾರ ರಚನೆ. ಈ ಒಂದು ಕೃತಿಯನ್ನು ಹೊರತು ಉಳಿದ ಕತೆಗಳೆಲ್ಲ ಹೆಂಗಸರು ವಿವಿಧ ಸಂದರ್ಭಗಳಲ್ಲಿ ಹಾಡಿಕೊಳ್ಳುವ ಕಿರುಲಾವಣಿಗಳು.

'ಬಿಟ್ಟೆಕಾಣೆ ಇವಳ ಜನುಮಾಕೆ' ಕಾಡುಗೊಲ್ಲರ ಒಂದು ಕತೆ. 'ಇಬ್ಬರಿಗ್ಹೂವ ಮುಡಿಸ್ಯಾನೆ' ಒಕ್ಕಲಿಗ ಹೆಂಗಸರಲ್ಲಿ ದೊರೆಯುವ ಕತೆ. ಇವೆರಡೂ ಚುಂಚನಗಿರಿಯ ಸುತ್ತಣ ಪ್ರದೇಶದಲ್ಲಿ ಇಂದಿಗೂ ಪ್ರಚಲಿತವಾಗಿವೆ.

'ನಂಜಯ್ಯ-ಚಾಮುಂಡಿ'ಯರ ಪ್ರಣಯದ ಕಥೆ ವೃತ್ತಿಗಾಯಕರಲ್ಲಿಯೂ ದೊರೆಯುತ್ತದೆ. ಆದರೆ ಹೆಂಗಸರು ಹಾಡುವ ಕತೆಯ ಸ್ವರೂಪವೇ ಬೇರೆ. ನಂಜಯ್ಯ ಬೆಟ್ಟಕ್ಕೆ ಬಂದು ಚಾಮುಂಡಿಯೊಡನಿದ್ದು, ಮರಳಿದಾಗ ಮಡದಿಯ ಕೋಪಕ್ಕೆ ಈಡಾಗಿ ಅನುಭವಿಸಿದ ಲಘುಶಿಕ್ಷೆಯ ಅತ್ಯಂತ ಸ್ವಾರಸ್ಯವಾದ ಪ್ರಸಂಗ ಈ ಕಥೆಯ ವಸ್ತು. ಅಡಕವಾಗಿ, ಅಚ್ಚುಕಟ್ಟಾಗಿ ಕತೆಯನ್ನು ಬೆಳಸಿಕೊಂಡು ಹೋಗಿರುವ ರೀತಿ ಆಶ್ಚರ್ಯಕರವಾಗಿದೆ.

ಈ ಮೂರು ಕತೆಗಳೂ 'ಶಿವ-ಗಂಗೆ'ಯರ ಪ್ರಣಯದ ಆಶಯವನ್ನೇ ಆಧರಿಸಿದುವು ಎಂಬುದು ಅವುಗಳ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ.

ಶಿವ ಗಿರಿಜೆ ಮತ್ತು ಗಂಗೆಯನ್ನು ಕೂಡಿದ ಕೆಲವು ಸ್ವಾರಸ್ಯಮಯ ಸನ್ನಿವೇಶಗಳನ್ನೊಳಗೊಂಡ ತ್ರಿಪದಿಸಾಹಿತ್ಯ ಕರ್ನಾಟಕದ ಅನೇಕ ಕಡೆಗಳಲ್ಲಿ ಲಭ್ಯವಾಗುತ್ತದೆ. ಅಂಥ ಕಥೆಗಳ ಒಂದು ಅತ್ಯುತ್ತಮ ಮಾದರಿ ಇಲ್ಲಿನ 'ಶಿವಕಥೆಗಳು'. ದೊಂಬಿದಾಸರು ಹಾಡುವ ಶಿವಕಥೆಗಳಿಗಿಂತ ಭಿನ್ನವಾದ ಈ ಕತೆಗಳು ಕಲ್ಪನಾರಮ್ಯತೆಯಿಂದಲೂ, ಕಥನ ಕೌಶಲದಿಂದಲೂ ಅಪೂರ್ವ ಕಾವ್ಯ ಸೌಂದರ್ಯವನ್ನು ಪಡೆದು ರಂಜಿಸುತ್ತವೆ.

ನಮ್ಮ ಜನಪದ ಸಾಹಿತ್ಯಲೋಕದ ಸುವಿಸ್ತಾರ ಲಾವಣಿಗಳ ಸಾರ ಸಂಗ್ರಹದಂತೆ ಈ ಕತೆಗಳು ಇಲ್ಲಿ ನಿರೂಪಿಸಲ್ಪಟ್ಟಿವೆ. ಈ ವರೆಗೆ ಅಜ್ಞಾತವಾಗಿದ್ದ ರಸಪ್ರಪಂಚದ ಕಡೆಗೆ ಇವು ಹೊಸಗವಾಕ್ಷವನ್ನು ತೆರೆಯುತ್ತಿರುವುದು ಇಲ್ಲಿನ ವೈವಿಧ್ಯಮಯ ಸಂಪ್ರದಾಯಗಳಿಂದಲೇ ವ್ಯಕ್ತವಾಗುತ್ತದೆ. ಬೀದಿಯಲ್ಲಿ ಗೋಚರಿಸುವ ಹರುಕು ಚಿಂದಿಯ ಜಂಗಮ, ಜೋಗಿ, ದಾಸರಿಗೆ ಒಂದು ಹೊಸ ಅರ್ಥವನ್ನು ಕಲ್ಪಿಸಿ, ಹೊಸ ಗೌರವಕ್ಕೆ ಅವರನ್ನು ಭಾಜನರನ್ನಾಗಿ ಮಾಡುತ್ತಿವೆ. ವಿಶಿಷ್ಟ ಸ್ವರೂಪದ ವಾದ್ಯವೊಂದನ್ನು ಹಿಡಿದು, ಯಾವುದೋ ಪದವನ್ನು ಕುರುಕುತ್ತ ಜೋಳಿಗೆಯೊಡನೆ ಮನೆಯ ಬಾಗಿಲಿಗೆ ಬರುವವನು ಭಿಕ್ಷುಕನಲ್ಲ, ನಮ್ಮ ಸಂಸ್ಕೃತಿಯ ಸಿರಿಯನ್ನು ತನ್ನಲ್ಲಿ ತುಂಬಿಕೊಂಡಿರುವ ಶ್ರೇಷ್ಠ ಜನಪದ ಗಾಯಕ ! ಈ ಲಾವಣಿಕಾರ ತೆರೆಯ ಮರೆಗೆ ಸರಿಯುತ್ತಿದ್ದಾನೆ. ನಮ್ಮ ಲಾವಣಿ ಪರಂಪರೆ ಅಳಿಸಿ ಹೋದರೆ ಕನ್ನಡ ಜನಪದ ಸಾಹಿತ್ಯ ಇತಿಹಾಸದ ಒಂದು ಉಜ್ವಲ ಪಟ ಮುಗುಚಿಕೊಳ್ಳುತ್ತದೆ ! ಸಂಗ್ರಹಗಳಲ್ಲಿ ಸಿಗುವ ಚೂರುಪಾರು ಲಾವಣಿಗಳಷ್ಟನ್ನೇ ಆಸ್ವಾದಿಸುವ ದೌರ್ಭಾಗ್ಯ ನಮ್ಮದಾಗುತ್ತದೆ !

# ಕಾಡ ಸಿದ್ಧಮ್ಮ

ಶ್ರೀ ಗುರುವರ ಜಯತು
ಭೋಗಿ ವಿಭೂಷಣ ಯೋಗಿವರನೆ ಜಯತು

ತಾಳ ಮೇಳಗಳೊಡನೆ ಪೂರ್ವನಿಶ್ಚಿತವಾದ ಕಾಡಸಿದ್ಧಮ್ಮನ ಕಥೆಗೆ ತೊಡಗಿದ್ದಾರೆ. ಅರಿತವರು ತಾವೆಂಬ, ನುರಿತವರು ತಾವೆಂಬ ಹೆಮ್ಮೆ ಅವರದಲ್ಲ. ಶಾರದಾಂಬೆಯನ್ನು ಪ್ರಾರ್ಥಿಸಿ ಸಭಿಕರಿಗೆ ನಮ್ರ ವಿನಂತಿಯನ್ನು ಅರ್ಪಿಸುತ್ತಿದ್ದಾರೆ—

ನಾವು ಬಲ್ಲವರಲ್ಲ ನಾವು ತಿಳಿದವರಲ್ಲ
ಯಾವ ತಪ್ಪಿದ್ದರೂ ತಿದ್ದಿಕೊಳಬೇಕು
ತಪ್ಪುಗಳಿದ್ದರೆ ಒಪ್ಪಿಕೊಳ್ಳಯ್ಯ ದೇವ
ಸಾವಿರದ ಒಂದು ಶರಣಾರ್ಥಿ ನಿನಗೆ

ಹಾಡಿನ ಆ ಮಂಜುಳ ತರಂಗವಿನ್ಯಾಸದ ನಡುವೆಯೇ ಕುಣಿತದ ವೈಖರಿಯೂ ಬೆರೆತು ಪ್ರೇಕ್ಷಕರನ್ನು ಯಾವುದೋ ಗೀತ ನೃತ್ಯಮಯ ಕನಸಿನ ಲೋಕಕ್ಕೆ ಕರೆದೊಯ್ಯುತ್ತಿದೆ. ಗುರು ಹಿರಿಯರಿಗೆ, ದೇವಾಧಿದೇವತೆಗಳಿಗೆ ವಂದನೆಯನ್ನು ಅರ್ಪಿಸಿ, ಕಥೆಯ ಆರಂಭದಲ್ಲಿ ನಿರೂಪಕ ಮತ್ತೆ ಸರ್ವೇಶ್ವರನಿಗೆ ಕೈಮುಗಿದಿದ್ದಾನೆ.

ಮುಂದಣ ಕಥೆಯ ಆದರಂದವ ಪೇಳುವೆನು
ಚಂದ್ರಶೇಖರ ನಮಗೆ ವರ ಕೊಡಲೊ ದೇವ
ವರ ಕೊಡಲೊ ದೇವ

ಮುಂದಣ ಕಥೆಗೆ ನಾಂದಿಯಾಯಿತು. ಯಾವ ಪಟ್ಟಣದ ಕಥೆ ? ಯಾವ ರಾಜನ ಕಥೆ ? ಎಲ್ಲವೂ ಹಾಡಿನಲ್ಲಿಯೇ ಮೂಡಬೇಕು. ಆ ಸರಳವಾದ, ಆ ಸುಭಗವಾದ ಹಾಡಿನ ಮೋಡಿಯಲ್ಲಿ ಮೈಮರೆಸಿ ಕರೆದೊಯ್ಯುವ ಬಗೆ ಯೆಂತು ಮೋಹಕ !

ಮುಂsದೆ ಇರುವುsದೊಂದು ಅಂದವುಳ್ಳ ಪ್ಯಟ್ಟಣವು
ಚಂದ್ರsವತಿಯೆಂಬ ಪಟ್ಟಣವಯ್ಯ – ಪಟ್ಟsಣವಯ್ಯ
ಏ ಗುಡುಗುಡು ಧೀಧಯ್ಯ....

ತಾಳ ಮೇಳಗಳು ನಿಂತವು. ಗಾನದ ಗುಂಗಿನಿಂದ ರಸಿಕರನ್ನು ಎಚ್ಚರಿಸುತ್ತ ಚಂದ್ರಾವತಿಯ ಕಡೆಗೆ ನಿರೂಪಕ ತಿರುಗಿದ್ದಾನೆ. ಕಥೆಯ ಬಹುಭಾಗವನ್ನು ವಚನದಲ್ಲಿಯೇ, ತನ್ನದೇ ಆದ ಶೈಲಿಯಲ್ಲಿ ನಿರೂಪಿಸಬೇಕಾಗಿದೆ. ಕಥೆಯೆಂದ ಮೇಲೆ 'ಹ್ಞೂ' ಗುಡುವವರೊಬ್ಬರು ಬೇಕು. ಸನ್ನಿವೇಶಕ್ಕೆ ತಕ್ಕಂತೆ ಆತನಲ್ಲಿಯೂ ಭಾವನೆಗಳ ಏರಿಳಿತ ! ಈಗ ಮುಮ್ಮೇಳದವನೊಬ್ಬ ಪ್ರೇಕ್ಷಕರ ಪ್ರತಿನಿಧಿಯಾಗುತ್ತಾನೆ. ಅವನನ್ನೇ ಕುರಿತಂತೆ, ಅವನ ಭುಜದ ಮೇಲೆ ಕೈಯಾಡಿಸಿ ವಿಶಿಷ್ಟ ಭಾವಗಳನ್ನು ಪ್ರದರ್ಶಿಸಿ, ಅವನ ಗಲ್ಲವನ್ನು ಹಿಡಿದು, ಅವನ ಮುಡಿಯನ್ನು ನೇವರಿಸಿ, ತನ್ನ ಕತ್ತನ್ನು ಅತ್ತಿತ್ತ ತೊನೆಯುತ್ತ, ಬಾಗುತ್ತ ಬಳುಕುತ್ತ ನಿರೂಪಕ ಸಾಗಿದ್ದಾನೆ, ಕಥೆಯ ಜಾಡನ್ನು ಹಿಡಿದು—

"ಏ....ಮಗು ಕೇಳಬೇಕಯ್ಯ"
"ಆಗಲೀ ಗುರುವೇ........"
"ಚಂದ್ರಾವತಿ ಚಂದ್ರಾವತಿ ಎನ್ನುವ ಪಟ್ಟಣ"
"ಆಗಬಹುದು ಮಹದೇವ"
"ಅಯ್ಯಾ ನೋಡು ಇದೇ ಚಂದ್ರಾವತಿ ಪಟ್ಟಣದಲ್ಲಿ"
"ಅಲ್ಲವೇ ಗುರುವೇ............!"
ಕೆತ್ತುಗಲ್ಲಿನ ಕೋಟೆ ಮುತ್ತಿನ ತೋರಣವು
ಕೊತ್ತಳ ಸೌರಳ ವಿಸ್ತರಿಸಲವಳೀ....

ಮಾರ್ಗಕಾವ್ಯದ ನಿಷ್ಠೆ ಅವನ ಕಥನ ಕ್ರಮದಲ್ಲಿ. ಕೋಟೆ ಕೊತ್ತಲಗಳ ವರ್ಣನೆ, ಹಾದಿಬೀದಿಗಳ ವರ್ಣನೆ, 'ಹಾಲು ಮಾರುವ ಬೀದಿ, ನೂಲು ಮಾರುವ ಬೀದಿ, ಸಾಲು ಸಕಲಾತಿಗಳ ಮಾರುವ ಬೀದಿಗಳ' ಆ ಚಂದ್ರಾವತಿ ಪಟ್ಟಣದಲ್ಲಿ, ಮುತ್ತು, ರತ್ನ, ವಜ್ರ, ವೈಢೂರ್ಯಗಳಿಗೂ ಕೊರತೆಯೆಲ್ಲಿ ಬಂತು! ಲಿಂಗವಂತರು, ಅಂಗವಂತರು, ಜಂಗಮರ ಕೇರಿಗಳು ಒಪ್ಪಿರಬೇಕಾದರೆ, ಆ ಕೆತ್ತುಗಲ್ಲಿನ ಕೋಟೆಯ ಚಂದ್ರಾವತಿಯನ್ನು ಚದುರಂಗರಾಯನು ಧರ್ಮದಿಂದ

ಪರಿಪಾಲಿಸುತ್ತಿದ್ದಾನೆ. ಧರ್ಮಾತ್ಮನಾದ ಅವನಿಗೆ ಶಿವ, ವಂಶದ ಕುಡಿಯೊಂದನ್ನು ಕರುಣಿಸಲಿಲ್ಲ. ಅವನ ಐದು ಮಂದಿ ರಾಣಿಯರೂ ಅದೇ ದುಃಖದಲ್ಲಿ ಮುಳುಗಿದ್ದಾರೆ. ಅದೇ ಸಂಕಟದಲ್ಲಿ ಕೈತೊಳೆದಿದ್ದಾರೆ.

ಒಮ್ಮೆ ಚದುರಂಗರಾಯ ತನ್ನ ರಾಜ್ಯವನ್ನೆಲ್ಲ ನೋಡಿ ಬರಬೇಕಾಯಿತು. ಮಂದಿ ಮಾರ್ಬಲದೊಡನೆ, ರಾಣಿಯರನ್ನು ಇಲ್ಲಿಯೇ ಬಿಟ್ಟು ಅವನು ಹೊರಟು ಹೋಗಿದ್ದಾನೆ. ಮುದಿ ಜಂಗಮನ ವೇಷವನ್ನು ತಾಳಿ ಚಂದ್ರಶೇಖರ ಅರಮನೆಯ ಮುಂದೆ ಕಾಣಿಸಿಕೊಂಡಿದ್ದಾನೆ.

ಭಿಕ್ಷವ ನೀಡಿರಮ್ಮ– ಜಂಗಮರಿಗೆ ಭಿಕ್ಷವ ನೀಡಿರಮ್ಮ
ಭಿಕ್ಷವ ನೀಡಿರಿ ಮೋಕ್ಷವ ಪಡೆಯಿರಿ
ಭಿಕ್ಷವ ನೀಡಿರಮ್ಮ—ಜಂಗಮರಿಗೆ ಭಿಕ್ಷವ ನೀಡಿರಮ್ಮ

ಅರಮನೆಯಲ್ಲಿ ರಾಣಿಯರು ಸಡಗರಗೊಂಡಿದ್ದಾರೆ. ಜಂಗಮದೇವನಿಗೆ ಭಿಕ್ಷೆ ನೀಡಿ, ಪುಣ್ಯ ಕಟ್ಟಿಕೊಳ್ಳುವ ಸಂಭ್ರಮ ಅವರಿಗೆ.

ಶಿವನೇ ಭಿಕ್ಷೆಗೆ ಬಂದ ನೋಡು ಬಾರೆ ತಂಗಿ ನೀಡು ಬಾರೆ
ಇವರಂಥ ಚೆಲ್ವರಿಲ್ಲ ನೋಡುಬಾರೆ ತಂಗಿ ನೀಡು ಬಾರೆ
ಕಾವಿ ಕಮಂಡಲ ನೋಡು ಬಾರೆ ತಂಗಿ
ರುದ್ರಾಕ್ಷಿ ಮಾಲೆಯ ನೋಡು ಬಾರೆ
ಬಗಲಲ್ಲಿ ಜೋಳಿಗೆ ನೋಡು ಬಾರೆ ತಂಗಿ
ಕೈಯಲ್ಲಿ ಬೆತ್ತವ ನೋಡು ಬಾರೆ
ತಂಗಿ ನೀಡು ಬಾರೆ

ಬಂಗಾರದ ತಂಬಿಗೆಯಲ್ಲಿ ಪನ್ನೀರನ್ನು ತಂದು, ಪಾದಪೂಜೆ ಮಾಡಿದ್ದಾರೆ. 'ಧೂಪ ದೀಪ ನೈವೇದ್ಯ'ಗಳೊಡನೆ ದೊಡ್ಡ ಹರಿವಾಣದಲ್ಲಿ, ಭಕ್ಷ್ಯ ಭೋಜ್ಯಗಳನ್ನು ನೀಡಲು ಹೊರಗೆ ಬಂದಾಗ, ಜಂಗಮಯ್ಯ ಏಕೋ ಸೆಟೆದು ಹಿಂದೆ ಸರಿದಿದ್ದಾನೆ—

ನಾನೊಲ್ಲೆ ನಾನೊಲ್ಲೆನೆ
ನೀ ನೀಡುವ ಭಿಕ್ಷವ

ನಾನೊಲ್ಲೆ ನಾನೊಲ್ಲನೆ
ಬಂಜೆ ಕೈಯೊಳ ಭಿಕ್ಷ
ಮಂಜುಳ ದಾನವ
ನಾನೊಲ್ಲೆ ನಾನೊಲ್ಲನೆ !

ಜಂಗಮಯ್ಯ ಭಿಕ್ಷೆಯನ್ನು ಕೊಳ್ಳದೆ ಹೊರಟು ಹೋದ. ರಾಣಿಯರ ಮನಸ್ಸು ಅವನಂದ ಮಾತಿನಲ್ಲಿ ಹರಿದು ಚೂರಾಯಿತು. ಸಂತಾನವಿಲ್ಲದ ತಮ್ಮ ಬದುಕು ವ್ಯರ್ಥ. ಯಾವ ಸಿರಿಯಿದ್ದರೇನು, ಯಾವ ಭೋಗ ಇದ್ದರೇನು.... ತಮ್ಮ ಈ ವೇದನೆಯನ್ನು ಹೇಳಿಕೊಳ್ಳುವುದಾದರೂ ಯಾರಲ್ಲಿ ! ದುಃಖ ಕವಿದು ಬಂದಿತು ಕಾರ್ಮೋಡದಂತೆ. ಅಂತಃಪುರದಲ್ಲಿ ಮಂಚವನ್ನೇರಿ ಶೋಕ ತಪ್ತರಾಗಿ ಮಲಗಿ ಬಿಟ್ಟರು. ಜಂಗಮಯ್ಯನ ಮಾತು ಹೃದಯವನ್ನು ಕುಯ್ಯುತ್ತಲೇ ಇತ್ತು ಗರಗಸವಾಗಿ !

ಚದುರಂಗರಾಯ ರಾಜಧಾನಿಗೆ ಮರಳಿದ. ಅರಮನೆಯ ಬಾಗಿಲಲ್ಲಿ ಆರತಿಯನ್ನು ಹಿಡಿದು ರಾಣಿಯರು ಬರಲಿಲ್ಲ. ಸೋಜಿಗದಿಂದ ಅಂತಃಪುರ ಕಡೆ ಬಂದು ನೋಡಿದರೆ, ಸಾಲು ಮಂಚದ ಮೇಲೆ ಕಣ್ಣೀರನ್ನು ಹರಿಸುತ್ತ ಮಲಗಿದ್ದ ರಾಣಿಯರು ನಡೆದ ಕಥೆಯೆಲ್ಲವನ್ನೂ ವಿವರಿಸಿದರು.

ತಾವಿನ್ನು ಉಳಿಯುವುದಿಲ್ಲವೆಂದು ಗೋಳಿಟ್ಟರು.

ಚದುರಂಗರಾಯ ಎಷ್ಟು ಸಮಾಧಾನಪಡಿಸಿದರೂ ರಾಣಿಯರ ದುಃಖ ಆರಲಿಲ್ಲ. ಇನ್ನು ತಾನು ಹೇಗಾದರೂ ಮಕ್ಕಳ ಭಾಗ್ಯವನ್ನು ಪಡೆಯಲೇ ಬೇಕಾಯಿತು. ರಾಣಿಯರಿಗೆ ಹೇಳಿ, ಮಂತ್ರಿಗೆ ರಾಜ್ಯಸೂತ್ರವನ್ನು ನೀಡಿ ತಾನು ಕುದುರೆಯನ್ನೇರಿ ಶಿವ ನಡೆಸಿದತ್ತ ಹೊರಟ. ಭಯಂಕರ ಅರಣ್ಯ ಮಾರ್ಗದಲ್ಲಿ ನಡೆದು ಪ್ರಶಾಂತವಾದೊಂದು ನೆಲೆಯನ್ನರಸುತ್ತ ಮುಂದೆ ಬಂದ.

ಹೀಗಿರುವಲ್ಲಿ ಕಾಂಚಿ ಪಟ್ಟಣದಲ್ಲೊಂದು ಕಥೆ ನಡೆದಿತ್ತು. ಅಲ್ಲಿನ ಕಾಂಚಿ ರಾಜನಿಗೂ ಪರದೇಶದ ಶೂರಸೇನ ಮಹಾರಾಜನಿಗೂ ಭಯಂಕರ ಯುದ್ಧ ಸಂಘಟಿಸಿ, ಕಾಂಚಿ ರಾಜ ಸಂಪೂರ್ಣವಾಗಿ ಸೋತುಹೋಗಿದ್ದ. ಮೊದಲೇ ತೀರ್ಮಾನವಾಗಿದ್ದಂತೆ ಸೋತವರು ಮಡದಿ ಮಕ್ಕಳೊಡನೆ ರಾಜ್ಯ ಕೋಶವನ್ನು ತೊರೆದು, ಅರಣ್ಯವನ್ನು ಸೇರಬೇಕಿತ್ತು. ಕಾಂಚಿರಾಜ ತನ್ನ

ಮಡದಿ ಮತ್ತು ಎಂಟು ದಿನದ ಹೆಣ್ಣು ಮಗುವಿನೊಡನೆ ದುಃಖದಿಂದ ಕಾಡಿಗೆ ನಡೆದಿದ್ದ. ಯಾವುದೋ ಮರದಡಿಯಲ್ಲಿ ತಂಗಿದ್ದ ಆ ರಾಜದಂಪತಿಗಳಿಗೆ ಎಂಟೇ ದಿನದಲ್ಲಿ ಮೃತ್ಯು ಎರಗಿತ್ತು. ಒಂದು ಹಗಲು ಕಳೆದಿದೆ. ನಟ್ಟಿರುಳು ಇಟ್ಟಣಿಸಿದೆ. ಆ ಕಲ್ಲುನೀರು ಕರಗುವ ವೇಳೆಯಲ್ಲಿ ಮಗು 'ಗಾರ್ ಗಾರ್' ಎಂದು ಕಾನನದ ಮೌನವನ್ನು ಹೀರುವಂತೆ ಅಳತೊಡಗಿದೆ.

**ಅಳುತಾಳೆ ಬಾಲೆ ಅಳುತಾಳೆ**
**ಅಮ್ಮ ಎನುತಲೈತೆ ಹಗುರಣ ಪಡುತೈತೆ**
**ಅಳುತಾಳೆ ಬಾಲೆ ಅಳುತಾಳೆ**

ಅಳುವ ಬಾಲೆಯ ದನಿ ಅಲೆ ಅಲೆಯಾಗಿ ಎಲೆ ಬಳ್ಳಿಗಳ ಮೇಲೆ ತೇಲಿ ತೇಲಿ ಹೋಗಿದೆ. ಅಳುತ್ತ ಅಸಹಾಯಕಳಾಗಿ ತರಗಿನ ರಾಶಿ ಒಂದರ ಮೇಲೆ ಉರುಳಿ ಬಿದ್ದಿದ್ದಾಳೆ. ಮತ್ತೆ ಬಾನೆಲ್ಲ ಕರಗುವಂತೆ, ಬನವೆಲ್ಲ ಮರುಗುವಂತೆ ಅಳತೊಡಗಿದ್ದಾಳೆ. ಸನಿಹದಲ್ಲೇ, ದೇಗುಲದಲ್ಲಿ ಕುಳಿತ ಕಾಡಸಿದ್ದೇಶ್ವರ ಎಳೆಯ ಬಾಲೆಯ ಅಳುವಿಗೆ ಕಣ್ತೆರೆದ ತನ್ನ ಜಡೆಯನ್ನು ಕೊಡವಿ ಮೇಲೆದ್ದು ದೇಗುಲವನ್ನಿಳಿದು ಹಸುಳೆಯ ಕಡೆಗೆ ನಡೆತಂದ. ಮಗುವನ್ನೊಮ್ಮೆ ಕಣ್ತುಂಬ ನೋಡಿ, ಬಾಗಿ ಮೃದುವಾಗಿ ಮೇಲೆತ್ತಿ, ತಕ್ಕೈಸಿ ಮುಂಡಾಡಿ, ಆದರದಿಂದ ಮೈದಡವಿ ಮುತ್ತಿಟ್ಟು 'ಎನ್ನ ಮಗಳೆ ಬಾರೆ ಹೊನ್ನ ಪುತ್ಥಳಿ ಗೊಂಬೆ' ಎಂದು ಮತ್ತೆ ಮತ್ತೆ ಎದೆಗೊತ್ತಿ ತನ್ನ ಗುಡಿಯ ಕಡೆ ನಡೆದು ಬಂದನು. ಅಲ್ಲಿನ ಕಲ್ಯಾಣಿಯಲ್ಲಿ ಮಗುವಿನ ಮೈತೊಳೆದು, ತನ್ನ ಗುಡಿಯಲ್ಲಿಯೇ ಆಶ್ರಯ ನೀಡಿದ. ತನ್ನ ಕೃಪೆಯಲ್ಲಿ ಬೆಳೆಯುತ್ತಿದ್ದ ಮಗುವಿಗೆ ಕಾಡಸಿದ್ದಮ್ಮನೆಂದೇ ಕರೆದು ತನ್ನ ಪೋಷಣೆಯಲ್ಲಿ ಪ್ರೀತಿ ಮಮತೆಗಳನ್ನೇ ಉಣಬಡಿಸಿ ಬೆಳೆಸಿದನು.

ಕಾಡಸಿದ್ದಮ್ಮ ನಿತ್ಯವೂ ಕಲ್ಯಾಣಿಯಲ್ಲಿ ಸ್ನಾನ ಮಾಡುವಳು. ಸೊಪ್ಪಿನ ಉಡುಗೆಯ ಮಡಿಯನ್ನು ಉಡುವಳು. ಕಾಡುಪತ್ರೆಯನ್ನು ತಂದು ಲಿಂಗ ರೂಪಿಯಾದ ಕಾಡಸಿದ್ದೇಶ್ವರನ ಪೂಜೆಯನ್ನು ತಪ್ಪದೆ ಮಾಡುವಳು. ಶಿವನ ಕರುಣೆಯ ಈ ಶಿಶು ಸಳನಳಿಸಿ ಬೆಳೆದಳು. ಅಲ್ಲಿಯೇ ಮೈನೆರೆದಳು. ತಾಯಿಯೂ ತಾನಾಗಿ, ತಂದೆಯೂ ತಾನಾಗಿ ಕಾಡಸಿದ್ದೇಶ್ವರ ಮಗಳ ಮುಂದಿನ ಭವಿಷ್ಯವನ್ನು ಯೋಚಿಸಬೇಕಾಯಿತು.

೦ ೦ ೦ ೦

ಚದುರಂಗರಾಯ ಅರಣ್ಯ ಮಾರ್ಗದಲ್ಲಿ ಬಾಯಾರಿ ಬಳಲಿ ಬರುತ್ತಿದ್ದಾನೆ. ಅಲ್ಲಿಂದ ಇಲ್ಲಿಗೆ, ಆ ಮರದಿಂದ ಈ ಮರಕ್ಕೆ ಹಾರುವ ಪಂಚವರ್ಣ ಗಿಣಿಯೊಂದು ಅವನ ದೃಷ್ಟಿಯನ್ನು ಸೆಳೆದು ಅದು ಹೋದ ದಾರಿಯಲ್ಲಿ ಕುದುರೆಯನ್ನು ನಡೆಸುತ್ತಾ ಸಾಗಿದ್ದಾನೆ. ಅಲ್ಲಿ ತೂರಿ ಇಲ್ಲಿ ಹಾರಿ ಆ ಗಿಳಿ ಕಾಡಸಿದ್ದೇಶ್ವರನ ಗುಡಿಯಲ್ಲಿ ಹೊಕ್ಕು ಮರೆಯಾಯಿತು. ಹಿಂಬಾಲಿಸಿ ಬಂದ ಚದುರಂಗರಾಯ ಕುದುರೆ ಇಳಿದು ಕಲ್ಯಾಣಿಯಲ್ಲಿ ಮಿಂದು, ಕಾಡಸಿದ್ದೇಶ್ವರನ ದರ್ಶನಕ್ಕೆ ಒಳಗೆ ಬಂದನು. ಗರ್ಭಗುಡಿಯಲ್ಲಿ ತಂದೆಯನ್ನರ್ಚಿಸುತ್ತಿದ್ದ ಕಾಡಸಿದ್ದಮ್ಮ ಆಗಂತುಕನೊಬ್ಬನನ್ನ ಕಂಡು ಬೆಚ್ಚಿದಳು. ನಾಚಿ ಕಂಬದ ಮರೆಗೆ ಸರಿದಳು.

ಮಿಂಚಿನಂತೆ ಮರೆಯಾದ ಆ ಅಪೂರ್ವ ಸುಂದರಿಯನ್ನು ದೇಗುಲದಲ್ಲಿ ಕಂಡ ಚದುರಂಗರಾಯ ಸೋಜಿಗಗೊಂಡ. ನಿಬಿಡಾರಣ್ಯದ ನಡುವೆ, ನಿರ್ಜನ ಪ್ರದೇಶದಲ್ಲಿ ಕಾಡುಗುಡಿಯಲ್ಲಿ ಕಂಡ ಕನ್ಯೆ, ಯಾರೀಕೆ ? ಚದುರಂಗರಾಯನಿಗೆ ಸಮಸ್ಯೆಯಾಯಿತು : ಆಕೆಯನ್ನು ನುಡಿಸಲು ತಾನೇ ಮುಂದೆ ಬಂದನು.

"ಯಾವ ರಾಜ್ಯವು ನಿನದು ಯಾವ ದೇಶವು ನಿನದು
ಯಾವ ರಾಜನ ಮಗಳು ಹೇಳಮ್ಮ ನೀನು !"

ಕಾಡಸಿದ್ದಮ್ಮನ ಬಾಯಿ ಕಟ್ಟಿ ಹೋಯಿತು. ಪರಪುರುಷನ ಜೊತೆಯಲ್ಲಿ ಮಾತಾಡುವುದೆ ? ಆದರೂ ಮಾತಾಡಬೇಕಾಯಿತು. ಕೈಯಲ್ಲಿ ಹುಲ್ಲು ಕಡ್ಡಿಯೊಂದನ್ನು ಹಿಡಿದು ಅದರೊಡನೆ ಮಾತಾಡುವಂತೆ ಉತ್ತರಿಸಿದ್ದಾಳೆ—

"ಯಾವ ದೇಶವೊ ನನದು ಯಾವ ರಾಜ್ಯವೊ ನನದು
ಯಾವ ರಾಜನ ಮಗಳೊ ಗೊತ್ತಿಲ್ಲ ನನಗೆ
ಇಂಥ ಪರದೇಶಿಯು ನಾನಾದೆ ಶಿವನೆ !"

ಬಾಲೆಯ ಮಾತಿಗೆ ಚದುರಂಗರಾಯನ ಮನ ಕರಗಿತು. ತನ್ನನ್ನು ಕೈ ಹಿಡಿದು ಸುಖ ಸೌಭಾಗ್ಯವನ್ನು ಪಡೆಯಲು ಆಕೆಯನ್ನು ಕೋರಿಕೊಂಡ. ತನ್ನ ತಂದೆಯ ಅಣತಿಯಿಲ್ಲದೆ ಕಾಡಸಿದ್ದಮ್ಮ ಒಪ್ಪುವುದಾದರೂ ಹೇಗೆ ? ಕೊನೆಗೆ ಚದುರಂಗರಾಯನೇ ಕಾಡಸಿದ್ದೇಶ್ವರನನ್ನು ಸ್ತೋತ್ರ ಮಾಡಿದನು.

ಕಾಡಸಿದ್ದೇಶ್ವರ ಒದಗಿ ಬಂದ ಅಮೃತ ಗಳಿಗೆಯಲ್ಲಿ ಕಣ್ಣು ಮುಚ್ಚಿ ಕೂರಲಿಲ್ಲ. ಅವನೆದುರು ಪ್ರತ್ಯಕ್ಷನಾಗಿ ತನ್ನ ಶಿಶುವನ್ನು ಕೈ ಹಿಡಿಯುವಂತೆ ಹರಸಿ ಕಾಡುಸಿದ್ದಮ್ಮನಿಗೆ ಹಿತೋಕ್ತಿಯನ್ನು ಹೇಳಿ ಇಬ್ಬರು ಗಂಡು ಮಕ್ಕಳನ್ನೂ, ಒಬ್ಬಳು ಮಗಳನ್ನೂ ಕರುಣಿಸಿರುವುದಾಗಿ ಹೇಳಿ ಲಿಂಗದಲ್ಲಿ ಐಕ್ಯವಾದ. ಚದುರಂಗರಾಯ ಹರ್ಷದ ಕಡಲಲ್ಲಿ ತೇಲುತ್ತ, ತನ್ನ ತೇಜಿಯ ಮೇಲೆ, ಹೊಸ ಮಡದಿಯನ್ನು ಕೂರಿಸಿಕೊಂಡು ರಾಜಧಾನಿಗೆ ಮರಳಿದ ರೀತಿಯೋ ಬೇರೆ–

ಕುದುರೆಯ ಕುಣಿಸುತ ಹುರಿಮೀಸೆ ತಿರುವುತ
ಹೊರಟನೇ ರಾಯ ಚದುರಂಗರಾಯ

ಮಕ್ಕಳ ಫಲವನ್ನು ಪಡೆದು ಬರಲು ಹೊರಟ ಚಂದುರಂಗರಾಯ ಹೊಸ ಮಡದಿಯನ್ನು ಕರೆತರುತ್ತಿದ್ದಾನೆ. ಅವಳಿಗೆ ತನ್ನ ಮೈಮೇಲಿನ ರೇಷ್ಮೆಯ ಶಾಲನ್ನೇ ನೀಡಿದ್ದಾನೆ.

ಸುದ್ದಿ ಎಲ್ಲೆಲ್ಲಿಯೂ ಹರಡಿತು. ಚಂದ್ರಾವತಿಯನ್ನೂ ತಲುಪಿತು. ಐದು ಮಂದಿ ರಾಣಿಯರು, ಮೇಲೊಬ್ಬಳು ಸವತಿ ಬರುವ ಸುದ್ದಿಗೆ ಕಿಡಿಕಾರುತ್ತ ಸೇಡಿನ ಕಿಚ್ಚಿಗೆ ಎಣ್ಣೆಯೆರೆದರು ; ಕುದಿದು ಕೆಂಪೇರಿದರು.

ಚದುರಂಗರಾಯ ಕಾಡಸಿದ್ದಮ್ಮನೊಡನೆ ವಿಜೃಂಭಣೆಯಿಂದ ವಿವಾಹ ಮಾಡಿಕೊಂಡಿದ್ದಾನೆ. ಹಿರಿಯ ರಾಣಿಯರೂ ಅಂತರಂಗದಲ್ಲಿ ಅಪಾರ ಅಗ್ನಿಜ್ವಾಲೆಯನ್ನು ಅದುಮಿಕೊಂಡೇ, ಉತ್ಸಾಹದಿಂದ ಲವಲವಿಕೆಯಿಂದ ಇಮ್ಮಡಿ ಆನಂದಗೊಂಡವರಂತೆ ವರ್ತಿಸುತ್ತಿದ್ದಾರೆ. ಕಾಡಸಿದ್ದಮ್ಮನೊಡನೆ ಸರಸ ಸಲ್ಲಾಪದಿಂದ ಚದುರಂಗರಾಯ ಹಲವು ದಿನಗಳನ್ನು ಕಳೆಯುವಲ್ಲಿ ಸಿದ್ದೇಶ್ವರನ ಹರಕೆ ಸಿದ್ಧಿಸುವ ಸೂಚನೆಗಳನ್ನು ಕೇಳಿ ರಾಣಿಯರು ಬೆದಬೆದ ಬೆಂದಿದ್ದಾರೆ. ಕಿರಿಯ ಮಡದಿ ಕಾಡಸಿದ್ದಮ್ಮನತ್ತಲೇ ರಾಜನ ಒಲವು ಹೆಚ್ಚು. ಇನ್ನು ಸಂತಾನ ಭಾಗ್ಯದ ಸಂತಸದಿಂದ ರಾಜ ತಮ್ಮನ್ನೆಷ್ಟು ಉಪೇಕ್ಷಿಸುವನೋ ; ಇನ್ನಾವ ತಿರಸ್ಕಾರಕ್ಕೆ ಇನ್ನಾವ ಹೀಯಾಳಿಕೆಗೆ ತಾವು ತುತ್ತಾಗಬೇಕೋ!

ರಾಣಿಯರು ಕಾಡಸಿದ್ದಮ್ಮನೊಡನೆ ಸವಿ ಮಾತುಗಳನ್ನೇ ಆಡಿದ್ದಾರೆ. ಇನ್ನಿಲ್ಲದ ಆದರವನ್ನೇ ವ್ಯಕ್ತಪಡಿಸಿದ್ದಾರೆ. ಅವಳ ಬಯಕೆಗಳೆಲ್ಲವೂ ನೆರವೇರು

ತ್ತಿವೆ. ಚದುರಂಗರಾಯ ಅರಮನೆಯ ಸಂಭ್ರಮ, ಸಡಗರಗಳಿಂದ ಉಲ್ಲಸಿತನಾಗಿದ್ದಾನೆ.

ಕಾಡಸಿದ್ದಮ್ಮನಿಗೆ ಆರು ತಿಂಗಳು ತುಂಬಿವೆ.

ಆರು ತಿಂಗಳ ನಾರಿ ಮತ್ತೇನ ಬಯಸಿದಳು
ಆರಿದ ಅನ್ನವು ಕೆನೆಮೊಸರು ದೇವ

ಅರಮನೆಯಲ್ಲಿ ಯಾವುದಕ್ಕೇನು ಕೊರತೆ ! ಬಯಸಿದ್ದನ್ನು ನೀಡಲು ದಾದಿಯರೇಕೆ ಬರಬೇಕು ! ಐದು ಮಂದಿ ಅಕ್ಕಂದಿರೇ ಉತ್ಸಾಹದಿಂದ ನೋಡಿಕೊಳ್ಳುತ್ತಿದ್ದಾರೆ ! ಇನ್ನಿಲ್ಲದ ಒಲವು, ಇನ್ನಿಲ್ಲದ ಆರೈಕೆ ದೊರೆಯುತ್ತಿರುವಾಗ ತಿಂಗಳುಗಳು ಉರುಳಿ ಹೋಗಿವೆ.

ಒಂದೆರಡು ಮೂರು ನಾಲ್ಕು ಐದಾರು ಏಳೆಂಟು
ತುಂಬಿತು ನವಮಾಸ ಇಂದುಮುಖಿಗಾಗ

ದಿನ ತುಂಬಿದೆ. ಚೊಚ್ಚಲು ಬಸುರಿ ಕಾಡಸಿದ್ದಮ್ಮ. ಸೂಲಗಿತ್ತಿ ನೀಲಮ್ಮನಂಥ ಅನುಭವಿಯೇ ಹೆರಿಗೆಯನ್ನು ಮಾಡಿಸಬೇಕು. ರಾಣಿಯರು ನೀಲಮ್ಮನನ್ನು ತಾವಾಗಿಯೇ ಬರಮಾಡಿಕೊಂಡಿದ್ದಾರೆ. ಅವಳ ಮಡಿಲು ತುಂಬುವ ಮುತ್ತು ರತ್ನಗಳನ್ನು ನೀಡಿದ್ದಾರೆ. ಒಳಮನೆಗೆ ಕರೆದೊಯ್ದು, ಕಿವಿಯಲ್ಲೇನೋ ಬಿತ್ತಿ ಬಂದಿದ್ದಾರೆ. ಇತ್ತ ಕಾಡಸಿದ್ದಮ್ಮ ಬೇನೆಗಳನ್ನು ತಿನ್ನುತ್ತಿದ್ದಾಳೆ.

ಹೊತ್ತು ಹೊತ್ತಿಗೆ ಬೇನೆ ಕತ್ತೀಲಿ ಕಡಿದ್ಹಂಗೆ
ಬಹುಕಷ್ಟ ಪಡುತಾಳೆ ಕಾಡಸಿದ್ದಮ್ಮ

ಸೂಲಗಿತ್ತಿ ನೀಲಮ್ಮ ತಾನೊಬ್ಬಳೇ ಹೆರಿಗೆಯ ಮನೆಯನ್ನು ಸೇರಿದಳು. ಕಾಡಸಿದ್ದಮ್ಮನ ಕಣ್ಣನ್ನು ಕಟ್ಟಿದಳು. ಅವಳು ಹೆರಿಗೆ ಮಾಡಿಸುವ ಪದ್ಧತಿ ಅದೆಂದಳು. ಶುಭಗಳಿಗೆಯಲ್ಲಿ ಕಳಕಳನೆ ಹೊಳೆಯುವ ಗಂಡು ಮಗುವೊಂದು ಜನಿಸಿದೆ. ಅದರ ಬಾಯನ್ನು ಮುಚ್ಚಿ ಸೂಲಗಿತ್ತಿ ನೀಲಮ್ಮ ಅದನ್ನು ನಿರ್ದಯೆಯಿಂದ ನೆಲಕ್ಕೆ ಅಪ್ಪಳಿಸಿದ್ದಾಳೆ. ಸತ್ತ ಮಗುವನ್ನು ಮಕ್ಕರಿ ಒಂದರಲಿ ಮುಚ್ಚಿಟ್ಟು ಮೊರದಲ್ಲಿ ಒನಕೆಯೊಂದನ್ನು ಇರಿಸಿದಳು. ನಿಟ್ಟುಸಿರು ಬಿಡುತ್ತ, ಕಡುಸೋಜಿಗವನ್ನು ವ್ಯಕ್ತಪಡಿಸುತ್ತ ಕಣ್ಣನ್ನು ಬಿಚ್ಚಿ "ಒನಕೆಯನ್ನು ಹಡೆದಿದ್ದೀಯೆ" ಎಂದು ಗಡುಸಾಗಿ ನುಡಿದು ಎದ್ದು ಹೋದಳು.

ಚದುರಂಗರಾಯ ಕುಸಿದುಬಿದ್ದ. ಮತ್ತೆ ಚೇತರಿಸಿಕೊಂಡು, ಆ ಅನಿಷ್ಟ ವಾರ್ತೆಗೆ ಪ್ರಚಂಡ ಕೋಪವನ್ನು ತಾಳಿ ಆರ್ಭಟಿಸಿದ. ಬಹುದಿನಗಳಿಂದ ಹಾರೈಸಿ ತಾನು ಇಂಥ ಸಂತಾನದ ಸುದ್ದಿಯನ್ನು ಕೇಳಬೇಕೆ ? ಕಾಡಸಿದ್ದಮ್ಮನ ತಲೆ ಕಡಿಸುವುದೇ ಇದಕ್ಕೆ ಉಚಿತವಾದ ಪರಿಹಾರ !

ರಾಜನ ತೀರ್ಮಾನವನ್ನು ಕೇಳಿ ಮಂತ್ರಿ ತತ್ತರಿಸಿ ಹೋದ. ಹಿನ್ನೆಲೆಯಲ್ಲಿ ಏನೊ ನಡೆದಿರಬೇಕೆಂಬ ಅವನ ವಿವೇಕ ಕ್ಷಣಕಾಲ ರಾಜನ ಕೋಪವನ್ನು ತಡೆ ಹಿಡಿಯಿತು. ಇನ್ನೊಮ್ಮೆ ಕಾದು ನೋಡಲು ಚದುರಂಗರಾಯನನ್ನು ತನ್ನ ಚಾತುರ್ಯದಿಂದ ಒಪ್ಪಿಸಿದ.

ಇತ್ತ ನಡುರಾತ್ರಿಯಲ್ಲಿ, ಸೂಲಗಿತ್ತಿ ನೀಲಮ್ಮ ಮಕ್ಕರಿಯನ್ನು ಹೊತ್ತು ಹೂಗಾರ ಮುದ್ದಣ್ಣನ ತೋಟದ ದಾರಿ ಹಿಡಿದಿದ್ದಾಳೆ. ಅರಮನೆಗೆ ಅನತಿ ದೂರದಲ್ಲೇ ಹರಿವ ಹೊಳೆಯ ದಡದಲ್ಲಿ ಹೂಗಾರ ಮುದ್ದಣ್ಣನ ತೋಟ. ಬಗೆಬಗೆಯ ಗಿಡಮರಗಳಿಂದ ತುಂಬ ಸೊಂಪಾಗಿದೆ.

ಮಲ್ಲೆ ಮಲ್ಲಿಗೆ ಜಾಜಿ ಮಡಿವಾಳ ಮಾದಳವು
ಸಾಲಾಗಿ ರಂಜಿಸುವ ದಾಳಿಂಬ ಗಿಡವು

ದಟ್ಟವಾಗಿ ಕವಿದ ಆ ತೋಟದ ಹಾದಿಯಲ್ಲಿ 'ಕಾರೆಂಬೊ ಕತ್ತಲೆ ಬೋರೆಂಬೊ ಮಳೆಗಾಲ'ದಲ್ಲಿ ಒಬ್ಬಳೇ ನಡೆದು ಬಂದಿದ್ದಾಳೆ ಮಡಿದ ಶಿಶುವನ್ನು ಹೊತ್ತು. ನಿರ್ಜನ ನೀರವ ರಾತ್ರಿಯಲ್ಲಿ ತೋಟವನ್ನು ಹೊಕ್ಕು ತಣ್ಣಗೆ ತೀಡುವ ಗಾಳಿಯಲ್ಲಿ ಗಡಗಡನೆ ನಡುಗಿ ಬಾಳೆಯ ಬುಡವೊಂದಕ್ಕೆ ಬಂದು ನಿಂತಳು.

ಬಾಳೆ ಬಾಳೆಗಳಲ್ಲಿ ರಸಬಾಳೆ ಗಿಡವೊಂದು
ಸಾಲಾಗಿ ನಿಂತಿರುವ ಸ್ಯಾಮಂತಿ ಗಿಡವು

ಸೇವಂತಿಗೆ ಮಡಿಗಳ ಪಕ್ಕದಲ್ಲಿ, ದಟ್ಟೈಸಿ ಬೆಳೆದ ರಸಬಾಳೆಯ ಗಿಡದ ಅಡಿಯಲ್ಲ ಮಕ್ಕರಿಯನ್ನು ಇಳುಹಿ ಮಗುವನ್ನು ಮುಚ್ಚಿ ಕತ್ತಲಲ್ಲೆಲ್ಲೋ ಕರಗಿ ಹೋದಳು.

ಕಾಡಸಿದ್ಧೇಶ್ವರನ ಕರುಣೆಯು ಕಣ್ಣು ತೆರೆಯಿತು. ಹೂಗಾರ ಮುದ್ದಣ್ಣನ ತೋಟಕ್ಕೆ ಬಂದು, ಮಡಿದ ಮಗುವನ್ನು ಕೈಗೆತ್ತಿಕೊಂಡು ಅದಕ್ಕೆ ಮತ್ತೆ

ಜೀವ ತುಂಬಿದ. ಬಾಳೆಯ ಎಲೆಯನ್ನು ಹಾಸಿದ, ಮತ್ತೊಂದು ಎಲೆಯನ್ನು ಹೊದಿಸಿ, ಮಗುವಿನ ರಕ್ಷಣೆಗೈದು ಬೆಳಗಿನವರೆಗೆ ಕಾವಲಾದ.

ಮುದ್ದಣ್ಣ ಹೊತ್ತಾರೆ ತೋಟಕ್ಕೆ ಬಂದಾಗ ಸೋಜಿಗದ ದನಿಯೊಂದು ಬಾಳೆಯ ವನದಿಂದ ತೇಲಿಬರುತ್ತಿದೆ. ಮುಂಜಾವಿನ ಮಬ್ಬಿನಲ್ಲಿ ತಡವರಿಸುತ್ತ ಆ ಅಸ್ಪಷ್ಟ ಧ್ವನಿ ಬಂದ ದಾರಿಗೆ ಹೋಗಿ ಹತ್ತಿರದಿಂದ ನಿಂತು ಕೇಳಿಸಿಕೊಂಡು ಬೆರಗಾದ. ಹಸುಳೆಯೊಂದರ ಆಕ್ರಂದನ ! ತನ್ನ ತೋಟದಲ್ಲಿ, ಬಾಳೆಯ ಬುಡದಲ್ಲಿ ! ದನಿಯ ದಾರಿಯನ್ನು ಹಿಡಿದು, ಬಾಳೆಯ ಬುಡವನ್ನು ತಡಕಿ, ಅಪೂರ್ವ ತೇಜಸ್ಸಿದಿಂದ ರಂಜಿಸುತ್ತಿದ್ದ ಮಗುವನ್ನು ಎತ್ತಿ ಎದೆಗಪ್ಪಿಕೊಂಡ. ಸಂತೋಷದಲ್ಲಿ ಹಿರಿಹಿರಿ ಹಿಗ್ಗಿದ.

'ಬಾರಯ್ಯ ಎನ ಮಗನೆ ಅರಗಿಳಿಯೆ ಬಾರೊ' ಎಂದು ಕೊಂಡಾಡುತ್ತ, ಮಕ್ಕಳಿಲ್ಲದ ತನಗೆ ಪರಶಿವನೇ ಕರುಣಿಸಿದ ಕಂದಮ್ಮನೆಂದು ನಲಿಯುತ್ತ ಮನೆಗೆ ಬಂದು ಮುದ್ದಕ್ಕನಿಗೆ ಮಗುವನ್ನು ಅರ್ಪಿಸಿದ. ಬಾಳೆಯ ಗಿಡ ಕರುಣಿಸಿದ ಶಿಶುವಲ್ಲವೆ ? 'ಬಾಳಣ್ಣ'ನೆಂದೇ ಹೆಸರಾಯಿತು. ಮಗುವನ್ನು ಮಮತೆಯಿಂದ ಸಾಕ ತೊಡಗಿದರು.

ಕಾಡಸಿದ್ದಮ್ಮ ಮತ್ತೆ ಗರ್ಭವತಿಯಾಗಿದ್ದಾಳೆ. ಈ ಬಾರಿಯಾದರೂ ತನ್ನ ಬಯಕೆ ಈಡೇರಬಹುದೆಂದು ಅವಳು ಹಂಬಲಿಸಿದಳು. ಚದುರಂಗರಾಯ ಕುತೂಹಲದಿಂದ ಆ ದಿನವನ್ನೇ ಕಾದಿದ್ದಾನೆ.

ರಾಣಿಯರ ಸಡಗರ ಮತ್ತೆ ಹೆಚ್ಚಿತು. ಸೂಲಗಿತ್ತಿ ನೀಲಮ್ಮ ಅವರ ಅಚ್ಚುಮೆಚ್ಚಿನವಳಾದಳು. ಮಡಿಲ ತುಂಬ ನಗನಾಣ್ಯಗಳು ಮತ್ತೆ ದೊರೆತವು. ಎಂದಿನಂತೆ ಕಾಡಸಿದ್ದಮ್ಮನ ಕಣ್ಣು ಕಟ್ಟಿ ಹೆರಿಗೆ ಮಾಡಿಸುವುದನ್ನು ಮಾತ್ರ ಅವಳು ಮರೆಯಲಿಲ್ಲ. ಈ ಬಾರಿ ಮೊರವನ್ನು, ತಿರುವುವ ಗುಂಡೊಂದು ಅಲಂಕರಿಸಿತು. ಕಾಡಸಿದ್ದಮ್ಮ ಕಣ್ಣೀರ ಕೋಡಿಯಲ್ಲಿ ಮುಳುಗಿದಳು. ಚದುರಂಗರಾಯನಿಗೆ ಇನ್ನು ಸಹಿಸಲು ಆಗಲಿಲ್ಲ. ಆದರೆ ಮಂತ್ರಿಯ ಸಲಹೆಗೆ ಕಿವಿಗೊಟ್ಟು ಇನ್ನೊಂದು ಜನನವನ್ನು ಪರೀಕ್ಷಿಸಲು ನಿರ್ಧರಿಸಿದ.

ಸತ್ತ ಮಗುವನ್ನು ಹೊತ್ತು ಅಪರಾತ್ರಿಯಲ್ಲಿ ಹೂಗಾರ ಮುದ್ದಣ್ಣನ ತೋಟಕ್ಕೆ ಸೂಲಗಿತ್ತಿ ನೀಲಿ ಬಂದಳು. ಬಾಳೆಯ ಗಿಡದಷ್ಟು ದೂರ ಹೋಗುವ

ತಾಳ್ಮೆ ಅವಳಿಗುಳಿಯಲಿಲ್ಲ. ಸಮೀಪದ ನಿಂಬೆಯ ಗಿಡದ ಬುಡದಲ್ಲಿಯೇ ಒಗೆದು ಮರೆಯಾದಳು.

ಕಾಡಸಿದ್ದೇಶ್ವರ ಈಗಲೂ ಮಗುವಿನ ರಕ್ಷಣೆಗೆ ಬಂದ. ಜೀವತುಂಬಿ ಅದನ್ನು ಉಳಿಸಿ ತನ್ನ ದೇಗುಲಕ್ಕೆ ಹಿಂದಿರುಗಿದ. ಎರಡನೆಯ ಮಗುವನ್ನು ಮತ್ತೆ ತನ್ನ ತೋಟದಲ್ಲಿಯೇ ಪಡೆದ ಮುದ್ದಣನ ಸಂತೋಷ ಮೇರೆ ವರಿಯಿತು. ನಿಂಬೆಯ ಗಿಡದಡಿ ದೊರೆತ ಮಗುವಿಗೆ 'ನಿಂಬಣ್ಣ' ನೆಂದೇ ಕರೆದ. ಎರಡು ಗಂಡು ಮಕ್ಕಳು ತಮ್ಮ ಲೀಲೆಗಳಿಂದ ಆ ದಂಪತಿಗಳನ್ನು ನಲಿಸುತ್ತ ಬೆಳೆಯತೊಡಗಿದರು.

ಕೆಲವು ದಿನಗಳು ಕಳೆದವು. ರಾಣಿಯರು ತಮ್ಮ ಸಾಹಸಕ್ಕೆ, ಸೂಲಗಿತ್ತಿ ನೀಲಮ್ಮನ ಸಹಕಾರಕ್ಕೆ ಹೆಮ್ಮೆಪಟ್ಟರು. ಆದರೆ ಮೂರನೆ ಬಾರಿಗೆ ಕಾಡಸಿದ್ದಮ್ಮ ಗರ್ಭಧರಿಸಿ ನಿಂತಾಗ ಅವರು ನಿಸ್ತೇಜರಾದರು. ಆದರೆ ಈ ಬಾರಿ ರಾಜ ಖಂಡಿತ ಅವಳನ್ನು ಉಳಿಸಲಾರ. ಇದು ಕೊನೆಯ ಪರೀಕ್ಷೆ. ಹೆಚ್ಚು ಎಚ್ಚರಿಕೆ ಯಿಂದ, ಹೆಚ್ಚು ಭಯದಿಂದಲೇ ಸಂಚನ್ನು ಸಾಧಿಸಲು ನಿರ್ಧರಿಸಿದರು. ಸೂಲ ಗಿತ್ತಿ ನೀಲಮ್ಮ ಅವರ ಪಾಲಿನ ದೇವತೆಯಾಗಿ ಬಂದಳು. ತನ್ನ ಚಾತುರ್ಯ ವನ್ನು ಅವರು ಮೆಚ್ಚುವ ರೀತಿಯಲ್ಲಿ ಮೆರೆಯಲು ಅನುವಾದಳು.

ಕಾಡಸಿದ್ದಮ್ಮನಿಗೆ ಕಣ್ಣುಕಟ್ಟಿಯೇ ಮತ್ತೆ ತನ್ನ ಕಾರ್ಯದಲ್ಲಿ ಜಯ ವನ್ನು ಪಡೆಯಲು ಸೂಲಗಿತ್ತಿ ನೀಲಮ್ಮ ಪ್ರಯತ್ನಿಸಿದಳು. ಈಗ ಹೆಣ್ಣುಮಗು ವೊಂದನ್ನು ಕಾಡಸಿದ್ದೇಶ್ವರ ಕರುಣಿಸಿದ. ಆದರೇನಂತೆ, ಸೂಲಗಿತ್ತಿ ಅರೆಕ್ಷಣವೂ ಕಾಯಲಿಲ್ಲ.

ಬಂದಂಥ ಬಾಲೆಯ ಬಾಯನ್ನೇ ಒಡಿಯುತ್ತ
ಗಡಿಗಡಿಗೆ ತಿರುಗಿಸಿ ಧಣಿಗೊಗೆದಾಳೊ ।

ಆ ಕ್ರೂರಿಯ ಕೈಯಲ್ಲಿ ಆ ಹೂಗೂಸು ನಿಶ್ಚೇಷ್ಟಿತವಾಗಿ ಮಲಗಿತು. ಮೊರದಲ್ಲಿ ಈ ಬಾರಿ 'ಕಸಬೊರಕೆ' ಕಾಣಿಸಿತು.

ಹೂಗಾರ ಮುದ್ದಣ್ಣನ ತೋಟವನ್ನೇ ಈ ಮಗವೂ ಸೇರಿತು. ಕಾಡ ಸಿದ್ದೇಶ್ವರ ಈಬಾರಿ ಮಗುವಿಗೆ ಜೀವವನ್ನು ನೀಡಿದುದರ ಜೊತೆಗೆ, 'ಹಿಂದೆ ಆದ ವಿಚಾರ ಮುಂದೆ ಆದ ವಿಚಾರ' ಗಳೂ ತಿಳಿಯುವಂತೆ ಮಾಡಿದ.

ಮುದ್ದಣ್ಣನಿಗೆ ಈಗ ಗಂಡುಮಗುವಲ್ಲ, ಹೆಣ್ಣುಮಗು ದೊರಕಿದೆ.

ಮಲ್ಲಿಗೆಯ ಬಳ್ಳಿಯಡಿ ದೊರೆತ ಕಂದಮ್ಮ: 'ಮಲ್ಲಿಗೆ ಮಲ್ಲಮ್ಮ' ನೆಂದು ಹೆಸರಿಟ್ಟನು. ಮೂರು ಮಕ್ಕಳು ಮುದ್ದಣ್ಣನ ಮುದ್ದುಗಿಣಿಗಳಾಗಿ, ಹೂಗಾರರ ಮನೆಯ ಬೆಳಕಾಗಿ ಬೆಳೆಯತೊಡಗಿದವು.

ಚದುರಂಗರಾಯ ಕಾಡಸಿದ್ದಮ್ಮನನ್ನು ಇನ್ನು ಅರಮನೆಯಲ್ಲಿ ಇಟ್ಟು ಕೊಳ್ಳದಾದ. ಯಾರೊಬ್ಬರ ಹಿತನುಡಿಯನ್ನೂ ಕೇಳದೆ ಅವಳ ತಲೆಯನ್ನು ಕಾಡಿನಲ್ಲಿ ಕಡಿದುಬರುವಂತೆ ಮಂತ್ರಿಗೆ ಆಜ್ಞಾಪಿಸಿದ.

ಘೋರಕಾನನ ; ಬಳಲಿದ್ದ ಕಾಡಸಿದ್ದಮ್ಮ ಹಾದಿ ನಡೆಯಲಾರದೆ ತತ್ತರಿಸುತ್ತಿದ್ದಾಳೆ.

ಅಡವಿ ಗಿಡಮರ ಕಲ್ಲ ಎಡವಿ ನುಗ್ಗಾಡುತ
ತಡವರಿಸಿ ಹೊರಟಳು ಅರಣ್ಯದೊಳಗೆ

ಬಸವಳಿದು ಬೆಂಡಾಗಿ ನಿಂತ ಕಾಡಸಿದ್ದಮ್ಮನನ್ನು ಇನ್ನು ಹೆಚ್ಚು ನಡೆಸದೆ ಮಂತ್ರಿ ಅಲ್ಲಿದ್ದ ಗವಿಯೊಂದರಲ್ಲಿ ಅವಳನ್ನು ಬಿಟ್ಟನು. ತಲೆ ಕಡಿಯುವ ಸಾಹಸ ಅವನಿಂದಾಗದೆ, ಕಣ್ಣೀರನ್ನು ಮಿಡಿದು, ಯೋಚಿಸಿ, ರಕ್ತಭೂತಾಳೆ ಮರವೊಂದನ್ನು ಕಡಿದು ಗುರುತನ್ನು ತೆಗೆದುಕೊಂಡು ಹೊರಟ. ಹೋಗುವ ಮುನ್ನ, ಕಾಡಸಿದ್ದಮ್ಮನ ಆಶಯದಂತೆ ಗವಿಯ ಬಾಗಿಲಿಗೆ ದೊಡ್ಡ ಬಂಡೆ ಯೊಂದನ್ನು ಮುಚ್ಚಿ ಹೊರಟುಹೋದ.

'ನನ್ನ ಶಾಪ ಬಿಡುಗಡೆಯಾದರೆ, ನನ್ನ ರಕ್ತಸಂಬಂಧದವರು ಇದನ್ನು ತೆಗೆಯಲಿ ; ಇಲ್ಲವಾದರೆ ಬೇಡ'–ಎಂದು ಬಂಡೆಗೆ ಶಾಪ ಹಾಕಿದ. ಕಾಡು ಸಿದ್ದಮ್ಮ ಗವಿಯ ಕತ್ತಲೆಯಲ್ಲಿ ಏಕಾಂಗಿಯಾಗಿ ಉಳಿದುಹೋದಳು.

ಹೂಗಾರ ಮುದ್ದಣ್ಣನ ಮನೆಯಲ್ಲಿ ಮಕ್ಕಳು ನಳನಳಿಸಿ ಬೆಳೆಯುತಿ ದ್ದಾರೆ. ನಿರೂಪಕ ಎರಡನೆಯ ಉಪಕಥೆ 'ಅಳ್ಳಣ್ಣ, ಬುಳ್ಳಣ್ಣ, ಸುಳ್ಳಣ್ಣ'ರ ಹಾಸ್ಯಪ್ರಪಂಚದಿಂದ ಬಾಳಣ್ಣ, ನಿಂಬಣ್ಣ, ಮಲ್ಲಿಗೆ ಮಲ್ಲಮ್ಮರ ಬಾಲ್ಯದ ಕಡೆ ಪ್ರೇಕ್ಷಕರನ್ನು ಕರೆದೊಯ್ಯುತ್ತಿದ್ದಾನೆ. ಅವನ ಕುಶಲತೆ, ಅವನ್ತ ಮಾತಿನ ವೈಖರಿ, ಅವನು ಕಥೆಯನ್ನು ಬೆಳೆಸಿಕೊಂಡು ಹೋಗುವ ಮೋಜಿಗೆ ಬೆರಗಾಗದವರಾರು ? ಹೆಜ್ಜೆ ಹೆಜ್ಜೆಗೆ ಬರುವ ಆ ಸವಿಯಾದ ಹಾಡುಗಳು, ಅವುಗಳ ಕೈಹಿಡಿದೇ ಬರುವ ಮನ ಮೋಹಕ ಕುಣಿತ ಜೊತೆಗೆ ನಿರೂಪಕ

ಹಾಸ್ಯವನ್ನು, ಶೋಕವನ್ನು, ಪ್ರೇಮವನ್ನು ಪ್ರದರ್ಶಿಸುವಲ್ಲಿ ವ್ಯಕ್ತಪಡಿಸುವ ಹಾವಭಾವ ವಿನ್ಯಾಸ ! ಓಹ್ ! ಕರಪಾಲ ಮೇಳ ಉಳಿದೆಲ್ಲ ಜನಪದ ಮೇಳಗಳನ್ನು ಮೀರಿನಿಲ್ಲುವ ಕಲೆ ! ಅದರದೇ ಆದ ವೈಶಿಷ್ಟ್ಯ, ಅದರದೇ ಆದ ತನ್ನತನ, ಅದರದ ಆದ ಜನಪದ ಗುಣವಿಶೇಷಗಳು ಯಾರ ಮನಸ್ಸನ್ನು ಸೆಳೆಯುವುದಿಲ್ಲ ! ಯಾರಿಗೆ ಆನಂದವನ್ನು ನೀಡುವುದಿಲ್ಲ !

ಶಿವಾಯ ನಮಃ ಓಂ ಶಿವಾಯ ನಮಃ
ಎಲ್ಲ ರೂಪವೂ ತಾನಂತೆ
ಶಿವ ಎಲ್ಲೆಲ್ಲಿಯೂ ತಾನಿಹನಂತೆ

ಸೊಲ್ಲು ಸೊಲ್ಲಿಗೆ ಶಿವಧ್ಯಾನ; ಮಾತು ಮಾತಿನಲ್ಲಿಯೂ ಉಕ್ಕಿ ಬರುವ ನೀತಿಯ ಕೆನೆ, ಭಕ್ತಿ, ಧರ್ಮ, ವೈರಾಗ್ಯಗಳ ಜೊತೆಗೆ ಹಸನಾದ ಬದುಕಿಗೆ ಬೇಕಾದ ವಿಶಿಷ್ಟ ಸಂದೇಶವನ್ನು ಕಥೆಯ ನಿಮಿತ್ತದಲ್ಲಿ ನಿರೂಪಕ ನೀಡುವ ಬಗೆ, ಕೂತೂಹಲವನ್ನು ಕೆರಳಿಸುತ್ತ ಸನ್ನಿವೇಶಗಳನ್ನು ರಸವತ್ತಾಗಿ ನಿರೂಪಿಸುತ್ತ ಸಾಗಿದ್ದಾನೆ.......

'ಜೈ ನಮಃ ಪಾರ್ವತೀ ಪತೇ ಹರಹರ ಮಹದೇವ'

ಶಿವಭಜನೆ ಮುಗಿದಿದೆ. ನೆರೆಯ ವೇದಿಕೆಯ ಮೇಲಿರಿಸಿದ ದೇವರ ಪಟಕ್ಕೆ ಪೂಜೆಯನ್ನು ಸಲ್ಲಿಸಿಯಾಗಿದೆ. ಇನ್ನು ಆ ಮುಗ್ಧೆ ಕಾಡಸಿದ್ದಮ್ಮನ ಅನಾಥ ಮಕ್ಕಳು ಬೆಳೆದು ಕಳೆಯೇರಿದ ಬಗೆ ಹೇಗೆ ?

ಮೊದಲನೆ ಮಗುವಿಗೆ ಬಾಳಣ್ಣ ಎಂದು
ಎರಡನೆ ಮಗುವಿಗೆ ನಿಂಬಣ್ಣನೆಂದು
ಮೂರನೆ ಮಗುವಿಗೆ ಮಲ್ಲಿಗಮ್ಮನೆಂದು
ಹೆಸರಿಟ್ಟರಯ್ಯ ಅತಿ ಮಧುರ ದೇವ ಅತಿ ಮಧುರ ದೇವ

ಮುದ್ದು ಹೆಸರನ್ನು ಹೊತ್ತ ಮುದ್ದು ಮಕ್ಕಳು ತೋಟದ ಹೂಬಳ್ಳಿಗಳಂತೆ ಬೆಳೆಯುತ್ತಿದ್ದಾರೆ. ಹೂಗಾರ ಮುದ್ದಣ್ಣ, ಅವನ ಮಡದಿ ಮುದ್ದಮ್ಮ ತಮ್ಮೆಲ್ಲ ಪ್ರೀತ್ಯಾದರಗಳನ್ನು ಮಕ್ಕಳಿಗಾಗಿ ಮುಡುಪಿಟ್ಟು ಸಲಹಿದ್ದಾರೆ. ವರ್ಷಗಳು ಜಾರಿವೆ. ಬಾಳಣ್ಣನಿಗಾಗಲೇ ಹನ್ನೊಂದು ವರ್ಷಗಳು. ನಿಂಬಣ್ಣನಿಗೆ ಒಂಬತ್ತು ವರ್ಷಗಳು. ಕೊನೆಯ ಹೊನ್ನ ಪುತ್ಥಳಿ ಮಲ್ಲಿಗೆ ಮಲ್ಲಮ್ಮನಿಗ ಏಳು

ವರ್ಷಗಳು ಸಂದಿವೆ. ಅರಮನೆಯಲ್ಲಿ ರಾಣಿಯರಿಗೆ ಇನ್ನಿಲ್ಲದ ಬೇನೆಗಳು ಕಾಣಿಸಿಕೊಂಡಿವೆ. ಕಣ್ಣುರಿ ಕಾಲುರಿಗಳು ಅವರನ್ನು ಹೆರೆದು ತಿನ್ನುತ್ತಿವೆ. ಯಾವ ಚಿಕಿತ್ಸೆಯೂ ಫಲಕಾರಿಯಾಗಿದೆ ಬೇಸತ್ತ ಅವರು ಶಾಸ್ತ್ರವನ್ನು ಕೇಳಿದ್ದಾರೆ. ಕವಡೆಯನ್ನು ಬಿಟ್ಟು ಅರಮನೆಯ ಶಾಸ್ತ್ರದವರು 'ಮನೆ ದೇವರ ಕಾಟ'ವೆಂದು ಹೇಳಿದ ಮೇಲೆ, ಶಾಂತಿಗಾಗಿ 'ಧೂಪದೀಪ'ಗಳನ್ನು ಮಾಡಬೇಕು. ರಾಣಿಯರು ಹೊಳೆಯ ಜಳಕಕ್ಕೆ ಹೊರಟು ನಿಂತರು.

ಹೂಗಾರ ಮುದ್ದಣ್ಣನ ಮಕ್ಕಳು ಅಂದು ತೋಟಕ್ಕೆ ಬಂದಿದ್ದಾರೆ. ಬಾಳಣ್ಣ, ನಿಂಬಣ್ಣ ಇಬ್ಬರೂ ಗಿಡಗಳಿಗೆ ನೀರು ಹಾಕುವಾಗ ಮುದ್ದು ಮಲ್ಲಮ್ಮ ಹೂ ಕಟ್ಟುತ್ತ ಆಟವಾಡುತ್ತಿದ್ದಳು. ಅಣ್ಣಂದಿರನ್ನು ಕರೆದು ತನಗೊಂದು ಮಣ್ಣಿನ ಬಸವಣ್ಣನನ್ನು ಮಾಡಿಕೊಡುವಂತೆ ಕೇಳಿಕೊಂಡಳು. ಮಣ್ಣಿನ ಬಸವಣ್ಣನನ್ನು ತಂಗಿಗಾಗಿ ಸೋದರರು ಮಾಡಿಕೊಟ್ಟರು. ಮಲ್ಲಿಗೆ ಮಲ್ಲಮ್ಮ ಅದನ್ನು ಅಲಂಕಾರ ಮಾಡಿ, ಹೂವಿನ ಮುಖವಾಡ, ಹೂವಿನ ಹಗ್ಗಗಳನ್ನು ಹಾಕಿ ಅದರೊಡನೆ ನಲಿದಳು. ಬಾಳಣ್ಣ ನಿಂಬಣ್ಣ ಕೆಲಸದಲ್ಲಿ ನಿರತರಾಗಿದ್ದಾರೆ. ಮಣ್ಣಿನ ಬಸವಣ್ಣ ಮಲ್ಲಿಗೆ ಮಲ್ಲಮ್ಮ ನೀಡಿದ ಉಣಿಸನ್ನು ಉಂಡು ಬಾಯಾರಿದೆ. ಅಣ್ಣಂದಿರು ಬೇಡ ಬೇಡವೆಂದರೂ ಅವಳು ತನ್ನ ಬಸವಣ್ಣನನ್ನು ನಡೆಸುತ್ತ ಹೊಳೆಗೆ ನೀರು ಕುಡಿಸಲು ಬಂದಳು,

ಮಣ್ಣಿನ ಬಸವಣ್ಣ ತಣ್ಣೀರ ಕುಡಿಯಣ್ಣ
ಅಣ್ಣಗಳ ಪಂತವ ನೆರವೇರಿಸಣ್ಣ

ಹಾಡುತ್ತ ಹಾಡುತ್ತ ನೀರನ್ನು ಕುಡಿಸಲು ಪ್ರಯತ್ನಿಸುವ ಏಳು ವರ್ಷದ ಪುಟ್ಟ ಹುಡುಗಿಯನ್ನು ಆಚೆಯ ದಡದಲ್ಲಿ ಹೊಳೆಯ ಸ್ನಾನಕ್ಕೆ ಬಂದಿದ್ದ ರಾಣಿಯರು ನೋಡಿದರು. ಮಲ್ಲಿಗೆ ಮಲ್ಲಮ್ಮನ ಪರಿ ಅವರಿಗೆ ನಗೆಯನ್ನು ತಂದಿತು.

ಮಣ್ಣಿನ ಬಸವಣ್ಣ ತಣ್ಣೀರ ಕುಡಿಯುವುನೇ
ಎಲ್ಲಿಯಾದರೂ ಉಂಟೆ ಕೆಟ್ಟಮುಂಡೆ ಮಗಳೆ !

ಅತ್ತಣಿಂದ ರಾಣಿಯರು ಚುಚ್ಚುಮಾತಿನಲ್ಲಿ ವ್ಯಂಗ್ಯವನ್ನಾಡಿದರು. ಪುಟ್ಟ ಮಲ್ಲಮ್ಮನೇನು ಸುಮ್ಮನಾದಳೆ । ತಾನೂ ಒಂದು ಬಾಣವನ್ನೆಸೆದಳು.

ಪುಟ್ಟ ಹುಡುಗಿಯ ಮಾತು ರಾಣಿಯರ ಹೃದಯವನ್ನೇ ಭೇದಿಸಿತು.

ಒಳಗೆ ಪಾಪವ ಮಾಡಿ, ಹೊರಗೆ ಮೈ ತೊಳೆದರೆ
ಮಾಡಿದ ಪಾಪಗಳು ಹೋಗುವುವೇನೇ ?

ಪುಟ್ಟ ಹುಡುಗಿಯ ಮಾತು ರಾಣಿಯರ ಹೃದಯವನ್ನೇ ಭೇದಿಸಿತು. ಆವಳ ಹರಿತವಾದ ನಾಲಗೆ ಅವರ ಮುಖಕ್ಕೆ ಕೊರೆವ ನೀರನ್ನೆರಚಿತು. ಯಾರಿವಳು ಈ ಪೋರಿ ? ದೃಷ್ಟಿಸಿ ನೋಡಿದಾಗ ಅವರು ತತ್ತರಿಸಿ ಹೋದರು. ಕಾಡ ಸಿದ್ದಮ್ಮನ ಮುಖದ ಹೋಲಿಕೆಯನ್ನೇ ಹೊತ್ತ ಇವಳು, ಅವಳ ಮಗಳೇ ಏಕಾಗಿರಬಾರದು ? ಸೂಲಗಿತ್ತಿ ನೀಲಮ್ಮ ಏನಾದರೂ ಮೋಸವನ್ನೆಸಗಿರಬಹುದೆ ?

ಮಲ್ಲಿಗೆ ಮಲ್ಲಮ್ಮನ ಮಾತು ಅವರ ತಾಳ್ಮೆಯನ್ನು ಕಸಿದುಕೊಂಡಿತು. ತಳಮಳಗೊಂಡು ಹೊಳೆಯನ್ನು ದಾಟಿ ಅವಳನ್ನು ಅಟ್ಟಿಸಿಕೊಂಡು ಬಂದರು. ಬೆದರಿದ ಮಲ್ಲಮ್ಮ ತನ್ನ ಬಸವಣ್ಣನೊಡನೆ ತೋಟದ ಕಡೆ ಓಡಿ ಬರುತ್ತ ಅಣ್ಣಂದಿರನ್ನು ಕೂಗಿ ಕರೆದಳು—

ಅಣ್ಣ ಅಣ್ಣ ಎಂದು ಅಣ್ಣೈನ ಕರೆಯಲು
ಓ ಎಂಬ ಸೊಲ್ಲುಗಳ ಮಾತುಗಳನಾಡೆ

ತಂಗಿಯ ಧ್ವನಿಯನ್ನು ಕೇಳಿ ಬಾಳಣ್ಣ, ನಿಂಬಣ್ಣ ಇಬ್ಬರೂ ಓಡಿ ಬಂದರು. ರಾಣಿಯರು ತೋಟದಿಂದ ಓಡಿಬಂದ ಆ ಮಕ್ಕಳನ್ನು ನೋಡಿ ಮತ್ತೂ ಬೆರಗಾದರು. ಚದುರಂಗರಾಯನನ್ನೇ ಹೋಲುವ ಆ ಇಬ್ಬರನ್ನು ಕಂಡ ಮೇಲೆ ಅವರ ಸಂಶಯ ಪುಷ್ಟಿಗೊಂಡಿತು. ಅಲ್ಲಿ ಅರೆಕ್ಷಣವೂ ನಿಲ್ಲಲಿಲ್ಲ. ಗಂಗೆಯ ಪೂಜೆಯನ್ನೂ ಮರೆತು ಅರಮನೆಯನ್ನು ಸೇರಿದರು. ಚದುರಂಗರಾಯನಿಗೆ ದೂರು ಹೋಯಿತು. ರಾಣಿಯರನ್ನು ಹೊಡೆದು ಬಡಿದು ಅವಮಾನಪಡಿಸಬೇಕಾದರೆ ಆ ತೋಟಗಾರ ಮುದ್ದಣ್ಣನ ಮಕ್ಕಳಿಗೆಷ್ಟು ಸೊಕ್ಕಿರಬೇಕು ! ಅವರಿಗೆ ತಕ್ಕ ಶಿಕ್ಷೆಯಾಗಲೇಬೇಕು! ಕೂಡಲೇ ಅವರನ್ನು ಬಂಧಿಸಿ ತರಿಸಬೇಕು ! ಶೂಲವೇ ಅವರಿಗೆ ಸರಿಯಾದ ಶಾಸ್ತಿ !

ಹೂಗಾರ ಮುದ್ದಣ್ಣನಿಗೂ ಸುದ್ದಿ ಮುಟ್ಟಿತು. ತನ್ನ ಮಕ್ಕಳ ಮೇಲೆ ಬಂದ ಅಪರಾಧಕ್ಕೆ ಅವನು ನಡುಗಿಹೋದ! ತನ್ನ ಕಿವಿಯನ್ನು ತಾನೇ ನಂಬದಾದ. ಮಕ್ಕಳನ್ನು ತಬ್ಬಿಕೊಂಡು ದಂಪತಿಗಳಿಬ್ಬರೂ ಗೋಳಾಡಿದರು. ತಾವೇನನ್ನು ಮಾಡದಿದ್ದರೂ ಇದ್ದಕ್ಕಿದ್ದಂತೆಯೇ ತಮ್ಮ ಮೇಲೆ ಬಂದ

ಭಯಂಕರ ದೂರಿಗೆ ಮಕ್ಕಳೂ ತತ್ತರಿಸಿದರು. ರಾಜದೂತರು ಬಂದು ಅವರನ್ನು ಬಂಧಿಸಿ ಕರೆದೊಯ್ಯುವಾಗ ಮಕ್ಕಳ ಗೋಳು ಮುಗಿಲು ಮುಟ್ಟಿತು.

ಅಮ್ಮ ಅಮ್ಮ ಎಂದು ಅಮ್ಮನ ತಬ್ಬಿಕೊಂಡು
ಬಹು ದುಃಖ ಮಾಡುತಾನೆ ಬಾಳಣ್ಣನಾಗ
ಅಪ್ಪ ಅಪ್ಪ ಎಂದು ಅಪ್ಪನ ತಬ್ಬಿಕೊಂಡು
ಬಹು ದುಃಖ ಮಾಡುತಾನೆ ನಿಂಬಣ್ಣನಾಗ
ಅಮ್ಮ ಅಮ್ಮ ಎಂದು ಅಮ್ಮನ ತಬ್ಬಿಕೊಂಡು
ಬಹು ದುಃಖ ಮಾಡುತಾಳೆ ಮಲಿಗವ್ವನಾಗ

ರಾಜಾಜ್ಞೆಯಂತೆ ಮಕ್ಕಳನ್ನು ರಾಜನಲ್ಲಿಗೆ ಎಳೆತಂದರು. ದಾರಿಯುದ್ದಕ್ಕೂ ಘೋರವಾಗಿ ಶಿಕ್ಷಿಸಿದರು.

ಕಟ್ಟಿರೋ ಪೀಶಂಡಿ ಕಳ್ಳ ಲೌಡಿಯ ಮಕ್ಕಳ
ಏಟಿನ ಮೇಲೇಟುಗಳ ಹೊಡೆಯ ಬೇಕೀಗ

ಎಂದು ಬಡಿದು, ಹೊಡೆದು ರಾಜನ ಮುಂದೆ ತಂದು ನಿಲ್ಲಿಸಿದರು ರಾಜದೂತರು.

ಹೂಗಾರ ಮುದ್ದಣ್ಣ ತನ್ನ ಮಡದಿಯನ್ನು ಬಗೆಬಗೆಯಲ್ಲಿ ಸಮಾಧಾನಪಡಿಸಿದ. ಅವರೂ ಮಕ್ಕಳನ್ನು ಹಿಂಬಾಲಿಸಿ ಬಂದರು.

ಹಡೆಯದ ಮಕ್ಕಳು ದುಡಿಯದ ಬಂಗಾರ
ಪಡೆದವರಿಗಲ್ಲದೆ ಮತ್ತಾರಿಗುಂಟು

ಆ ದಂಪತಿಗಳು ಕಣ್ಣೀರನ್ನು ಹರಿಸುತ್ತ ಮನಸ್ಸಿಗೆ ನೆಮ್ಮದಿಯನ್ನು ತಂದುಕೊಳ್ಳಲು ಪ್ರಯತ್ನಿಸಿದರು. ಆದರೂ ದುಃಖ ಒತ್ತರಿಸಿ ಬಂದು ಮಕ್ಕಳನ್ನು ಅಗಲಲಾರದೆ ಓಡೋಡಿ ಬಂದರು.

ಅರಮನೆಯ ಮುಂದೆ ನವೀನವಾದ ಶೂಲದ ಮರ, ಶೂಲಕ್ಕೇರಿಸುವ ಮುನ್ನ ಮಕ್ಕಳನ್ನೊಮ್ಮೆ ನೋಡಬಯಸಿದ ಚದುರಂಗರಾಯ. ಅವರ ಮುಖಗಳನ್ನು ಕಾಣುತ್ತಿದ್ದಂತೆಯೇ ಅವ್ಯಕ್ತವಾದ ಪ್ರೀತಿಯ ತೆರೆಯೊಂದು ಅವನ ಹೃದಯದಲ್ಲಿ ಆಡಿತು. ಆ ಮಕ್ಕಳನ್ನು ತಬ್ಬಿ ಮುದ್ದಾಡುವಂತೆ ಮನಸ್ಸು

ಕಾತರಿಸಿತು. ಮಲ್ಲಿಗೆ ಮಲ್ಲಮ್ಮನ ಮುದ್ದು ಮುಖವನ್ನೊಮ್ಮೆ ನೋಡಿ ಚದುರಂಗರಾಯ ತನ್ನ ಕಣ್ಣಿನಲ್ಲೇಕೋ ನೀರನ್ನು ತುಂಬಿಕೊಂಡ,

ಮಲ್ಲಿಗೆ ಮಲ್ಲಮ್ಮ ರಾಜನ ಮುಂದೆ ಧೈರ್ಯವಾಗಿ ನಡೆದು ಬಂದಳು. ಏನನ್ನೋ ರಾಜನೊಡನೆ ನುಡಿಯುವ ತವಕ ಅವಳ ಮುಖದಲ್ಲಿ ತುಳುಕುತ್ತಿತ್ತು. ಚದುರಂಗರಾಯನೂ ಕಾತರಗೊಂಡ. ಅವಳೇನು ಹೇಳುವಳೆಂದು ಅತ್ತ ಕಿವಿ ಕೊಟ್ಟ.

"ನಾನು ಸಾಯಲು ಯೋಚಿಸುವುದಿಲ್ಲ; ಆದರೆ ಸಾಯುವ ಮುನ್ನ ನನ್ನದೊಂದು ಕೋರಿಕೆಯನ್ನು ನೆರವೇರಿಸಿಕೊಡಬೇಕು."

ಕೈಮುಗಿದು ಕೇಳಿಕೊಂಡಳು ಮಲ್ಲಿಗೆ ಮಲ್ಲಮ್ಮ. ಅವಳ ಮುದ್ದು ಮಾತಿಗೆ ಮನಕರಗಿದ ಚದುರಂಗರಾಯ ಅವಳ ಇಚ್ಛೆಯನ್ನರಿತ. ಒಂದು ಒನಕೆಯನ್ನೂ, ಕುಂದಲಿಗೆಯನ್ನೂ ಬಿದರಕ್ಕಿಯನ್ನೂ ತರಿಸಿದ. ಅಣ್ಣಂದಿರನ್ನು ಅಕ್ಕಪಕ್ಕದಲ್ಲಿ ನಿಲ್ಲಿಸಿಕೊಂಡು, ಅಕ್ಕಿಯನ್ನು ಕುಟ್ಟುತ್ತ ಹಾಡಲು ತೊಡಗಿದಳು ತನ್ನ ಎಳೆಯ ದನಿಯಲ್ಲಿ ಮಲ್ಲಿಗೆ ಮಲ್ಲಮ್ಮ—

ಸುವ್ವಾ ಬಾ ಸುವ್ವಿ ಸುವ್ವಾ ಬಾ
ಸುವ್ವಾ ಬಾ ಸುವ್ವಿ ಸುವ್ವಾ ಬಾ
ಸುವ್ವಿ ಬಾ ಸಂಗಯ್ಯ
ಸುವ್ವಿ ಬಾ ಬಸವಯ್ಯ
ಸುವ್ವಿ ಬಾ ಚೆನ್ನಬಸವಯ್ಯ
ಸುವ್ವಾ ಬಾ ಸುವ್ವಿ ಸುವ್ವಾ ಬಾ
ಅಕ್ಕಿ ಹೊಂಬಾಳೆ ತೊಳಿಸ್ಯಾಳೆ
ಮಧುರಾವತಿಯನಾಳ್ವ ಚದುರಂಗರಾಯಗೆ
ಸುವ್ವಾ ಬಾ ಸುವ್ವಿ ಸುವ್ವಾ ಬಾ
ಐದು ಜನ ಹೆಂಡಿರು ಸುವ್ವಾ ಬಾ ಸುವ್ವಿ ಸುವ್ವಾ ಬಾ
ಸಂತಾನ ಪಡೆಯಲು ಕಾಡಿಗೆ ಹೊರಟನು ಸುವ್ವಾ ಬಾ ಸುವ್ವಿ ಸುವ್ವಾ ಬಾ
ಆಗ ಬಂದಿತು ನೋಡು ಪಂಚವರ್ಣದ ಗಿಳಿ ಸುವ್ವಾ ಬಾ ಸುವ್ವಿ ಸುವ್ವಾ ಬಾ

ವಿವರವಾಗಿ, ವಿಸ್ತಾರವಾಗಿ ಚದುರಂಗರಾಯನ ಕಥೆಯೆಲ್ಲವನ್ನೂ

ಕಾಡಸಿದ್ದಮ್ಮ ಪಟ್ಟ ಕಷ್ಟವೆಲ್ಲವನ್ನೂ ರಾಣಿಯರ ಮೋಸ ಕೃತ್ಯವನ್ನೂ, ತಾವು ತಬ್ಬಲಿಯಾದ ಬಗೆಯನ್ನೂ ಅವರಿಗೆ ಬಂದ ಅಪವಾದದ ಪರಿಯನ್ನೂ ಕೇಳು ವವರು ನಿಬ್ಬೆರಗಾಗುವಂತೆ ಹೇಳಿದಳು. ಕೇಳುತ್ತ ಕೇಳುತ್ತ ಚದುರಂಗರಾಯ ಪೀಠದಿಂದ ಕುಸಿದು ಮೂರ್ಛೆ ಹೋದನು.

ಸೂಲಗಿತ್ತಿ ನೀಲಮ್ಮನನ್ನು ರಾಜಭಟರು ಎಳೆತಂದರು. ಮರಣಭೀತ ಳಾದ ಅವಳು ಎಲ್ಲವನ್ನೂ ಸ್ಪಷ್ಟವಾಗಿ ಹೇಳಿ, ನಡುಗುತ್ತಾ ನಿಂತುಕೊಂಡಳು. ನೂಲಿನ ಹಗ್ಗವನ್ನು ತರಿಸಿ, ರಾಣಿಯರನ್ನು ಐದು ಕಂಬಗಳಿಗೆ ಬಿಗಿಯುವಂತೆ ಚದುರಂಗ ರಾಯನ ಆಜ್ಞೆಯಾಯಿತು. ಕಾಡಸಿದ್ದಮ್ಮನನ್ನು ನೆನೆದು ಗದ್ಗದ ಕಂಠನಾಗಿ, ಮಕ್ಕಳನ್ನು ತಬ್ಬಿಕೊಂಡು ಗೋಳಿಟ್ಟನು.

ಕಾಡಸಿದ್ದಮ್ಮ ಮಡಿದ ಸ್ಥಳವನ್ನು ತೋರುವಂತೆ ಮಂತ್ರಿಯನ್ನು ಚದು ರಂಗರಾಯ ಕೇಳಿಕೊಂಡ. ಮಕ್ಕಳೊಡನೆ ಮಿತ್ರಪರಿವಾರದೊಡನೆ ಚದುರಂಗ ರಾಯ ಕಾಡಿನ ದಾರಿಯಲ್ಲಿ ನಡೆದ. ಪಯಣದ ಮೇಲೆ ಪಯಣವನ್ನು ಮಾಡಿ ಕಾಡಸಿದ್ದಮ್ಮನ ಗವಿಯನ್ನು ಸೇರಿದರು. ಆದರೆ ಗವಿಯ ಬಾಗಿಲಿಗೆ ದೊಡ್ಡ ಬಂಡೆಯೊಂದು ಮುಚ್ಚಿಕೊಂಡಿದೆ. ಅದನ್ನು ಪಕ್ಕಕ್ಕೆ ಸರಿಸಲು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದವು. ಚಂದ್ರಾವತಿಯಿಂದ ಹತ್ತು ಆನೆಗಳನ್ನು ತರಿಸಿ ಎಳೆಸಿದರು. ಆದರೂ ಸಾಧ್ಯವಾಗಲಿಲ್ಲ.

ಎಲ್ಲವನ್ನೂ ಮೌನವಾಗಿ ಗಮನಿಸುತ್ತಾ ನಿಂತಿದ್ದ ಮಲ್ಲಿಗೆ ಮಲ್ಲಮ್ಮ ತಂದೆಯ ಅಪ್ಪಣೆಯನ್ನು ಪಡೆದು ತಾನು ಮುಂದೆ ಬಂದಳು. ಎಲ್ಲರೂ ಆ ಸೋಜಿಗವನ್ನು ನೋಡಲು ಕಾತುರರಾಗಿ ನಿಂತರು. ಬಂಡೆಯ ಬಳಿಗೆ ಬಂದು ಮಲ್ಲಿಗೆ ಮಲ್ಲವ್ವ ಅದನ್ನೊಮ್ಮೆ ಬುಡದಿಂದ ಮುಡಿಯವರೆಗೆ ನೋಡಿದಳು.

"ನಿನ್ನಲ್ಲಿ ಪತಿವ್ರತಾ ಧರ್ಮವಿದ್ದರೆ
ನಿನ್ನ ಉದರದಲ್ಲಿ ನಾವು ಬಂದದ್ದೇ ಆದರೆ
ಈ ಬಂಡೆ ಬಾಗಿಲು ತೆಗೆಯಲಿ"

ಎಂದು ಹೇಳಿ ತನ್ನ ಪುಟ್ಟ ಕೈಗಳಿಂದ ಬಂಡೆಯನ್ನು ತಳ್ಳಿದಳು. ಚಂಡಿ ನಂತೆ ಪಕ್ಕಕ್ಕೆ ಸರಿದ ಬಂಡೆ ಎಲ್ಲರನ್ನೂ ಬೆರಗುಗೊಳಿಸಿತು. ಕಗ್ಗತ್ತಲ ಗವಿ ಭೀಕರವಾಗಿ ತನ್ನ ಬಾಯನ್ನು ತೆರೆಯಿತು. ಮೂರು ಮಂದಿ ಮಕ್ಕಳೂ ತಮ್ಮ

ತಾಯಿಯನ್ನು ಅರಸುತ್ತ ಗವಿಯ ಕತ್ತಲಲ್ಲೇ ಒಳನುಗ್ಗಿದರು. ಚದುರಂಗ ರಾಯನೂ ಹಿಂಬಾಲಿಸಿ ಹೋದನು. ಕತ್ತಲಲ್ಲಿ ತಡವರಿಸಿದ ಮಕ್ಕಳಿಗೆ ಅಲ್ಲಿ ದೊರೆತುದಾದರೂ ಬರಿಯ ಮೂಳೆಗಳು. ಕಾಡಸಿದ್ದಮ್ಮ ಮಡಿದು ಎಷ್ಟೋ ವರ್ಷಗಳಾಗಿದ್ದವು. ಮಕ್ಕಳು ಮೂವರೂ ಎಲುಬಿನ ರಾಶಿಯ ಮುಂದೆ ಕುಳಿತು ಪರಮಾತ್ಮನ ಧ್ಯಾನದಲ್ಲಿ ತೊಡಗಿದಾಗ, ಕಾಡಸಿದ್ದಮ್ಮನ ಮೊದಲಿನ ಆಕೃತಿ ಮತ್ತೆ ಮೂಡಿ, ನಿದ್ರೆಯಿಂದ ಎದ್ದವಳಂತೆ ಎದ್ದು ಕುಳಿತಳು. ಆ ಪರ ಮಾತ್ಮನ 'ಲೀಲಾಮಯ'ದಿಂದ ಕಾಡಸಿದ್ದಮ್ಮ ಮತ್ತೆ ಜೀವವನ್ನು ಪಡೆ ದಿದ್ದಾಳೆ. ಮಕ್ಕಳು 'ಅಮ್ಮ ಅಮ್ಮ' ಎಂದು ತಬ್ಬಿಕೊಂಡಿವೆ. ಆದರೆ ತನಗೆಲ್ಲಿಯ ಮಕ್ಕಳು ! ತಾನು ಹಡೆದದ್ದಾದರೂ ಏನು ! ಈ ಹಸುಳೆಗಳು ಸುತ್ತುಗಟ್ಟಿ ತನ್ನನ್ನು ಕಾಡುತ್ತಿವೆ.

ಕಾಡ ಸಿದ್ದಮ್ಮ ತನ್ನ ಮಕ್ಕಳಲ್ಲವೆಂಬಂತೆ ಅವರನ್ನು ನೋಡಿದಳು. ಆದರೆ ಬಂಡೆಯ ಶಾಪದ ವಿವರವನ್ನು ಮಲ್ಲಿಗೆ ಮಲ್ಲಮ್ಮ ನೆನಪು ಮಾಡಿ ಕೊಟ್ಟಳು. ಚದುರಂಗರಾಯ ಮಡದಿಯ ಎದುರು ಕ್ಷಮಾಯಾಚನೆ ಮಾಡು ವಂತೆ ನಿಂತಾಗ ಕಾಡ ಸಿದ್ದೇಶ್ವರ ಪ್ರತ್ಯಕ್ಷನಾಗಿ ಎಲ್ಲರನ್ನೂ ಹರಸಿ, ಕಾಡ ಸಿದ್ದಮ್ಮನ ಚರಿತೆ ಭೂಮಂಡಲದಲ್ಲಿ ಮಂಗಳ ಕಥೆಯಾಗಿ ಉಳಿಯಲೆಂದು ವರ ನೀಡಿದನು.

ರಾಜಧಾನಿಗೆ ಮರಳಿದ ಮೇಲೆ ಕಾಡಸಿದ್ದಮ್ಮನಿಂದ ಐದು ಮಂದಿ ರಾಣಿಯರಿಗೆ, ಸೂಲಗಿತ್ತಿ ನೀಲಮ್ಮನಿಗೆ ರಾಜನ ಕ್ಷಮೆ ದೊರೆಯಿತು. ಮಕ್ಕ ಳನ್ನು ಸಾಕಿ ಸಲಹಿದ ಹೂಗಾರ ಮುದ್ದಣ್ಣನಿಗೂ ಸರಿಯಾದ ಪುರಸ್ಕಾರ ಲಭಿಸಿತು.

ಇಲ್ಲಿಗೆ ಹರಹರ ಇಲ್ಲಿಗೆ ಶಿವಶಿವ
ಇಲ್ಲಿಗೆ ಈ ಕಥೆಯು ಸಂಪೂರ್ಣವಾಯ್ತು

ಕಾಡ ಸಿದ್ದಮ್ಮನ ಕಥೆಯನ್ನು ಮುಗಿಸಿ, ಕರಪಾಲದವರು ಮಂಗಳವನ್ನು ಹಾಡಿದ್ದಾರೆ, ಮುಂಗೋಳಿ ಕೂಗುವ ವೇಳೆಗೆ ಕಥೆ ಮುಗಿದು ಮೂಡಲಲ್ಲಿ ಬೆಳ್ಳಿ ಮೂಡಿದೆ. ಆ ಬೆಳ್ಳಿ ಚುಕ್ಕಿಯಂತೆಯೇ, ಮಬ್ಬುಗತ್ತಲಲ್ಲಿಯೂ ಪುಣ್ಯದ ಪ್ರಭೆ ಯನ್ನು ಹರಡಿ ದಾರಿತೋರುವ ಕಾಡಸಿದ್ದಮ್ಮನ ಕಥೆಯನ್ನು ಮೆಲುಕು ಹಾಕುತ್ತ ಮಂದಿ ಕರಗಿದ್ದಾರೆ.

— —

# ಬಸವ ಕುಮಾರ ಲೋಹಿತ ಕುಮಾರ

ಇತ್ತ ಬನ್ನಿ....ನರಸಾವತಿಯ ಬಣ್ಣನೆ ಆಗಲೇ ಮುಗಿಯುತ್ತಾ ಬಂದಿದೆ. 'ಗೋಪಾಳ,' 'ನೇಪಾಳ,' 'ಜೋಪಾಳ' ಗಳಂತಲ್ಲ, ಅದರ ಸಿರಿ, ಸಂಪತ್ತು, ಅದರ ವಜ್ರ, ವೈಢೂರ್ಯ, ಮುತ್ತು ರತ್ನಗಳ ಹೆಚ್ಚಳದ ಮಾತೇಕೆ ! ಆಚಾರ, ವಿಚಾರಗಳಲ್ಲಿ, ಭಕ್ತಿ, ಧರ್ಮ, ನಿಷ್ಠೆಗಳಲ್ಲಿ ನರಸಾವತಿಯ ನಗರವಾಸಿಗಳಿಗೆ ಸರಿಗಟ್ಟುವವರಾರು ?

ಅಂಗವಂತರ ಬೀದಿ ಲಿಂಗವಂತರ ಬೀದಿ
ಜಂಗಮರ ಬೀದಿಗಳು ಆಗ ಒಪ್ಪಿರಲು

ನರಸೇಂದ್ರ ಮಹಾರಾಜ ಶೀಲ ಚಾರಿತ್ರ್ಯಗಳ ಸಾಕಾರ ಮೂರ್ತಿಯಾಗಿ ಮೆರೆದಿದ್ದಾನೆ.

ಪಟ್ಟಮಹಿಷಿ ನರಸಾವತಿ ಸದಾಚಾರ ಸಂಪನ್ನೆ. ಕಿರಿಯ ಮಡದಿ ಜೂನಾವತಿ ತನ್ನ ಬೆಡಗಿನಿಂದ, ಬಿನ್ನಾಣದಿಂದ, ನವ ಯೌವನದ ಸಿರಿಯಿಂದ ರಾಜನ ಒಲವನ್ನು ಸೆಳೆದ ಚತುರೆ ; ಛಲವಾದಿ. ಹಿರಿಯ ರಾಣಿ, ಕಿರಿಯ ರಾಣಿಯರ ನಡುವೆ ನಿತ್ಯ ಕಲಹಗಳನ್ನು ಹರಿಸುವುದೇ ರಾಜನಿಗೆ ತೊಡಕಾಗಿ, ಬೇರೆ ಬೇರೆಯ ಅರಮನೆಗಳಲ್ಲಿಯೇ ಅವರನ್ನು ಬಿಡಬೇಕಾಯಿತು.

ನರಸಾವತಿ ಗರ್ಭ ಧರಿಸಿದ ಸುದ್ದಿ ಜೂನಾವತಿಯಲ್ಲಿ ಮತ್ತಷ್ಟು ಬೇಗುದಿಯನ್ನು ತುಂಬಿ, ಮತ್ಸರದ ಉರಿ ರಾಚಿತ್ತು ಅವಳೆದೆಯನ್ನು ! 'ಅವಳಿ-ಜವಳಿ' ಗಳ ಸುದ್ದಿ ಕುಟಿಲೆ ಮುದುಕಿ ಒಬ್ಬಳಿಂದ ಜೂನಾವತಿಯನ್ನು ಮುಟ್ಟಿ ಹೊಗೆಯಾಡಿದ ಬೆಂಕಿ, ಕಿಡಿಯಾಗಿ ಹರಡಿತು. ಅರಮನೆಯಲ್ಲಿ ಸಂಭ್ರಮವೋ ಸಂಭ್ರಮ. ನೀಲಗಿರಿಯ ಸಿದ್ಧಲಿಂಗಶಾಸ್ತ್ರಿಗಳು ಬಂದಿದ್ದಾರೆ. ಮಕ್ಕಳ ಜಾತಕವನ್ನು ನೋಡಿ, ವಿಷಾದದ ಸುದ್ದಿಯೊಂದನ್ನು ರಾಜನ ಕಿವಿಯಲ್ಲಿ ಬಿತ್ತಿದ್ದಾರೆ.

ಹದಿನಾರನೇ ವಯಸ್ಸಿಗೇ ವನವಾಸವನ್ನು ತನ್ನ ಕಂದಮ್ಮಗಳಿಗೆ ನೀಡಿದ ಶಿವ, ಅವರನ್ನು ಕರುಣಿಸದಿದ್ದರೇನಾಗಿತ್ತು ? ಹೆತ್ತ ಕರುಳು ಆ ವೇದನೆಯನ್ನು ಸಹಿಸುವುದಾದರೂ ಎಂತು ?

ಹೋರಾಡಿ ಬಳಲುತ ಕಣ್ಣೀರ ಸುರಿಸುತ
ಬಹು ದುಃಖ ಮಾಡುತಾಳೆ ನರಸಾವತಿಯಾಗ

ಅರಮನೆಯಲ್ಲಿ ಮಕ್ಕಳು ಆನಂದದ ಕುಡಿಗಳಾಗಿ ಬೆಳೆದಿವೆ. ಎರಡು ಮೂರು ತಿಂಗಳಾದರೂ ಜೂನಾವತಿ ಆ ಮುದ್ದುಗಿಳಿಗಳನ್ನು ನೋಡಲು ಬರಲಿಲ್ಲ. ಬರುವ ಕಾತುರವಿದ್ದರೂ ಸವತಿಯಿಲ್ಲದ ಸಮಯಕ್ಕಾಗಿ ಕಾದವಳು ಅವಳು. ಕುಟಿಲೆ ಮುದುಕಿ, ಅದಕ್ಕೂ ನೆರವಾಗಿದ್ದಾಳೆ. ಅರಮನೆಯ ಗೌಡಿಯರು ಹೊಳೆಗೆ ಹೋದಾಗ, ಮಲಗಿದ ಮಕ್ಕಳನ್ನು ಬಿಟ್ಟು ನರಸಾವತಿ ಮಿಂಯಲು ಸ್ನಾನ ಗೃಹ ಸೇರಿದಾಗ, ಜೂನಾವತಿ ಶಿಶುಗಳ ಸನಿಹಕ್ಕೆ ನಡೆದು ಬಂದಳು.

ನಿದ್ರಾಲಸ್ಯದಲ್ಲಿ ಮಕ್ಕಳು ಮೈ ಮರೆತಿವೆ. ಕುಟಿಲೆ ಮುದುಕಿಯೊಬ್ಬಳನ್ನು ಉಳಿದು ಅರಮನೆಯಲ್ಲಿ ಯಾರೂ ಇಲ್ಲ. ಜೂನಾವತಿ ಬಾಗಿ, ಬಸವಕುಮಾರನನ್ನು ಕೈಗೆತ್ತಿಕೊಂಡು, ಮುತ್ತಿಟ್ಟು ಮುದ್ದಾಡಿ ತೊಟ್ಟಿಲಲ್ಲಿ ಮಲಗಿಸಿದಳು. ಲೋಹಿತನನ್ನು ಕೈಗೆತ್ತಿಕೊಂಡಾಗ ಅವನ ಶರೀರದ ಮಾಟಕ್ಕೆ ಕಳಕಳಿಸುವ ಸೌಂದರ್ಯಕ್ಕೆ ಮನಸೋತು, ಎದೆಗಪ್ಪಿ, ನಿಟ್ಟುಸಿರುಬಿಟ್ಟಳು.

'ಹದಿನಾರನೆಯ ವಯಸ್ಸಿಗೆ ಈ ಹುಡುಗ ನನ್ನ ಪತಿಯಾಗಲಿ'

–ಅವಳಿಗೆ ಅರಿವಿಲ್ಲದಂತೆ ನುಡಿಯೊಂದು ಹೃದಯದಲ್ಲಿ ಮಿಂಚಿ, ತುಟಿಯಂಚಿನಲ್ಲಿ ಕರಗಿತು. ಆದರೆ ಮಕ್ಕಳು ಇಬ್ಬರೂ ಒಂದೇ ರೂಪವನ್ನು ಹೊತ್ತಿದ್ದಾರೆ. ಬೆಳೆದಂತೆ ಗುರುತಿಸುವುದೂ ಅಸಾಧ್ಯವಾಗಬಹುದು.

ಜೂನಾವತಿ ಲೋಹಿತನ ಹಣೆಯನ್ನು ತನ್ನ ಸೆಳ್ಳುಗುರಿನಿಂದ ಗೀರಿದಳು. ಚಿಳ್ಳನೆ ರಕ್ತ ಹೊರಚಿಮ್ಮಿ ಬಂತು. ಕುಟಿಲೆ ಮುದುಕಿಯೊಡನೆ,ಸರಸರನೆ ಮೆಟ್ಟಿಲನ್ನು ಇಳಿದು ತನ್ನ ನಿಲಯದತ್ತ ಸಾಗಿ ಹೋದಳು. ನೋವಿನಿಂದ ಲೋಹಿತ ಚಿಟ್ಟನೆ ಚೀರಿದ.

ಅಳುತಾನೆ ಕಂದ ಅಳುತಾನೆ ಬಾಲ ಅಳುತಾನೆ
ಅಮ್ಮ ಎನುತಲೈತೆ ಹಗರಣ ಪಡುತ್ತೈತೆ ಅಳುತಾನೆ ಕಂದ ಅಳುತಾನೆ

ನರಸಾವತಿ ಬೆದರಿ ಓಡಿ ಬಂದಳು. ಮಗುವಿನ ಬಟ್ಟೆಯೆಲ್ಲಾ 'ರಕ್ತಮಯ' ಲೋಹಿತ ಅಳುತ್ತಿದ್ದಾನೆ.

ಆ ಕೂಡಲೇ ಶಿವನನ್ನು ನೆನೆದಿದ್ದಾಳೆ ನರಸಾವತಿ !

ಇದೇನು ಅನಿಷ್ಟ ಸಂಭವಿಸಿತೋ, ಎಂದು ರಾಣಿ ಮಗುವಿಗೆ ಸ್ನಾನ ಮಾಡಿಸಿದಳು. ಶಿವನನ್ನು 'ಮನದಲ್ಲಿ ಧ್ಯಾನಿಸುತ್ತ' ಮಗುವಿನ ಹಣೆಗೆ ಭಸಿತವನ್ನು ಲೇಪಿಸಿದಳು. 'ರಕ್ತಸ್ರಾವ' ನಿಂತಿತು.

* * * *

ಹದಿನಾರು ವರ್ಷ ಹದಿನಾರು ದಿನಗಳಾಗಿ ಕಳೆದಿವೆ. ಬಸವಕುಮಾರ–ಲೋಹಿತಕುಮಾರರು ಹರೆಯದ ಹೊಸ್ತಿಲಲ್ಲಿ ಕಾಲಿಟ್ಟಿದ್ದಾರೆ. ತಮ್ಮ ಆಟಪಾಠಗಳಿಂದ, ಸಾಹಸ ಸಾಮರ್ಥ್ಯಗಳಿಂದ ನರಸೇಂದ್ರನ, ನರಸಾವತಿಯ ನಲವನ್ನು ಇಮ್ಮಡಿಸಿದ್ದಾರೆ. ಜೂನಾವತಿಯೂ ಪತಿಯ ಎದುರಿನಲ್ಲಿ ಮಕ್ಕಳ ಬಗ್ಗೆ ಅತೀವ ಮಮತೆಯನ್ನೇ ಮೆರೆದಿದ್ದಾಳೆ. ಲೋಹಿತನ ವಿಜಯ, ವಿಕ್ರಮಗಳಲ್ಲಿ, ಶರೀರದ ಮಾಟದಲ್ಲಿ, ನಗೆ ನೋಟದಲ್ಲಿ, ವಿಶಿಷ್ಟ ಕನಸನ್ನು ಕಾಣುತ್ತ ತನ್ನ ಸುಪ್ತ ಬಯಕೆಯನ್ನು ವ್ಯಕ್ತಗೊಳಿಸದೆ ಕಾದಿದ್ದಾಳೆ–ಆ ಸಮಯಕ್ಕಾಗಿ !

ಒಮ್ಮೆ ಬಸವಕುಮಾರ–ಲೋಹಿತ ಕುಮಾರರಿಗೆ ಚೆಂಡಾಡುವ ಬಯಕೆ ಉಂಟಾಯಿತು. ರಾಜವೀಧಿಯಲ್ಲಿ ಕೆಳೆಯರನ್ನು ಕೂಡಿಕೊಂಡು ಆಟಕ್ಕಾಗಿ ಉತ್ಸಾಹದಿಂದ ನೆರೆದರು. ತನ್ನ ಅರಮನೆಯ ಮೇಲುಪ್ಪರಿಗೆಯ ಮೇಲೆ ಜೂನಾವತಿ ನಿಂತು ನೋಡುತ್ತಿರುವಾಗಲೇ ದೂರದಲ್ಲಿ ಇವರ ಆಟದ ಕೂಗು, ಕುಣಿತಗಳನ್ನು ಗಮನಿಸಿದ್ದಾಳೆ.

ಚೆಂಡನಾಡಿದರೊ ಅರಿವೆಯ ಚೆಂಡನಾಡಿದರೊ
ಲಗ್ಗೆಯ ಒಡ್ಡಿದರೊ ಕಲ್ಲಿನ ಲಗ್ಗೆಯ ಒಡ್ಡಿದರೊ

'ಕಂದುಕ ಕ್ರೀಡೆ'ಯನ್ನು ಹತ್ತಿರದಿಂದ ನೋಡುವ ಬಯಕೆ ಜೂನಾವತಿಗೆ ಆಯಿತು. ಕುಟಿಲೆ ಮುದುಕಿಯನ್ನು ಕರೆದು, ಕಿವಿಯಲ್ಲೇನೋ ಉಸುರಿ ಅತ್ತ ಕಳುಹಿಸಿದಳು. ವೃದ್ಧೆ ಮಕ್ಕಳತ್ತ ನಡೆದು ಬಂದಳು. ಚಿಕ್ಕ ತಾಯಿಯ ಬಯಕೆಯನ್ನು ವಿಸ್ತರಿಸ ಹೇಳಿದಳು. ಅಲ್ಲದೆ ನರಸಾವತಿಯ ಬಳಿಯಿರುವ ಮುತ್ತಿನ ಚೆಂಡನ್ನು ತಂದು ಆಡುವಂತೆ ಹುರುದುಂಬಿಸಿದಳು.

ರಾಜಕುಮಾರರು ತಾಯಿಯ ಬಳಿಗೆ ಓಡಿದರು. ಕಾಡಿ ಬೇಡಿ ಮುತ್ತಿನ ಚೆಂಡನ್ನೇ ತಂದರು. ತಂದೆ ಬರುವುದರಲ್ಲಿ ಅದನ್ನು ತಂದುಕೊಡುವಂತೆ ರಾಣಿ ನರಸಾವತಿ ಮಕ್ಕಳನ್ನು ಒತ್ತಾಯ ಪಡಿಸಿದಳು.

ಜೂನಾವತಿಯ ಅರಮನೆಯ ಮುಂದೆ ಚೆಂಡಾಟ ಆರಂಭವಾಯಿತು. ಬಸವಕುಮಾರ, ಲೋಹಿತಕುಮಾರ ಉತ್ಸಾಹದಿಂದ ಒಂದೊಂದು ಪಕ್ಷ ಸೇರಿದರು. ಲಗ್ಗೆಯನ್ನು ಹೂಡಿ, ಚೆಂಡನ್ನು ಹಿಡಿದು ಬಸವಕುಮಾರ ಮೊದಲು ನಿಂತ, ಜೂನಾವತಿ ಆಸಕ್ತಿಯಿಂದ ತನ್ನ ಉಪ್ಪರಿಗೆಯಲ್ಲಿ ನಿಂತು ಲೋಹಿತನಲ್ಲಿ ತನ್ನ ದೃಷ್ಟಿ ನೆಟ್ಟಳು. ಆಟ ಆರಂಭವಾಯಿತು.

ಚೆಂಡನಾಡಿದರೊ ಮುತ್ತಿನ ಚೆಂಡನಾಡಿದರೊ
ಲಗ್ಗೆಯ ಒಡ್ಡಿದರೊ ಬೆಳ್ಳಿಯ ಲಗ್ಗೆಯ ಒಡ್ಡಿದರೊ

ಬಸವಕುಮಾರ ಮುತ್ತಿನ ಚೆಂಡನ್ನು ಬೀಸಿ ಒಗೆದನು. ಅವನ ಆಟ ಅರೆಕ್ಷಣದಲ್ಲಿ ಹುಸಿಯಾಯಿತು. ಇನ್ನು ಲೋಹಿತಕುಮಾರನ ಆಟ. ಜೂನಾವತಿಯಲ್ಲಿ ತವಕ ಹೆಚ್ಚಾಯಿತು. ಚೆಂಡನ್ನು ಹಿಡಿದು ಲವಲವಿಕೆಯಿಂದ ಬಂದ ಲೋಹಿತ ಕುಮಾರನ ನಿಲುವನ್ನು ಅವಳ ಹಸಿದ ಕಣ್ಣು ತುಂಬಿಕೊಳ್ಳುವಂತೆ ನೋಡಿತು. ಲೋಹಿತ ಲಗ್ಗಗೆ ಗುರಿಯಿಟ್ಟು ಚೆಂಡನ್ನು ಬೀಸಿ ಒಗೆದ. ಮಿಂಚಿನಂತೆ ಸಾಗಿದ ಚೆಂಡು, ಪುಟಪೆದ್ದು ಎಲ್ಲಿಯೋ ಮಾಯವಾಯಿತು. ಉಪ್ಪರಿಗೆಯಿಂದ ಜೂನಾವತಿ ಒಳಗೆ ಸರಿದಳು. 'ಅತ್ತ ಹೋಯಿತು, ಅತ್ತ ಹೋಯಿತು'–ಹುಡುಗರು ಬೆರಳು ಮಾಡಿ ತೋರಿದರು.

ಚಿಕ್ಕ ತಾಯಿಯು ಉಪ್ಪರಿಗೆಗೆ ಚೆಂಡನ್ನು ಒಗೆದ ಲೋಹಿತಕುಮಾರ ತನ್ನ ಅಪರಾಧಕ್ಕೆ ಅಳುಕಿದ. ಆದರೂ ತಾಯಿಯಲ್ಲಿ ಕ್ಷಮೆಯನ್ನು ಕೋರಿ, ತಾನೇ ತರುವುದಾಗಿ ಅತ್ತ ಓಡಿದ. ಜೂನಾವತಿ ಆದರಂದದಲೇ ಬರಮಾಡಿಕೊಂಡಳು:

ಚಿಕ್ಕ ತಾಯಿಯ 'ರೀತಿ' ಲೋಹಿತಕುಮಾರನಿಗೆ ಸೋಜಿಗವನ್ನುಂಟು ಮಾಡಿತು. ಅವಳ ಹಸಿ ಬಯಕೆಗೆ ಕುಮಾರ ಹೇಸಿ ಓಮ್ಮೆಟ್ಟಿದ. ಸಿಡಿದು ಮಾತಾಡಿದ.

ಕಾಡಬೇಡ ಎನ್ನ ಕೂಡಬೇಡ
ಕಾಡಿ ಕಾಡಿ ಮನವ ನೋಯಿಸಬೇಡ

ಚೆಂಡನ್ನು ಕೇಳಲು ಬಂದ ಲೋಹಿತಕುಮಾರನ ಎದುರು ಜೂನಾವತಿ ಚಂಡಿಯಾಗಿ ನಿಂತಳು. ಅವಳ ಬಯಕೆ ಈಡೇರದ ಹೊರತು ತಾನು ಚೆಂಡನ್ನು

ಕೊಡುವುದಿಲ್ಲವೆಂದು ಹಟ ಹಿಡಿದಳು. ಲೋಹಿತಕುಮಾರ ಕೋಪದಲ್ಲಿ ಕುದಿದು ಹಲ್ಲನ್ನು 'ಗಿಟಗಿಟನೆ ಕಡಿಯುತ್ತ' ಆರ್ಭಟಿಸಿದ.

ಕಟ್ಟಿರೊ ಪೀಚಂಡಿ ಕಳ್ಳ ಲೌಡಿಯ ಮಗಳ
ಏಟಿನ ಮೇಲೇಟುಗಳ ಹೊಡೆಯ
ಬೇಕಿವಳ ಹೊಡೆಯಬೇಕಿವಳ

ಲೋಹಿತಕುಮಾರನ ಕೋಪಕ್ಕೆ ಜೂನಾವತಿ ಮಣಿಯಲಿಲ್ಲ. ಮುತ್ತಿನ ಚೆಂಡನ್ನು ತನ್ನೆರಡು ಎದೆಗಳ ನಡುವೆ ಇರಿಸಿ, ಅದನ್ನು ಮುಟ್ಟಿ ತೆಗೆದುಕೊಳ್ಳುವಂತೆ ಸೂಚಿಸಿದಳು. ಲೋಹಿತಕುಮಾರ ನಿಂತು ಯೋಚಿಸಿದ.

ಮೊದಲೇ ಪತಿಯೆಂದು ಬಗೆದವಳವಳು. ಬಲ ಹಸ್ತದಿಂದ ಚೆಂಡನ್ನು ಮುಟ್ಟುವುದು ದೋಷವಾದೀತು!

ಪರಮಾತ್ಮನ ಪ್ರೇರಣೆ ಬೇರೆಯಾಗಿತ್ತು. ಅವನ ಅಂತರಂಗದಲ್ಲಿ 'ಶಿವನ ಲೀಲಾಮಯದಿಂದ' ಹೊಸ ಭಾವನೆ ಮೂಡಿತು. ತಾನು ಹದಿನಾರು ವರ್ಷದ ಹರೆಯದವಲ್ಲಿದ್ದರೂ ಮಗನಾಗಿ ತಾಯ'ಸ್ತನ'ವನ್ನು ಕುಡಿಯಲು ಶಕ್ತ; ದೋಷವಿಲ್ಲ !

ಲೋಹಿತಕುಮಾರ ಮುಂದೆ ಬಂದ. ತನ್ನ ಬಾಯನ್ನು ಮುಂದೆ ಚಾಚಿ ಚೆಂಡನ್ನು ಕಚ್ಚಿ ಹಾರಿಸಿಕೊಂಡು ಅಲ್ಲಿಂದ ಹೊರಗೆ ಓಡಿದ.

ಜೂನಾವತಿಯಲಿ ರೋಷದ ಹಾಲಾಹಲ ಉಕ್ಕಿತು. ಕೆದರಿದ ತಲೆಯ, ಬೆದರಿದ ಮುಖದ ಮುದುಡಿದ ವಸ್ತ್ರದ ರೋಷಭೀಷಣೆಯಾಗಿ ಮಂಚದಲ್ಲಿ ಒರಗಿದಳು.

ನರಸೇಂದ್ರ ಬೇಟೆಯಿಂದ ಮರಳುವುದರಲ್ಲಿ ಮಕ್ಕಳ ಕಂದುಕಕ್ರೀಡೆ ಮುಗಿದಿತ್ತು. ಕಿರಿಯ ಮಡದಿ ಜೂನಾವತಿಯನ್ನೇ ಮೊದಲು ನುಡಿಸಿ, ಬೇಟೆಯ ಸಂಭ್ರಮವನ್ನು ವರ್ಣಿಸಿ ಬರಲು ಅತ್ತ ಸಾಗಿದ. ಎದುರುಗೊಳ್ಳದೆ, ನಗದೆ, ನುಡಿಯದೆ ಜೂನಾವತಿ ಮಂಚಕ್ಕೆ ಮುಖವನ್ನು ಚಾಚಿ ಬುಸುಗುಡುತ್ತ ಮಲಗಿದ್ದಾಳೆ.

ಮಾತಾಡ ಬಾರದೇ ಮಾನುನಿ ರನ್ನೆ
ಮೋಹದ ಪ್ರಿಯೆ ಮಾತಾಡಬಾರದೇನೇ !

ಮಾತಾಡದಿದ್ದರೆ ನಾ ತಾಳಲಾರೆನೆ
ಮಾತಾಡಬಾರದೇನೇ........
ಅಂಗಕೆ ಬೆಳದಿಂಗಳ್ ಬಿಸಿಲಾಗಿ ತೋರ್ಪುದು
ತಂಗದಿರಳೆ ಕೇಳು ನ್ಯಾಯವಲ್ಲವು
ಕಾಂತೆ ಮಾತಾಡಬಾರದೇನೇ !

ಜೂನಾವತಿ ತುಂಬಿದ ದುಃಖದಲ್ಲಿ ಮುಡಿಯೆತ್ತಿದಳು. ರಾಜಕುಮಾರರಿಬ್ಬರೂ ತನ್ನನ್ನು ಅಪಮಾನ ಪಡಿಸಲು ನಡೆಸಿದ ಪ್ರಯತ್ನವನ್ನು ವಿವರಿಸಿದಳು. ತನ್ನನ್ನು ಅವರೆಂತು ಕಾಡಿದರು, ನೋಡಿದರು—ಎಂದು ದುಃಖದ ದನಿಯಲ್ಲಿ ತಗ್ಗಿ, ಕುಗ್ಗಿ ನುಡಿದಳು.

ನರಸೇಂದ್ರನ ಕೋಪ ಕಾರ್ಕೋಟಕವಾಯಿತು. ತನ್ನ ಮಕ್ಕಳ ನಡತೆ, ನೀತಿಗಳಿಗೆ ಅವನಲ್ಲುಕ್ಕಿದ ರೋಷ ಬಿರುಸಿಡಿಲಾಯಿತು. ಆವೇಶದಲ್ಲಿ ಆರ್ಭಟಿಸಿ ತನ್ನ ಮಕ್ಕಳ ತಲೆ ಕಡಿಸುವುದಾಗಿ ಸಾರಿದ.

ಬಲಗೈ ಭಾಷೆಯ ಕೊಳ್ಳಿ ಎಡಗೈ ನಂಬಿಕೆ ಕೊಳ್ಳಿ
ಮೃಡನಾಣೆ ಈ ಮಾತು ತಪ್ಪೋದಿಲ್ಲ ಕಾಣೆ
ತಪ್ಪೋದಿಲ್ಲ ಕಾಣೆ ॥

ನರಸೇಂದ್ರನ ಆಜ್ಞೆಯನ್ನು ಕೇಳಿ ವೃದ್ಧ ಮಂತ್ರಿ ನಡುಗಿದ. ಆದರೂ ರೋಷ ಭೀಷಣನಾದ ಅವನೆದುರು ನಿಂತು ನುಡಿಯುವ ಸಾಮರ್ಥ್ಯ ಅವನಿಗೆ ಸಾಲದಾಯಿತು. ಮಕ್ಕಳನ್ನು ಕರೆದುಕೊಂಡು 'ಕಾಡಾರಣ್ಯ'ದ ಮಾರ್ಗದಲ್ಲಿ ಹೊರಟ.

ನರಸಾವತಿ ತನ್ನ ಮಕ್ಕಳಿಗೆ ಬಂದ ಸ್ಥಿತಿಯನ್ನು ನೆನೆದು ಹಲುಬಿ ಹಂಬಲಿಸಿದಳು. 'ಅತ್ತು ಕರೆದಳು'.

ಬಸವಕುಮಾರ, ಲೋಹಿತಕುಮಾರರ ತಲೆಯನ್ನು ಮಂತ್ರಿ ಕಡಿಸಲಿಲ್ಲ. ಗೊಂಡಾರಣ್ಯದ ವಟವೃಕ್ಷವೊಂದರಡಿ ರಾಜಕುಮಾರರಿಬ್ಬರೂ ಮಲಗಿ ನಿದ್ರಿಸುವಾಗ, ರಾಜಧಾನಿಗೆ ಮಂತ್ರಿ ಮರಳಿದ. ಆದರೆ ಬರಿಗೈಯಲ್ಲಿ ಬರದೆ ತಾಳಿಯ ಮರದ ಬುಡದಿಂದ ರಾಜಪುತ್ರರಿಬ್ಬರ ತಲೆಗಳನ್ನೂ ಮಾಡಿಸಿ ತಂದ. ಆನಂದದ ಅಮಲಿನಲ್ಲಿ ಜೂನಾವತಿ ಆ ತಲೆಗಳ ಮೇಲೆ ಕುಳಿತು ನಿತ್ಯವೂ ಸ್ನಾನ ಮಾಡುತ್ತ ತನ್ನ ಸೇಡಿಗೆ ಶಾಂತಿಯ ಲೇಪನ ಮಾಡಿಕೊಂಡಳು.

(ಇತ್ತ ನರಸಾವತಿಯ ಸ್ಥಿತಿಯೇನಾಯೆತಪ್ಪಾ !

"ಏನಾಯಿತು ಮಹಾದೇವ !"

"ಅಯ್ಯಾ ಮಗು ಮುಂದೆ ಕೇಳಬೇಕಯ್ಯಾ........"

"ಅಪ್ಪಣೆ ಗುರುವೇ.. ....."

"ತನ್ನ ಸುಪುತ್ರರನ್ನು ನೆನೆಯುತ್ತ, ಅನ್ನಾಹಾರಾದಿಗಳನ್ನು ತೊರೆದು ಆ ತಾಯಿ ಶಿವನ ಧ್ಯಾನ ಮಾಡುತ್ತು ಕುಳಿತಿರಬೇಕಾದರೇ...."

"ಕುಳಿತಿರಬೇಕಾದರೇ...."

"ಆ ಮಹಾದೇವಿಯ ಮೇಲೆ ಅಯ್ಯಾ ನೋಡು ಹುತ್ತ ಬೆಳೆದು ನಿಂತಿದೆ. ತಾಯಿಯ ಕಣ್ಣೀರು ಕೋಡಿಯಾಗಿ ಹುತ್ತದ ದ್ವಾರದಿಂದ ಹೊರಗೆ ಹರಿದಿದೆ, ಜೈ ನಮಃ ಪಾರ್ವತೀ ಪತೇ....

ಹರಹರ ಮಹಾದೇವ !!")

* * *

ತುಂಬು ಹೊಳೆಯಾಗಿ ತಾಳ ಮೇಳಗಳಿಂದ ಭೋರ್ಗರೆಯುವ ಕರ ಪಾಲದ ಪ್ರಧಾನ ಕಥೆ, ಉಪಕಥೆಯ ತಿರುವಿನಲ್ಲಿ ತುಸು ನಿಂತು ಮುಂದೆ ಸಾಗುತ್ತದೆ.

ಪ್ರೇಕ್ಷಕರ ಕಿವಿ ನಿಮಿರಿ ನಿಲ್ಲುತ್ತವೆ. ಮನಸ್ಸು ಉತ್ಸಾಹಗೊಳ್ಳುತ್ತದೆ.

ತನ್ನ ಅಭಿನಯ, ಹಾವಭಾವಗಳ ಜೊತೆಗೆ, ಗ್ರಾಮ್ಯ ಭಾಷೆಯ ಬೆಡಗನ್ನೂ ಬನಿಯನ್ನೂ ಧಾರಾಳವಾಗಿ ಎರೆಯುತ್ತಾ ಸಾಗಿದ್ದಾನೆ....ಆ ಮಧುರ ಹಾಸ್ಯದ ತೆರೆ, ನಗೆಯ ಹಾಯಿದೋಣಿಯನ್ನು ಕುಣಿಸುತ್ತಾ ಸಾಗಿದೆ....

ಪೂಜಾರಿ ಪುಟ್ಟಕ್ಕನ ಕಥೆಯೆಂದರೆ ಹೇಳುವವನೂ ಕೇಳುವವರೂ ಸಂಭ್ರಮಗೊಳ್ಳುತ್ತಿದ್ದಾರೆ....

ಅವಳೇನೋ 'ಅರಿವುಗಾರ' ಹೆಂಗಸು ನಿಜ. ಚತುರೆ, ಸುಂದರಿ. ಆದರೆ ಪುಟ್ಟಣ್ಣ ದಡ್ಡನಲ್ಲ. ಆ 'ಚೇಳು' ಯಾವಾಗಲೋ ಕುಟುಕಿತ್ತು. ಮನಸ್ಸು ಕಲಕಿತ್ತು. ಆದರೂ 'ಗೌಡಮಾವ' ಊರಿಗೆ ದೊಡ್ಡವನು! ಗಣ್ಯ !

ಪುಟ್ಟಣ್ಣ ಆಲೋಚಿಸಲೇಬೇಕಾಯಿತು.

"ಅದ್ಯಾವಾಗನಿಂದ ಪಾಟಾಗಿದ್ನೋ ನಂಗ್ ಮಾತ್ರ ತಿಳೀದು ?"

"ಹೌದೇನ್ರಿ ಅಯ್ಯನೋರ !"

"ಹೌದು, ಆದ್ರೂ ಪುಟ್ಟಣ್ಣ ಏನೂ ಸಾಮಾನ್ಯ ಅಂತ ತಿಳಿಬ್ಯಾಡ.... ಮೋಸಗಾರಂಗೆ ಒಬ್ಬ ಮರ್ಮಗಾರ ಅನ್ನಂಗೇ...."

ಪುಟ್ಟಣ್ಣನಿಗೆ ಏಕೋ ಕರಿಗಡುಬು ತಿನ್ನುವಂತಾಯಿತು. ಬೇಳೆ, ಬೆಲ್ಲ, ಗೋಧಿ ಎಲ್ಲವನ್ನೂ ತಂದ. ಪುಟ್ಟಕ್ಕನನ್ನು ಅಂಗಲಾಚಿದ. ಅವಳು ಜಗ್ಗಿದಳೆ ! ಇಂದು, ನಾಳೆ, ನಾಡದ್ದು....ದಿನಗಳು ಕಳೆದೇ ಹೋದವು. ಪುಟ್ಟಣ್ಣ ಸಿಟ್ಟಾಗ ಲಿಲ್ಲ. ಮರೆತವನಂತೆ ಹಾಗೇ ಗಪ್ ಆದ.

ಸುಬ್ರಹ್ಮಣ್ಯದ ಜಾತ್ರೆ ಬಂತು. ಮನೆಯಲ್ಲೇ ಕುಳಿತರೆ ಹೇಗೆ! ವ್ಯಾಪಾರ ಸಾಪಾರ ಮಾಡಬೇಕು. ಸಾಲ ಸೋಲ ತೀರಿಸಬೇಕು. ಮಣೆಗಾರನ ಹಾಗೆ ಮನೆಯಲ್ಲೇ ಮಡದಿ ಹತ್ತಿರವೇ ಇದ್ದರೆ !

"ಲೇ !" ಪುಟ್ಟಣ್ಣ ಪ್ರೀತಿಯಿಂದ ಪುಟ್ಟಕ್ಕನನ್ನು ಕರೆದ. "ಆ.... ನೋಡು....ಸುಬ್ರಹ್ಮಣ್ಯದಾಗೆ ಕ್ವಾಣನ ಯಾಪಾರ....ಹೊತ್ನಂತೇನೆ ಹೊಂಡ ಬೇಕು ! ಬರೋದು ಎಂಟು ಹತ್ತು ದಿನ ಆಯ್ತದೆ. ರೊಟ್ಟಿ ಬುತ್ತಿ ಕಟ್ಟಿ, ಹಸಬೆ ಚೀಲಕ್ತುಂಬು."

ದೂರದ ಪಯಣ. ಗಂಡನಿಗೆ 'ದಾಡಾ ಬಂದ್' ಆದರೆ ಹೇಗೆ ?

ಪುಟ್ಟಕ್ಕ ರಾತ್ರಿಯೆಲ್ಲಾ ನಿದ್ದೆಗೆಟ್ಟಳು. ಮೆಣಸು, ಜೀರಿಗೆ, ಮೆಣಸಿನ ಕಾಯಿ ಬೀಜ, ಕಾಯಿ ತುರಿ ಎಲ್ಲ ಹಾಕಿ ಸೊಗಸಾಗಿ ಪಯಣದ ರೊಟ್ಟಿ ಮಾಡಿ ಹಸಬೆ ಚೀಲಕ್ಕೆ ತುಂಬಿದಳು. ಮುಂಗೋಳಿ ಕೊಕ್ಕೊ ಎಂದು ಕೂಗುವ ಮೊದಲೇ ಗಂಡನನ್ನು ಏಳಿಸಿ 'ತಂಗ್ಳಿಟ್ಟು ಈರುಳ್ಳಿ' ಕೊಟ್ಟು ಬೀಳ್ಕೊಟ್ಟಳು !

"ಹ್....ಗುಲ್ಕಿ ಗಂಡ ಎಲ್ಲವನೆ ಅಂದ್ರೆ ನೆಲ್ಲಿಕಾಲಲ್ಲಿ ನೇತಾಡ್ತಾನೆ ಅನ್ನಾಂಗೆ....ಪುಟ್ಟಣ್ಣ ಹೋದ್ನ ಜಾತ್ರುಗೆ !"

"ಮತ್ತೇನಾದನ್ರೀ ಅಯ್ಯನೋರೆ !"

"ಅವರ ಮನೆ ಹತ್ತುರ್ಲೇ ಒಂದ್ ಹಳೇ ಕಾಲ್ದ ಬೇವಿನ ಮರ....ಮೆಲ್ಲಗೆ ಅದಕೆ ಅಡ್ರ್ಕೊಂಡ"

ಇತ್ತ ಪುಟ್ಟಕ್ಕ ಮತ್ತೆ ಮಲಗಲಿಲ್ಲ. ಮನೆಯನ್ನೆಲ್ಲ ಗುಡಿಸಿ ಸಾರಿಸಿ, ಬಾಗಿಲಿಗೆ ನೀರು ಹಾಕಿ ಕರಿಗಡುಬಿಗೆ ಅಣಿಮಾಡಿಕೊಂಡಳು.

"ಕಲ್ಲು ಮಣ್ಣು ಇಂಗಡಿಸಿ ಸಣ್ಣಗೆ ಬುಟಾಯಿಸಿ ಒಲೆ ಹಚ್ಚಿದ್ಲು.... ಪುಟ್ಟಣ್ಣ ಜಾತ್ರುಗೋದ್ ಸುದ್ದಿ ಗೌಡ್‌ಮಾವಂಗೆ ಅದ್ಯಂಗೆ ಮುಟ್ತೊ....

ಚೌಕಾನುಹೆಗುಲ್ಗೆಸ್ಕೊಂಡು ಮೀಸೆ ಮ್ಯಾಲೆ ಕೈಯಾಡಿಸ್ಕೊಂಡು ಎಗ್ಗಿಲ್ದೆನುಗ್ತಾ ಅವನೆ...ಯಾರ್‍ಯಾರ ಅವರೇ ಅಂದರಲ್ಲವ ವಸಿ ಓಂದೆ ಮುಂದೆ ಜುಗ್ಗಾಡಿ ನುಗ್ಗಬೇಕು !

ನೇರವಾಗಿ ಒಳಗೆ ಬಂದ ಗೌಡ ಮಾವ. ಪುಟ್ಟಕ್ಕ ಒಲೆಯ ಮುಂದೆ ಕುಳಿತು ಕಡುಬು ಕರೆಯುತ್ತಿದ್ದಾಳೆ. 'ಮುಗಿಸಲಿ' ಎಂದುಕೊಂಡು ನಡು ಮನೆಗೆ ಬಂದ. ಅಲ್ಲೇ ಹಳೇ ಕಾಲದ ಮಂಚ. ಹಾಸಿದ ಹಾಸಿಗೆ ಸುತ್ತಿರಲಿಲ್ಲ. ಗೌಡಮಾವ ಹಾಗೆಯೇ ಕಾಲು ಚಾಚಿ ಕುಳಿತ.

(ಅದ್ಯಾಕೆ ನಿದ್‌ಗೆಟ್ಟಿದ್ನೋ ರಾತ್ರೆಲ್ಲ ಸಂಗ್ ಮಾತ್ರ ಗೊತ್ತಿಲ್ಲ....ಹಂಗೆ ಅಂಗಾತ್ತ ಉಲ್ಲುಕೊಂಡ)

ಗೌಡಮಾವನಿಗೆ ಯಾವಾಗಲೋ ನಿದ್ದೆ ಬಂದಿತು. ಕೆಲಸ ಮುಗಿಸಿ ಹೊರಗೆ ಬಂದ ಪುಟ್ಟಕ್ಕ ಗೌಡಮಾವನನ್ನು ಎಬ್ಬಿಸಲಿಲ್ಲ. 'ಅಷ್ಟರಲ್ಲಿ ಒಂದು ನೆಡೆನೀರ್ ತಂದ್ರಾಯ್ತು !' ಎಂದು ಚವರಿಗೆ ಇರುಕಿ ಹೊರಟಳು.

ಪುಟ್ಟಣ್ಣ ಮೆಲ್ಲಗೆ ಮರ ಇಳಿದ. ಸೆಟ್ಟಗೆ ಒಳಗೆ ಬಂದ. ಗೌಡಮಾವ ಗೊರಕೆ ಹೊಡೆಯುತ್ತಿದ್ದ. ಅಡಿಗೆಯ ಕೋಣೆಗೆ ಹೋದ. ಕರಿಗಡುಬಿನ ವಾಸನೆ ಮೂಗಿಗೆ ಬಡಿಯಿತು. ಒಲೆಯ ಮೇಲೆ ನೋಡಿದ. ಗಣಗಣ ಕಾದಿದೆ, ಎಣ್ಣೆ.

(ಪುಟ್ಟಕ್ಕ ಹೋಗೋಳು ಹೋದ್ಲು : ಆ ಎಣ್ಣೆ ಬಾಣ್ಲೇನಾರ ಇಳಿಸಿ ಹೋದ್ಲ !) ನಡು ಮನೆಯಿಂದ ಗೌಡಮಾವನ ಗೊರಕೆ ಕೇಳಿ ಬರುತ್ತ ಇದೆ. ಅದೆಷ್ಟು ನಿರಾತಂಕವಾಗಿ ಮಲಗಿದ್ದಾನೆ ದಣಿ ! ಪುಟ್ಟಣ್ಣ ಒಮ್ಮೆ ಔಡುಗಚ್ಚಿದ.

(ಏನು ಸಿಟ್ಟು ಬಂತೋ ಅಪ್ಪ ಅವನಿಗೇ ! ಅನಾಮತ್ ಎತ್ಕೊಂಬಂದೇ ಬುಟ್ಟ ಎಣ್ಣೆ ಬಾಂಡ್ಲೀಯಾ ! ಒಳ್ಳೆ ಮೂಗು ಚಾಚ್ಕೊಂಡು ಬಿದ್ದಿದ್ದ ರಣ ಹದ್ನಂಗೆ ! ತಗೋ ಎರಡು ಮೂಗಿನ ಸೊಳ್ಳೆಗೂ ಆ ಕುದಿಯೋ ಎಣ್ಣೇನಾ ಸುರ್ದೇ ಬುಡೋದ ಅವನ ಮನೆಮಾರತ್ತ !)

ಪುಟ್ಟಣ್ಣ ತನ್ನ ಕೋಪವನ್ನೆಲ್ಲ ಒಂದು ಕ್ಷಣದಲ್ಲಿ ತೀರಿಸಿಕೊಂಡ. ಎಲಿ ಎಲಿ ಒದ್ದಾಡಿದ ಗೌಡ ಮಾವ ಕಾದ ಎಣ್ಣೆಗೆ 'ತಟಕ್' ಎಂದಿತು ಜೀವ !

(ಎಣ್ಣೆ ಬಿಟ್ಟಿದ್ದೆ ತಡ ! ಪಾಪ, ಗೌಡಮಾವ ಒಂದೇ ಸಲ ಚೊರ್ ಚೊರ್ ಚಟುಕ್ಕಂದ್ ಪಟುಕ್ಕಂದ್ ಮೂಲಂಗಿ ಗೆಡ್ಡೆ ಆಗೋದ ನೋಡು !)

ಪುಟ್ಟಣ್ಣ ಮಂಚದಿಂದ ಗೌಡಮಾವನನ್ನು ಕೆಳಗೆಳೆದು ಗೋಡೆಗೆ ಒರಗಿಸಿ

ಕೂರಿಸಿದ. ಒಳಗೆ ಓಡಿ ಎರಡು ಹಿಡಿ ಕರಿಗಡುಬು ತಂದು, ಅವನ ಬಾಯಿಗೆ ತುರುಕಿ, ಕೈಗೂ ಅಷ್ಟು ಕೊಟ್ಟು ಅಲ್ಲಿಂದ ಮಾಯವಾದ, ಅದೇ ಬೇವಿನ ಮರದ ನೆತ್ತಿಗೆ.

ಥಳಥಳ ಹೊಳೆಯುವಂತೆ, ಚವರಿಗೆಗಳನ್ನು ಬೆಳಗಿಕೊಂಡು, ಪುಟ್ಟಕ್ಕ ಬೀಗುತ್ತ ಮನೆಗೆ ಬಂದಳು, ಗೌಡ ಮಾವನ ಗೊರಕೆ ನಿಂತಿತ್ತು.

ಆಗಲೇ ಗೌಡರು ಎದ್ದಿದ್ದಾರೆ ! ತಾನೆಷ್ಟು ತಡ ಮಾಡಿದೆ ; ಅದೆಷ್ಟು ಬೇಸರಗೊಂಡರೋ....

ಹೊಸ್ತಿಲನ್ನು ದಾಟಿ ಒಳಗೆ ಇಣಿಕಿದಾಗ ಗೋಡೆಯನ್ನೊರಗಿ ಕುಳಿತಿದ್ದಾನೆ, ಗೌಡಮಾವ.

(ಇದೇನು ತೀರ್‌ಗೆಟ್ ಗಂಡಸ್ರು ನೀವು....ನಾನು ಬರೋದ್ರಲ್ಲಿ ಅವಸ್ರ ಆಗಿತ್ತಾ....ಬಾಯ್ಲಿ ಮುತ್ಕಂಡ್ ಕುಂತಿದ್ದೀಯಾ !)

ಚವರಿಗೆಗಳನ್ನು ಇಳುಕಿ, ಕೊಂಕು ಮಾತಿನಿಂದ ಜಂಕಿಸುತ್ತ ಗೌಡ ಮಾವನ ಮುಂದೆ ಕುಳಿತು ಪುಟ್ಟಕ್ಕ ಅವನ 'ಚ್ವಾಟಿ'ಗೆ ತಿವಿದಳು. ಬೆಚ್ಚಿ ಹೌಹಾರಿದಳು. ಗೌಡಮಾವ 'ಗೊಟಕ್' ಅಂದಿದ್ದಾನೆ ! (ಗಾಡಿ ಹಂಗೇ ಉಲ್ಲುಕೊಂತು !)

ಹೊರಗೆ ಯಾರದೋ ಧ್ವನಿ.

"ಲೇ ಜಾತ್ರಿಂದ ಬಂದೆ ಕಾಲಿಗೆ ನೀರು ಕೊಡೆ !" ಪುಟ್ಟಣ್ಣ ಒಳಗೆ ಬಂದೇಬಿಟ್ಟ. ಕಕ್ಕಾಬಿಕ್ಕಿಯಾದ ಪುಟ್ಟಕ್ಕ ಕೂಡಲೇ ಚೇತರಿಸಿಕೊಂಡಳು.

"ಕರಿಗಡಬು ಮಾಡಿಟ್ಟು ನೀರಿಗೆ ಹೋಗಿದ್ದೆ. ನಾ ಬರೋದ್ರಲ್ಲಿ ಎಡಗೈಲಿ ತುರಿಕ್ಕೊಂಡು ಸತ್ತೋಗವನೆ !"

ಧೈರ್ಯವಾಗಿಯೇ ಉತ್ತರ ನೀಡಿದಳು. ಪುಟ್ಟಣ್ಣ ಮನೆಯಲ್ಲಿದ್ದ ದೊಡ್ಡ ಜಾಯಿಕಾಯಿ ಪೆಟ್ಟಿಗೆಯೊಂದನ್ನು ತೆಗೆದು ಗೌಡಮಾವನ ಹೆಣವನ್ನು ಅದರಲ್ಲಿ ತುರುಕಿದ. ದೊಡ್ಡ ಹಗ್ಗದಿಂದ ಅದನ್ನು ಬಿಗಿದು ಜೋರಾಗಿ ಕೂಗಿ ಹೇಳಿದ.

"ಲೇ, ನಾ ಜಾತ್ರಿಗೋಗ್ತೀನಿ. ದೇವರ ಒಡವೇನೆಲ್ಲ ಈ ಜಾಯಿಕಾಯಿ ಪೆಟ್ಟಿಗೆಯಲ್ಲಿಟ್ಟು ಹಗ್ಗ ಬಿಗ್ದಿದ್ದೀನಿ....ಜ್ವಾಪಾನ !" ಎಂದು ಕೂಗಿ ಹೇಳಿ, ಅಲ್ಲಿಂದ ಕಾಲು ಕಿತ್ತ.

ಪುಟ್ಟಣ್ಣನ ಮಾತನ್ನು ಮನೆಯ ಹಿಂದೆ ಅಡಗಿದ್ದ ಐದು ಮಂದಿ ಕಳ್ಳರು

ಕೇಳಿಸಿಕೊಂಡರು. ರಾತ್ರಿ ಪುಟ್ಟಕ್ಕ ಮಂಚದ ಮೇಲೆ ಮಲಗಿ ಗೊರಕೆ ಹೊಡೆಯುವಾಗ ಮನೆಗೆ ಕನ್ನ ಹಾಕಿದರು. ಪೆಟ್ಟಿಗೆಯನ್ನು ಅತ್ತಿತ್ತ ಅಲುಗಿಸಿ ನೋಡಿದರು. ತೂಕವಾಗಿತ್ತು !

ಊರ ಹೊರಗೆ ಬಹಳ ದೂರ ಪೆಟ್ಟಿಗೆಯನ್ನು ಸಾಗಿಸಿದರು—ಬೆಳುಗುಂಬದ ಗಿಡದವರೆಗೆ. ದಾರಿ ಸಾಗುತ್ತಿದ್ದಂತೆ ಅವರ ಗುಂಪಿನ ವೃದ್ಧನಿಗೆ ಅಂತರಂಗ ಏನೋ ನುಡಿಯಿತು. ಒಂದು ಒಡವೆ ಹೇಗಾದರೂ ಮಾಡಿ ಅಪಹರಿಸಬೇಕೆಂದು ಯೋಚಿಸಿದ. ಉಳಿದ ನಾಲ್ಕು ಮಂದಿ ಯುವಕರನ್ನೂ ಅಜ್ಜ ಒಪ್ಪಿಸಿದ.

"ಲೋ ಹುಡುಗ್ರ....ನಾನೆಂದೂ ದೇವರ ಒಡವೆ ಕದ್ದಿಲ್ಲ....ಹೆಂಗಾರ ಆಗಲಿ ಪೂಜೆ ಮಾಡಿ, ಆಮೇಲೆ ಕೈ ಹಾಕೋದು ಒಳ್ಳೇದು !"

ಅಜ್ಜನ ಮಾತು ಒಪ್ಪಿಗೆಯಾಯಿತು,ಆ ಪಡ್ಡೆಗಳಿಗೂ.ಅಜ್ಜನನ್ನು ಅಲ್ಲೇ ಬಿಟ್ಟು ಪೂಜೆಯ ಸಾಮಾನು ತರಲು ಹತ್ತಿರದ ಊರಿಗೆ ಓಡಿದರು....ದೂರ ಕುಳಿತಿದ್ದ ಅಜ್ಜ ಈಗ ಹತ್ತಿರ ಬಂದ. ಹಗ್ಗವನ್ನು ಮೆಲ್ಲಗೆ ಬಿಚ್ಚಿ, ಮುಚ್ಚಳ ಎತ್ತಿ, ಬಲಗೈಯನ್ನು ಒಳಗೆ ಚಾಚಿ, ಹಾಗೇ ಒಡವೆಯನ್ನು ತಡಕುವಲ್ಲಿ.... ಏನೋ ಮೆತ್ತಗೆ ಕೈ....ಕಾಲು ಮುಖ....ಅಹ್ ! !

ಅಜ್ಜ ಮೂರು ಮಾರು ಹಿಂದಕ್ಕೆ ಹಾರಿದ ! ಮತ್ತೆ ಬಂದು ಪೆಟ್ಟಿಗೆಯ ಮುಚ್ಚಳವನ್ನು ಮುಚ್ಚಿ, ಇನ್ನೂ ಭದ್ರವಾಗಿ ಹಗ್ಗ ಬಿಗಿದು. ಐವತ್ತು ಮಾರು ದೂರ ಹೋಗಿ ಕುಳಿತ.

ಯುವಕರು ಓಡಿ ಬಂದರು. ಒಡವೆಯನ್ನು ಹಂಚಿಕೊಳ್ಳುವ ತವಕದಿಂದ ಹತ್ತಾರು ರೂಪಾಯಿನ ಹಣ್ಣು ಕಾಯಿಗಳನ್ನೇ ಪೂಜೆಗೆ ತಂದಿದ್ದಾರೆ. ಬಂದವರೇ 'ಅಜೋಜ' ಎಂದು ಕೂಗಿದರು ! 'ಏನಿರ್ಲೇ' ಅಜ್ಜ ದೂರದಿಂದ ನಿಧಾನವಾಗಿ ಉತ್ತರಿಸಿದ.

ಅಜ್ಜ ಹತ್ತಿರ ಬಂದ. ಪೂಜೆ ಮಾಡಿ ಒಡವೆಗಳನ್ನು ಹಂಚುವ ಕಾತರ ಅವನಲ್ಲಿ ಕಾಣಲಿಲ್ಲ.

"ಲೇ....ಹುಡುಗ್ರ....ನಾನೆಲ್ಲಿ ಬಾಳ್ದೋನು, ಬದುಕ್ದೋನು. ಈ ಕೊನೆಗಾಲ್ದಲ್ಲಿ ಯಾಕೆ ದೇವರ ಒಡವೆ ಕದಿಲಿ....ನೀವಿನ್ನೂ ಬಾಳೋರು ಬದ್ಕೋರು ನೀವೆ ಹಂಚ್ಕೊಳ್ಳಿ....ಪೂಜೆ ಮಾಡಿ ಹಣ್ಣು ಕಾಯಿ ನಂಗೆ ಕೊಟ್ಟು ಬಿಡಿ ಸಾಕು"

ಅಜ್ಜ ಅವರನ್ನು ಒಪ್ಪಿಸಿದ. ಯುವಕರು ಹಾಗೆಯೇ ಮಾಡಿದರು. "ನಾ

ಮರೆ ಆಗೋವರ್ಗೂ ಪೆಟ್ಗೆ ಬಿಚ್ಚಬೇಡಿ....” ಅಜ್ಜ ಎಚ್ಚರಿಸಿ ಗಿಡದಲ್ಲೆಲ್ಲೋ ಮರೆಯಾದ.

ಅಜ್ಜ ಮರೆಯಾದ ಮೇಲೆ ಪೆಟ್ಟಿಗೆಯನ್ನು ಬಿಚ್ಚಿ, ಬೆದರಿ, ಗಕ್ಕನೆ ಹಿಂದೆ ಹಾರಿದರು! (“ಅಯ್ಯೋ ಇವನ ನೆಲಪಟ್ಟುಯ್ಯೋಗ...... .........ನೆತ್ಕುರ್‍ಯ್ಯಂಗೆ ಹೊತ್ಕೊಂಬೊಂದೋರು ನಾವು....ಹಣ್ಣು ಕಾಯುೂದಕ್ಡಂಗಾಯ್ತಲ್ಲಾ!”)

ಗೌಡಮಾವನ ಪೆಟ್ಟಿಗೆಯನ್ನು ಒಂದು ಕೊರಕಲಿಗೆ ತಳ್ಳಿದರು. ಇಷ್ಟೆಲ್ಲಕ್ಕೂ ಕಾರಣಳಾದ ಪೂಜಾರಿ ಪುಟ್ಟಕ್ಕನನ್ನೇ ಹೊತ್ತು ತಂದು ಈ ಕೊರಕಲಿಗೆ ಎಸೆಯಬೇಕೆಂದು ಹೊರಟರು.

....ಪುಟ್ಟಕ್ಕ ಬೆಚ್ಚಗೆ ಒಳಗೆ ಮಲಗಿದ್ದವಳು, ಬಯಲ ಗಾಳಿ ಮೈ ಪರಚಿದಾಗ, ಎಚ್ಚರಗೊಂಡಳು. ಹಾಗೇ ಕಣ್ಣು ತೆರೆದು ನೋಡಿದಳು. ಆಕಾಶ! ನಕ್ಷತ್ರ ! ಏನೇನೋ ವಿಚಿತ್ರಗಳು ತೋರುತ್ತಿವೆ. ತಾನು ಮಾತ್ರ ಮಂಚದ ಮೇಲೇ ಮಲಗಿದ್ದಾಳೆ ! ಯಾರೋ ಮಾತಾಡಿದಂತಾಯಿತು ; ಓಹ್.... ಮಂಚವೂ ಮುಂದೆ ಚಲಿಸಿದಂತಿದೆ....ಮಂಚ ಸಹಿತ ತನ್ನನ್ನು ಕಳ್ಳರು ಹೊತ್ತು ಸಾಗುಸುತ್ತಿದ್ದಾರೆ. ಪರಿಸ್ಥಿತಿಯ ಅರಿವಾಯಿತು ಪುಟ್ಟಕ್ಕನಿಗೆ.

ಪುಟ್ಟಕ್ಕೆ ಧೃತಿಗೆಡಲಿಲ್ಲ. ಮುಂದೊಂದು ಆಲದ ಮರ. ನೆಲದವರೆಗೆ ತೂಗುವ ಆಲದ ಬಿಳಲು. ಮಂಚ ಅಲ್ಲಿಗೆ ಬರುತ್ತಿದ್ದಂತೆಯೇ ಬಿಳಲನ್ನು ಹಿಡಿದು ನೇತುಬಿದ್ದಳು. ಬರಿಯ ಮಂಚ ಮುಂದೆ ಹೋಯಿತು,

ಮಂಚದ ತೂಕ ಇದ್ದಕ್ಕಿದ್ದಂತಯೇ ಕಡಿಮೆಯಾಗಿದೆ.

“ಪುಟ್ಟಕ್ಕ ಹಿಂದಕ್ಕೆ ಜರಿಕಂಡವಳೆ ನಮ್ಮ ಕಡೆ ತೂಕಾನೆ ಇಲ್ಲ !” ಮುಂದಿನವರೆಂದುಕೊಂಡರು.

“ಪುಟ್ಟಕ್ಕ ಮುಂದಕ್ ಜಾರ್ಕಂಡವಳೆ...” ಹಿಂದಿನವರು ಸಮಾಧಾನ ಮಾಡಿಕೊಂಡರು. ಆದರೆ ಕೊರಕಲಿಗೆ ಬರಿಯ ಮಂಚ ಬಿದ್ದಾಗ, ಅವರು ಏನಾಗಿದೆ ಎಂದು ಊಹಿಸಿದರು.

ಬೆಳಗಿನ ಕೋಳಿ ಕೂಗಿತು. ಇನ್ನೇನನ್ನೂ ಅವರು ಮಾಡುವಂತಿರಲಿಲ್ಲ. ಬರಿಯ ಕೈಯಲ್ಲಿ ಮನೆಗೆ ಹೋಗುವುದೆ ? ಹತ್ತಿರದ ತೋಟದಲ್ಲಿ ಮಾವಿನ ಕಾಯನ್ನಾದರೂ ಕಿತ್ತು ಹೋಗೋಣವೆಂದು ಅತ್ತ ಓಡಿದರು.

ಒಬ್ಬೊಬ್ಬರು ತೋಟದಲ್ಲಿ ಒಂದೊಂದು ಮರವನ್ನು ಹತ್ತಿದರು.

ಇವರನ್ನು ಕಂಡು ಪುಟ್ಟಕ್ಕ ಬೆದರಿ ಒಂದು ಚಿಕ್ಕ ಮರ ಹತ್ತಿಕೊಂಡಳು. ಅವರಲ್ಲೊಬ್ಬ ಇತ್ತಲೇ ಬಂದ.

(ಆದರಲ್ಲಿ ನಿನ್ನಂತೇದೊಂದು ಗಿಡ್ನ ನೆಟ್ಟಗೆ ಬಂದು ಪುಟ್ಟಕ್ಕ ಇದ್ದ ಸಣ್ಣ ಮರ್ಕೇ ಕೈ ಹಾಕ್ದ....ಮೇಲೆ ಏನೋ ಸರ ಸರ ಶಬ್ದ! ಬೆದರಿ ಬೆಪ್ಪಾದ! 'ಅಶ್' ಅಂದ್ಲು ಪುಟ್ಟಕ್ಕ.)

ಮರದ ಮೇಲಿನ ಸಪ್ಪಳಕ್ಕೆ ಅವನು ಬೆವತು ಹೋದ. "ನಾನು ಪೂಜಾರಿ ಪುಟ್ಟಕ್ಕ ! ನಾವಿಬ್ರೂ ಗಂಡ ಹೆಂಡ್ತೀರಾಗಾನ ! ಅವರಿಗೆ ಇಲ್ಲಿಗೆ ಬರಬ್ಯಾಡಿ....ಇಲ್ಲಿ ಮೂಕ ಚೌಡಿ ಅವಳೆ ಅಂತ ಕೂಗಿ ಹೇಳು...."

ಪುಟ್ಟಕ್ಕನ ಹೆಸರು ಕೇಳಿ ಅವನ ಕಿವಿ ಅರಳಿದವು. ಗೆಳೆಯರಿಗೆ ಕೂಗಿ ಹೇಳಿದ. ಸರಸರನೆ ಮರಹತ್ತಿದ.

"ತಗೊ ಮತ್ತೆ ಗಂಡ ಹೆಂಡ್ತಿ ಆಗಾನ"

ಪುಟ್ಟಕ್ಕನ ಹತ್ತಿರ ಸರಿದು ಕುಳಿತ.

"ನೋಡು. ನಮ್ಕಡೆ ಗಂಡ ಹೆಂಡ್ತಿ ಆಗೋದು ಅಂದ್ರೆ ಒಬ್ಬರ ನಾಲ್ಗೆ ಒಬ್ರು ಮುಟ್ಕೋದು"

ಪುಟ್ಟಕ್ಕನ ಮಾತು ಸರಳವಾಗಿತ್ತು. ಪುಟ್ಟಕ್ಕನೇ ತನ್ನ ನಾಲಿಗೆ ಹೊರ ತೆಗೆದ್ನ 'ಮುಟ್ಟು' ಎಂದಳು. ಸರಿ, ಇನ್ನು ಅವನ ಸರದಿ.

"ನಿನ್ನ ನಾಲ್ಗೆ ತೆಗಿ !"

ಲಗ್ನ ಆಗಿಯೇ ಹೋಯಿತು ! ಹಿರಿ ಹಿಗ್ಗಿ ನಾಲಗೆಯನ್ನು ಮೊಳದುದ್ದ ಈಚೆ ಚಾಚಿದ.

ಕಚಕ್ಕನೆ ಕಡಿದಳು ಪುಟ್ಟಕ್ಕ. ನಾಲಗೆ ತುಂಡಾಗಿ ಬಿತ್ತು. ಹಾ! ಹಾ!!

ಜೊತೆಯಲ್ಲೇ ಅವನೂ ಬಿದ್ದ. ವಿಲಿವಿಲಿ ಒದ್ದಾಡಿದ. ಮೂಕಚೌಡಿ ! ಮೂಕಚೌಡಿ !!

ದಬ ದಬ ಧುಮುಕಿದರು ಮರದಿಂದ ! ಅವನನ್ನು ಅಲ್ಲಿಯೇ ಬಿಟ್ಟು ಅರೆಕ್ಷಣದಲ್ಲಿ ಪೇರಿ ಕಿತ್ತರು.

ಪುಟ್ಟಕ್ಕನೂ ಬೇರೆಯ ದಾರಿಯಲ್ಲಿ ಮನೆ ಸೇರಿಕೊಂಡಳು.

* * *

ಅಲ್ಲಿಗಲ್ಲಿಗೆ ಕತೆಯು ಮಲ್ಲಿಗೆ ವಾಸನೆಯು
ಬಲ್ಲಂಥ ಜಾಣರಿಗೆ ಇದು ಮಧುರವಯ್ಯ
ಅತಿ ಮಧುರವಯ್ಯ
ಮುಂದಣ ಕಥೆಯು ಅದಲೆಂದವ ಪೇಳವೆನು
ಚಂದ್ರಶೇಖರ ನಮಗೆ ವರವ ಕೊಡಲೋ ದೇವ
ವರವ ಕೊಡಲೋ ದೇವ

ನಗೆಯ ತೆರೆಯು ಸಡುವೆಯೇ, ಮತ್ತೆ ಮುಖ್ಯಕಥೆಯು ಪಲ್ಲವಿ, ತಾಳ, ನೃತ್ಯ !

ಉಪ ಕಥೆಯನ್ನು ರಸವತ್ತಾಗಿ ಬಣ್ಣಿಸಿದ ನಿರೂಪಕ, ಇನ್ನು ಮುಖ್ಯ ಕಥೆಯ ಮಡುವಿನಲ್ಲಿ ಧುಮುಕಿದ್ದಾನೆ. ಇನ್ನು ನಗಿಸುವ ಬಗೆಯಿಲ್ಲ ; ಇನ್ನು ಆ ಹಳ್ಳಿಯ ಮಾತಿನ ಬೆಳ್ಳಿ ಮಿಂಚಿಲ್ಲ. ಅವನ ಮುಖಚರ್ಯೆ ಬದಲಾಗುತ್ತಿದೆ. ತಾಳವನ್ನು ಹಿಡಿದು ಶೋಕಪೂರ್ಣ ಸನ್ನಿವೇಶದ ವರ್ಣನೆಯಲ್ಲಿ ಹೆಚ್ಚು ಹೆಚ್ಚು ಗಂಭೀರನಾಗುತ್ತಿದ್ದಾನೆ. ರಸಾವೇಶದಲ್ಲಿ ಹಾಡುತ್ತಾ ಸಾಗಿದ್ದಾನೆ....

ಬಸವಕುಮಾರ ಲೋಹಿತ ಕುಮಾರರು ಅರಣ್ಯದಲ್ಲಿ ಹಾದಿತಪ್ಪಿ ಅಲೆಯುತ್ತಿದ್ದಾರೆ....ತಾಯಿಕೊಟ್ಟ ಬುತ್ತಿಯನ್ನು ಬಿಚ್ಚಿ ಉಣ್ಣಲು ಪ್ರಯತ್ನಿಸಿದ್ದಾರೆ.

ಅಲ್ಲಿಗಲ್ಲಿಗೆ ಕಥೆಯು ಮಲ್ಲಿಗೆ ವಾಸನೆಯು
ಬಲ್ಲಂತ ಹಿರಿಯರಿಗೆ ಇದು ಮಧುರ ದೇವ
ಅತಿ ಮಧುರ ದೇವ

ಅಯ್ಯಾ ಮಗು ಮುಂದ ಕೇಳಬೇಕಂಪ್ಯ....ಆ ಸುಪುತ್ರ ಮಕ್ಕಳು ಕಾಡಿನಲ್ಲಿ ಕಂಗೆಟ್ಟು ಅಲೆಯುತ್ತಿರಬೇಕಾದರೇ....

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ !

ಅಪ್ಪಾ ಆ ಕಾಡಾರಣ್ಯದಲ್ಲಿ ಮತ್ತೆ ಮುಂದೆ ಸಾಗುತ್ತ....

ಅಡವಿ ಗಿಡಮರ ಕಲ್ಲ ಎಡವಿ ಮುಗ್ಗರಿಸುತ್ತ
ತಡವರಿಸಿ ಹೊರಟರೋ ಅರಣ್ಯದೊಳಗೆ
ಏೀ....ಗುಡುಗುಡು ಧೀಧಯ್ಯಾ

ಬಸವಕುಮಾರ ಲೋಹಿತ ಕುಮಾರರು ಹಸಿದು ಕಂಗೆಟ್ಟಿದ್ದಾರೆ. ತಾಯಿ

ಕಟ್ಟಿಕೊಟ್ಟ ಬುತ್ತಿಯು ನೆನಪಾಗಿ ಅದನ್ನು ಮಾರ್ಗಮಧ್ಯದಲ್ಲಿ ಬಿಚ್ಚಿದ್ದಾರೆ. ಲೋಹಿತಕುಮಾರನಿಗೇನೋ ಅದು ವಿಷವಾಗಿ ಪರಿಣಮಿಸಿದೆ. ಮುಂದೇನು ವಿಪತ್ತು ಕಾದಿದೆಯೋ ಎಂದು ಹಾಗೆಯೇ ಬಿಟ್ಟು ಲೋಹಿತ ಎದ್ದು ನಿಂತನು. ಊಟಮಾಡುತ್ತಿರುವ ಅಣ್ಣನಿಗೆ ನೀರನ್ನು ತರಲು ಹೊರಟನು.

ಕಾಡನ್ನೆಲ್ಲಾ ಸುತ್ತಿದಮೇಲೆ, ಅಲ್ಲೊಂದು ಮೂಲೆಯಲ್ಲಿ ಜಲ ಬತ್ತಿ ಹೋಗುತ್ತಿರುವ ಸರೋವರವೊಂದರಲ್ಲಿ ನೀರನ್ನು ಮೊಗೆಯಲು ಪ್ರಯತ್ನಿಸಿದಾಗ, ಅಲ್ಲಿದ್ದ ಮಂಡೂಕಗಳು ಅವನನ್ನು ಮಾತಾಡಿಸಿವೆ. ಕಪ್ಪೆಗಳ ನುಡಿಗೆ ಲೋಹಿತ ಕಿವಿಗೊಟ್ಟರೇ....

"ಅಯ್ಯಾ ನಮ್ಮನ್ನು ಹೆಚ್ಚು ನೀರಿರುವ ಪ್ರದೇಶಕ್ಕೆ ಮೊದಲು ಬಿಟ್ಟು, ನೀನು ನೀರನ್ನು ತೆಗೆದುಕೋ....ನಮ್ಮ ಪ್ರಾಣವನ್ನು ಉಳಿಸು...." ಎಂದಿವೆ.

ಕೆಸರಿನಲ್ಲಿ ಗುಳುಗುಳು ಮಾತನಾಡಿದ ಕಪ್ಪೆಗಳಿಗೆ ಲೋಹಿತ ಮನಕರಗಿದ. ಅವುಗಳು ತೋರಿದ ದಿಕ್ಕಿನಲ್ಲಿ ಸಾಗಿ, ಜಲವಿಸ್ತಾರದಿಂದ ಕಂಗೊಳಿಸುವ ದೊಡ್ಡ ತಟಾಕಕ್ಕೆ ಅವನ್ನು ಬಿಟ್ಟು ನೀರನ್ನು ತೆಗೆದುಕೊಂಡು ಸಾಗಿ ಬಂದಿದ್ದಾನೆ.

ಇತ್ತ ಬಸವಕುಮಾರ ತಮ್ಮನ ಹಾದಿಯನ್ನು ಕಾದು ಬೇಸತ್ತನು. ಅವನನ್ನು ಕೂಗುತ್ತಾ, ಕರೆಯುತ್ತಾ, ಕರೆಯುತ್ತಾ, ಬರುತ್ತಿರಲು

ಮುಂದೆ ಇರುವುದೊಂದು ಅಂದವುಳ್ಳ ಪಟ್ಟಣವು
ಚಂದ್ರಾವತಿಯೆಂಬ ಪಟ್ಟಣವಯ್ಯ ಪಟ್ಟಣವಯ್ಯ

ಆ ಪಟ್ಟಣದ ಚಂದ್ರಶೇಖರರಾಯ ತೀರಿಹೋಗಿದ್ದಾನೆ. ಮಂತ್ರಿ ಸುಬುದ್ಧಿ, ರಾಜಕುಮಾರಿ ಚಂದ್ರಕಾಂತಿಯ ರೂಪಚಿತ್ರವನ್ನು ಬರೆಸಿ, ದೇಶ ವಿದೇಶಗಳಿಗೆ ಕಳುಹಿಸಿ, ಅವಳ ಸ್ವಯಂವರಕ್ಕೆ ರಾಜಕುಮಾರರನ್ನು ಬರಮಾಡಿಕೊಂಡಿದ್ದಾನೆ. ಲೋಹಿತ ಕುಮಾರನನ್ನು ಅರಸುತ್ತ ಸಾಗಿದ ಬಸವಕುಮಾರ ಊರ ಹೊರಗೆ ಮುರುಕು ಮಂಟಪವೊಂದರಲ್ಲಿ ತಮ್ಮನನ್ನು ನೆನೆದು ಶೋಕತಪ್ತನಾಗಿ ಕುಳಿತನು. ಹೂ ಮಾಲೆಯನ್ನು ಹಿಡಿದು ಬಂದ ಪಟ್ಟದಾನೆ ಅತ್ತಲೇ ನಡೆದು ಬಂದಿತು. ಬಸವಕುಮಾರನ ಕೊರಳಿಗೆ ಹೂ ಮಾಲೆಯನ್ನು ಹಾಕಲು, ಅವನಿಗೇ ರಾಜ್ಯದ ಪಟ್ಟ ದೊರೆಯಿತು. ಚಂದ್ರಕಾಂತಿಯೊಡನೆ ಅವನ ವಿವಾಹವೂ ಜರುಗಿತು.

ಲೋಹಿತಕುಮಾರ ಅಣ್ಣನನ್ನು ಕಾಣದೆ ಪರಿತಪಿಸಿದನು. ಗಿಡಗಿಡ

ಮರಮರಗಳನ್ನೆಲ್ಲ ಪ್ರಶ್ನಿಸಿ ಸೋತನು.

ಅಣ್ಣ ಅಣ್ಣ ಎಂದು ಅಣ್ಣಯ್ನ ಕರೆಯುತ
ಓ ಎಂಬ ಸೊಲ್ಲುಗಳ ಮಾತೇ ಇಲ್ಲವಲ್ಲ

ಅಣ್ಣನನ್ನು ಹುಡುಕುತ್ತ ಕಣ್ಣೀರನ್ನು ಸುರಿಸುತ್ತ ಆ ಕಾಡಲ್ಲೇ ದಿನಗಳನ್ನು ಕಳೆದನು. ಒಂದು ಮುಂಜಾನೆ ಸೂರ್ಯೋದಯವಾಗಿದೆ—

ಮೂಡಲ ಗಿರಿಯಿಂದ ಮೂಡಿದನು ರವಿರಾಜ
ನಾಡಿನ ಜನರಿಗೆ ದರುಶನವ ಕೊಟ್ಟ
ದರುಶನವ ಕೊಟ್ಟ

ಅಣ್ಣನನ್ನು ಅರಸುತ್ತ ಮತ್ತೆ ಲೋಹಿತಕುಮಾರ ಕಾಡುದಾರಿಯಲ್ಲಿ ಅಲೆಯಬೇಕಾದರೆ, ಇದ್ದಕ್ಕಿದ್ದಂತೆಯೇ ಶಿವ ಅವನ ಎದುರು ಆದಿಶೇಷನನ್ನು ಬಿಡಲು, ಫಣೆಯನ್ನು ಹರಡಿ ಬುಸುಗುಡುತ್ತ ಕಾಣಿಸಿಕೊಂಡ ಸರ್ಪಕ್ಕೆ ಬೆದರಿ ಹೌಹಾರಿದನು ಲೋಹಿತಕುಮಾರ! ಆದರೆ ಆದಿಶೇಷ ಅವನೆದುರು "ನಿನಗೆ ಸಹಾಯ ಮಾಡಲು ಬಂದಿದ್ದೇನೆ" ಎಂದು ಹೇಳಿ ನಾಗರತ್ನದ ಹರಳನ್ನು ಅವನ ಮುಂದೆ ಉಗುಳಿ, ಮರೆಯಾದನು.

ಚಂದ್ರಾವತಿಯಲ್ಲಿ ಬಸವಕುಮಾರ ದಕ್ಷತೆಯಿಂದ ರಾಜ್ಯವಾಳಿದ್ದಾನೆ. ಆದರೂ ಒಂದು ದಿನ ಮುತ್ತಿನಸೆಟ್ಟರ ಮನೆಗೆ ಕಳ್ಳರು ನುಗ್ಗಿ ಮುತ್ತು ರತ್ನಗಳನ್ನು ಅಪಹರಿಸಿದರು. 'ನನ್ನ ರಾಜ್ಯತ್ವಕ್ಕೆ ಕುಂದಕ' ಎಂದು ಬಸವಕುಮಾರ ಸಿಡಿಮಿಡಿಗೊಂಡ.ದೂರನ್ನು ತಂದ ಮುತ್ತಿನ ಶೆಟ್ಟರಿಗೆ, ಕಳ್ಳನನ್ನು ಎಲ್ಲಿದ್ದರೂ ಹಿಡಿದು ತರಿಸುವ ಭರವಸೆ ನೀಡಿದ.

ರಾಜಭಟರು ಹತ್ತಿರದ ಕಾಡಿನಲ್ಲಿ ಒಂದು ದಿನ ಕಳ್ಳನೊಬ್ಬನನ್ನು ಹಿಡಿದರು. ಅವನನ್ನು ಶೋಧಿಸಲಾಗಿ ಅಪೂರ್ವ ರತ್ನವೊಂದು ಅವನ ಬಳಿ ದೊರೆಯಿತು. ಅವನನ್ನು ಎಳೆತಂದು, ಸೆರೆಮನೆಗೆ ಕೂಡಿ, ರತ್ನವನ್ನು ರಾಜನ ಬಳಿಗೆ ತಂದು ತೋರಿದರು. ಆ ದಿವ್ಯ ರತ್ನವನ್ನು ರಾಣಿ ಚಂದ್ರಕಾಂತಿಯೂ ನೋಡಿದಳು. ಅದರಿಂದ ಪದಕವೊಂದನ್ನು ಮಾಡಿಸಿ, ಕೊರಳಲ್ಲಿ ಧರಿಸುವ ಆಸೆಯೂ ಅವಳಲ್ಲಿ ಮೂಡಿತು. ಅಂಥ ರತ್ನಗಳು ಹೇರಳವಾಗಿ ರತ್ನಪುರಿಯ ರತ್ನಶೇಖರನಲ್ಲಿ ದೊರೆಯುವುದೆಂದು ಮುತ್ತಿನ ಶೆಟ್ಟರು ತಿಳಿಸಿದರು. ರಾಜನ

ಇಚ್ಛೆಯಂತೆ ನಾಲ್ಕು ಮಂದಿ ಮುತ್ತಿನ ಶೆಟ್ಟರು ರತ್ನಪುರಿಗೆ ಹೊರಟು ನಿಂತರು.

ರತ್ನಪುರಿ ಇರುವುದು ಸಮುದ್ರ ಮಧ್ಯದಲ್ಲಿ. ಮುತ್ತಿನ ಶೆಟ್ಟರು ಹಡಗೇರಿ ಪ್ರಯಾಣ ಮಾಡಬೇಕು. ಆದರೆ ಅವರು ಹಡಗಿಗೆ ಕಾಲಿಟ್ಟಾಗ ಅದು ಮುಂದೆ ಚಲಿಸಲಿಲ್ಲ. ನರಬಲಿ, ನರಬಲಿ, ಎಂದು ಕೇಳಿತು । ರಾಜನಿಗೆ ಸುದ್ದಿ ಮುಟ್ಟಿತು ಸೆರೆಮನೆಯಲ್ಲಿರುವ ಕಳ್ಳನನ್ನೇ ಅದಕ್ಕೆ ಬಲಿಕೊಡುವಂತೆ ಬಸವ ಕುಮಾರನ ಆಜ್ಞೆಯಾಯಿತು.

ಸೆರೆಮನೆಯಲ್ಲಿ ಅದೇ ಯೋಚನೆಯಲ್ಲಿ, ಅದೇ ಕೊರಗಿನಲ್ಲಿ ಮುಳುಗಿ ಕುಳಿತಿದ್ದಾನೆ ಲೋಹಿತ. ನಾಗರತ್ನದ ಮಣಿಯನ್ನು ರಾಜಭಟರು ಕಸಿದು ಕೊಂಡು ಹೋದರು. ತನ್ನನ್ನು ಸೆರೆಮನೆಯಲ್ಲಿ ಕೂಡಿದರು, ಆದರೆ ಮತ್ತೆ ಬಂದಿದ್ದಾರೆ. ತನ್ನನ್ನು ಜೆದರಿಸಿದ್ದಾರೆ, ಬೈದಿದ್ದಾರೆ, ಸಾಲದೆಂಬಂತೆ ಕೈಗಳನ್ನು ಬಿಗಿದು ಕಟ್ಟಿದ್ದಾರೆ....

ಕಟ್ಟಿರೊ ಪೀಶಂಡಿ ಕಳ್ಳ ಲೌಡಿಯ ಮಗನ
ಏಟಿನ ಮೇಲೇಟುಗಳ ಹೊಡೆಯಬೇಕಿವನ

ಆರ್ಭಟಿಸಿದ್ದಾರೆ, ಹೊಡೆದಿದ್ದಾರೆ. ಕ್ರೂರವಾಗಿ ದಂಡಿಸುತ್ತ ಸೆರೆಮನೆಯಿಂದ ಹೊರಡಿಸಿಕೊಂಡು ಹಡಗಿನ ಬಳಿಗೆ ಕರೆತಂದರು. ಅವನನ್ನು ಬಲಿ ಕೊಡುವ ಮುನ್ನವೇ ಅವನು ಹಡಗಿಗೆ ಕಾಲಿಟ್ಟೊಡನೆಯೇ ಅದು ಮುಂದೆ ಚಲಿಸಿತು. ಮುತ್ತಿನ ಶೆಟ್ಟರೊಡನೆ ಲೋಹಿತನೂ ಹಡಗಿನಲ್ಲಿ ಸಾಗಿದನು. ರಾಜಭಟರು ಹಿಂದೆ ಉಳಿದರು.

ಅನೇಕ ದಿನಗಳ ಪ್ರಯಾಣ ಸಾಗಿತು ನೀರಿನ ಮೇಲೆ. ರತ್ನಪುರಿಯಲ್ಲಿ ರತ್ನಶೇಖರ ಇರಲಿಲ್ಲ. ಕಾರ್ಯಾರ್ಥವಾಗಿ ಹೊರದೇಶಕ್ಕೆ ಹೋಗಿದ್ದ. ಹಡಗು ರತ್ನಪುರಿಯನ್ನು ಮುಟ್ಟಿದಾಗ ರತ್ನಶೇಖರನ ಮಗಳು ರತ್ನಕಾಂತಿ ಅರಮನೆಯ ದ್ವಾರದಲ್ಲಿಯೇ ನಿಂತು ಆಗಂತುಕರನ್ನು ನೋಡಿದಳು. ಮುತ್ತಿನ ಶೆಟ್ಟರ ಜೊತೆಯಲ್ಲಿ ಅಪೂರ್ವ ತೇಜಸ್ವಿಯಾದ ತರುಣನೊಬ್ಬನು ಬಂದಿದ್ದಾನೆ। ಅವನ ಹಾವ ಭಾವ ಸಲ್ಲಕ್ಷಣಗಳನ್ನು ನೋಡಿದರೆ, ರಾಜಕುಮಾರನೇ ಇರಬೇಕು ತನ್ನ ಭಾಗ್ಯವೇ ತನ್ನೆಡೆಗೆ ನಡೆದುಬಂದಿದೆ.

ಅತಿಥಿಗಳಿಗೆ ಬಗಬಗೆಯ ಸತ್ಕಾರ ದೊರೆತಿದೆ.ಮುತ್ತಿನಶೆಟ್ಟರು ವಿಶ್ರಮಿಸಿ

ಕೊಳ್ಳುವಾಗ, ಲೋಹಿತಕುಮಾರನನ್ನು ಬರಮಾಡಿಕೊಂಡು, ರತ್ನಕಾಂತಿ ಪ್ರಶ್ನಿಸಿದಳು :

ಯಾವ ದೇಶವು ನಿನದು, ಯಾವ ರಾಜ್ಯವು ನಿನದು
ಯಾವ ರಾಜನಿಗೆ ಮಗನಯ್ಯ ನೀನು ಮಗನಯ್ಯ ನೀನು

ಆದರೆ ಲೋಹಿತಕುಮಾರ ತನ್ನ ಕಥೆ ಏನನ್ನೂ ಹೇಳುವಂತಿಲ್ಲ. ರೂಪ ಲಾವಣ್ಯಗಳಿಂದ ಅವನನ್ನು ಆಕರ್ಷಿಸಿದ ರತ್ನಕಾಂತಿ, ಅಷ್ಟೇ ವಿನಯ ಲಜ್ಜೆ ಗಳಿಂದ ಬಾಗಿ ಕೇಳಿದ್ದಾಳೆ. ಲೋಹಿತ ಏನನ್ನು ಹೇಳಲೂ ಅದು ಸಮಯ ವಲ್ಲೆಂದು ತಿಳಿಸಿದ.

ಉಚಿತ ಸಂದರ್ಭದಲ್ಲಿ ಮಾತ್ರ ಹೊರಪಡಿಸುವುದಾದರೆ ಪತ್ರದಲ್ಲಿ ಬರೆದುಕೊಡುವುದಾಗಿ ತಿಳಿಸಿದ.

ರತ್ನಕಾಂತಿ ಪತ್ರವನ್ನು ಭದ್ರಪಡಿಸಿಕೊಂಡಳು. ಮುತ್ತಿನಶೆಟ್ಟರು ಬಂದ ಬಗೆಯನ್ನು ತಿಳಿಸಿದರು. ಆದರೆ ರತ್ನಶೇಖರ ಬರುವವರೆಗೆ ರತ್ನಗಳು ದೊರೆಯುವಂತಿಲ್ಲ. ಅವರು ಹೆಚ್ಚು ದಿನ ಇಲ್ಲಿ ನಿಲ್ಲುವಂತೆಯೂ ಇಲ್ಲ.

ಬರಿಗೈಯಲ್ಲಿ ಹೋಗಲು ಮುತ್ತಿನ ಶೆಟ್ಟರು ಇಚ್ಛಿಸಲಿಲ್ಲ. ಚೆಲುವೆ ಯಾದ ರತ್ನಕಾಂತಿಯನ್ನೇ ಅಪಹರಿಸಿಕೊಂಡು ಹೋಗಿ, ಲಗ್ನವಾಗುವ ಬಯಕೆ ಅವರ ಅಂತರಂಗದಲ್ಲಿ ಆಡಿತು. ರತ್ನಗಳು ದೊರೆಯದಿದ್ದ ಕಾರಣವನ್ನು ತಾನೇ ನೇರವಾಗಿ ಬಂದು ರಾಜನಿಗೆ ತಿಳಿಸಬೇಕೆಂದು ಒತ್ತಾಯಪಡಿಸಿದರು. ರತ್ನಕಾಂತಿ ಹೊರಡಲೇಬೇಕಾಯಿತು.

ಮುತ್ತಿನ ಶೆಟ್ಟರಿಗೆ ಲೋಹಿತಕುಮಾರ ದೊಡ್ಡ ತೊಡಕಾಗಿ ಪರಿಣಮಿ ಸಿದ. ರತ್ನಕಾಂತಿಯ ಒಲವು ಅವನತ್ತಲೇ ಇದ್ದಂತೆ ತೋರಿತು. ಅಸೂಯೆ ಅವರೆದೆಯಲ್ಲಿ ಹೆಡೆಯಾಡಿತು.

ಹಡಗು ನಡುಸಮುದ್ರವನ್ನು ಮುಟ್ಟಿತು. ಸಮಯವರಿತು ಮುತ್ತಿನ ಶೆಟ್ಟರು ಲೋಹಿತಕುಮಾರನನ್ನು ಸಮುದ್ರಕ್ಕೆ ತಳ್ಳಿಬಿಟ್ಟರು. ಅಲೆಗಳ ಮೇಲೆ ತೂಗುಯ್ಯಾಲೆಯಾಡಿ ಹಡಗು ಮರೆಯಾಯಿತು. ಲೋಹಿತ ಎದೆಗುಂದಲಿಲ್ಲ. ಆಪತ್ತಿನಲ್ಲಿ ನೆನೆಯುವಂತೆ ಕಪ್ಪೆಗಳು ಹೇಳಿದ್ದವು. ನೂರಾರು ಕಪ್ಪೆಗಳ ಅರೆಕ್ಷಣದಲ್ಲಿ ಅಲ್ಲಿ ಕಲೆತವು. ತಮ್ಮ ಬೆನ್ನಿನ ಮೇಲೆ ಅವನನ್ನು ಹೊತ್ತು ದಡವನ್ನು ಮುಟ್ಟಿಸಿದವು.

ಮುತ್ತಿನ ಶೆಟ್ಟರು ರತ್ನಗಳನ್ನು ತರದಿದ್ದರೂ ರಾಜ ಬಸವಕುಮಾರ ಬೇಸರ ಪಟ್ಟುಕೊಳ್ಳಲಿಲ್ಲ. ಸಮುದ್ರಯಾನ ಮಾಡಿಬಂದ ಅವರ ಸಾಹಸಕ್ಕೆ ಮೆಚ್ಚಿ, ಅವರು ಕರೆತಂದಿದ್ದ ಸುಂದರಿ, ರತ್ನಕಾಂತಿಯನ್ನು ಲಗ್ನವಾಗುವಂತೆ ತಿಳಿಸಿದ. ಆದರೆ ಮುತ್ತಿನ ಶೆಟ್ಟರಲ್ಲಿ ಯಾರು ರತ್ನಕಾಂತಿಯ ಕೈಹಿಡಿಯ ಬೇಕೆಂದು ತಿಕ್ಕಾಟ ಉಂಟಾಯಿತು. ರತ್ನಕಾಂತಿ ನಡುವೆ ಪ್ರವೇಶಿಸಿ, ಅವರಲ್ಲಿ ಯಾರಿಗಾದರೂ ಗಂಡುಮಗನಿದ್ದರೆ ಲಗ್ನವಾಗುವುದಾಗಿ ತಿಳಿಸಿದಳು. ಶೆಟ್ಟರ ಒಪ್ಪಿಕೊಂಡರು. ಆದರೆ ಆ ಯುವಕನನ್ನು ಪ್ರತ್ಯೇಕವಾಗಿ ಪರೀಕ್ಷಿಸುವ ಇಚ್ಛೆಯೂ ಅವಳದಾಗಿತ್ತು.

ಕುರೂಪಿಯಾದ ಮುತ್ತಿನಶೆಟ್ಟರ ಮಗನನ್ನು ಕಂಡು ರತ್ನಕಾಂತಿ ಕ್ರುದ್ಧಳಾದಳು. ತನ್ನ ಚಂದ್ರಾಯುಧವನ್ನು ತೆಗೆದು ಅವನನ್ನು ಇರಿದುಬಿಟ್ಟಳು. ರಕ್ತ ಕಾಲುವೆಯಾಗಿ ಹರಿಯಿತು. ನೋಡುತ್ತ ನೋಡುತ್ತ ನಡುಗಿ ಅವಳೂ ಮೂರ್ಛೆಹೋದಳು.

ಹೊರಗೆ ರಕ್ತದ ಹೊಳೆ ಹರಿದಿದೆ. ಯಾರು ಬಂದು ಬಾಗಿಲು ತಟ್ಟಿದರೂ ಒಳಗಿನಿಂದ ಉತ್ತರವಿಲ್ಲ. ಕೊನೆಗೆ ಬಸವಕುಮಾರನೇ ಬಂದು ಆಕೆಯನ್ನು ಕೂಗಿದನು. ರತ್ನಕಾಂತಿಗೆ ಪ್ರಜ್ಞೆ ಮರಳಿತು. ಬಾಗಿಲನ್ನು ತೆರೆದಳು. ಲೋಹಿತ ಕುಮಾರನ ಪತ್ರವನ್ನು ಅವನ ಕೈಗೆ ನೀಡಿದಳು.

ಬಸವಕುಮಾರ ಪತ್ರವನ್ನೋದಿದ. ಗಳಗಳನೆ ಕಣ್ಣೀರನ್ನು ಕರೆದ. ದುಃಖ ಭಾರದಿಂದ ಕುಸಿದು ಕಾತರಿಸಿದ ! ಕಳ್ಳನೆಂದು ಬಗೆದು ತಮ್ಮನನ್ನೇ ಶಿಕ್ಷಿಸಿದ ತನ್ನ ಕ್ರೌರ್ಯಕ್ಕೆ ಹೇಸಿದ ! ಲೋಹಿತನನ್ನು ನೆನೆದು ಹಂಬಲಿಸಿದ.... ಹಲುಬಿದ....

ಹೋರಾಡಿ ಬಳಲುತ ಕಣ್ಣೀರ ಸುರಿಸುತ
ಭಾರಿ ದುಃಖವನಾಗ ಮಾಡುತ ರಾಜ !

....ದುಃಖದ ಛಾಯೆ ಸಭೆಯ ಮೇಲೆಲ್ಲ ಆಡಿತು. ನೆರೆದ ಪ್ರೇಕ್ಷಕರ ಕಣ್ಣು ಹನಿಗೂಡಿದವು. ಮನಸ್ಸು ಭಾರವಾಯಿತು.

"ಹಾ ತಮ್ಮಯ್ಯ!!"

ನಿರೂಪಕ ಮಂಡಿಯೂರಿ ಕುಳಿತಿದ್ದಾನೆ ! ಅಳುತ್ತಿರುವವನು ಬಸವ

ಕುಮಾರನೇ ಒಡನೆ ಹುಟ್ಟಿ, ಒಡನೆ ಆಡಿ, ಒಡನೆ ಬೆಳೆದ ಸೋದರರ ಸ್ಥಿತಿ ಯೇನಾಯಿತು ? ಕ್ರೂರವಿಧಿ ಅಗಲಿಸಿತೇ....ಅಗಲಿಸಿ ದುರಂತವನ್ನು ತಂದೊಡ್ಡಿತೇ... ಅರಮನೆಯ ಸುಖಲೋಲುಪತೆಯಲ್ಲಿ ಮೈಮರೆತ ಇವನ ಪುಣ್ಯಕ್ಕೆ ಹಿಗ್ಗಬೇಕೆ....ಒಂದೇ ತೊಟ್ಟಿನ ಹಣ್ಣಾಗಿ ಹಲವು ಕಷ್ಟಗಳ ಸುಳಿಯಲ್ಲಿ ತತ್ತರಿಸಿದ ಅವನ ಪರಿಗೆ ಕೊರಗಬೇಕೆ ?

ಹಿಮ್ಮೇಳದವರು ಮೃದುವಾಗಿ, ಗಂಭೀರವಾಗಿ ನಿಂತ ನೆಲವೂ ಕರಗುವಂತೆ ಕವಿದ ಬಾನೂ ಹನಿಯುವಂತೆ ಹಾಡಿದ್ದಾರೆ....ಕೊರಳು ಬಿಗಿದು, ಮಾತು ಸೋತು, ಮೂಕನಾಗಿ ಕುಳಿತಿದ್ದಾನೆ. ನಿರೂಪಕ....ಮೃದುಪದ ವಿನ್ಯಾಸದಲ್ಲೇ ಇನ್ನಿಬ್ಬರು ನರ್ತಿಸಿದ್ದಾರೆ....

ತಮ್ಮ ತಮ್ಮ ಎಂದು ತಮ್ಮನ ನೆನೆಯುತ
ಬಹುದುಃಖ ಮಾಡುತಾನೆ ಬಸವಕುಮಾರ

* * * *

ಮುತ್ತಿನ ಶೆಟ್ಟರನ್ನು ಸೆರೆಮನೆ ಬರಮಾಡಿಕೊಂಡಿತು. ರತ್ನಕಾಂತಿ ಅರಮನೆಯನ್ನು ಸೇರಿದಳು. ಬಸವಕುಮಾರ ಹಗಲಿರುಳೂ ತಮ್ಮನ ಕೊರಗಿನಲ್ಲೇ ಉಳಿದ. ಲೋಹಿತ ಮಡಿದಿರಲಿಲ್ಲ. 'ಹೇಗಾದರೂ ಎಂತಾದರೂ ಅವನು ಬದುಕಿರಲೇಬಾರದೇಕೆ' ?

ಅವನ ಅಂತರ್ವಾಣಿ ಏನನ್ನೊ ನುಡಿಯಿತು. ಕೂಡಲೇ ಮಂತ್ರಿಯನ್ನು ಕರೆದು ಅನ್ನಸತ್ರಕ್ಕೆ ಅಟ್ಟಿದ. ಬಸವಕುಮಾರನ ರೂಪಚಿತ್ರ ಅನ್ನಸತ್ರದ ಗೋಡೆಯನ್ನಲಂಕರಿಸಿತು. ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ಅನ್ನಸತ್ರಕ್ಕೆ ಬಂದು ಪ್ರಸಾದವನ್ನು ಸ್ವೀಕರಿಸಿ ಹೋಗುವ ಕಟ್ಟಾಜ್ಞೆಯಾಯಿತು

ಅತ್ತ ದಡವನ್ನು ಸೇರಿದ ಲೋಹಿತಕುಮಾರ ಹೂಗಾರ ಮುದ್ದಣ್ಣನ ಆಶ್ರಯವನ್ನು ಪಡೆದ. ರಾಜಭಟರು ಅವನನ್ನೂ ಅನ್ನಸತ್ರಕ್ಕೆ ಕರೆದೊಯ್ದರು, ಜೊತೆಯಲ್ಲಿ ಲೋಹಿತನೂ ಹೋಗಬೇಕಾಯಿತು.

ಚಿತ್ರಪಟದ ಎದುರಿಗೆ ನಿಂತ ಲೋಹಿತಕುಮಾರ, ಹೆಜ್ಜೆಯನ್ನು ಕೀಳಲಿಲ್ಲ. ಕಣ್ಣೀರನ್ನು ಹರಿಸುತ್ತ ಗದ್ಗದಿತನಾದ. ಅರಮನೆಗೆ ಸುದ್ದಿ ಹೋಯಿತು. ಲೋಹಿತ ಕುಮಾರನನ್ನು ಅರಮನೆಗೆ ಕರೆದೊಯ್ದರು. ತಮ್ಮನನ್ನು ಕಂಡೊಡನ

ನೆಯೋ, ಬಸವಕುಮಾರ ಕೈಚಾಚಿ ಮುಂದೆ ಬಂದು ಬರಸೆಳೆದು ಅಪ್ಪಿದ್ದಾನೆ.... ಇಬ್ಬರ ಕಣ್ಣಲ್ಲೂ ಕೋಡಿವರಿದಿದೆ ಕಣ್ಣೀರು....

ಅಣ್ಣ ಅಣ್ಣ ಎಂದು ಅಣ್ಣಯ್ನ ತಬ್ಬಿಕೊಂಡು
ತಮ್ಮ ತಮ್ಮ ಎಂದು ತಮ್ಮಯ್ನ ತಬ್ಬಿಕೊಂಡು
ಬಾರಿ ದುಃಖಗಳನ್ನೆ ಮಾಡಿದರಾಗ, ಮಾಡಿದರಾಗ.

ರತ್ನಪುರಿಗೆ ಸುದ್ದಿ ಹೋಯಿತು. ರತ್ನಕಾಂತಿಯೊಡನೆ ಲೋಹಿತ ಕುಮಾರನ ಲಗ್ನವೂ ಆಯಿತು. ಇತ್ತ ನರಸಾವತಿಯ ತಪ್ಪಸ್ಸಿಗೆ ಮೆಚ್ಚಿ ಪರಶಿವ ಮಳೆಯನ್ನು ಸುರಿಸಿ, ಹುತ್ತವನ್ನು. ಕರಗಿಸಿದನು. ಜೂನಾವತಿಯ ಗುಟ್ಟು ಬಯಲಾಯಿತು. ನರಸೇಂದ್ರರಾಯ ಜೂನಾವತಿಯನ್ನು ಸಿಗಿದು ಊರ ಹೆಬ್ಬಾಗಿಲಿಗೆ ತೋರಣ ಕಟ್ಟುವಂತೆ ಅಜ್ಞಾಪಿಸಿದ. ಆದರೆ ತಂದೆಯನ್ನು ನೆನೆದು ಸಕಾಲದಲ್ಲಿ ಮರಳಿದ ಬಸವಕುಮಾರ, ಲೋಹಿತ ಕುಮಾರರು ಅವಳನ್ನು ಉಳಿಸಿಕೊಂಡರು. ಶಿವನ ಕರುಣೆಯಿಂದ ಸುಖ ಸಂಪತ್ತುಗಳು ಅಲ್ಲಿ ನೆಲೆಸಿವೆ....

("ಜೈ ನಮಃ ಪಾರ್ವತೀ ಪತೇ...." "ಹರಹರ ಮಹದೇವ")

ಇಲ್ಲಿಗೆ ಹರ ಹರ ಇಲ್ಲಿಗೆ ಶಿವ ಶಿವ
ಇಲ್ಲಿಗೆ ಈ ಕಥೆಯು ಸಂಪೂರ್ಣವಾಯ್ತು.

ನಿರೂಪಕನು ಎತ್ತಿಕೊಟ್ಟ ಸೊಲ್ಲನ್ನು ಮುಮ್ಮೇಳದವರಿಂದ ಅರಿತುಕೊಂಡು, ಹಿಮ್ಮೇಳದವರು ಮುಗಿಸಿದ್ದಾರೆ........

'ಮಂಗಳಂ ಜಯ ಮಂಗಳಂ
ಮಂಗಳಂ ಶುಭ ಮಂಗಳಂ'

ದೇವರ ಪಟಕ್ಕೆ ಮಂಗಳಾರತಿಯಾಗುತ್ತಿದೆ ? ಬಟ್ಟೆಬರೆಗಳನ್ನು ಕೊಡವಿ ಕೊಂಡು ಜನ ಎದ್ದಿದ್ದಾರೆ....ಮಕ್ಕಳು ಮರಿಗಳನ್ನು ಏಳಿಸಿದ್ದಾರೆ.

——

# ನೀಲಕಂಠ ರೂಪಾವತಿ

ತಾಂಡವ ನೃತ್ಯಹರೇ, ಗಜಾನನ
ತಾಂಡವ ನೃತ್ಯ ಹರೇ

ಅದೇ ಹಸಿರು ಚಪ್ಪರದಲ್ಲಿ ಕರಪಾಲ ಮೇಳ ಆರಂಭವಾಗಿದೆ. ನಿರೂಪಕ ವೇಷ ಭೂಷಣಗಳಿಂದ ಅಲಂಕೃತನಾಗಿ, ಭಸ್ಮ ಲೇಪಿತನಾಗಿ, ರುದ್ರಾಕ್ಷಿಯನ್ನು ಹಾಕಿ ಕಿರೀಟ ಕುಂಡಲಗಳಿಂದ ರಂಜಿತನಾಗಿ, ಹೊಸ ಉತ್ಸಾಹದಿಂದ ಹೊಸ ಕಥೆಯೊಂದಕ್ಕೆ ಪಲ್ಲವಿಯನ್ನು ಹಾಡುತ್ತಿದ್ದಾನೆ. ಕಾಲಕಿಂಕಣಿ, ಕೈತಾಳ, ಮೈಯ ಒನಪಿನಲ್ಲಿ ಸಹ ನೃತ್ಯದವರಲ್ಲಿ ಹೊಸ ಉತ್ಸಾಹವನ್ನು ತುಂಬು ತ್ತಿದ್ದಾನೆ. ಹಿಮ್ಮೇಳದವರು ವಾದ್ಯ ವಿಶೇಷಗಳೊಡನೆ ಸೊಲ್ಲಿಗೆ ಸವಿ ಸೊಲ್ಲನ್ನು ಕೊಟ್ಟಿದ್ದಾರೆ.

ನೆರೆದ ಹಿರಿಯರ ಆಶಯದಂತೆ "ನೀಲಕಂಠ-ರೂಪಾವತಿಯ" ಕಥೆಯು ಬೆಳುದಿಂಗಳ ಬೆಳ್ಳಿಯ ಬಲೆಯಲ್ಲಿ ನಮ್ಮ ಆಸಕ್ತಿ ತೂಗುಯ್ಯಾಲೆಯನಾಡಿದೆ.

* * * *

ಭಾನುಶೇಖರನು ಆಳುವ ನೀಲಾವತಿಯ ವೈಶಾಲ್ಯ ಅನುಪಮ ವಾದುದು :

ಅಗಲಾರು ಗಾವುದ ನಿಡಿದೇಳು ಗಾವುದ
ಸುತ್ತಲು ತಿರುಗಿದರೆ ಹನ್ನೆರಡು ಗಾವುದ

ಕೋಟೆ ಕೊತ್ತಳಗಳಿಂದ, ಅಗಳು ಆಳ್ವೇರಿಗಳಿಂದ, ಮುತ್ತು, ರತ್ನ, ವಜ್ರ, ವೈಢೂರ್ಯಗಳನ್ನು ಮಾರುವ ಬೀದಿಗಳಿಂದ ಕೂಡಿದ ಆ ನಗರಕ್ಕೆ 'ಹುಲಿಮುಖ ದ್ವಾರ !' ಶತ್ರು ಭಯಂಕರನಾಗಿ, ವೈಭವದಿಂದ, ದರ್ಪದಿಂದ ಆ ನಗರವನ್ನಾ ಳುವ ಭಾನುಶೇಖರರಾಯ ಧರ್ಮಾತ್ಮನೆಂತೋ ಅಂತೆ ನ್ಯಾಯಪರನೂ ಹೌದು.

ತಂದೆಗೆ ಒಪ್ಪುವ ಪುತ್ರನಾಗಿ, ತನ್ನ ಸಾಹಸಗಳಿಂದ, ಶಕ್ತಿ ಸಾಮರ್ಥ್ಯಗ ಳಿಂದ ನೀಲಕಂಠರಾಯ ಶೋಭಿಸಿದ್ದಾನೆ. ಅರಿರಾಯರ ತಲೆಗಳನ್ನು ಚೆಂಡಾಡಿ ಅಪೂರ್ವ ಸಾಹಸಿ ಎನಿಸಿದ ಮಗನ ಬಗ್ಗೆ ಭಾನುಶೇಖರನಿಗೆ ಇನ್ನಿಲ್ಲದ ಅಭಿ ಮಾನ. ಆದರೆ ಅವನ ಅಂತರಂಗದಲ್ಲಿ ಅದೊಂದು ಕೊರಗು ಮಾತ್ರ ಉಳಿದು ಹೋಗಿದೆ. ಸಕಲ ಸೌಭಾಗ್ಯಗಳನ್ನೂ ಪಡೆದ ಅವನು ತನ್ನ ಮುದ್ದು ಸೊಸೆ

ರೂಪಾವತಿಯಲ್ಲಿ ತಮ್ಮ ವಂಶ ಕುಡಿಯನ್ನು ಕಾಣುವ ದಿವ್ಯಸಮಯ ಒದಗಿ ಬರಲಿಲ್ಲ. ಲಗ್ನವಾಗಿ ಹಲವು ವರ್ಷಗಳು ಜಾರಿದರೂ, ತನ್ನ ಮಡದಿಯ, ತಾಯಿ, ತಂದೆಯರ, ಕೊರಗನ್ನು ಅಳಿಸುವ ಪುತ್ರನೊಬ್ಬನನ್ನು ಕಾಣುವ ದಿನ ನೀಲಕಂಠರಾಯನಿಗೆ ಕನಸಾಗಿಯೇ ಉಳಿಯಿತು.

ಈ ನಡುವೆ ವಜ್ರಾವತಿ ಪಟ್ಟಣದ ಭುಜಗೇಂದ್ರ ನೀಲಾವತಿಯ ಮೇಲೆ ಮತ್ಸರದ ಕತ್ತಿಯನ್ನು ಮಸೆಯತೊಡಗಿದ. ಮದಿಸಿದ ಅವನಿಗೆ ಸೂಕ್ತ ರೀತಿಯಲ್ಲಿ ಉತ್ತರ ಕೊಡಲೇಬೇಕಾದ ಜವಾಬ್ದಾ ನೀಲಕಂಠರಾಯನ ಪಾಲಿಗೆ ಬಂತು. ತನ್ನ ವಿಕ್ರಮವನ್ನು ಮೆರೆಯಲು ತಾನಾಗಿಯೇ ಒದಗಿಬಂದ ಈ ಸಮಯವನ್ನು ನೀಲಕಂಠರಾಯ ಕಳೆದುಕೊಳ್ಳಲಿಲ್ಲ. ತಾಯಿ ತಂದೆಯರ ಹರಕೆಯನ್ನು ಹೊತ್ತು ಮುದ್ದು ಮಡದಿ ರೂಪಾವತಿಯ ಸ್ಫೂರ್ತಿದಾಯಕ ನುಡಿಗಳನ್ನು ಮುಡಿದು, ಕುದುರೆಯನ್ನು ಕುಣಿಸುತ್ತ ನಡೆದಿದ್ದಾನೆ.

ಮಂದಿ ಮಾರ್ಬಲದಿಂದ ದಂಡು ದಳವಾಡದಿಂದ
ಹೊರಟನೊ ರಾಜ ಹೊರಟನೋ ಬೇಗ

ನೀಲಾವತಿಯನ್ನು ತೊರೆದು ಹಲವು ದಿನಗಳ ಪಯಣದ ಅನಂತರ ವಜ್ರಾವತಿ ತಲುಪಬೇಕು. ಗಾವುದ ಗಾವುದ ದೂರ ಮಾರ್ಬಲವನ್ನು ನಡೆಸುತ್ತ ಅಲ್ಲಲ್ಲಿ ತಂಗುತ್ತ ಸಾಗಿದ್ದಾನೆ. ಹಲವು ಯೋಜನೆಗಳ ಪಯಣವಾದ ಮೇಲೆ ಒಂದು ಸಂಜೆ ವಿಸ್ತಾರವಾದ ಬೋರೆಯೊಂದರ ಮೇಲೆ ಬೀಡು ಬಿಡಬೇಕಾಯಿತು. ಅಲ್ಲೊಂದು ದೊಡ್ಡ ವಟವೃಕ್ಷದ ಕೆಳಗೆ ನೀಲಕಂಠರಾಯ ಬಿಡಾರವನ್ನು ಹಾಕಿಸಿದ್ದಾನೆ ; ರಾತ್ರಿ ಬಹು ಹೊತ್ತಿನವರೆಗೆ ಕಣ್ಣಿಗೆ ನಿದ್ದೆ ಹತ್ತದೆ ಮಡದಿಯನ್ನು ನೆನೆಯುತ್ತ ಅತ್ತಿತ್ತ ಹೊರಳಿದ್ದಾನೆ. ಇದ್ದಕ್ಕಿದ್ದಂತೆಯೇ ಬಿಡಾರದ ಮೇಲೆ ಕೊಡೆಯನ್ನು ಹರಡಿದ್ದ ಆಲದ ಮರದ ಮೇಲೆ ಏನೋ ಶಬ್ದವಾದಂತಾಯಿತು. ದೇವಲೋಕದ ದೊಡ್ಡ ದೊಡ್ಡ ಎರಡು ಪಕ್ಷಿಗಳು ಹಾರಿ ಬಂದು ಮರದ ಮೇಲೆ ಕುಳಿತುದನ್ನು ಹೊರಗೆ ಬಂದ ನೀಲಕಂಠರಾಯ ನೋಡಿ ಕೌತುಕದಿಂದ ನಿಂತ.

ದೇವಲೋಕದ ಪಕ್ಷಿಗಳು ರೆಂಬೆಯೊಂದನ್ನು ಆಶ್ರಯಿಸಿ ಕುಳಿತವು. ಗಂಡುಪಕ್ಷಿ ಏನನ್ನೋ ಮಾತಾಡಿದೆ, ಮಾನವರ ಭಾಷೆಯಲ್ಲಿ—

"ಇದೇ ಶುಭ ದಿನ, ಶುಭ ತಿಥಿ, ಶುಭ ಗಳಿಗೆಯಲ್ಲಿ ರತಿಕ್ರೀಡೆ ಆಡಿದರೆ

ಪುತ್ರ ಸಂತಾನವಾಗುವುದು ಖಂಡಿತ ! ನಕ್ಕರೆ ನವರತ್ನ ಸುರಿಯುವ, ಅತ್ತರೆ ಮುತ್ತು ಸುರಿಯುವ ಮಗನಾಗುತ್ತಾನೆ."

ನೀಲಕಂಠರಾಯ ಆ ಮಾತನ್ನು ಕೇಳಿ ನಿಟ್ಟುಸಿರು ಬಿಟ್ಟ. ದೇವಲೋಕದ ಪಕ್ಷಿಗಳ ಮಾತು ನಿಜವಾಗಬಹುದಾದರೂ ತನ್ನ ರಾಜಧಾನಿಯನ್ನು ತೊರೆದು ಅನೇಕ ಯೋಜನದೂರ ಬಂದಿದ್ದಾನೆ. ಹಿಂದಿರುಗಿ ಹೋಗುವುದಾದರೂ ರಾತ್ರಿ ಕಳೆದು ಬೆಳಗಾಗಿ ಹೋಗುತ್ತದೆ. ಪಕ್ಷಿ ಹೇಳಿದ ಗಳಿಗೆ ಮಿಂಚಿ ಹೋಗುತ್ತದೆ. ನಾನು ಪುತ್ರ ಸಂತಾನವನ್ನು ಕಾಣುವುದು ಇನ್ನೆಂತೋ !

–ನೀಲಕಂಠರಾಯ ಅಸಹಾಯಕನಾಗಿ ಮರುಗಿದ. ಎಂತಾದರೂ ನೀಲಾವತಿಯನ್ನು ತಲುಪಲೇ ಬೇಕು; ಆದರೆ ಬೆಳಗಾಗವುದರಲ್ಲಿ ಹೋಗಿ ಬರುವುದು ಅವನ ಕಲ್ಪನೆಗೂ ನಿಲುಕದ ವಿಷಯ. ಧೈರ್ಯ ತಂದುಕೊಂಡ ಅವನು ಆ ದೇವಲೋಕದ ಪಕ್ಷಿಗಳನ್ನೇ, ತನಗೊಂದು ಮಾರ್ಗ ತೋರಿಸುವಂತೆ ಬೇಡಿಕೊಂಡ.

ದೇವಲೋಕದ ಪಕ್ಷಿಗಳು ರಾಜನ ಸ್ಥಿತಿಯನ್ನು ಕೇಳಿ ಮರುಗಿದವು. ಅವನನ್ನು ನೀಲಾವತಿಗೆ ಕರೆದುಕೊಂಡು ಹೋಗಿ, ಬೆಳಗಾಗುವುದರಲ್ಲಿ ಮತ್ತೆ ಇಲ್ಲಿಗೇ ಕರೆತಂದುಬಿಡಲು ಸಮ್ಮತಿಸಿದುವು. ತಮ್ಮ ಬೆನ್ನಿನ ಮೇಲೆ ನೀಲಕಂಠ ರಾಯನನ್ನು ಹೊತ್ತು ಅವು ಗಗನದಲ್ಲಿ ಹಾರಿದುವು.

ತನ್ನ ಅರಮನೆಯಲ್ಲಿ ರೂಪಾವತಿ ಆಗತಾನೆ ಗೌರಿ ಪೂಜೆಯನ್ನು ಮುಗಿಸಿ, ತನ್ನ ಪತಿಗೆ ಸರ್ವ ಯಶಸ್ಸನ್ನೂ ಕೋರಿ ಪಲ್ಲಂಕವನ್ನು ಏರುವುದರಲ್ಲಿನಡುರಾತ್ರಿ ಸಮೀಪಿಸಿದೆ. ಇದ್ದಕ್ಕಿದ್ದಂತೆಯೇ ತನ್ನ ಅರಮನೆಯ ಬಾಗಿಲನ್ನು ಯಾರೋ ತಟ್ಟಿದಂತಾಗಿ ಅವಳು ಬೆಚ್ಚಿದಳು. ಪತಿ ಪರ ಊರಿಗೆ ಹೋಗಿರುವಾಗ ಈ ನಟ್ಟಿರುಳಿನಲ್ಲಿ ಯಾರೋ ತನ್ನ ಪಾತಿವ್ರತ್ಯಕ್ಕೆ ಕಳಂಕವನ್ನು ತರಲು ಪ್ರಯತ್ನಿಸಿದ್ದಾರೆ. ರೂಪಾವತಿ ದೃಢವಾಗಿ ಬಂದವರನ್ನು ಪ್ರಶ್ನಿಸಿದಳು.

ಬಂದವನು ನೀಲಕಂಠರಾಯ! ಅದೇ ಧ್ವನಿ, ಅದೇ ಮಮತೆಯ ಕರೆ, ಅದೇ ಸಲಿಗೆಯ ಧಾಟಿ! ಆದರೂ ರೂಪಾವತಿ ಬಾಗಿಲನ್ನು ತೆರೆಯಲ್ಲಿಲ್ಲ. ತನ್ನ ಪತಿಯೇ ಆಗಿದ್ದರೆ ತಾನು ಬಯಸಿದ ಕುರುಹನ್ನು ತೋರಲಿ. ತನ್ನ ತಂದೆಯ ಮನೆಯಲ್ಲಿ ಕೊಟ್ಟ ಮುದ್ರೆಯುಂಗುರವನ್ನು ನೀಲಕಂಠರಾಯ ತೋರಬೇಕೆಂದು ಕೋರಿದಳು.

'ಕೇಳಿದ ಗುರುತ'ನ್ನು ನೀಲಕಂಠರಾಯ ಬಾಗಿಲ ರಂಧ್ರದಿಂದ ನೀಡಿದ.

ತನ್ನ ಪತಿಯು ಆಗಮನದಿಂದ ಹಿಗ್ಗಿದ ರೂಪಾವತಿ ಸಂಭ್ರಮದಿಂದ ಬಾಗಿಲನ್ನು ತೆರೆದು ಅಭ್ಯಂಜನ ಮಾಡಿಸಿ, 'ಭಕ್ಷ್ಯ ಭೋಜ್ಯ ಕರ್ಪೂರ ವೀಳ್ಯ'ಗಳನ್ನು ನೀಡಿ, ಪತಿಯೊಡನೆ ನಲಿಯುವಾಗ ಕೇಳಿದಳು—

"ಸೋತು ಬಂದಿರೋ ? ಹೆದರಿ ಬಂದಿರೋ ?"

ಆ ಅಪರಾತ್ರಿಯಲ್ಲಿ, ಅಷ್ಟು ಅನಿರೀಕ್ಷಿತವಾಗಿ, ಏಕಾಂಗಿಯಾಗಿ ರಾಜ ಬಂದ ರಹಸ್ಯ ಅವಳಿಗೆ ಸಂಶಯ ತಂದಿತ್ತು. ಆದರೆ ನೀಲಕಂಠರಾಯ, ನಲ್ಲೆಯ ಗಲ್ಲವನ್ನು ಹಿಡಿದು, ತಾನು ಬಂದ ಬಗೆಯನ್ನೂ, ಪವಿತ್ರ ಉದ್ದೇಶವನ್ನೂ ಆ ವೀರ ರಮಣಿಗೆ ವಿವರಿಸಿದ.

'ಸಕ್ಕರೆ ನವರತ್ನ ಸುರಿಯುವ ಪುತ್ರ'ನನ್ನು ಪಡೆಯುವ ಸೌಭಾಗ್ಯ ತನ್ನ ದಾಯಿತೆಂದು ರೂಪಾವತಿ ಹಿಗ್ಗಿದಳು. ಆದರೆ ಮರುಕ್ಷಣವೇ ನೀಲಕಂಠರಾಯ ಹೊರಟು ನಿಂತಾಗ ಅವಳು ತಬ್ಬಿಬ್ಬಾದಳು. ತಾನು ಗರ್ಭವನ್ನು ಧರಿಸಿದರೆ ತನ್ನ ಶೀಲದ ಬಗ್ಗೆ, ತನ್ನ ನಡತೆಯ ಬಗ್ಗೆ ಬರುವ ಅಪಕೀರ್ತಿಗೆ ಅವಳು ಬೆಚ್ಚಿದಳು. ತಾನು ಬಂದ ವಿಚಾರವನ್ನು ಮಾತ್ರ ತಂದೆಗೆ ತಿಳಿಸದಂತೆ ಹೇಳಿ ನೀಲಕಂಠರಾಯ ದೇವಲೋಕದ ಪಕ್ಷಿಗಳ ಬೆನ್ನೇರಿ ಕತ್ತಲಲ್ಲಿ ಕರಗಿ ಹೋದ. ಅವನು ಬಂದು ಹೋದ ವಿಷಯ ರಹಸ್ಯವಾಗಿಯೇ ಉಳಿಯಿತು.

ದೇವಲೋಕದ ಪಕ್ಷಿಗಳ ಮಾತು ಸುಳ್ಳಾಗಲಿಲ್ಲ. ಸೊಸೆ ಗರ್ಭವತಿಯಾದ ಸೂಚನೆಗಳನ್ನು ಭಾನುಶೇಖರರಾಯನಿಗೆ ರಾಣಿವಾಸದವರು ಮುಟ್ಟಿಸಿದರು. ಅರಿರಾಯರ ಮೇಲೆ ದಂಡೆತ್ತಿ ಹೋದ ತನ್ನ ಮಗ ಹಲವು ತಿಂಗಳುಗಳಿಂದ ನೀಲಾವತಿಯ ಹಾದಿಯನ್ನು ತುಳಿದಿಲ್ಲ. ಅವನ ನ್ಯಾಯ ನೀತಿಗಳಿಗೆ ಅವನ ಧರ್ಮಶ್ರದ್ಧೆಗೆ ಸವಾಲಿನಂತೆ ರೂಪಾವತಿ ಗರ್ಭ ಧರಿಸಿದ್ದಾಳೆ. ತನಗೆ, ತನ್ನ ವಂಶಕ್ಕೆ, ತನ್ನ ರಾಜ್ಯಕ್ಕೆ, ಮೇಲಾಗಿ ತನ್ನ ಪುತ್ರನಿಗೆ ಬರುವ ಕಳಂಕಕ್ಕೆ, ಭಾನುಶೇಖರ ಕುದಿದು ಹೋದ. ಎಷ್ಟು ಬಗೆಯಲ್ಲಿ ಪ್ರಶ್ನಿಸಿದರೂ ರೂಪಾವತಿ ಪತಿಯ ರಹಸ್ಯವನ್ನು ಬಿಟ್ಟುಕೊಡಲಿಲ್ಲ. ಮೌನವಾಗಿ ಕಣ್ಣೀರನ್ನು ಮಾತ್ರ ಹರಿಸಿದಳು. 'ಕದ್ದು ಗರ್ಭಿಣಿ'ಯಾದ ತನ್ನ ಸೊಸೆಯನ್ನು ಅರಮನೆಯಲ್ಲಿ ಇಟ್ಟುಕೊಳ್ಳುವುದೂ ಭಾನುಶೇಖರನಿಗೆ ಸಹಿಸಲಿಲ್ಲ. ಅವಳನ್ನು ಕಾಡಿಗೆ ಅಟ್ಟಿಬರಲು ಆಳುಗಳಿಗೆ ಆಜ್ಞಾಪಿಸಲೂ ಅವನು ಹಿಂದೆಗೆಯಲಿಲ್ಲ.

ರೂಪಾವತಿಯನ್ನು ಆಳುಗಳು 'ಕಾಡಾರಣ್ಯ'ಕ್ಕೆ ಕರೆದೊಯ್ದಿದ್ದಾರೆ.

ಅವರಲ್ಲೂ ತಾತ್ಸಾರ, ಅವರಲ್ಲೂ ತಿರಸ್ಕಾರ, ಆವರ ಕ್ರೂರ ನುಡಿಗಳು ಅವಳೆದೆಯನ್ನು ತಿವಿದಿವೆ.

ಕಟ್ಟಿರೊ ಪೀಸಂಡಿ ಕಳ್ಳಲೌಡಿ ಮಗಳ
ಏಟಿನ ಮೇಲೇಟುಗಳ ಹೊಡೆಯ ಬೇಕೀಗ

ಆರು ತಿಂಗಳ ಗರ್ಭಿಣಿ, ಕಾಡು ದಾರಿ. ಆಳುಗಳ ಕ್ರೂರ ವರ್ತನೆ. ಆ ಅರಣ್ಯ ಮಾರ್ಗದ ಭೀಕರತೆ ಅವಳನ್ನು ಹಿಂಡುತ್ತಿದೆ.

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ

ಬೆಂದು, ಬಸವಳಿದು, ಬೇಸತ್ತು ತಡವರಿಸುತ್ತ ಮುಂದುವರಿದಿದ್ದಾಳೆ.

ಅಡವಿ ಗಿಡಮರ ಕಲ್ಲ ಎಡವಿ ಮುಗ್ಗರಿಸುತ
ಕಳವಳಿಸಿ ಹೊರಟಳೊ ರೂಪಾವತಿಯಾಗ

ಎಲ್ಲ ದುಃಖವನ್ನೂ ಸಹಿಸಿಕೊಂಡು, ಎಲ್ಲ ಸಂಕಟವನ್ನೂ ನುಂಗಿಕೊಂಡು ತನ್ನ ಗರ್ಭದಲ್ಲಿರುವ ಶಿಶುವಿಗಾಗಿ ತನ್ನ ಪತಿ ಬಂದು ತನ್ನನ್ನು ಉದ್ಧರಿಸುವ ದಿನಕ್ಕಾಗಿ ಹಂಬಲಿಸಿ, ಹಲುಬಿ, ರೂಪಾವತಿ ಕಾಡಿನಲ್ಲಿ ಕಾತರಿಸಿ ನಡೆಯುವಾಗ, ಅವಳೊಬ್ಬಳನ್ನೇ ತೊರೆದು ಆಳುಗಳು ನೀಲಾವತಿಯ ದಾರಿಯಲ್ಲಿಮರಳಿದರು.

ಏಕಾಂಗಿನಿಯಾಗಿ ರೂಪಾವತಿ ಕಾಡಿನಲ್ಲಿ ಕಂಗೆಟ್ಟು ಹೋಗಿದ್ದಾಳೆ....

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ........

ಹಿಮ್ಮೇಳದವರು ಸುಶ್ರಾವ್ಯವಾಗಿ ಹಾಡಿದ್ದಾರೆ, ಕೇಳುವವರ ಎದೆ ಕರಗುವಂತೆ, ಕಣ್ಣು ಹನಿಯುವಂತೆ, ಆ ಮೃದು ಗಂಭೀರ ನೃತ್ಯ ವಿನ್ಯಾಸದಲ್ಲಿ ಚಿಮ್ಮುವ ಶೋಕದ ತೆರೆಗಳಿಗೆ ಪುಟ ಕೊಡುವಂತೆ, ಕರವಸ್ತ್ರದಿಂದ ಮುಖವನ್ನು ಮುಚ್ಚಿ ನಿರೂಪಕ ಬಿಕ್ಕಿಬಿಕ್ಕಿ ಅಳುತ್ತಿರುವನೇ !

* * * *

ವಜ್ರಾವತಿಯ ಭುಜಗೇಂದ್ರನ ಮೇಲೆ ದಂಡೆತ್ತಿ ಹೋಗಿದ್ದ ನೀಲಕಂಠರಾಯ ಹಲವು ತಿಂಗಳು ರಾಜಧಾನಿಗೆ ಮರಳಲಿಲ್ಲ. ಕೋಟೆಯ ಒಳಗೆ ಸೇರಿ ಭುಜಗೇಂದ್ರ ತನ್ನನ್ನು ರಕ್ಷಿಸಿಕೊಂಡ. ಆದರೆ ಹೆಚ್ಚು ದಿನ ಹಾಗೆಯೇ ಇರಲು

ಸಾಧ್ಯವಾಗದೆ ಶರಣಾಗತನಾಗಿ ಕಪ್ಪ ಕಾಣಿಕೆಗಳನ್ನು ಅರ್ಪಿಸಿದ. ಶತ್ರುವನ್ನು ಶಿಕ್ಷಿಸಿ ನೀಲಕಂಠರಾಯ ಸಂಭ್ರಮದಿಂದ ನೀಲಾವತಿಯ ಹಾದಿ ಹಿಡಿದಿದ್ದಾನೆ.

ಹೊಡೆಸುತ್ತ ಭೇರಿಯ ಹಿಡಿಸುತ್ತ ಕಹಳೆಯ
ಬೋರುಗುಟ್ಟುತಲಾಗ ಹೊರಟನೊ ರಾಜ

ತನ್ನ ಮುದ್ದು ಮಡದಿ ರೂಪಾವತಿಯನ್ನು ಕಾಣುವ ಕಾತುರ, ದೇವ ಲೋಕದ ಪಕ್ಷಿಗಳ ಭರವಸೆಯೆಷ್ಟು ಸತ್ಯವಾದುದೋ ಎಂಬ ಕುತೂಹಲ; ತನ್ನ ತಾಯಿತಂದೆಯರ ಆರೋಗ್ಯದ ಬಗ್ಗೆ ಕಳವಳ....ನೀಲಕಂಠರಾಯ ಸೇನೆಯನ್ನು ಹಿಂದೆ ಬಿಟ್ಟು ಕುದುರೆಯನ್ನೇರಿ ನೀಲಾವತಿಯತ್ತ ಧಾವಿಸಿ ಧಾವಿಸಿಬಂದಿದ್ದಾನೆ. ರೂಪಾವತಿಯ ಅರಮನೆಯ ಬಾಗಿಲಿಗೆ ಬಂದು ನಿಂತಾಗ ಅಲ್ಲಿನ ಬೀಗಮುದ್ರೆಯನ್ನು ಕಂಡು, ಬೆಚ್ಚಿ, ಬೆರಗಾಗಿ ತಂದೆಯ ಬಳಿಗೆ ಬಂದಿದ್ದಾನೆ! ಭಾನುಶೇಖರ ಮಗನನ್ನು ಗಂಭೀರವಾಗಿ ಬರಮಾಡಿಕೊಂಡನು. ರೂಪಾವತಿಯ ಪರಿಯೇನು ಎಂಬುದನ್ನು ಕೇಳುತ್ತ ಕೇಳುತ್ತ ನೀಲಕಂಠರಾಯ ಗಳಗಳನೆ ಕಣ್ಣೀರನ್ನು ಕರೆದು, ನೆಲಕ್ಕೆ ಕುಸಿದ. ತನ್ನ ಆತುರದಿಂದ, ತನ್ನ ಅವಿವೇಕದಿಂದ ಏನೆಲ್ಲ ಅನರ್ಥಗಳು ಸಂಭವಿಸಿದುವು! ಯುದ್ಧದಲ್ಲಿ ಗೆದ್ದು ಬಂದ ತನ್ನನ್ನು ಆದರದಿಂದ ಆರತಿಯೊಡನೆ ಸ್ವಾಗತಿಸಲು ರೂಪಾವತಿ ಇಲ್ಲ ! ಅವಳಿಲ್ಲದ ಅರಮನೆಯ ಸುಖ ಭೋಗಗಳು ತನಗೇಕೆ! ಎಲ್ಲಿ, ಕಾಡಿನ ಯಾವ ಗುಹೆಯಲ್ಲಿ, ಯಾವ ಮರದಡಿಯಲ್ಲಿ ಇನ್ನಾವ ಕಡುಕಷ್ಟದಲ್ಲಿ ತೊಳಲುತ್ತ ಇರುವಳೋ !

ನೀಲಕಂಠರಾಯ ತನ್ನ ಮಡದಿಯನ್ನು ಕಾಣದೆ ಅಲ್ಲೊಂದು ಗಳಿಗೆಯೂ ನಿಲ್ಲದಾದ. ಅರಣ್ಯದ ದಾರಿಯನ್ನು ಹಿಡಿದು ಹೊರಟ. ಅವನನ್ನು ಯಾವ ಶಕ್ತಿಯೂ ತಡೆದು ನಿಲ್ಲಿಸಲು ಸಮರ್ಥವಾಗಲಿಲ್ಲ.

ಇತ್ತ ರೂಪಾವತಿ ಕಾಡಿನಲ್ಲಿ ನಿಲ್ಲಲಾರದೆ ತಳಮಳಗೊಂಡಳು. ತನ್ನ ಗರ್ಭದ ಶಿಶುವಿನ ರಕ್ಷಣೆಗಾದರೂ ತಾನುಳಿಯಬೇಕು; ಎಂತಾದರೂ ಬದುಕಲೇ ಬೇಕು ; ಬದುಕಲೇ ಬೇಕು ! ಸೋತು ಸೊಪ್ಪಾಗಿ. ಮುಂದೆ ನಡೆದಳು.

ಒಂದೊಂದೆ ಹೆಜ್ಜೆಗಳ ಚೆಂದಾಗಿ ಇಡುತಲಿ
... . ... ಬಹು ದುಃಖ ಮಾಡುತಾಳೆ ರೂಪಾವತಿಯಾಗ

ನಡೆದು ನಡೆದು ಸೋತ ರೂಪಾವತಿ ತನ್ನ ತೌರನ್ನಾದರೂ ಸೇರಿ ಆಶ್ರಯ

ಕೋರಲು ನಿರ್ಧರಿಸಿ ನಂದೀಪಟ್ಟಣದ ದಾರಿಯಲ್ಲಿ ಸಾಗಿದಳು. ಆದರೆ ಅಲ್ಲಿ ಅವಳಿಗೆ ದೊರೆತ ಆದರ ತಿರಸ್ಕಾರ, ಜನರ ತಾತ್ಸಾರಗಳೇ. ಗಂಡನ ಮನೆಯಲ್ಲಿ ಬಾಳಲಾರದೆ ಬಂದಿದ್ದಾಳೆ ಎಂಬಂತೆ ಜನ ಬೇಸರದಿಂದ ಅವಳನ್ನು ಕಂಡರು, ಅವಳನ್ನು ನುಡಿಸದೆ ಮುಖ ತಿರುಗಿಸಿದರು. ನಂದಿರಾಜನ ಮನೆಯ ಬಾಗಿಲಲ್ಲಿ ಗೌಡಿಯರು ಅವಳನ್ನು ಬರಮಾಡಿಕೊಂಡರು. ತಂದೆ ಕಾಲಿಗೆ ನೀರು ಕೊಟ್ಟು ಮಗಳನ್ನು ಉಪಚರಿಸುವಂತೆ ತಿಳಿಸಿದನು. ಕಂದಿ ಕುಂದಿ ಬಂದ ಮಗಳ ಕತೆಯಿಂದ ನಂದೀರಾಜನೂ ಕ್ರುದ್ಧನಾದನು.

"ಛೀ ಭ್ರಷ್ಟ ಮಗಳೇ, ರಾಜತ್ವಕ್ಕೆ ಕುಂದು ತಂದೆಯಾ !"–ನಂದೀರಾಜನ ತಾಳ್ಮೆ ಕ್ಷಣದಲ್ಲಿ ಮಾಯವಾಯಿತು. ಕೊಟ್ಟ ಮನೆಗೆ ಕಳಂಕವನ್ನು ತಂದ ಮಗಳಿಗೆ ತಾನೇಕೆ ಆಶ್ರಯ ಕೊಡಬೇಕು ; ಅವಳಿಗೆ ಭಾನುಶೇಖರ ವಿಧಿಸಿದ ಶಿಕ್ಷೆಯೇ ಸೂಕ್ತವಾದುದು.

ನಂದೀರಾಜನ ಬಿಗಿಮುಷ್ಟಿ ಸಡಿಲಗೊಳ್ಳಲಿಲ್ಲ. ಕಣ್ಣೀರನ್ನು ಹರಿಸುತ್ತ ರೂಪಾವತಿ ತಂದೆಯ ಮನೆಯನ್ನು ತೊರೆದು ಹೊರಗೆ ಕಾಲಿಟ್ಟಳು.

ಕೇರಿಕೇರಿಗಳಲ್ಲಿ ಬೀದಿಬೀದಿಗಳಲ್ಲಿ
ಸಾರುತ್ತಾ ಹೊರಟಳು ರೂಪಾವತಿದೇವಿ

ನಂದೀಪಟ್ಟಣದ ಬೀದಿ ಬೀದಿಗಳಲ್ಲಿ ಕಂಬನಿಯನ್ನು ಹರಿಸುತ್ತ, ಆಶ್ರಯವನ್ನು ಕೋರುತ್ತ ಬಂದರೂ ಕರೆದು ಸಂತೈಸುವವರು ಇಲ್ಲವಾದರು. ಶೌರಿಗೆ ಕೈ ಮುಗಿದು ಅರಣ್ಯದ ಹಾದಿಯಲ್ಲಿ ಅಡಿ ಇಟ್ಟಾಗ ಉದ್ವೇಗಗೊಂಡ ಮನಸ್ಸು, ದುಃಖದ ತೆರೆಯನ್ನು ಕವಿಸಿತು....

ತಂದೆ ತಾಯಿಗಳಿಲ್ಲ ಬಂಧು ಬಳಗಗಳಿಲ್ಲ
ಹಿಂದೆ ಮುಂದಿಲ್ಲವು ದಿಕ್ಕಿಲ್ಲ ಎನಗೇ
ಎನಗೇಽಽ

ಕಂಬನಿ ಮಿಡಿಯುತ್ತಾ ಪತಿಯನ್ನು ನೆನೆಯುತ್ತ ಅಲ್ಲಲ್ಲಿ ಕುಸಿದು ಬೀಳುತ್ತ ಹಂಬಲಿಸಿದ್ದಾಳೆ :

ಪತಿಯನಗಲಿದ ಮೇಲೆ ದಿಟದಿ ಬಾಳುವುದ್ಹೆಂಗೆ
ಎಂಥ ಕಷ್ಟವು ನಮಗೆ ಬಂದಿತೋ ಶಿವನೇ
ಶಿವನೇಽಽ

ರೂಪಾವತಿ ತೋಱಿದ ದಾರಿಯಲ್ಲಿ ಸಾಗಿ ಹೋದಳು ನೆರವಿಲ್ಲದೆ, ನೆರಳಿಲ್ಲದೆ, ಗೊತ್ತಿಲ್ಲದೆ, ಗುರಿಯಿಲ್ಲದೆ ಮುಂದೆಮುಂದೆ ಯಾವುದೋ ದಾರಿಯಲ್ಲಿ ನಡೆದು ಹೋದಳು.

ಇತ್ತ ನೀಲಕಂಠರಾಯನಿಗೂ ಕಷ್ಟ ತಪ್ಪಲಿಲ್ಲ. ಕಾಡಿನಲ್ಲಿ ಬಟ್ಟೆಗೆಟ್ಟು ಪರಿತಾಪದಲ್ಲಿ ಬಳಲಿ ಬೆಂಡಾಗಿ ರೂಪಾವತಿಯನ್ನು ಅರಸುತ್ತ ಕಾಲ್ನಡಗೆಯಲ್ಲಿಯೇ ಸಾಗಿದ್ದಾನೆ. ಕವಿದ ಕಾಡಿನ ಗಿಡ ಮರಗಳೂ ಅವನನ್ನು ಕೌತುಕದಿಂದ ನೋಡಿವೆ. ಬಾಡಿದ ಮುಖದ, ಸೋತ ನಡಿಗೆಯ ರಾಯನನ್ನು ಕಾಡು ಕಂಡು ಬೆರಗಾಗಿದೆ—

ಹೆಬ್ಬಿದಿರು ಕಿರುಬಿದಿರು ತಬ್ಬಿರುವ ಮೆಳೆಯೊಳು
ಅಲ್ಲೊಬ್ಬ ರಾಜೇಂದ್ರ ಬರುತಿರಲು ದೇವ
ಬರುತಿರಲು ದೇವ

ಎಲ್ಲಿ ಅರಸಿಪರೇನು, ಎಲ್ಲಿ ಬಳಲಿದರೇನು 'ಶಿವನ ಲೀಲಾಮಯದಿಂದ' ಅವರಿಬ್ಬರೂ ಸಂಧಿಸಿದಂತಾಗಿದೆ. ಮತ್ತೆ ಮತ್ತೆ ರೂಪಾವತಿಯನ್ನು ನೆನೆದು ನೀಲಕಂಠರಾಯ ದುಃಖದ ಮಡುವಿನಲ್ಲಿ ಮುಳುಗಿದ್ದಾನೆ. ತನ್ನಿಂದ ತನ್ನ ಮಡದಿಗಾದ ಕಷ್ಟಕ್ಕೆ ಕೊರಗಿದ್ದಾನೆ.

ಕೂಡಿದ ಸತಿಯಳಿಗೆ ಇಂಥ ಕಷ್ಟವ ಕೊಟ್ಟೆ
ಹ್ಯಾಗೆ ಸಹಿಸುವಳಯ್ಯ ಶಿವನೇ
ಶಿವನೇ

ಅರಸುತ್ತ, ಅಳಲುತ್ತ, ಹಲುಬುತ್ತಾ ನೀಲಕಂಠರಾಯ ನೆಲೆಯಿಲ್ಲದೆ ಅಲೆದಿದ್ದಾನೆ.

ಬೇರೊಂದು ದಾರಿಯಲ್ಲಿ ರೂಪಾವತಿ 'ಕಡು ದುಃಖ'ದಲ್ಲಿ ಹಾದಿ ನಡೆದಿದ್ದಾಳೆ. ತುಂಬು ಗರ್ಭಿಣಿಯಾದ ಅವಳು ದಾರಿ ನಡೆಯುವುದೂ ದುಸ್ತರವಾಗಿದೆ. ಮನಸ್ಸಿನಲ್ಲಿ ಬಯಕೆಗಳು ಕಾಣಿಸಿಕೊಂಡಿವೆ.

ಎಂಟು ತಿಂಗಳ ನಾರಿ ಮತ್ತೇನ ಬಯಸ್ಯಾಳೊ
ಎಳ್ಳುಂಡೆ ಜೇನುತುಪ್ಪ ತಿನಬೇಕು ನಾವು

ಯಾವುದೋ ನಗರದ ಹಾದಿಯಲ್ಲಿ ಸಾಗಿರುವ ಅವಳಿಗೆ ಬಯಕೆಗಳನ್ನು

ಪೂರೈಸಿಕೊಳ್ಳುವ ಪರಿಯೆಲ್ಲಿ ? ಒಮ್ಮೊಮ್ಮೆ ದೊರೆತ ದಾರಿಯಲ್ಲಿ, ಇನ್ನೊಮ್ಮೆ ಸವೆಯದ ಬಯಲುಬಟ್ಟೆಯಲ್ಲಿ ನಡೆದಿದ್ದಾಳೆ, ಎಂತಾದರೂ, ಹೇಗಾದರೂ ಊರೊಂದನ್ನು ಸೇರಿಕೊಂಡರೆ ಸಾಕೆಂದು.

ಮುಂದೆ ಮುಂದೆ ಹೋದಂತೆ 'ಅಂದ ಉಳ್ಳ ಪಟ್ಟಣ' ಚಂಪಕನಗರ ಕಣ್ಣಿಗೆ ಬೀಳುತ್ತದೆ. ಆ ನಗರವನ್ನು ಧರ್ಮಶೇಖರ ಮಹಾರಾಜ ಧರ್ಮದಿಂದ ಪರಿಪಾಲಿಸಿದ್ದಾನೆ. ಆ ಊರಿನಲ್ಲೊಂದು ದೊಡ್ಡ ವೇಶ್ಯೆಯರ ಬೀದಿ. ಅಲ್ಲಿನ ನಾಯಕಸಾನಿಯ ಮಗಳು ರಂಗಸಾನಿ ಸಾವನ್ನಪ್ಪಲು, ಊರಿನ ಮಸಣದಲ್ಲಿ ಅವಳನ್ನು ಸಮಾಧಿ ಮಾಡಿದ್ದಾರೆ. ಒಂದೆರಡು ದಿನಗಳು ಮಾತ್ರ ಕಳೆದಿವೆ.

ರೂಪಾವತಿ ಸೋತು, ಬಳಲಿ ಚಂಪಕ ನಗರದ ಹಾದಿಯಲ್ಲಿ ಬಂದಾಗ ಕತ್ತಲು ಕವಿಯಿತು. ನಟ್ಟಿರುಳು ಕಳೆದರೂ, ನಡೆದು ಕಂಗೆಟ್ಟ ಅವಳಿಗೆ ಊರು ಸಿಕ್ಕಲಿಲ್ಲ.

ಕಾರೆಂಬೊ ಕತ್ತಲೆ ಬೋರೆಂಬೊ ಮಳೆಗಾಲ
ನಾರಿ ಹೊರಟಳು ಬೇಗ ರೂಪಾವತಿದೇವಿ

ಕತ್ತಲಲ್ಲಿ ತಡವರಿಸುತ್ತ ಬಯಲು ಯಾವುದು, ಬಟ್ಟೆ ಯಾವುದು ಎಂಬುದನ್ನರಿಯದೆ, ಕಳವಳಿಸಿ, ಕಂಪಿಸಿ ಬರುತ್ತಿದ್ದಾಳೆ. ಕಾಣದೆ ಮಸಣದ ಮಧ್ಯದಲ್ಲಿಯೇ ಬಂದಿದ್ದಾಳೆ. ರಾತ್ರಿಯೆಲ್ಲ ಭೀಕರವಾದ ಮಳೆ ಆಗಿ ನೆಲ ನೆನೆದಿದೆ. ರಂಗಸಾನಿಯ ಗುಡ್ಡೆಗೆ ನೀರು ತುಂಬಿ ಗುಳಿ ಬಿದ್ದಿದೆ. ಕತ್ತಲಲ್ಲಿ ಅರಿಯದೆ ನಡೆದು ಬಂದ ರೂಪಾವತಿ ಆ ಗುಳಿಯಲ್ಲಿ ಕಾಲಿಟ್ಟು ಕುಸಿದಳು. ಕುತ್ತಿಗೆಯವರೆಗೆ ಹೂತುಹೋದ ಅವಳು, ಸುರಿವ ಮಳೆಯಲ್ಲಿ, ಹರಿವ ಕಂಬನಿಯಲ್ಲಿ, ಆವರಿಸಿದ ಭಯದಲ್ಲಿ ರಾತ್ರಿಯನ್ನು ಅಂತೆಯೇ ಕಳೆದಳು.

ಬೆಳಗಾಯಿತು. ರೂಪಾವತಿ ತಾನೆಲ್ಲಿದ್ದೇನೆಂದು ಅರಿತು ಬೆದರಿದಳು. ಆದರೆ ಅವಳನ್ನು ಮೇಲೆತ್ತಿ ಕರೆದೊಯ್ಯುವವರಾದರೂ ಯಾರು !

ಸೂರ್ಯೋದಯವಾಯಿತು. ರವಿಕಿರಣಗಳು ಮಸಣದ ಮಣ್ಣಿನ ಮೇಲೆಲ್ಲ ಚೆಲ್ಲಿದವು ; ನಾಯಕಸಾನಿ ತನ್ನ ಮಗಳ ಗುಡ್ಡೆಯ ಶಾಸ್ತ್ರಕ್ಕೆಂದು ಮಸಣಕ್ಕೆ ಬಂದಿದ್ದಾಳೆ. ಮಗಳ ಗುಡ್ಡೆಯ ಮೇಲೆ ಹೆಣ್ಣಿನ ತಲೆಯೊಂದು ಗೋಚರಿಸಿದೆ. ಇದೇನು ಕೌತುಕವೆಂದು ಕ್ಷಣ ಬೆಚ್ಚಿದ ಅವಳು ತನ್ನ ಮಗಳೇ ಬದುಕಿ ಮೇಲೆದ್ದಿದ್ದಾಳೆಂದು ಬಗೆದು ಹತ್ತಿರ ಬಂದಾಗ, ರೂಪಾವತಿಯ

ಅಸದೃಶ ರೂಪಸಂಪತ್ತಿಗೆ ಬೆರಗಾಗಿ ನಿಂತಳು. ಮಗಳಿಗಿಂತಲೂ ರೂಪಾತಿಶಯ ದಿಂದ ಶೋಭಿಸಿದ ಅವಳನ್ನು ನಾಯಕಸಾನಿ ಮೇಲೆಳೆದುಕೊಂಡಳು. ಅರ ಮನೆಯ ಸಂಬಂಧವನ್ನು ಮತ್ತೆ ಕಲ್ಪಿಸಿಕೊಳ್ಳುವ ಅವಕಾಶವನ್ನು ದೇವರೇ ಒದಗಿಸಿರುವಾಗ–ಅವಳು ಹಿರಿ ಹಿಗ್ಗಿ ತನ್ನ ಮನೆಗೆ ಬರುವಂತೆ ರೂಪಾವತಿ ಯನ್ನು ಒತ್ತಾಯ ಪಡಿಸಿದಳು. ರೂಪಾವತಿ ತನಗೆ ಕಾಡೇ ಸಾಕೆಂದು ಹೇಳಿ ದರೂ, ನಾಯಕಸಾನಿ ಅವಳ ಕೈಹಿಡಿದು ಕರೆದೊಯ್ದಳು. ದಿನ ತುಂಬಿದ ರೂಪಾವತಿ ಮುಂದೆ ನಡೆಯುವ ಶಕ್ತಿಯನ್ನೂ, ಚಿತ್ತಸ್ಥೈರ್ಯವನ್ನೂ ಕಳೆದು ಕೊಂಡು, ನಾಯಕಸಾನಿಯ ಮಡಿಲಲ್ಲಿ ಆಶ್ರಯವನ್ನು ಪಡೆದಳು, ಮುಂದೇನು ಎಂತು ಎಂಬುದನ್ನೂ ಅರಿಯವೆ (ತಾಳಮೇಳಗಳು ಕ್ಷಣಕಾಲ ವಿರಮಿಸಿ ಮತ್ತೊಂದು ಉಪಕಥೆಗೆ ದಾರಿ ಮಾಡಿಕೊಟ್ಟವು.)

ಸಖಿ ಸಖಿ ಶನಿವಾರ ಕಡವೆಯ ಪನಿವಾರ
ಮುತ್ತಿನಹಾರ ಜನಿವಾರ
ಅಕ್ಕ ಹೋಗನಿ ಬಾರೆ ಇಕ್ಕೇರಿ ಸಂತೆಗೆ
ತಕ್ಕೋನ ಬಾರೆ ಚವರೀಯ
ಅಕ್ಕಂದು ಆಲೂರು ತಂಗೀದು ಬೇಲೂರು
ಚಿಕ್ಕಕ್ಕನೂರು ಚಿಕಬಿದರೆ
ಸಖಿ....ಸಖಿ....

ತಾವು ಬಲ್ಲ ಹಾಡುಗಳನ್ನೆಲ್ಲ ವಿವಿಧ ಧಾಟಿಯಲ್ಲಿ, ವಿವಿಧ ರೀತಿಯಲ್ಲಿ ಹಾಡಿ ತಣಿಸುವ ಗಾರುಡಿ ಈ ಕರಪಾಲ ಮೇಳದ ಮಂದಿಯದು. ಕಥೆಯೇ ಆಗಲಿ, ಗೀತೆಯೇ ಆಗಲಿ, ಎಲ್ಲವಕ್ಕೂ ಒಂದು ಸೊಗಸನ್ನು, ಒಂದು ಸವಿಯನ್ನು ತಂದು ಕೊಡುವ ಕಲೆಗಾರಿಕೆ ಅವರದು. ಕಥೆಯ ಮುಖ್ಯ ಘಟ್ಟದಲ್ಲಿ ನಿಂತು ವೈವಿಧ್ಯತೆಗಾಗಿ ಉಪಕಥೆಯೊಡನೆ ವಿಶಿಷ್ಟ ಗೀತೆಗಳನ್ನೂ ಹಾಡಿ ಮತ್ತೆ ಮುಖ್ಯ ಯಾನಕ್ಕೆ ಕರೆದೊಯ್ಯುತಿದ್ದಾರೆ.. .

ಮುಂದಲ ಕಥೆಯ ಅದರಂದವ ಪೇಳುವೆನು
ಚಂದ್ರಶೇಖರ ನಮಗೆ ವರ ಕೊಡಲೊ ದೇವ
ವರ ಕೊಡಲೊ ದೇವ

ವೇಶ್ಯೆ ನಾಯಕಸಾನಿಯ ಮನೆಯಲ್ಲಿ ರೂಪಾವತಿಗೆ ನವಮಾಸಗಳು ತುಂಬಿವೆ. ಅದೇ ನಗರದ ಧರ್ಮಶೇಖರನ ರಾಣಿ ನೀಲಾದೇವಿ ಮಕ್ಕಳ ಭಾಗ್ಯಕ್ಕಾಗಿ ಹಲವು ದಿನಗಳಿಂದ ಹಂಬಲಿಸಿ, ನೀಲಗಿರಿ ಸಿದ್ಧಲಿಂಗ ಶಾಸ್ತ್ರಿಗಳ ಸಲಹೆಯಂತೆ ನಲವತ್ತೆಂಟು ದಿನಗಳ ಬಿಲ್ವವೃಕ್ಷದ ಪೂಜೆಯನ್ನು ನಡೆಸಿದ್ದಾಳೆ. ಈ ವೇಳೆಗೆ ನಲವತ್ತೇಳು ದಿನಗಳ ಪೂಜೆ ಮುಗಿದು, ಇನ್ನು ಒಂದು ದಿನದ ಪೂಜೆ ಮಾತ್ರ ಉಳಿದಿದೆ,

ಇತ್ತ—

ಹೊತ್ತು ಹೊತ್ತಿಗೆ ಬೇನೆ ಕತ್ತಿಲಿ ಕಡಿದಂಗೆ
ಬಹು ದುಃಖ ಮಾಡುತಾಳೆ ರೂಪಾವತಿಯಾಗ

ರೂಪಾವತಿಯ ಸಂಕಟವನ್ನರಿತ ನಾಯಕಸಾನಿ, ಸೂಲಗಿತ್ತಿ ನೀಲಮ್ಮ ನನ್ನು ಬರಮಾಡಿಕೊಂಡಳು. ರೂಪಾವತಿಯ ಗರ್ಭದಲ್ಲಿ ಹೆಣ್ಣೊಂದು ಹುಟ್ಟಿ ತನ್ನ ಸೌಭಾಗ್ಯವನ್ನು ಹೆಚ್ಚಿಸಲಿ ಎಂದು ಸುತ್ತೆಂಟು ದೇವರಿಗೆ ಹರಕೆ ಹೊತ್ತಳು. ಅವಳ ಇಚ್ಛೆ ಅರಿತ ಸೂಲಗಿತ್ತಿ ನೀಲಮ್ಮ 'ದೊಡ್ಡವಸ್ತ್ರ'ದಿಂದ ರೂಪಾವತಿಯ ಕಣ್ಣನ್ನು ಕಟ್ಟಿದಳು. ಹಡೆದ ಮಗು ಗಂಡೆಂದು ಅರಿತ ಕೂಡಲೇ ಅದನ್ನು 'ಧರಣಿಗೆ ಒಗೆದು' ಮರದ ಗೊಂಬೆಯೊಂದನ್ನು ರೂಪಾವತಿಯ ಪಕ್ಕದಲ್ಲಿರಿಸಿದಳು. ಮಗುವನ್ನು ಆ ಕತ್ತಲಲ್ಲಿಯೇ ಸಾಗಿಸಿ ಬಿಲ್ವವೃಕ್ಷದ ಬುಡದ ಮೆಳೆಯ ಮೇಲೆ ಒಗೆದು ಬಂದಳು ; ಆದರೆ ಶಿವನ ಕೃಪೆಯಿಂದ ಆ ಮಗು ಉಸಿರಾಡಿಕೊಂಡಿತು.

ಬೆಳಗಾಗಿದೆ. ಮೆಳೆಯ ಮೇಲೊಬ್ಬ ಮುದ್ದು ಕಂದ 'ಗಾರ್ ಗಾರ್' ಎಂದು ಅಳುತ್ತಿದ್ದಾನೆ. ನೀಲಾದೇವಿ ಪೂಜಾವಸ್ತುಗಳನ್ನು ಅಣಿಮಾಡಿಕೊಂಡು ಕೊನೆಯ ದಿನದ ಪೂಜೆಗಾಗಿ ಬಿಲ್ವವೃಕ್ಷದ ಬಳಿಗೆ ಬಂದಾಗ ಹಸುಳೆಯೊಂದರ ಆಕ್ರಂದನ ಅವಳ ಎದೆಯನ್ನು ಮಿಡಿದಿದೆ. ಅತ್ತ ತಾನು ಕಿವಿಗೊಟ್ಟಾಗ—

ಅಳತಾನೆ ಬಾಲ ಅಳುತಾನೆ
ಅಮ್ಮ ಎನುತಲೈತೆ ಹಗುರಣ ಪಡುತೈತೆ
ಅಳುತಾನೆ ಬಾಲ ಅಳುತಾನೆ

'ಸ್ನಾನ ಮಾಡಿ, ಶಿವಪೂಜೆ ಮಾಡಿ, ಪಟ್ಟೆಪೀತಾಂಬರಗಳನ್ನು ಉಟ್ಟು

ಬಂಗಾರದ ಹರಿವಾಣದಲ್ಲಿ ಪೂಜಾಸಾಮಾಗ್ರಿಯನ್ನು ಕೊಂಡು ಬಂದ ನೀಲಾದೇವಿ, ತನ್ನ ಪೂಜೆ ಸಫಲತೆಯನ್ನು ಪಡೆಯಿತೋ ಎನ್ನುವಂತೆ ನಿಂತು ಯೋಚಿ ಬಿಲ್ವವೃಕ್ಷದ ಪೂಜೆಯನ್ನು ಶ್ರದ್ಧೆಯಿಂದ ಮುಗಿಸಿದಳು. ಮತ್ತೆ ಶಿಶು—

'ಅಯ್ಯಾ, ಗಾರು ಗಾರೆಂದು ಅತ್ತಿದೆ'

ನೀಲಾದೇವಿ ಪೂಜೆಯನ್ನು ಮುಗಿಸಿ, ಪ್ರಸಾದವನ್ನು ತೆಗೆದು ನೋಡಿ ಶಿವ 'ಫಲ'ವನ್ನು ಕೊಟ್ಟಿದ್ದಾನೆಂದು ಹಿಗ್ಗುವಾಗ ಮತ್ತೆ ಮಗುವಿನ ರೋದನ ಕೇಳಿ ಬಂದಿದೆ.

ದನಿ ಬಂದ ಕಡೆಗೆ ಬಂದ ರಾಣಿ ಕಾಂತಿಯುತವಾದ ಹಸುಳೆಯನ್ನು ಕಂಡು ಕ್ಷಣ ಹಿಂಜರಿದಳು.

"ಯಾವ ಜಾತಿಯದೋ, ಯಾವ ಕುಲದ್ದೋ...." ಆದರೂ ಅವಳ ಹೃದಯ ಕರಗಿ 'ಕಣ್ಣಿಂದ ಕಾಣದ್ದು, ಸಾಕಿದರೆ ದೋಷವಿಲ್ಲ' ಎಂದೂ 'ಶಿವನ ಲೀಲಾಮಯ'ದಿಂದ ಅವಳಿಗೆನಿಸಿ, ಮಗುವನ್ನು ಮಮತೆಯಿಂದ ಎತ್ತಿಕೊಂಡು ಅರಮನೆಯ ಹಾದಿಯನ್ನು ಹಿಡಿದಳು.

ಬಿಲ್ವವನದಲ್ಲಿ ದೊರೆತ ಕಂದನನ್ನು 'ಬಿಲ್ವಶೇಖರ'ನೆಂಬ ಹೆಸರಿನಿಂದ ಕರೆದು, ಆದರದಿಂದ ಸಾಕಿ, 'ಚೌಷಷ್ಟಿ ವಿದ್ಯೆ'ದಲ್ಲಿ ಪ್ರವೀಣನನ್ನಾಗಿ ಮಾಡಿದ್ದಾರೆ. ವರ್ಷಗಳು ಉರುಳಿ ಯೌವನದ ಗಡಿಯಲ್ಲಿ ಬಿಲ್ವಶೇಖರ ಕಾಲಿಟ್ಟಾಗ, ಗುರು ಹಿರಿಯರು ಅವನಿಗೆ ಚಂಪಕನಗರದ ಪಟ್ಟವನ್ನು ಕಟ್ಟಿದ್ದಾರೆ.

ಬಿಲ್ವಶೇಖರ ಚಂಪಕನಗರದ ಪ್ರಭುವಾದ ಮೇಲೆ ನಗರವನ್ನೆಲ್ಲ ಸಂಚರಿಸಿ ಬರುವ ಆಸಕ್ತಿಯನ್ನು ವ್ಯಕ್ತಪಡಿಸುತ್ತಾನೆ. ಅಂಬಾರಿಯಲ್ಲಿ ಕುಳಿತು, ಸಕಲ ಪರಿವಾರದೊಡನೆ—

ಹೊಡೆಸುತ್ತ ಭೇರಿಯ ನುಡಿಸುತ್ತ ಕಹಳೆಯ
ಬಿಲ್ವಶೇಖರ ರಾಯ ಹೊರಟನು ಬೇಗ

ಬೀದಿಬೀದಿಗಳಲ್ಲಿ, ಕೇರಿಕೇರಿಗಳಲ್ಲಿ ಸುತ್ತಿ, ವೇಶ್ಯೆಯರ ಬೀದಿಗೆ ರಾಜನ ಮೆರವಣಿಗೆ ಹೊರಟಿತು. ಬೀದಿಯ ಇಕ್ಕೆಲಗಳಲ್ಲಿ, ಉಪ್ಪರಿಗೆಗಳ ಮೇಲೆ, ಜನ ಕಿಕ್ಕಿರಿದು ರಾಜಕುಮಾರನನ್ನು ಕಣ್ತುಂಬ ನೋಡಿ ತಣಿದರು. ವೇಶ್ಯೆಯರ ಕೇರಿಗೆ ಬರುವ ವೇಳೆಗೆ ನಾಯಕಸಾನಿ, ತನ್ನ ಮನೆಯ ಮುಂದೆಲ್ಲ ಗುಡಿಸಿ, ಸಾರಿಸಿ, ರಂಗವಲ್ಲಿ ಇಟ್ಟು ಮನೆಯ ಮುಂದೆ ನಿಲ್ಲುವಂತೆ ಒತ್ತಾಯ

ಪಡಿಸಿದ್ದಾಳೆ ರೂಪಾವತಿಯನ್ನು. ಆದರೆ ರೂಪಾವತಿ ಒಪ್ಪದೆ ಅನುಮಾನಿಸುವಾಗ 'ಜಗತಿಯ ಕಟ್ಟೆ'ಯ ಮೇಲಾದರೂ ಕೂರುವಂತೆ ಅಂಗಲಾಚಿದಾಗ ರೂಪಾವತಿ ಒತ್ತಾಯಕ್ಕೆ ಒಳಗಾಗಿ ಜಗಲಿಯಲ್ಲಿ ಕುಳಿತಳು.

ವೇಶ್ಯೆಯರ ಬೀದಿಯಲ್ಲಿ, ಅಂಬಾರಿಯಲ್ಲಿ ಕುಳಿತು ಬಿಲ್ವಶೇಖರ ನಾಯಕಸಾನಿಯ ಮನೆಯ ಮುಂದೆ ಹಾದು ಹೋಗುವಾಗ'ರೂಪುಳ್ಳ ಹೆಣ್ಣು' ಜಗುಲಿಯಲ್ಲಿ ಕುಳಿತ ಬಗೆ ಅವನನ್ನು ಸೆಳೆದಿದೆ. ಆ ಬೀದಿಯ ಒಂದು ಹೆಣ್ಣಿನ ರೂಪಕ್ಕೂ ಸೋಲದ ಬಿಲ್ವಶೇಖರ ರೂಪಾವತಿಯನ್ನು ಮೆಚ್ಚಿದನೆಂದು ನಾಯಕಸಾನಿ ಸೂಕ್ಷ್ಮವಾಗಿ ಅರಿತಳು. ಒದಗಿಬಂದ ತನ್ನ ಭಾಗ್ಯಕ್ಕಾಗಿ ಹಿರಿ ಹಿಗ್ಗಿದಳು.

ರೂಪಾವತಿಯನ್ನು ಕಂಡ ಮೇಲೆ ಅವಳ ಅಪೂರ್ವ ಸೌಂದರ್ಯಕ್ಕೆ ಮರುಳಾದ ಮೇಲೆ ಬಿಲ್ವಶೇಖರ ನಗರವನ್ನು ನೋಡುವ ಆಸಕ್ತಿಯನ್ನು ಉಳಿಸಿಕೊಳ್ಳಲಿಲ್ಲ. 'ಧಡಧಡನೆ' ಆನೆಯನ್ನು ಅರಮನೆಗೆ ನಡೆಸಿ, ತನ್ನ ಬಯಕೆಯನ್ನು ನಾಯಕಸಾನಿಗೆ ಮುಟ್ಟಿಸಿದ.

ಬಹುದಿನದಿಂದ ನಿರೀಕ್ಷಿಸಿದ್ದ ಭಾಗ್ಯ ಬಂದು ಬಾಗಿಲನ್ನು ತಟ್ಟಿದಾಗ ನಾಯಕಸಾನಿ ಕಣ್ಮುಚ್ಚಿ ಕೂರಲಿಲ್ಲ. ತನ್ನೆಲ್ಲ ಪ್ರಯತ್ನಗಳಿಂದ, ತನ್ನೆಲ್ಲ ಜಾಣ್ಮೆಯಿಂದ ರೂಪಾವತಿಯನ್ನು ಶಯ್ಯಾಗೃಹದಲ್ಲಿ ಕೂಡುವಲ್ಲಿ ಅವಳು ಗೆದ್ದಳು. ತನ್ನ ಶೀಲಕ್ಕೆ, ತನ್ನ ಚಾರಿತ್ರ್ಯಕ್ಕೆ ಧಕ್ಕೆ ತಂದ ರೂಪನ್ನು ಹಳಿಯುತ್ತ, ರೋದಿಸುತ್ತಾ ರೂಪಾವತಿ ಮತ್ತೇನನ್ನು ಮಾಡಲೂ ತೋಚದೆ ಕಂಗೆಟ್ಟು ಹೋದಳು.

ಮಬ್ಬುಗತ್ತಲು ಚಂಪಕನಗರವನ್ನು ಕವಿಯಿತು. ಮನೆಮನೆಯ ದೀಪಗಳು ಬಾಗಿಲ ಮುಂದೆ ಬೆಳಕಿನ ಹಸೆಗಳನ್ನು ಹಾಸಿದವು. ನಾಯಕಸಾನಿಯ ಮನೆಯಲ್ಲಿ ನಾಯಕಸಾನಿಯ ನಡೆಯಲ್ಲಿ, ನುಡಿಯಲ್ಲಿ ಅತುಳ ಉತ್ಸಾಹ, ಸಂಭ್ರಮ, ಸಡಗರಗಳು ತುಳುಕಿದುವು. ಆಗಸದ ಅಗಲಕ್ಕೂ ಚೆಲ್ಲಿದ ಚಿಕ್ಕೆಗಳು ಮಂದ ಬೆಳಕನ್ನು ಹರಹಿದವು. ಅಸ್ಪಷ್ಟವಾದ ಕತ್ತಲ ಹಾದಿಯಲ್ಲಿ ಬಿಲ್ವಶೇಖರನ ಕುದುರೆ ನಾಯಕಸಾನಿಯ ಮನೆಯನ್ನರಸಿ ಹೊರಟಿತು.

ಮನೆಯ ಮುಂದೆ ಕುದುರೆಯನ್ನಿಳಿದ ಬಿಲ್ವಶೇಖರ, ಮುಂದೆ ನಡೆದ. ನಾಯಕಸಾನಿಯ ಹಸು ಜಗುಲಿ ಕಟ್ಟೆಯನ್ನೊರಗಿ ಅಲ್ಲಿಯೇ ಮಲಗಿತ್ತು.

ಬಳಿಯಲ್ಲೇ ಇದ್ದ ಕರು ತಾಯ ಸನ್ನಿಧಿಯಲ್ಲಿ ನಿದ್ದೆಯ ಮಂಪರಿನಲ್ಲಿ ಕನಸು ಕಾಣುತ್ತಿತ್ತು. ಇದ್ದಕ್ಕಿದ್ದಂತೆಯೇ ಯಾರೋ ತನ್ನ ಕಾಲನ್ನು ತುಳಿದಂತಾಗಿ ಬೆಚ್ಚಿ ಮೇಲೆದ್ದ ಕರು–

"ಅಮ್ಮಾ ಯಾರೋ ನನ್ನ ಕಾಲನ್ನು ತುಳಿದರು" ಎಂದಿತು.

ಹಸು ವ್ಯಂಗ್ಯವಾಗಿ ನಕ್ಕು ನುಡಿಯಿತು, "ಹೆತ್ತ ತಾಯ ಗುರುತು ಅರಿಯದಂಥ ಮೂರ್ಖನಪ್ಪ !"

ಬಿಲ್ವಶೇಖರ ಆ ಮಾತಿಗೆ ಬೆಚ್ಚಿದ, ಹಾವನ್ನು ಮುಟ್ಟಿದವನಂತೆ. ನೆಲ ಕಂಪಿಸಿತು. ಬಾನು ಗುಡುಗಿತು. ನೂರು ಸಿಡಿಲುಗಳು ಅವನೆದೆಗೆ ಅಪ್ಪಳಿಸಿದವು. ಧಡಧಡನೆ ಬಂದ ಹೆಜ್ಜೆಯಲ್ಲೇ ಹಿಂದಿರುಗಿ, ತೇಜಿಯೇರಿ ಅರಮನೆಗೆ ಧಾವಿಸಿದ.

ರಾಣಿ ನೀಲಾವತಿ ಮಗನ ಆವೇಶಕ್ಕೆ ಬೆದರಿದಳು. "ನಾನೇನು ಪಡೆದ ಮಗನೊ ಹಡಿದ ಮಗನೊ ಹೇಳು" ಎಂದು ಬಿಲ್ವಶೇಖರ ಕಾಡಿದಾಗ ಪಡೆದ ಮಗನೆಂದೇ ರಾಣಿ ನಿಜವನ್ನರುಹಿದಳು.

ಅರಮನೆಯ ಆಳುಗಳು ನಾಯಕಸಾನಿಯನ್ನು ಬಂಧಿಸಿ ತಂದರು : ಅರಮನೆಯ ಕಂಬಕ್ಕೆ ಅವಳನ್ನು ಕಟ್ಟಿದರು. 'ಪಟ್ಟೆ ಪೀತಾಂಬರಗಳ ಆಸೆಗೆ' ಸೂಲಗಿತ್ತಿ ನೀಲಮ್ಮನ ಮೂಲಕ ತಾನೆಸಗಿದ ಕೃತ್ಯವನ್ನು ಅವಳು ಬಿತ್ತರಿಸಿದಳು.

ರೂಪಾವತಿಯನ್ನು ಅರಮನೆಗೆ ಕರೆತಂದರು. ತನ್ನ ತಾಯಿಯೆಂದು ಸ್ವೀಕರಿಸುವ ಮುನ್ನ ಬಿಲ್ವಶೇಖರ ಪರೀಕ್ಷೆಯೊಂದನ್ನು ಒಡ್ಡಿದನು. "ಏಳು ಪರದೆಯಿಂದ ತಾಯ ಎದೆಹಾಲು ನನಗೆ ಬಿದ್ದದ್ದೇ ಆದರೆ ತನ್ನ ತಾಯಿ" ಯೆಂದು ಖಚಿತಪಡಿಸಿಕೊಳ್ಳಲು ಇಚ್ಛೈಸಿದ. ದರ್ಭಾಸನದಲ್ಲಿ ಬಿಲ್ವಶೇಖರ ಸಿದ್ಧನಾಗಿ ಕುಳಿತ ; ಏಳು ಪರದೆಯ ಆಚೆಯಿಂದ ಹೆತ್ತ ತಾಯ ಕ್ಷೀರ ತುಂಬಿ ಬಂದಿದೆ ; ಪರದೆ ಹಿಂದೆ ಸರಿದಿದೆ. ರೂಪಾದೇವಿ ತನ್ನ ಮಗನನ್ನು ಕಂಡು ಆದರ ತುಂಬಿದವಳಾಗಿ—

'ಎನ್ನ ಮಗನೆ ಬಾರೊ ಹೊನ್ನ ಪುತ್ಥಳಿ ಬೊಂಬೆ
ಬಾರಯ್ಯ ಎನ ಮಗನೆ ಅರಗಿಳಿಯೆ ಬಾರೊ''

ಎಂದು ಎದೆಗವಚಿ, ತಬ್ಬಿ, ತೂಪಿರಿದಳು.

ತಂದೆಯನ್ನು ಅರಸಲು ಬಿಲ್ವಶೇಖರ ಮಂದಿ ಮಾರ್ಜಲವನ್ನು ಅಟ್ಟಿದ. ಕೊನೆಗೆ ಧರ್ಮಛತ್ರವೊಂದರಲ್ಲಿ ತಾಯಿ ರೂಪಾವತಿಯ ಭಾವಚಿತ್ರವನ್ನು ಬರೆಸಿ ಬಂದವರ ಪ್ರತಿಕ್ರಿಯೆಯನ್ನು ಪರೀಕ್ಷಿಸಲು ಆಜ್ಞೆಯಿತ್ತ.

ಗಡ್ಡ ಮೀಸೆ ಬೆಳೆದ, ಕುಗ್ಗಿ ಕಂಗಾಲಾದ ಆಗಂತುಕನೊಬ್ಬನನ್ನು ಛತ್ರದ ಆಳುಗಳು ಕರೆತಂದು ಊಟಕ್ಕೆ ನೀಡುವಾಗ, ಎದುರಿಗಿದ್ದ ರೂಪಾವತಿಯ ಚಿತ್ರವನ್ನು ನೋಡಿ ಅವನು ಕಂಬನಿ ತುಂಬಿಕೊಂಡು, ಎತ್ತಿದ ಬಲಗೈಯನ್ನು ಕೆಳಗೆ ಇಳುಹಿದ ವಾರ್ತೆ ಬಿಲ್ವಶೇಖರನಿಗೆ ಮುಟ್ಟಿತು. ಆಳುಗಳ ಜತೆ ಅರಮನೆಗೆ ಬಂದ ಆಗಂತುಕ ತನ್ನ ಪತಿಯೆಂದು ಗುರುತಿಸಿದ ರೂಪಾವತಿ ಪತಿಯ ಪಾದದ ಮೇಲೆ ಬಿದ್ದು ಕಂಬನಿಯ ಅಭಿಷೇಕ ಮಾಡಿದಳು.

ನೀಲಕಂಠರಾಯನಿಗೆ ಹೊಸದೊಂದು ಸೋಜಿಗ ಅರಮನೆಯಲ್ಲಿ ಗೋಚರಿಸಿತು. ಮುತ್ತು, ರತ್ನಗಳ ರಾಶಿ ರಾಶಿಯೇ ಅಲ್ಲಿ ಬಿದ್ದಿದೆ. ಅದೇನೆಂದು ನೀಲಾದೇವಿಯನ್ನು ಕೇಳಿದಾಗ, ಬಿಲ್ವಶೇಖರ ನಕ್ಕರೆ ನವರತ್ನ ಸುರಿಯುವ, ಅತ್ತರೆ ಮುತ್ತು ಸುರಿವ ಸೋಜಿಗವನ್ನು ವಿವರಿಸಿದಳು.

ದೇವಲೋಕದ ಪಕ್ಷಿಗಳ ಮಾತು ನಿಜ ಆಯಿತು. ನೀಲಕಂಠರಾಯ ತನ್ನ ಮಗನನ್ನು ಬರಸೆಳೆದು, ಅಪ್ಪಿ ಮೈದಡವಿದ.

ಭಾನುಶೇಖರ ಮಹರಾಜನಿಗೆ ಓಲೆ ಹೋಯಿತು. ನೀಲಾವತಿ ಪಟ್ಟಣಕ್ಕೆ ಸರ್ವರೂ ಪ್ರಯಾಣ ಮಾಡಿದರು. ರೂಪಾವತಿ, ವೇಶ್ಯೆಯನ್ನೂ ಸೂಲಗಿತ್ತಿಯನ್ನೂ ಬಿಡುಗಡೆ ಮಾಡಿಸಿದಳು.

ಎಲ್ಲ ರೂಪವು ತಾನಂತೆ ಶಿವ
ಎಲ್ಲೆಲ್ಲಿಯು ತಾನಿಹನಂತೆ
ಅಲ್ಲಲ್ಲರಸುವ ಗುಡಿಗಳ ತಿರುಗುವ
ಕಳ್ಳ ನರರ ಕಣ್ಗೆ ಕಲ್ಲಂತೆ-ಶಿವ
ಮೈಯೆಂಬುದು ತನಗಿಲ್ಲವಂತೆ-ಶಿವ
ಮೈಗೆ ಮೈಯಾಗಿಹನಂತೆ
ಮೈಯ ಮರೆತು ತನ್ನರಸುವ ಜನರಿಗೆ
ಮಾನವ ರೂಪವು ತಾನಂತೆ
ಕಣ್ಣೆಂಬುದು ತನಗಿಲ್ಲವಂತೆ-ಶಿವ
ಕಣ್ಣಿಗೆ ಕಣ್ಣಾಗಿಹನಂತೆ

ಕಣ್ಣ ತೆರೆದು ತನ್ನರಸುವ ಜನರಿಗೆ
ಬಣ್ಣ ಬಣ್ಣವಾಗಿಹನಂತೆ-ಶಿವ
ಎಲ್ಲ ರೂಪವು ತಾನಂತೆ.ಶಿವ
ಎಲ್ಲೆಲ್ಲಿಯೂ ತಾನಿಹನಂತೆ !

ಮಂಗಳವನ್ನು ಹಾಡುವ ಮೊದಲು 'ಇಲ್ಲಿಗೆ ಹರ ಹರ, ಇಲ್ಲಿಗೆ ಶಿವ ಶಿವ' ಎಂದು ಕಥೆಯು ಮುಗಿತಾಯುವನ್ನು ಹಾಡಿ, ಆ ಅಪೂರ್ವ ರಸ ಪ್ರಪಂಚ ದಿಂದ ಪ್ರೇಕ್ಷಕರನ್ನು ಎಚ್ಚರಗೊಳಿಸುತ್ತಾರೆ ಪೇಳಗೀತೆಯಿಂದ, ಮಂಗಳಾಂತ ಕಥೆಗೆ ಮಂಗಳವೆನ್ನುವುದರಿಂದ.

○o○

# ಶಿವಯೋಗಿ-ಪರಯೋಗಿ

ಭಕ್ತಿಭಾವ ಪುಳಕಿತರಾದ ಕರಪಾಲದವರ ಅಭಿನಯಕೌಶಲ ನೆರೆದ ಭಕ್ತರ ಮನಸ್ಸನ್ನು ರಂಜಿಸುತ್ತದೆ; ಆ ಭಕ್ತಿ ತನ್ಮಯತೆಯ ರಸಾವೇಶ ಇತ್ತಲೂ ಹರಿದಾಡುತ್ತದೆ. ಶುಭದಿನದಂದು ಶುಭಕಥೆಯ ನಾಂದಿಯಲ್ಲವೆ ?

ಎಲುಬು ರಕ್ತವು ಮಾಂಸ
ಮೇಲೆ ಚರ್ಮದ ಹೊದಿಕೆ
ಒಳಗೆ ಮಲಮೂತ್ರದಿ ಕ್ರಿಮಿಗಳು ಇಹವೊ
ಹಲವು ವ್ಯಾಧಿಯ ಬೀಡು
ಪಂಚಭೂತದ ನಾಡು
ಇಂಥ ದೇಹವ ನೆಚ್ಚಿ ಕೆಡಬೇಡ ಮನುಜ

ಈ ಅನಿತ್ಯವಾದ ದೇಹವನ್ನು ನಂಬಿ, ಶಿವನನ್ನು ನೆನೆಯದೆ, ಶಿವಭಕ್ತಿಯಲ್ಲಿ ಮೈಮರೆಯದೆ ಇರುವ ಮನುಜರು ರುದ್ರೇಶ್ವರನ ಮಹಿಮೆಯಿಂದ ಸ್ಫೂರ್ತಿಗೊಳ್ಳಲಿ.

ಹಿಮ್ಮೇಳದವರು ಮೋಹಕವಾಗಿ ಹಾಡಿ, ಮುಂದಿನ ಕಥೆಗೆ ನಿರೂಪಕನ ತಾಳದ ಹಾದಿಯಲ್ಲಿ ಕಾದಿದ್ದಾರೆ. ಜನ ಅತುಳ ಸಂಖ್ಯೆಯಲ್ಲಿ ನೆರೆದಿದ್ದಾರೆ. ಶಿವಾಲಯದ ಮುಂದಿನ ಬಯಲು ಕವಿದ ಜನಕ್ಕೆ ಮಧುರ ರಾಗದ ತೀರ್ಥವನ್ನು ಚಿಮುಕಿಸಿದೆ.

ಅಂಗವಂತರ ಬೀದಿ ಲಿಂಗವಂತರ ಬೀದಿ
ಜಂಗಮರ ಬೀದಿಗಳು ಆಗ ಒಪ್ಪಿರಲು

ರುದ್ರಾವತಿ ಪಟ್ಟಣ ಭಕ್ತರ ಬೀಡು. ಅದನ್ನಾಳುವ ಆ 'ರುದ್ರಶೇಖರ.... ರುದ್ರಶೇಖರ ಎನ್ನುವ ಮಹಾರಾಜ' ನಿಷ್ಠಭಕ್ತನಾಗಿ ಶ್ರೇಷ್ಠ ಪ್ರಭುವೆನಿಸಿದ್ದಾನೆ. ರಾಣಿ ರುದ್ರಾವತಿ ಪತಿಗೆ ಯೋಗ್ಯ ಸತಿಯಾಗಿ, ಶಿವಭಕ್ತಿಯೇ ಸಾಕಾರಗೊಂಡ ಸಾಧ್ವಿಯಾಗಿದ್ದಾಳೆ. ಆ ಆದರ್ಶ ದಂಪತಿಗಳಿಗೆ ಶಿವ ವರಪುತ್ರರನ್ನು ಕರುಣಿಸಿದ್ದಾನೆ, ಅವರ ಭಕ್ತಿಗೆ ಮೆಚ್ಚಿ. ಊರ ಹೊರಗಿನ ರುದ್ರೇಶ್ವರಗುಡಿಯನ್ನು

ಜೀರ್ಣೋದ್ಧಾರಗೊಳಿಸಬೇಕು; ಹುಟ್ಟಿದ ಮಕ್ಕಳನ್ನು ಅವರ ಹನ್ನೆರಡನೆಯ ವರ್ಷಕ್ಕೆ ತನಗೆ ತಂದು 'ನೈವೇದ್ಯ' ಮಾಡಬೇಕು—ಅದು ಶಿವನ ಆಜ್ಞೆ. ಸ್ವಪ್ನದಲ್ಲಿ ಶಿವರಾಯ ನುಡಿದ ನುಡಿಗೆ ತಲೆಬಾಗಿದ್ದಾರೆ ರಾಜದಂಪತಿಗಳು.

ರುದ್ರೇಶ್ವರನ ಗುಡಿಯ ಜೀರ್ಣೋದ್ಧಾರ ಶೀಘ್ರವಾಗಿಯೆ ಮುಗಿಯಿತು. ರಾಣಿ ರುದ್ರಾವತಿ ಹರನ ಕರುಣೆಯಿಂದ ಅವಳಿಜವಳಿಗಳನ್ನು ಪಡೆದಿದ್ದಾಳೆ. ದೊಡ್ಡ ರುದ್ರಮುನಿ, ಚಿಕ್ಕ ರುದ್ರಮುನಿ, ತಂದೆತಾಯಿಯರ ಜೀವದ ಜೀವವಾಗಿ, ಆನಂದದ ಆಗರವಾಗಿ, ನಲ್ಮೆಯ ಕುಡಿಯಾಗಿ ಬೆಳೆದಿದ್ದಾರೆ. ಹನ್ನೆರಡು ವರ್ಷಗಳು ಹನ್ನೆರಡು ದಿನಗಳಾಗಿಯೇ ಹರಿದು ಹೋಗಿವೆ. ಶಿವನ ಅಣತಿಯನ್ನು ರಾಜದಂಪತಿಗಳು ಮರೆತರೇ ! ಮಕ್ಕಳ ಮೋಹದ ಬಲೆಯಲ್ಲಿ ಶಿವನ ನುಡಿಯನ್ನು ಉಪೇಕ್ಷಿಸಿದರೇ !

ಶಿವ ಮುನಿಯಲಿಲ್ಲ; ಭಕ್ತರನ್ನು ದಂಡಿಸುವ ದಿನಕ್ಕಾಗಿ ಕಾದನು.

ರಾಜಕುಮಾರರು ಷೋಡಶ ವರ್ಷಗಳನ್ನು ದಾಟಿದರು. ದೊಡ್ಡರುದ್ರಮುನಿಗೆ ರುದ್ರಾವತಿಯ ಪಟ್ಟಣವೂ ಆಯಿತು. ಸೋದರರಿಬ್ಬರೂ ನಗರವನ್ನು ನೋಡಿಬರಲು ಹೊರಟಿದ್ದಾರೆ.

ಮಂದಿ ಮಾರ್ಬಲದಿಂದ ದಂಡು ದಳವಾಡದಿಂದ
ಹೊರಟನೊ ಬೇಗ ಹೊರಟನೊ ರಾಜ

ಬೀದಿ ಬೀದಿಗಳಲ್ಲಿ ಸಾಗಿಹ ರಾಜಕುಮಾರರ ಅಂಬಾರಿ, ಮಡಿವಾಳಶೆಟ್ಟಿಯೊಬ್ಬನ ಮನೆಯ ಮುಂದಕ್ಕೆ ಬಂದಿದೆ, ಆದರೆ ಮಡಿವಾಳಶೆಟ್ಟಿ ಅವರನ್ನು ನೋಡಲು ನಿರಾಕರಿಸಿದ್ದಾನೆ.

'ಶಿವನಿಗೆ ಕೊಟ್ಟ ಭಾಷೆಗೆ ತಪ್ಪುವವರನ್ನು ನೋಡಬಾರದು'

ಮಡಿವಾಳಶೆಟ್ಟಿಯ ಮಾತು ರಾಜಕುಮಾರರನ್ನೂ ಮುಟ್ಟಿತು. ಅರಮನೆಗೆ ಮರಳಿ, ತಂದೆಯನ್ನು ಪ್ರಶ್ನಿಸಿದರು. ರಾಜ ರುದ್ರಶೇಖರನಿಗೂ ಆ ನುಡಿ ನೆನಪಾಯಿತು; ಆದರೆ ವರ್ಷಗಳೆಷ್ಟು ಜಾರಿವೆ ! ಅದರಿಂದಾವ ಅನರ್ಥವಾದರೂ ಏನು ? ರಾಜ ಉಪೇಕ್ಷೆಯಿಂದಲೇ ಮಾತಾಡಿದ. ರಾಜಕುಮಾರರು ತಂದೆಯ ಮಾತನ್ನು ಒಪ್ಪಲಿಲ್ಲ. ಶಿವನ ಬಯಕೆಯಂತೆ ತಮ್ಮ ಬದುಕನ್ನು ಶಿವನಡಿಗೆ ಅರ್ಪಿಸಲು ನಿರ್ಧರಿಸಿ ಹೊರಟು ನಿಂತರು. ತಮ್ಮನ್ನು ತೊರೆದು

ಹೊರಟ ಮಕ್ಕಳನ್ನು ನೋಡಿ ರಾಜದಂಪತಿಗಳು ಕಣ್ಣೀರು ಕರೆದರು. ವಿಧ ವಿಧವಾಗಿ ಹಂಬಲಿಸಿದರು.

ಹೋರಾಡಿ ಬಳಲುತ ಕಣ್ಣೀರ ಸುರಿಸುತ
ಬಾರಿ ದುಃಖವನಾಗ ಮಾಡುತ ರಾಜ

ದೊಡ್ಡ ರುದ್ರಮುನಿ, ಚಿಕ್ಕರುದ್ರಮುನಿ ತಮ್ಮ ನಿಲುವನ್ನು ಬದಲಿಸ ಲಿಲ್ಲ. ರುದ್ರೇಶ್ವರನನ್ನು ಅರಸುತ್ತ ಅರಣ್ಯಮಾರ್ಗದಲ್ಲಿ ಸಾಗಿದರು.

ರುದ್ರೇಶ್ವರನ ದೇವಾಲಯ ಅರಣ್ಯಗರ್ಭದಲ್ಲಿ ಎಲ್ಲಿಯೋ ಕರಗಿ ಹೋಯಿತು. ಶಿವನೇ ತನ್ನ ದೇಗುಲದ ದಾರಿ ಅವರಿಗೆ ತಿಳಿಯದಂತೆ ಮಾಡಿದ. ಶಿವನನ್ನು ಧ್ಯಾನಮಾಡುತ್ತ ಎಷ್ಟೋ ದೂರ ಕಾಡುದಾರಿಯಲ್ಲಿ ನಡೆದು ಹೋದರು. ದಿಕ್ಕು ತಪ್ಪಿ ಅಲೆದರು. ಸುತ್ತಿ ಸುತ್ತಿ ಬಳಲಿದರು. ಶಿವನನ್ನು ಕಾಣದ ಮೇಲೆ ರುದ್ರಾವತಿಗೆ ಮರಳುವ ಆಸೆಯನ್ನು ತೊರೆದರು.

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ

ಉಗ್ರ ಬಿಸಿಲಿನಲ್ಲಿ, ಭಯಂಕರ ಕಾಡುಹಾದಿಯಲ್ಲಿ ಸೋದರರಿಬ್ಬರೂ ಸಾಗಿದರು. ಅಲ್ಲೊಂದು ಹೊದರಿನಲ್ಲಿ ಏನೋ ಶಬ್ದವಾಗಿ ಇಬ್ಬರೂ ನಿಂತು ಗಮನಿಸಿದರು. ಘೋರ ಸರ್ಪವೊಂದು ಕಪ್ಪೆಯೊಂದನ್ನು ನುಂಗಲು ಪ್ರಯ ತ್ನಿಸುತ್ತಿದೆ. ಪ್ರಾಣಭಯದಿಂದ ಕಪ್ಪೆ ನಲುಗುತ್ತಿದೆ.

ರಾಜಕುಮಾರರು ಮುಂದೆ ಸಾಗಲಿಲ್ಲ. ತಮ್ಮ ಪ್ರಾಣಭಯವನ್ನು ನೀಗಿ. ಹಾವನ್ನು ಚಂದ್ರಾಯುಧದಿಂದ ಹೊಡೆದರು. ಕಪ್ಪೆ ಉಳಿದುಕೊಂಡರೂ ಹಾವು ಮಾಯವಾಯಿತು.

ಮುಂದೆ ದಾರಿ ನಡೆಯಲು ಚಿಕ್ಕ ರುದ್ರಮುನಿ ಸೋತು ನಿಂತನು. ಅಲ್ಲೊಂದು ಗಿಡದ ನೆರಳಲ್ಲಿ ತಮ್ಮನನ್ನು ಕೂರಿಸಿ ದೊಡ್ಡ ರುದ್ರಮುನಿ ನೀರ ನ್ನರಸುತ್ತ ಸಾಗಿದನು.

ಕಪ್ಪೆಯನ್ನುಗುಳಿ ಮಾಯವಾದ ಹಾವು ಅಲ್ಲಿಯೇ ಸುತ್ತಾಡುತ್ತ ಏಕಾಂಗಿಯಾಗಿ ಕುಳಿತ ಚಿಕ್ಕರುದ್ರಮುನಿಯನ್ನು ಕಚ್ಚಿತು. ಕೂಡಲೇ ವಿಷವೇರಿ ರಾಜಕುಮಾರ ನಿಶ್ಚೇಷ್ಟಿತನಾದ. ಹತ್ತಿರದಲ್ಲೊಂದು ಋಷ್ಯಾಶ್ರಮ. ನಾಲ್ಕು

ಮಂದಿ ಯೋಗಿಗಳು ಆ ದಾರಿಯಲ್ಲಿಯೇ ನಡೆದು ಬಂದರು. ಮಡಿದು ಮಲಗಿದ ಚಿಕ್ಕ ರುದ್ರಮುನಿಯನ್ನು ಮುಟ್ಟಿ ಪರಿಕಿಸಿದರು. ವಿಷಜ್ವಾಲೆ ಆರಿರಲಿಲ್ಲ. ಅವನನ್ನು ತಮ್ಮ ಆಶ್ರಮಕ್ಕೆ ಎತ್ತಿ ತಂದರು. ಗರುಡ ಮಂತ್ರವನ್ನು ಜಪಿಸಿ ಗರುಡನನ್ನು ಬರಮಾಡಿಕೊಂಡರು.

ಚಿಕ್ಕರುದ್ರಮುನಿಯನ್ನು ಕಚ್ಚಿದ ಸರ್ಪ ದೂರ ಹೋಗಲಿಲ್ಲ. ಹುತ್ತವೊಂದರಲ್ಲಿ ಅಡಗಿ, ಮುಂದೇನಾಗುವುದೋ ಎಂದು ಗಮನಿಸುತ್ತಿತ್ತು. ಯೋಗಿಗಳ ಬಯಕೆಯಂತೆ, ಗರುಡ ಕಾಡನ್ನೆಲ್ಲಾ ಶೋಧಿಸಿ, ಹಾವನ್ನು ಹಿಡಿದು ತಂದನು. ವಿಷವನ್ನು ಹೀರಿಕೊಳ್ಳುವಂತೆ ಆ ತಪಸ್ವಿಗಳು ಹಾವಿಗೆ ಆಜ್ಞೆ ನೀಡಿದರು. ಕಚ್ಚಿದ ಸ್ಥಳಕ್ಕೆ ಮತ್ತೆ ತನ್ನ ಬಾಯನ್ನು ಚಾಚಿ ವಿಷವನ್ನೆಲ್ಲಾ ಹೀರಿಕೊಂಡಿತು ಆ ಸರ್ಪ. ಆದರೆ ತಾನು ಮಾತ್ರ ಮಡಿದು ಒರಗಿತು.

ಚಿಕ್ಕರುದ್ರಮುನಿ ಯೋಗಿಗಳಿಂದ ಬೀಳ್ಕೊಂಡು ಅಣ್ಣನನ್ನು ಅರಸುತ್ತ ಸಾಗಿದ. ಎಷ್ಟು ದಿನವಾದರೂ ದೊಡ್ಡ ರುದ್ರಮುನಿಯ ಸುಳಿವು ಸಿಗಲಿಲ್ಲ. ಹೀಗೆಯೇ ದಾರಿ ಸಾಗಿರಲು, ಅನತಿದೂರದಲ್ಲೇ ಯಾವುದೋ ಪಟ್ಟಣವೊಂದರ ಗುಡಿಗೋಪುರಗಳು ಕಾಣಿಸಿದವು.

ಮುಂದೆ ಇರುವುದೊಂದು ಅಂದವುಳ್ಳ ಪಟ್ಟಣವು
ಪದ್ಮಾವತಿಯೆಂಬ ಪಟ್ಟಣವಯ್ಯ

ಪದ್ಮಾವತಿ ಪಟ್ಟಣವನ್ನು ಹೊಕ್ಕ ಚಿಕ್ಕರುದ್ರಮುನಿ ಅಲ್ಲೆಲ್ಲಿಯೂ ಅಣ್ಣನನ್ನು ಕಾಣಲಿಲ್ಲ. ಅಲ್ಲೊಂದು ಬೀದಿಯಲ್ಲಿ ವೇಶ್ಯೆಯೊಬ್ಬಳ ಮನೆಯ ಮುಂದಿದ್ದ ದೊಡ್ಡ ಭೇರಿಯನ್ನು ನೋಡಿದ. ಅಣ್ಣನನ್ನು ಕೂಗಿ ಆ ಭೇರಿಯನ್ನು ಹತ್ತು ಬಾರಿ ಬಾರಿಸಿದ. ಕೂಡಲೇ ಆ ಮನೆಯಿಂದ ಆಳುಗಳು ಹೊರಗೆ ಬಂದು ವೇಶ್ಯೆನಾಯಕಸಾನಿಯ ಮುಂದೆ ಅವನನ್ನು ಎಳೆತಂದು ನಿಲ್ಲಿಸಿದರು. ಆ ಭೇರಿಗೆ ಹೊಡೆದ ಒಂದು ಏಟಿಗೆ ಸಾವಿರ ವರಹಗಳನ್ನು ತೆರಬೇಕಾದ ನಿಯಮವನ್ನು ನಾಯಕಸಾನಿ ತಿಳಿಸಿದಳು. ಆದರೆ ತನ್ನ ಬಳಿ ಏನನ್ನೂ ಹೊಂದಿರದ ಚಿಕ್ಕರುದ್ರಮುನಿಯ ಕೊರಳ ಪದಕವನ್ನೇ ಹತ್ತು ಸಾವಿರ ವರಹಗಳಿಗೆ ಅವಳು ಕಸಿದುಕೊಂಡಳು.

ನೀರನ್ನು ಅರಸುತ್ತ ಬಂದ ದೊಡ್ಡ ರುದ್ರಮುನಿ, 'ದೈವಯೋಗದಿಂದ....

ಶಿವನ ಲೀಲಾಮಯ'ದಿಂದ, ಪದ್ಮಾವತಿಯ ರಾಜಕುಮಾರಿ, ಪದ್ಮಗಂಧಿನಿ ಯನ್ನು ವರಿಸಿ, ಅಲ್ಲಿನ ಪ್ರಭುವೂ ಆದನು. ತನ್ನ ಸೋದರನನ್ನು ಹುಡುಕಿಸಿ ಸೋತ ಅವನು ರಾಜ್ಯದ ಕಾರ್ಯಗೌರವದಲ್ಲಿ ಮುಳುಗಿಹೋದ. ಪದ್ಮಾವತಿಗೆ ಬಂದ ಚಿಕ್ಕರುದ್ರಮುನಿ, ತನ್ನ ಪದಕವನ್ನು ಕಳೆದುಕೊಂಡು, ಮತ್ತೆ ಅಣ್ಣ ನನ್ನು ಅರಸುತ್ತ ಮುಂದೆ ಸಾಗಿದ. ಆಣ್ಣನನ್ನು ಕಾಣದೆ, ಕಾತರಿಸುತ್ತಾ ಹೊರಟಿದ್ದಾನೆ.

ಅಣ್ಣ ಅಣ್ಣ ಎಂದು ಅಣ್ಣಯ್ನ ಕರೆಯಲು
ಓ ಎಂಬ ಸೊಲ್ಲುಗಳ ಮಾತೆ ಇಲ್ಲವಲ್ಲ

ಮುಂದೆ ಮುಂದೆ ಸಾಗಿದಂತೆ, ಚಿಕ್ಕರುದ್ರಮುನಿ ಕಮಲಾವತಿ ಪಟ್ಟಣ ವನ್ನು ಸೇರಿದನು. ಅಲ್ಲಿನ ರಾಜಕುಮಾರಿ ಕಮಲಗಂಧಿನಿ ಇವನಲ್ಲಿ ಅನುರಕ್ತ ಳಾಗಿ ಸ್ವಯಂವರದಲ್ಲಿ ಹೂಮಾಲೆಯನ್ನು ಸೂಡಿದಳು. ಚಿಕ್ಕರುದ್ರಮುನಿ, ಕಮಲಾವತಿಯ ಅರಸನಾದ—ರುದ್ರೇಶ್ವರನ ಕರುಣೆಯಿಂದ.

ಹಲವು ವರ್ಷಗಳು ಉರುಳಿದವು. ಚಿಕ್ಕರುದ್ರಮುನಿಗೆ ತನ್ನ ನಾಡ ನೆನಪಾಯಿತು. ತಾಯಿತಂದೆಯರನ್ನು ಕಾಣುವ ಹಂಬಲವೂ ಹೆಚ್ಚಾಯಿತು. ತನ್ನ ಮಗ ಪರಯೋಗಿಯನ್ನು ಕರೆದುಕೊಂಡು ರುದ್ರಾವತಿಯತ್ತ ಸಾಗಿ ಬಂದ.

ಮಾರ್ಗಮಧ್ಯದಲ್ಲಿ ಪದ್ಮಾವತಿ ದೊರೆಯಿತು. ವಿಶ್ರಾಂತಿಗಾಗಿ ಆ ರಾಜ ಧಾನಿಯ ಸಮೀಪದಲ್ಲಿ ಚಿಕ್ಕರುದ್ರಮುನಿ ತಂಗಬೇಕಾಯಿತು. ದೊಡ್ಡ 'ಡೇರೆ' ಯನ್ನು ಹಾಕಿಸಿ, ಮಂದಿ ಮಾರ್ಬಲದೊಡನೆ ಉಳಿದುಕೊಂಡನು.

ತನ್ನ ರಾಜಧಾನಿಯ ಬಳಿ ನಿಂತು ಹೋಗುವ ಪರರಾಜನಿಗೆ 'ಮಾನ ಮನ್ನಣೆ'ಗಳಿಂದ ಸತ್ಕರಿಸಲು ದೊಡ್ಡರುದ್ರಮುನಿ ಪರಿವಾರ ಸಮೇತ, ತನ್ನ ಮಗ ಶಿವಯೋಗಿಯೊಡನೆ ಚಿಕ್ಕರುದ್ರಮುನಿಯ ಬಳಿಗೆ ಬಂದ.

ಹಲವು ದಾರಿಗಳಲ್ಲಿ ಬಳಸಿ ಬಂದ ನದಿಗಳು ಕೂಡಿದುವು. ಪರಸ್ಪರ ಅಪ್ಪಿ ಕಣ್ಣೀರನ್ನು ಕರೆದರು. ಬಹುದಿನಗಳ ಮೇಲೆ ಸೋದರನನ್ನು ಕಂಡ ದೊಡ್ಡರುದ್ರಮುನಿ ತಾನೂ ರುದ್ರಾವತಿಗೆ ಹೊರಟನು. ಜೊತೆಯಲ್ಲಿ ಶಿವ ಯೋಗಿ-ಪರಯೋಗಿಯರನ್ನೂ ಕರೆದೊಯ್ದರು, ವೇಶ್ಯೆಯನ್ನು ಶಿಕ್ಷಿಸಿ ಪದಕ ವನ್ನು ತಮ್ಮನಿಗೆ ಕೊಡಿಸಿದನು, ದೊಡ್ಡ ರುದ್ರಮುನಿ.

ಪಯಣದ ಮೇಲೆ ಪಯಣವಾದ ಮೇಲೆ ರುದ್ರಾವತಿಯನ್ನು ಸಮೀಪಿಸಿ

ಕೊಂಡರು. 'ಮಂತ್ರಿ ಪ್ರಧಾನಿ'ಗಳಿಗೆ ವರ್ತಮಾನ ಹೋಯಿತು. ಅರಮನೆಯನ್ನು ತಲುಪುತ್ತಿದ್ದಂತೆಯೇ, ದೊಡ್ಡರುದ್ರಮುನಿ, ಚಿಕ್ಕರುದ್ರಮುನಿ ತಾಯಿ ತಂದೆಯರನ್ನು ಕಾಣಲು ಹಾತೊರೆದರು. ಆದರೆ ಎದುರಿಗೆ ಮಕ್ಕಳನ್ನು ಬರಮಾಡಿಕೊಳ್ಳಲು ಬಂದ ರುದ್ರಶೇಖರ, ರುದ್ರಾವತಿ ಇಬ್ಬರೂ ಕಲ್ಲಾಗಿ ನಿಂತರು.

ರಾಜಪುತ್ರರಿಗೆ 'ರುದ್ರೇಶ್ವರ'ನ ನೆನಪಾಯಿತು. ಸ್ನಾನ ಸಂಧ್ಯಾವಂದನೆಯನ್ನು ಮುಗಿಸಿದರು. ಶಿವನನ್ನೊಲಿಸುವ ಪರಿಯನ್ನು ಯೋಚಿಸಿ, ತಮ್ಮ ಮಕ್ಕಳನ್ನೇ 'ನೈವೇದ್ಯ' ಮಾಡಲು ತೀರ್ಮಾನಿಸಿದರು. ರುದ್ರೇಶ್ವರನ ಗುಡಿ ತಾನಾಗಿಯೇ ಅವರ ಕಣ್ಣಿಗೆ ಬಿದ್ದಿತು.

ದೊಡ್ಡರುದ್ರಮುನಿ, ಚಿಕ್ಕರುದ್ರಮುನಿ ತಮ್ಮ 'ವಾಗ್ದಾನ ಪರಿಹಾರ ಮಾಡಲು' ಶಿವಾಲಯಕ್ಕೆ ತಮ್ಮ ಮಕ್ಕಳು 'ಶಿವಯೋಗಿ–ಪರಯೋಗಿ'ಯರೊಡನೆ ಹೊರಟುಬಂದರು. ತಮ್ಮ ಒಂದು ಮಗುವನ್ನು ಅಣ್ಣ ಒಂದು ಮಗುವನ್ನು ಕತ್ತಿಗಳಲ್ಲಿ ಕಡಿದರು. ದೊಡ್ಡ ತಪ್ಪಲೆಗಳಲ್ಲಿ ನೈವೇದ್ಯಮಾಡಿ ಶಿವನ ಮುಂದೆ ಇರಿಸಿ, ಭಜಿಸಿದರು.

ಶಿವನ ಶಾಪ ಹರಿಯಿತು. ತ್ರಿಶೂಲಿ ಪ್ರತ್ಯಕ್ಷನಾಗಿಅವರನ್ನು ಹರಸಿದನು. 'ಶಿವಯೋಗಿ–ಪರಯೋಗಿ'ಯರ ಹೆಸರನ್ನು ಹಿಡಿದು ಶಿವನೇ ಕೂಗಿದನು. ಮಕ್ಕಳಿಬ್ಬರೂ ಆ ಪಾತ್ರೆಗಳಿಂದ ಎದ್ದು ನಗುತ್ತ ಹೊರಬಂದರು.

ರುದ್ರಶೇಖರ, ರುದ್ರಾವತಿಯರ ಶಿಲಾರೂಪ ಹೋಯಿತು. ಮಕ್ಕಳೊಡನೆ ಕಲೆತು ಶಿವನನ್ನು ನುತಿಸಿದರು. 'ಸಾರೋದ್ಧಾರವಾಗಿ ಶಿವಪೂಜೆಯನ್ನು ನಡೆಸಿಕೊಂಡು ಹೋಗುವಂತೆ' ಶಿವನ ಆಜ್ಞೆಯಾಯಿತು.

ಭಕ್ತಿಯ ಕೊನೆ ಕುಡಿಯೊಡೆಯಿತು.

ಇಲ್ಲಿಗೆ ಹರಹರ ಇಲ್ಲಿಗೆ ಶಿವಶಿವ
ಇಲ್ಲಿಗೆ ಈ ಕಥೆಯು ಸಂಪೂರ್ಣವಾಯ್ತು

'ಶಿವಾಯನಮಃ ಓಂ ಶಿವಾಯನಮಃ' ಎಂದು ಮತ್ತೆ ಸಾಮೂಹಿಕ ಮೇಳದಲ್ಲಿ ಶಿವಭಜನೆ ಭಕ್ತರ ಅಂತರಂಗವನ್ನು ಆವರಿಸಿದ ಮಂಗಳದೊಡನೆ ಮುಂಜಾವಿನ ಮುಬ್ಬುಗತ್ತಲು ಹರಿದು, ಮೂಡಣದ ಹೊಂಬೆಳಕು ಚಿಮ್ಮಿ ಬಂದಿದೆ!

—೦—

# ಮಕ್ಕಳಾಟಿಕೆ ಮಾದಯ್ಯ

ಶರಣು ಶರಣು ಮಾದೇವನಿಗೆ
ಶರಣಾರ್ತಿ ಮಾದೇವನಿಗೆ
ಬೋಳು ಮಂಡೆ ಜಂಗಮ ದೇವರು
ಕ್ವಾರಣ್ಯಕ್ಕೆ ದಯ ಮಾಡಿಸ್ಯವರೇ ॥ಶ॥
ಮುಂದೆ ಕಾರಯ್ಯನ್ನೋರು
ಹಿಂದೆ ಬಿಲ್ಲಯ್ಯನೋರು
ಎತ್ತಿದೆ ನಿಮ್ಮ ಶಿವ ನುಡಿಯ ॥ಶ॥
ಕ್ವಾರಣ್ಯ ಶಿವನ ಕೋಡುಗಲ್ಲಿನ ಮೇಲ
ಮುಂದಲ ಪೂಜೆ ಮಾಡಿಸಿರಯ್ಯೊ
ನಾಗಭೂಷಣನಿಗೆ ॥ಶ॥

ಕೈಯಲ್ಲಿ ಕಂಸಾಳೆ, ಹೆಗಲಲ್ಲಿ ಹಸುಬೆ, ಕಂಕುಳಲ್ಲಿ ಕೋಲು-ದೇವರ ಗುಡ್ಡರು ಬರುತ್ತಿದ್ದಾರೆ ! ಹಣೆಯ ವಿಭೂತಿ, ಕೊರಳ ರುದ್ರಾಕ್ಷಿ-ಕಂಸಾಳೆ ಯವರು ಬರುತ್ತಿದ್ದಾರೆ ! ಮೂಡುಮಲೆ ಮಾದಯ್ಯನನ್ನು ಕುರಿತು ಹಾಡು ತ್ತಿದ್ದಾರೆ. ಕಂಸಾಳೆಗಳ ಝಣ ಝಣ ನಾದದೊಡನೆ ಮಾದಯ್ಯನ ಮಹಿಮೆಯ ಪ್ರಸಾರಕ್ಕಾಗಿ. ಸತ್ಯ ಧರ್ಮ ಭಕ್ತಿಗಳ ಹಿರಿಮೆಯನ್ನು ಸಾರುವುದಕ್ಕಾಗಿ ನಾಡಿನ ಮೇಲೆ ನಡೆದು ಬಂದಿದ್ದಾರೆ, ಭಿಕ್ಷೆಗೆ ಬಂದವರಲ್ಲ. 'ಕ್ವಾರಣ್ಯ'ವನ್ನು ನೀಡಿ ಧನ್ಯರಾಗಬೇಕಾದವರು ನಾವು ಮಾತ್ರ !

ಭಕ್ತರು ಹಾಡುವ ಕಥೆಗಳಿಗೆ ಕಿವಿಗೊಡಿ, ಅವರು ಮಾಡುವ ಪುಣ್ಯ ಕಥೆಗಳಿಗೆ ಮನ ತೆರೆಯಿರಿ, ಕಂಸಾಳೆಯ ಕಥೆಗಳ ಐಸಿರಿಗೆ ತಲೆದೂಗಿರಿ! ಮಲೆಯ ಮಾದಯ್ಯನ ಪುಣ್ಯಕಥೆಗಳಲ್ಲಿ ಸಂಸ್ನಾತಗೊಂಡ ನಿಮ್ಮ ಚೇತನ ಭಕ್ತಿಪುಳಕ ದಲ್ಲಿ ಮೈಮರೆಯಲಿ, ರಸಾವೇಶ ಹಾಡುವವರನ್ನೂ, ಕೇಳುವವರನ್ನೂ ತಬ್ಬಲಿ.

ದೇವರ ಗುಡ್ಡರು ಕೋಲು ಪೂಜೆ, ಕಥೆಗೆ ಅಣಿಯಾಗಿದ್ದಾರೆ. ಹಿಮ್ಮೇಳ ದವರು ದಮ್ಮಡಿ, ಏಕತಾರಿಗಳೊಡನೆ ಮುಮ್ಮೇಳದ ದನಿಯನ್ನು ಮುಂದೆ ನಡೆಸಿದ್ದಾರೆ, ಕಂಸಾಳೆಯ ಜಣತ್ಕಾರ ತಾನೇ ತಾನಾಗಿ ಕಥೆಯ ಸುರುಳಿಯನ್ನು ಬಿಚ್ಚುತ್ತಿದೆ....

ಇಾಗ್ಗು ನೇಸುರನೆ ಗೌರಿಯ ಮುದ್ದಿನ ಕೊಮಾರನೆ
ಇದ್ಯೆ ಬುದ್ಧಿಯ ಕಲಿಸಿದ ಗುರುವೆ
ಎದ್ದು ಬನ್ನಿ ದೇವ.ಇಾಗ್ಗು ನೇಸುರನೆ
ಸತ್ಯವಂತರ ಹಟ್ಟಲಿ ಎತ್ತಿದೊ ಶಿವನುಡಿಯ
ಗಂಟಲ ಸ್ವರವ ಕೊಡಪ್ಪ ಈರಣ್ಣ ಇಾಗ್ಗು ನೆಸುರನೆ
ಮತಿಕೊಡೊ ಮಾದೇವ-ಇದ್ಯೇಕೊಡೊ ಇಸುಕಂಟ ಲಿಂಗ
ಮುಂದಲ ಪೂಜೆಯ ಮಾಡುವಿ ನಿಮಗೆ-ನಾಗಭೂಷಣನೆ

ಮೂಡುಮಲೆ ಕೈಲಾಸವ ಕಿಡುಗಣ್ಣಯ್ಯ ಮಾದೇಶ್ವರನ ಕಥೆ ಇದು. ಆ ದೇವ ಹುಟ್ಟಿದುದೆಲ್ಲೋ ಉತ್ತರ ದೇಶದಲ್ಲಿ. ಆದರೆ ಬೆಳೆದದ್ದು ಕತ್ತಲ ರಾಜ್ಯ ದಲ್ಲಿ. ನಿಂತದ್ದು ಏಕಾಂಗಿ ಮಲೆಯಲ್ಲಿ. ಆನೆಮಲೆ, ಕಾನಮಲೆ, ಗುತ್ತಿಮಲೆ, ಜೇನುಮಲೆ, ಪಚ್ಚೆನೀಲಿ ಮಲೆ, ತುಳುವ ಮಲೆ, ಪದುವಮಲೆ, ಗೌಳ ಮಲೆ, ಬಿರವ ಮಲೆ, ಗೌಳ ಪೂಜೆ ಮಲೆ, ಮಂಜು ಮಲೆ ಮೊದಲಾದುವನ್ನು ದಾಟಿ ನಡುಮಲೆಯಲ್ಲಿ ನೆಲೆಗೊಂಡು ಅಲ್ಲಿಯೇ ನಿಂತವನಲ್ಲ ! ತನ್ನ ಕೈಲಾಸ ದಿಂದ ಹೊರಟು ಭೂಲೋಕದಲ್ಲಿ ಸಂಚರಿಸಿ ಬಗೆಬಗೆಯ ಮಹಿಮೆಗಳನ್ನು ತೋರಿದ್ದಾನೆ ; ಪವಾಡಗಳನ್ನು ಮೆರೆದಿದ್ದಾನೆ. ದುಷ್ಟರನ್ನೂ ಅಧರ್ಮಿ ಗಳನ್ನೂ ಶಿಕ್ಷಿಸಿ, ಭಕ್ತರನ್ನು, ದಾನಿಗಳನ್ನು, ಧರ್ಮಿಗಳನ್ನು ಉದ್ಧರಿಸಿದ್ದಾನೆ ; ಸಕಲ ಭಾಗ್ಯವನ್ನೂ ನೀಡಿ ಒಕ್ಕಲು ಪಡೆದುಕೊಂಡಿದ್ದಾನೆ....ಆ ಸವಿಗತೆಗಳ ಜಾಡಿನಲ್ಲಿಯೇ ಗುಡ್ಡರು ನಡೆದಿದ್ದಾರೆ.

ಮಲೆಯ ಮಾದೇವ ಬರುವ ಚಂದವ
ನೋಡಿ ನಮ್ಮ ಶಿವನ....

"ಹರ ಹರ ಶಿವಶಿವ ನಮ್ಮಪ್ಪಾಜಿ ಮಾಯಕಾರ ಮಾದೇವ"ನ ಕಥೆಯಲ್ಲಿ ತೊಡಗಿದ್ದಾರೆ....ಉತ್ತರ ದೇಶದಲ್ಲಿ ಮಲ್ಲೇಶ್ವರ,ಮಹೇಶ್ವರ,ಮಾದೇಶ್ವರ ಎಂಬ ಮೂರು ಮಂದಿ ಸೃಷ್ಟಿಯಾದರು. ಮಾದೇಶ್ವರ ಆ ಇಬ್ಬರನ್ನೂ ತೊರೆದು ತೆಂಕನಾಡಿನ ಕಡೆ ಹೊರಟ. ನರಲೋಕದ ಪರಿಯನು ನೋಡಿ ತನ್ನ ತಪಸ್ಸಿಗೆ ಯೋಗ್ಯವಾದ ನೆಲೆಯೊಂದನ್ನು ಶೋಧಿಸುವ ಗುರಿ ಅವನದಾಯಿತು. ಕತ್ತಲ ರಾಜ್ಯದ ಮೇಲೆ ಕಣ್ಣಿಟ್ಟ ಮಾದೇವ ಮಗ್ಗ, ಮರಳಿ, ಹೆಗ್ಗಡದೇವನ ಕೋಟೆಯ

ನಾಡಿನಲ್ಲಿ ಒಬ್ಬನೇ ನಡೆದು ಬಂದಿದ್ದಾನೆ. ಭೀಮನ ಕೊಲ್ಲಿಯನ್ನು ಹಾಯುವಾಗ ಮಾದಯ್ಯ ಒಂದು ಕ್ಷಣ ನಿಂತ ನೆಲೆಯ 'ದೃಢ'ವನ್ನು ನೋಡುವ ಕುತೂಹಲ ಉಂಟಾಯಿತು ಅವನಲ್ಲಿ.

ಭೀಮನಕೊಲ್ಲಿಯ ಹಲಗೆಗೌಡರು ಊರ ಮುಖಂಡರು. ನಾಡಿಗೇ ಹೆಸರಾದ ವ್ಯಕ್ತಿ. ದಾನ ಧರ್ಮಗಳಿಗೆ ಗೌಡರ ಬದುಕು ಮೀಸಲಾಗಿತ್ತು. ಭಕ್ತಿಯಲ್ಲಿ, ಔದಾರ್ಯದಲ್ಲಿ ಪತಿಗೆ ಅನುರೂಪಳಾದ ಸತಿಯಾಗಿ ಲಿಂಗವ್ವ ಎಲ್ಲರ ತಾಯಿ ಎನಿಸಿಕೊಂಡಿದ್ದಳು. ಆ ದಂಪತಿಗಳ ಸತ್ಯವನ್ನು, ಭಕ್ತಿಯನ್ನು ಕಾಣುವ ಕಾತರ ಮಾದೇವನಿಗೆ. ಅವರ ಮನೆಯನ್ನು ಮಾಯದಲ್ಲಿ ಹೊಕ್ಕು ನಡುಮನೆಯ ಗೂಡಿನ ಬಳಿ ನೆಲೆಗೊಂಡ. ಒಂದೆರಡು ದಿನಗಳಲ್ಲಿಯೇ ಆ ಗೂಡಿಗೆ ಅಂಟಿಕೊಂಡಂತೆ ಮನೆಯಲ್ಲಿ ದೊಡ್ಡ ಹುತ್ತ ಬೆಳೆಯಿತು. ಮನೆಯಲ್ಲಿ ಅಪಶಕುನಗಳಾದವು. ಮುಂದೇನು ಅನಿಷ್ಟ ಕಾದಿದಿಯೋ ಎಂದು ಎಲ್ಲರೂ ಹೆದರಿದರು. ಈ ವಿಚಿತ್ರಕ್ಕೆ ಗೌಡರ ಎದೆ ನಡುಗಿ ಹೋಯಿತು.

ಮನೆಯಲ್ಲಿ ಹುತ್ತ ಬೆಳೆದಿದೆ. ಶಕುನಗಳು ಸರಿಯಾಗಿಲ್ಲ. ಶಾಸ್ತ್ರವನ್ನಾದರೂ ಕೇಳಿ ಈ ಒಗಟನ್ನು ಬಿಡಿಸಿಕೊಳ್ಳುವ ಹಂಬಲ ಉಂಟಾಯಿತು ಲಿಂಗವ್ವನಿಗೆ.ಪತಿಯನ್ನು ಒತ್ತಾಯ ಪಡಿಸಿದಳು. ಗೌಡರಿಗೂ ಪರಿಹಾರವನ್ನು ಕಾಣುವ ಕಾತರ–ನಾಡಿನಲ್ಲೆಲ್ಲಾ ಶಾಸ್ತ್ರಕಾರರಿಗೆ ಹುಡುಕಿಸಿದರು! ಲಿಂಗವ್ವ ಮೂರು ದುಡ್ಡು ಮುಂಬೆಟ್ಟಲ್ಲಿ ಕಟ್ಟಿ, ಪೂಜೆಯ ಪದಾರ್ಥಗಳನ್ನು ಬಲಗೈಯಲ್ಲಿ ಹಿಡಿದೂ ಶಾಸ್ತ್ರದವರ ದಾರಿ ಕಾದಳು.

ಯಾರೋ ಶಾಸ್ತ್ರದವರು ಬರುತ್ತಾರೆ. ತಮಗೆ ತೋಚಿದ್ದನ್ನು ಹೇಳಿ ಹೋಗುತ್ತಾರೆ. ತಾನು ಬಂದ ಉದ್ದೇಶ ನೆರವೇರದು. ಗೌಡರ 'ಸತ್ಯ' ಪರಿಚಯವಾಗುವುದಿಲ್ಲ.

ಮಹಾದೇವ ಯೋಚಿಸಿದ. ಕೊನೆಗೆ ತಾನೇ ಶಾಸ್ತ್ರದವನ 'ಯಾಸ' ತಾಳಿ ಕಾಣಿಸಿಕೊಂಡ. ಬೆಳ್ಳಿಯ ಬೆತ್ತದ, ಕವಡೆಯ ಚೀಲದ, ರುದ್ರಾಕ್ಷಿ ಭಸಿತಗಳಿಂದ ಭೂಷಿತನಾದ ಅಪೂರ್ವ ತೇಜಸ್ವಿ ಶಾಸ್ತ್ರಕಾರನನ್ನು ಕಂಡಾಗ ಲಿಂಗವ್ವ ಭಯ ಭಕ್ತಿಯಿಂದ ಆದರಿಸಿದಳು. ಗೌಡರ ಮನೆಯಲ್ಲಿ ಕರಿಯ ಕಂಬಳಿಯ ಗದ್ದುಗೆ ಸಿದ್ಧವಾಯಿತು.

ಶಾಸ್ತ್ರಕಾರ ಕೋಲನ್ನು ಮುಂದೆ ಇರಿಸಿ,ಕವಡೆಯನ್ನು ಚೆಲ್ಲಿದ.ಏನನ್ನೋ ಮನಸ್ಸಿನಲ್ಲಿಯೇ ಗುಣಿಸಿ ನಿಟ್ಟುಸಿರುಬಿಟ್ಟನು.

"ತುಂಬಿದ ಸೋಮವಾರ ಮಾದಪ್ಪ ಬಂದು ನಿಮ್ಮ ನಡುಮನೆ ಗೂಡಿನ ಬಳಿ ನೆಲಸಿದ್ದಾನೆ. ಅವನು ನೆಲೆಗೊಂಡ ಶಕುನದ ಕಾಲ ಇದೆಲ್ಲ. ಅರಮನೆ ಮಠ ಅವರಿಗೇ ಬಿಡಬೇಕು. ಈ ಮನೆಯ ಪಡುವಲಲ್ಲಿ ಜೋಪಡಿ ಹಾಕಿಕೊಂಡು ಅವನನ್ನು ಸೇವಿಸಬೇಕು. ಮನೆಯ ಕುರಿ ದನಗಳನ್ನೆಲ್ಲಾ ಅಲ್ಲಿಯೇ ಕಟ್ಟಬೇಕು....ನಿಮಗೆ ಬೇಕಾದಷ್ಟು ಭಾಗ್ಯ ಬರುತ್ತದೆ".

ಶಾಸ್ತ್ರದಲ್ಲಿ ಹುಟ್ಟಿದ ವಿಚಾರ ಹಲಗೇಗೌಡರಿಗೆ ಆಶ್ಚರ್ಯವೆನಿಸಿತು. ಲಿಂಗವ್ವ ಬೆರಗಾದಳು. ತುಸು ಕೋಪವೂ ಆವಳಲ್ಲಿ ಕಾಣಿಸಿಕೊಂಡಿತು. ಹಿರಿಯರು ಕಟ್ಟಿದ ಮನೆ. ಅದನ್ನು ಬಿಟ್ಟು ಜೋಪಡಿಯಲ್ಲಿ ವಾಸಿಸಬೇಕಾದ ಅಗತ್ಯ ವೇನು !

"ಅತ್ತೆ ಮಾವ ಸಂಪಾದಿಸಿದ ಹಟ್ಟಿಗೆ ಯಾವ ಜಂಗಮ ಬಂದು ನೆಲಸಿದ ! ಬಿಡಲು ಸಾಧ್ಯವಿಲ್ಲ...."

ಲಿಂಗವ್ವ ತನ್ನ ನಿರ್ಧಾರವನ್ನು ತಿಳಿಸಿಯೇಬಿಟ್ಟಳು. ಗೌಡರೂ ತಲೆಯಾಡಿಸಿದರು.

ಶಾಸ್ತ್ರಕಾರ ಕವಡೆಯ ಚೀಲವನ್ನು ಒದರಿಕೊಂಡು ಮೇಲೆದ್ದ–ತನ್ನ ಕೆಲಸ ಮುಗಿಯಿತು ಎಂಬಂತೆ, 'ಅರೆಗಣ್ಣಲ್ಲಿ ಕಿರುಗಣ್ಣನ್ನು ತೆರೆದು ನೋಡಿದ' ಎಲ್ಲಿಯೋ ಕಾಣೆಯಾದ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಕಾಡು ಗರ್ಜಿಸಿತು. ಊರು ತಲ್ಲಣಿಸಿತು. ಮಂದಿ ತತ್ತರಿಸುತ್ತ ಗೌಡರ ಬಳಿಗೆ ಓಡೋಡಿ ಬಂದರು! ದಿಕ್ಕುದಿಕ್ಕಿನಿಂದ ಕಾಡಿನ ಒಡಲನ್ನು ಸೀಳಿಕೊಂಡು, ಬಿಸಲಿಗೆ ಮಿರುಗುವ ಮೈಯನ್ನು ಮುರಿಯುತ್ತ ಗಂಭೀರ ಗತಿಯಲ್ಲಿ ಭಯಂಕರ ಹುಲಿಗಳು ಬರುತ್ತಿವೆ ! ಜನ ದಿಕ್ಕುದಿಕ್ಕಿಗೆ ಚದುರಿದರು. ಗೌಡರು ಲಿಂಗವ್ವ ಕಂಗೆಟ್ಟರು. ಹೆದರಿ, ಹೌಹಾರಿ ಮನೆಯನ್ನು ಹೊಕ್ಕರು !

ಹುಲಿಗಳು ಗೌಡರ ಮನೆಯನ್ನು ಹೊಗಲಿಲ್ಲ. ಸುತ್ತಲೂ ಕಾವಲು ಕುಳಿತವು. ಹಲಗೇಗೌಡರ ಮನೆಯ ಸುತ್ತಲೂ ಕವಿದ ಹುಲಿಗಳನ್ನು ಜನ ದೂರದಿಂದಲೇ ನೋಡಿ ಬೆದರಿದರು. ಹತ್ತಿರ ಬರಲು, ಬಂದ ಹುಲಿ ಒಂದಲ್ಲ–ಹತ್ತಾರು !

ಗೌಡರು,ಲಿಂಗವ್ವ ಮಾದೇವನ ಮಹಿಮೆಗೆ ಸೋತರು.ಗಳಗಳನೆ ಕಣ್ಣೀರನ್ನು ಹರಿಸುತ್ತ, ಕೈ ಮುಗಿದು ಹರಕೆ ಹೊತ್ತರು. ಅವನ ಇಚ್ಛೆಯಂತೆ ನಡೆ

ಯಲು ನಿರ್ಧರಿಸಿದರು. ತಾವೂ ತಮ್ಮ ಮಕ್ಕಳೂ ಮಾದೇವನಿಗೆ ಒಕ್ಕಲಾದರು. ಹುಲಿಗಳು ತಾವಾಗಿಯೇ ಕಾಡಿನ ಹಾದಿ ಹಿಡಿದವು.

ಗೌಡರು ಮನೆಯನ್ನು ಬಿಟ್ಟರು. ಮಾದೇವನ ಸೇವೆಗೆ ಕಂಕಣಬದ್ಧರಾದರು. "ಮಾದಯ್ಯನಿಗೆ ಹರಕೆ ಹೊತ್ತರೆ ಹುಲಿ ಕಿರಬ ತಿನ್ನೋಲ್ಲ....ಸ್ವಾಮಿಗೆ ಒಕ್ಕಲಾಗಬೇಕು" ಎಂದು ಸುತ್ತಣ ಗ್ರಾಮಗಳಿಗೆಲ್ಲಾ ಪ್ರಚಾರ ಮಾಡಿದರು. ತೇರು, ತೆಪ್ಪಗಳು ಸಿದ್ಧವಾದವು. ವರ್ಷವರ್ಷವೂ ಜಾತ್ರೆ ನಡೆಯುವ ವ್ಯವಸ್ಥೆಯೂ ಆಯಿತು. ಹನ್ನೆರಡು ವರ್ಷ ಮಾದೇವ ಅಲ್ಲಿ ನಿಂತು ಮತ್ತೆ ಮುಂದೆ ಹೊರಟ.

ಮಾದಯ್ಯ ಎಲ್ಲಿಯೂ ನಿಲುವಂತಿಲ್ಲ. ತನ್ನ ನೆಲೆಯನ್ನು ಅರಸುತ್ತ ಈಗ ಪೂರ್ವಾಭಿಮುಖವಾಗಿ ತಿರುಗಿದನು. ನಡೆದುನಡೆದು ಪಾಪಗಳೆಲ್ಲವೂ ನೊಂದವು. ಜೋಡಿಕಟ್ಟೆಗೆ ಬರುವುದರಲ್ಲಿ ಬೆಳ್ಳಿ ಮೂಡಿತು; ಬೆಳಗಿನ ಕೋಳಿ ಕೂಗಿತು. ಮೂಡು ಕೆಂಪೇರಿ, ಮಾದಯ್ಯನನ್ನು ಆಕರ್ಷಿಸಿತು. ಆ ನೆಲೆಯಲ್ಲಿ ಕೆಲವು ದಿನ ಮಾದಯ್ಯ ನಿಂತು, ವರ್ಷಕ್ಕೊಂದು ಜಾತ್ರೆ ನಡೆಯುವಂತೆ ಮಾಡಿ ಮತ್ತೆ ಪಯಣ ಬೆಳಸಿದರು.

ನಾಡಿನಿಂದ ನಾಡಿಗೆ ಸಂಚರಿಸುತ್ತ ಮಾದಯ್ಯ ಮಾಯಕಾತಿ ಚಾಮುಂಡಿಯ ನೆಲೆ ಮೈಸೂರನ್ನೂ ಕಂಡನು. ಆದರೆ ತಾನು ಅಲ್ಲಿರುವುದು ಉಚಿತವಲ್ಲ ಎನಿಸಿ ಮತ್ತೆ ಮುಂದುವರಿದನು.

ಕಾಲಲ್ಲಿ ಜಂಗು, ಹೆಗಲಲ್ಲಿ ಮುತ್ತಿನ ಜೋಳಿಗೆ, ಕೈಯಲ್ಲಿ ಬೆಳ್ಳಿಯ ಬೆತ್ತ, ಕೊರಳಲ್ಲಿ ರುದ್ರಾಕ್ಷಿಯಿಂದ ಒಪ್ಪುವ ಬೋಳುದಲೆಯ ಮಾದಯ್ಯ ಮೂಡಣಕ್ಕೆ ನಡೆದನು. ಮಾಲಂಗಿಯನ್ನು ದಾಟಿ, ಕಲ್ಲೂರು ತೋಪಿನಲ್ಲಿ ವಿಶ್ರಮಿಸಿಕೊಳ್ಳಲು ನಿಂತನು.

ಕಲ್ಲೂರು ತೋಪಿನಲ್ಲಿ ದನ ಕುರಿಯ ಹುಡುಗರು ಲಗ್ಗೆ ಚೆಂಡನ್ನು ಆಡುತ್ತಿದ್ದಾರೆ. ಮಾಲಂಗಿ ಮುಳ್ಳೂರು ಹಾಗೂ ಕಲ್ಲೂರು ಮೂರು ಗ್ರಾಮಗಳ ಹುಡುಗರೂ ಕಲೆತು ಆ ತೋಪಿನ ಪ್ರಶಾಂತ ನೆಳಲಿನಲ್ಲಿ ಉಲ್ಲಾಸದಿಂದ ಆಡಿದ್ದಾರೆ. ಮಾದಯ್ಯ ತಾನೂ ನೋಡಿದ್ದ. ತಾನೂ ಅವರೊಡನೆ ಕಲೆತು ಆಡುವ ಆಸೆ ಚಿಮ್ಮಿತು ಅವನ ಅಂತರಂಗದಲ್ಲಿ. 'ತುಂಡಂಗಿ, ತುಂಡು ಚಡ್ಡಿ, ಕುಲಾವಿಗಳನ್ನು' ಧರಿಸಿದ. ಅಲ್ಲದೆ ಕಾವಿಕಮಂಡಲ ರುದ್ರಾಕ್ಷಿ ಭದ್ರಾಕ್ಷಿಗಳೊಡನೆ ಈ

ಎಳೆಯ ಜಂಗಮ ಅತ್ತ ಬಂದ. ಆಟದಲ್ಲಿ ಮೈಮರತ ಹುಡುಗರಾರಿಗೂ ಇವನತ್ತ ದೃಷ್ಟಿ ಹರಿಯಲಿಲ್ಲ.

"ನಿಮ್ಮ ಜೊತೆ ಚೆಂಡಾಡಬೇಕು....ಕರೆದುಕೊಳ್ಳಿ"

ಮಾದಯ್ಯನೇ ಕೇಳಿದ, ಅವರ ಗಮನವನ್ನು ಸೆಳೆದು. ಅಪರಿಚಿತ ಬಾಲಕನ ವೇಷ ಭೂಷಣಗಳನ್ನು ನೋಡಿದರೆ ಜಂಗಮನಂತೆ ಕಂಡಿದ್ದಾನೆ. ಕಾವಿ ಕಮಂಡಲದ ಇವನಿಗೆ ಏಕೆ ಆಟ! ಮುಳ್ಳೂರು ಪಟೇಲರ ಮಗನಿಗೆ ಸಿಟ್ಟುಬಂತು.

"ಭಿಕ್ಷೆ ಮಾಡುವುದನ್ನು ಬಿಟ್ಟು ಚೆಂಡಾಟಕ್ಕೆ ಬಂದೆಯ ?" ಹಂಗಿಸಿ ನುಡಿದರು ಮಾದಯ್ಯನನ್ನು.

"ಎರಡು ಕಡೆಯೂ ಸಮನಾಗಿದ್ದೇವೆ. ನಿನ್ನ ಜೊತೆಗೆ ಇನ್ನೊಬ್ಬನನ್ನು ಕರೆದುಕೊಂಡು ಬಾ"

ಎಂದ ಮತ್ತೆ ಪಟೇಲರ ಮಗ ಔದಾರ್ಯವನ್ನು ತೋರಿದಂತೆ.

"ಅಪ್ಪಾ ಇರುವವನು ನಾನೊಬ್ಬನೇ....ಒಂದು ಕಡೆ ಇದ್ದರೆ ಒಂದಾಟ ಹೆಚ್ಚಾಗಿ ಆಡಿಸಿ...."

ವಿನಯದಿಂದ ಕೇಳಿದನು ಬಾಲ ಜಂಗಮ. ಪಟೇಲರ ಮಗನಿಗೆ ಸಿಟ್ಟು ತಡೆಯದಾಯಿತು.

"ತಾಯಿ ತಂದೆ ಇಲ್ಲದ ನಿನ್ನ ಜೊತೆಯಲ್ಲೇನು ಹೋಗುತ್ತ" ಎಂದು ಕೈ ಹಿಡಿದು ಮಾದೇವನನ್ನು ಅತ್ತ ದೂಡಿದನು. ಮಾದೇವ ಯಾವ ಪ್ರತಿಭಟನೆಯನ್ನೂ ತೋರಲಿಲ್ಲ. ಮೌನವಾಗಿ ಹಿಪ್ಪೆಯ ಮರವೊಂದನ್ನು ಒರಗಿ ನಿಂತ. ಆದರೆ ಅಷ್ಟು ಮಂದಿಯಲ್ಲಿ ಯಾರು ಭಕ್ತರು ಎಂದು ಹುಡುಕಿದ.

ಮುಳ್ಳೂರಿನಲ್ಲೊಬ್ಬಳು ಕಡುಬಡವೆ. ಅವಳ ಮಗನೂ ಆ ಗುಂಪಿನಲ್ಲಿದ್ದನು. ಮಾದೇವನನ್ನು ನೋಡಿ ಅವನು ಮರುಗಿದ, "ಅವರು ಜಂಗಮರು, ಹಾಗೆ ಮಾಡಿದ್ದು ತಪ್ಪು"–ಎಂದು ಖಂಡಿಸಿದ. ಪಟೇಲರ ಮಗನ ಕೋಪಕ್ಕೆ ಅವನೂ ತುತ್ತಾದ.

"ತಿರುಪೆಯವಳ ಮಗ" ಎಂದು ಅವನನ್ನೂ ತಿರಸ್ಕರಿದ. ಬಡವಿಯ ಮಗ ಮಾದಯ್ಯನ ಬಳಿಗೆ ಬಂದ. ಕನಿಕರದಿಂದ ವಿಚಾರಿಸಿದ.

"ನೀವು ಯಾರು ? ಹೆಸರೇನು ? ಕುಲವೇನು? ಏನು ಕಾರಣದಿಂದ ಇತ್ತ ಬಂದಿರಿ ?"

ಮಾದಯ್ಯ ಪ್ರೀತಿಯಿಂದ ಅವನ ಮುಖ ನೋಡಿದ.

"ಲಿಂಗ ಧರಿಸೋರು ನಾವು. ಜಂಗಮರು ನಾವು. ಮಕ್ಕಳಾಟಿಕೆಯ ಮಾದಪ್ಪ ನನ್ನ ಹೆಸರು"

ಬಡವೆಯ ಮಗನನ್ನು ಮಾದೇವ ತನ್ನ ಪಕ್ಷಕ್ಕೆ ಸೇರಿಸಿಕೊಂಡ. ಕೊನೆಗೆ ಅವರಿಬ್ಬರೇ ಒಂದು ಕಡೆ ನಿಂತು ಆಡುವುದೆಂದು ತೀರ್ಮಾನವಾಯಿತು.

"ಅವರು ನಾಲ್ಕು ಮಂದಿ....ನಾವಿಬ್ಬರೇ....ಗೆಲ್ಲಲು ಸಾಧ್ಯವೆ ?"

ಬಡವೆಯ ಮಗ ಶಂಕಿಸಿದ. ಮಾದೇವ ಧೈರ್ಯ ನೀಡಿದ.

"ನಾವು ಮೊದಲು ಚೆಂಡು ಹೊಡೆಯುತ್ತೇವೆ..ನೀ ಲಗ್ಗೆ ಪೂಜಿಕೊಂಡಿರಿ"

—ಎಂದು ಪಟೇಲರ ಮಗ ನುಡಿದ. "ಸೋತರೆ ಹೊಡೆದು ಹೊಳೆಗೆ ಹಾಕಿದರಾಯಿತು"

ಹುಡುಗರು ಮಾತಾಡಿಕೊಂಡರು.

ಮಾದೇವ ಲಗ್ಗೆಯ ಹಿಂದೆ ನಿಂತ. ಆಟ ಆರಂಭವಾಯಿತು. ಒಂದು ಚೆಂಡನ್ನೂ ಬಿಡಲಿಲ್ಲ. ಎಡಗೈ ಬಲಗೈಯಲ್ಲಿ ಹಿಡಿದು ಆಟವನ್ನು ಮುಗಿಸಿದ. ಹುಡುಗರು ಕ್ಷಣಕಾಲ ಬೆರಗಾದರು.

"ಇದೇನು ಮಾಯವೋ ಮಂತ್ರವೊ.... !" ತಮ್ಮ ತಮ್ಮಲ್ಲಿಯೇ ಮಾತಾಡಿಕೊಂಡರು.

ಇನ್ನು ಮಾದಯ್ಯನ ಗುಂಪಿನ ಸರದಿ. ಮೊದಲು ಬಡವೆಯ ಮಗನಿಗೆ ಚೆಂಡನ್ನು ನೀಡಿ ಕೆಳಗೆ ಬೇಳುವಂತೆ ಮಾದಯ್ಯ ಸೂಚನೆ ಕೊಟ್ಟ. ಆ ಗುಂಪಿನ ಹದಿನಾಲ್ಕು ಮಂದಿಯೂ ಸ್ವಲ್ಪವೂ ಸ್ಥಳ ಬಿಡದಂತೆ ದಟ್ಟೈಸಿ ಲಗ್ಗೆಯ ಎರಡು ಕಡೆಯೂ ನಿಂತರು ಬಡವಿಯ ಮಗನ ಆಟ ಮುಗಿಯಿತು. 'ಜಂಗಮ' ಚೆಂಡನ್ನು ಕೈಗೆತ್ತಿ ಗುರಿ ಹಿಡಿದ. "ಸೋತರೆ ನಮ್ಮ ಪ್ರಾಣ ಉಳಿಯುವುದಿಲ್ಲ!" ಮುದುಕಿಯ ಮಗ ಆತಂಕ ಪಟ್ಟ. ಮಾದಯ್ಯ ನಸುನಕ್ಕು ಚೆಂಡನ್ನು ಬೀಸಿ ಎಸೆದ.

"ಓಹ್ !"

ಹುಡುಗರು ಬೆಚ್ಚಿ ಬಿದ್ದರು. ಚೆಂಡು ಮೇಲೆ ಹೋಗದೆ ಲಗ್ಗೆಯತ್ತ ಬಾಣದಂತೆ ನುಗ್ಗಿದೆ. ಲಗ್ಗೆ ಪುಡಿಪುಡಿಯಾಗಿ ದಿಕ್ಕು ದಿಕ್ಕಿಗೆ ಚೆಲ್ಲಿಕೊಂಡಿದೆ.

ಜಂಗಮಯ್ಯ ಗೆದ್ದನು ! ಗೆದ್ದನು !!

ಹುಡುಗರು ಸಿಕ್ಕ ಸಿಕ್ಕ ಕಡೆ ಚದುರಿಹೋದರು. ಚೆಂಡನ್ನು ಅವಸಿಕೊಂಡು ಮಾದಯ್ಯ, ಬಡವಿ ಮಗನೊಡನೆ ಅಟ್ಟಿಸಿಕೊಂಡು ಹೋದ. ಚೆಂಡನ್ನು ಯಾರತ್ತಲೂ ಅವನು ಎಸೆಯಲಿಲ್ಲ. ಹುಡುಗರಿಗೆ ನೋವಾಗಿದಿರಲೆಂದು ಅವನ ಅಂತಃಕರಣ ಕರಗಿತು. ಆದರೆ ಒಬ್ಬನ ತಲೆಗೆ ಮಾತ್ರ ತಾಕಿಕೊಂಡು ಹೋಗುವಂತೆ ರೊಯ್ಯನೆ ಎಸೆದ.

"ನನಗೆ ಬೀಳಲಿಲ್ಲ....ನನಗೆ ಬೀಳಲಿಲ್ಲ ! !" ಎಂದು ಹುಡುಗರು ಕೂಗಿಕೊಳ್ಳುವಾಗ ಒಬ್ಬ ಹುಡುಗ ಮಾತ್ರ ಪೆಚ್ಚಾಗಿ ನಿಂತ. ಆದರೆ ಆಟ ತಿರಿಸಲು ಚೆಂಡೇ ಇಲ್ಲ ! ಮಾದಯ್ಯ ಬೀಸಿದ ರಭಸಕ್ಕೆ ಮಾಲಂಗಿ ಮಡುವನ್ನು ದಾಟಿ ಆಚೆಯ ದಡಕ್ಕೆ ಜಿಗಿಯಿತು. ಮರಳರಾಶಿಯಲ್ಲಿ ಲಿಂಗವಾಗಿ ನಿಂತಿತು !

ಆಚೆಯ ದಡಕ್ಕೆ ಹೋಗಿ ತರಲು ಯಾರಿಗೆ ಧೈರ್ಯ ! "ಮಾದಯ್ಯನೇ ಹೋಗಿ ತರಲಿ" ಎಂದರು ಅವರು. ಆದರೆ ತಾನು ಕಳ್ಳನಾಗುತ್ತಾನೆ ಚೆಂಡನ್ನು ತಂದರೆ, ಮಾದಯ್ಯ! ಒಂದು ಬೆತ್ತವನ್ನು ಸೀಳಿ ತೆಪ್ಪ ಮಾಡಿದನು. ಹುಡುಗರನ್ನೆಲ್ಲ ಅದರ ಮೇಲೆ ಕೂರಿಸಿಕೊಂಡು ಆಕಡೆಯ ಅಂಚನ್ನು ತಲುಪಿದನು. ಮರಳ ರಾಶಿಯ ಮೇಲೆ ನಿಂತ ಮಾದಯ್ಯ ಕೂಗಿದನು.

"ಲಿಂಗ ಬಾ....ಲಿಂಗ ಬಾ....ಲಿಂಗ ಬಾ.. ."

ಮಾದಯ್ಯನ ಮೂರು ಕೂಗು ಮರಳ ಮಡಿಲ ಲಿಂಗಕ್ಕೆ ಮುಟ್ಟಿರಬೇಕು ನಗುನಗುತ್ತ ಗುಡಗುಡನೆ ಓಡಿಬಂದು ಅವನ ಪಾದದ ಬಳಿ ನಿಂತಿತು.

ಅವರು 'ಗುಡುಗ'ಬೇಕು. ಚೆಂಡು ಬಂದ ಸ್ಥಳದಿಂದ ನದಿಯ ಅಂಚಿನವರೆಗೆ ಗುಡುಗಿದರು, ಒಬ್ಬೊಬ್ಬರಾಗಿ. ಕೊನೆಗೆ ತೆಪ್ಪದ ಮೇಲೂ ಗುಡುಗಲೇಬೇಕಾಯಿತು. ತೆಪ್ಪವೇನೋ ಈಚೆಯ ದಡವನ್ನು ಸೇರಿತು. ತೆಪ್ಪ ಇಳಿದು ಕೆಳಗೆ ಬರುವಾಗ 'ಎಲ್ಲರಿಗೂ ಹೊಟ್ಟೆ ಊದಿ, ಹೊಟ್ಟೆ ನೋವು ಕಂಡು.... ಹೆಜ್ಜೆಹೆಜ್ಜೆಗೆ ಒಬ್ಬೊಬ್ಬರಾಗಿ ಮಲಗಿದರೊ ಮಹಾದೇವ !' ಸಂಜಯಾಗುತ್ತಿದೆ. ದನ, ಎಮ್ಮೆ, ಕುರಿ ಎಲ್ಲ ಕಂಡವರ ಹೊಲಕ್ಕೆ ಹೋಗಿವೆ.

"ಇನ್ನೇನು ಗತಿ ? ಯಾವ ದೇವರೂ ನಮ್ಮನ್ನು ಕಾಪಾಡುವುದಿಲ್ಲವೇ!"

ಎಂದು ಕಣ್ಣಲ್ಲಿ ನೀರು ತುಂಬಿಕೊಂಡು ದೇವರನ್ನು ನೆನೆದಾಗ, ಬಡವೆಯ ಮಗನ ಮೇಲೆ ದೇವರು ಮೈದುಂಬಿದನು.ಹುಡುಗರ ತಪ್ಪನ್ನು ಎತ್ತಿ ಆಡಿದನು.

"ಎಲ್ಲೆ ಮಕ್ಕಳೇ,ಕಲ್ಲೂರು ತೋಪಿನಲ್ಲಿ ಮಕ್ಕಳಾಟಿಕೆ ಮಾದೇವ ಎಂದು

ತಿಳಿಯದೆ, ತಂದೆಯಿಲ್ಲದವ, ತಾಯಿ ಇಲ್ಲದವ ಎಂದು ಬೈದುದಕ್ಕೆ ಹೀಗಾಗಿದೆ."

ಮಕ್ಕಳು ತಪ್ಪನ್ನು ತಿದ್ದಿಕೊಂಡರು. ಜಂಗಮ ದೇವರನ್ನು ಬೈದುದಕ್ಕೆ ಹರಕೆಯನ್ನು ಹೊತ್ತರು, ಮಾಲಂಗಿ, ಮುಳ್ಳೂರು, ಕಲ್ಲೂರ ಮಕ್ಕಳು ಪ್ರತಿ ವರ್ಷ ಶಿವರಾತ್ರಿಯಲ್ಲಿ ಮಕ್ಕಳಾಟಿಕೆಯ ಮಾದಯ್ಯನ ಹಬ್ಬವನ್ನು ಮಾಡುವಂತೆ ಪಾದ ಹಿಡಿದು ಕೇಳಿಕೊಂಡುರು.ಮಾದಯ್ಯನ ಕರುಣೆಯ ದೃಷ್ಟಿ ಅವರ ಮೇಲೆ ಹರಿಯಿತು. "ಶಿವಶಿವ ಅವರ ಕಷ್ಟವೆಲ್ಲ ಪರಿಹಾರವಾಗಿದೆ. ಮಕ್ಕಳೆಲ್ಲ ಕೈಯೆತ್ತಿ ಮುಗಿದಿದ್ದಾರೆ. ಮೂರು ಗ್ರಾಮವೂ ಒಕ್ಕಲಾಗಿ, ವರ್ಷಕ್ಕೊಂದು ಜಾತ್ರೆ ನಡೆಸಿಕೊಂಡು....ನಮ್ಮಪ್ಪಾಜಿ ಮುಂದಕ್ಕೆ ಪಯಣ ಮಾಡಿದ್ದಾರೆ. ಮಹಾದೇವಾ"

ಮಲೆಯ ಮಾದೇವ ಬರುವ ಚಂದವಾ....

ಹಿಮ್ಮೇಳದವರು ಹಾಡಿದ್ದಾರೆ ; ಮುಮ್ಮೇಳದವನು ಮತ್ತೊಂದು ಕಡ್ಡಿಯನ್ನು ಬೆಳಗಿ ಮುಂದಿನ ಕಥೆಗೆ ಕಂಸಾಳೆಯನ್ನು ಎತ್ತಿಕೊಂಡಿದ್ದಾನೆ....

—o—

# ಮರಿದೇವರು ಮಾದಪ್ಪ

ಕೂಗೋ ಕೂಗೋ ಮಾದೇವನ
ಕೂಗಯ್ಯ ಮರಿಮಾದೇವನ
ಕೂಗಿದರೆ ಕುಣಿಯುತ್ತ ಬರುವನೊ ಮಾದೇವ
ಕೂಗಯ್ಯ ಮುದ್ದು ಮಾದೇವನ

"ತಾಯಿಲ್ಲದೋನು ! ತಂದಿಲ್ಲದೋನು !"

ಕಲ್ಲೂರು ತೋಪನ್ನು ಮಾದಯ್ಯ ತೊರೆಯುವುದರಲ್ಲಿ ಅವನ ಅಂತರಂಗವನ್ನು ಆ ಸಮಸ್ಯೆ ಕಾಡತೊಡಗಿತು. ಹುಡುಗರಾಡಿದ ಮಾತಾದರೂ ಅದಕ್ಕೊಂದು ಪರಿಹಾರವನ್ನು ಹುಡುಕಲೇಬೇಕೆಂದು ಯೋಚಿಸಿದ. ಯೋಗ್ಯರಾದ ತಾಯಿ-ತಂದೆಯರನ್ನು ಪಡೆದುಬರುವ ದೃಢನಿರ್ಧಾರದಲ್ಲಿ ತನ್ನ ಪಯಣದ ದಿಕ್ಕನ್ನು ಬದಲಿಸಿದ.

ಕಲ್ಯಾಣದ ಕೀರ್ತಿ ನಾಡಿನಲ್ಲೆಲ್ಲಾ ಹಬ್ಬಿತ್ತು. ದೊಡ್ಡ ಬಸವಣ್ಣನವರು, ಅವರ ಮಡದಿ ನೀಲಮ್ಮ ದಾನದಲ್ಲಿ, ಧರ್ಮದಲ್ಲಿ, ಭಕ್ತಿಯಲ್ಲಿ, ಜಂಗಮ ಸೇವೆಯ ಅದ್ವಿತೀಯರೆನಿಸಿದ್ದರು. ಮಾದಯ್ಯನ ಅಂತರಂಗ ಅತ್ತ ಆಕರ್ಷಿತವಾಯಿತು. ಬಡಗಣ ದಿಕ್ಕಿನಲ್ಲಿ ಯಾತ್ರೆಯನ್ನು ಕೈಗೊಂಡ.

ಕಲ್ಯಾಣ ಪಟ್ಟಣದ ಸಮೀಪದಲ್ಲೊಂದು 'ಕಾಡು ಬೆಟ್ಟ'. ಗಿಡಮರಗಳಿಂದ ಕವಿದು ಸೊಂಪಾಗಿದ್ದ ಆ ನೆಲೆಯಲ್ಲಿ ಮಾದಯ್ಯ ವಿಶ್ರಮಿಸಿಕೊಳ್ಳಲೆಂದು ನಿಂತ. ಆ ಗಿರಿಯ ಗವಿಯಲ್ಲಿ ತಪೋನಿಷ್ಠರಾಗಿದ್ದ ಚಂದ್ರಶೇಖರಮೂರ್ತಿ, ಉತ್ತರಾಜಮ್ಮನನ್ನು ಕಂಡು ಅವ್ಯಕ್ತವಾದ ಪ್ರೀತಿ ಮನಸ್ಸನ್ನುಕವಿದಂತಾಯಿತು. ಅವರ 'ನಿಷ್ಠೆ'ಯ ಮರ್ಮವನ್ನರಿಯಬೇಕೆಂದು ಇಚ್ಛಿಸಿದ. ಸನಿಹದ ಮಾವಿನ ಮರವೊಂದರಲ್ಲಿ ಬಿಳಿಯ ಹಲ್ಲಿಯಾಗಿ ನಿಂತ.

ಉತ್ತರಾಜಮ್ಮ ಮಹಿಮೆಗೆ ಮಾದಯ್ಯ ತಲೆದೂಗಿದ. 'ಆಡಿದ್ದೇ ಮಾತು : ಕೊಟ್ಟಿದ್ದೇ ಭಾಷೆ ; ತಪ್ಪಿ ನಡೆದವಳಲ್ಲ ; ಮರೆತೂ ಪತಿಯ ಹಾಸಿಗೆ ತುಳಿದವಳಲ್ಲ : ಅವಳ ಪೂಜಾನಿಷ್ಠೆ ಇನ್ನು ಬೆರಗು ತರುವಂತಿತ್ತು.

ಬೆಳಗಿನ ಪೂಜೆಗೆ ಉತ್ತರಾಜಮ್ಮ ಹೊರಟಿದ್ದಾಳೆ. ಹಾವನ್ನೇ ಸಿಂಬಿಮಾಗಿ

ದ್ದಾಳೆ. ಮರಳನ್ನೇ ಅರಿವೆಮಾಡಿಕೊಂಡಿದ್ದಾಳೆ. ಮೂವತ್ತು ಮೂರು ಕೋಟಿ ಲಿಂಗಗಳ ಪೂಜೆಗೆ ಹೂ ತರಲು ಬಳಿಯ ತಾವರೆ ಕೊಳಕ್ಕೆ ಹೊರಟಿದ್ದಾಳೆ. ಅವಳ ಪೂಜೆಯ ವೇಳೆಗೆ ಲೆಕ್ಕವಿಲ್ಲದ ಲಕ್ಕಿಪತ್ರೆ, ಹಂಗಿಲ್ಲದ ಬಿಲ್ವಪತ್ರೆ, ಮಿಕ್ಕನಾದುದು ಗರಿಕೆ ಪತ್ರೆ ಇವು ತಾವಾಗಿಯೇ ಬರುತ್ತಿದ್ದುವು.

ಮಾದಯ್ಯ ಆ ಉತ್ತರ ದೇಶದಲ್ಲಿ ನಿಂತು 'ನಾನೇ ಮಹಾದೇವ ಎನ್ನುತ್ತಿದ್ದರೆ ಈಕೆಯ ಮಹಿಮೆ ಅಸಾಧ್ಯವಾದುದು : ಈಕೆಯನ್ನೇ ತಾಯಾಗಿ ಪಡೆದುಕೊಳ್ಳಬೇಕು' ಎಂದು ನಿರ್ಧರಿಸಿಕೊಂಡ. ಇಂಥ ಮಹಾಮಹಿಮ ಸ್ತ್ರೀಯನ್ನು ತಾಯಾಗಿ ಪಡೆಯುವ ತನ್ನ ಪುಣ್ಯಕ್ಕೆ ಹಿರಿಹಿಗ್ಗಿದ.

ಬೆಳಗಿನ ಮಬ್ಬು ಕರಗಿರಲಿಲ್ಲ. ಉತ್ತರಾಜಮ್ಮ ತಾವರೆ ಕೊಳವನ್ನು ಇನ್ನೇನು ಮುಟ್ಟಿದಳು ಎನ್ನುವಷ್ಟರಲ್ಲಿ ಎದುರಿಗೆ ಏನೋ ಮಿಂಚಿದಂತಾಯಿತು. ಆಶ್ಚರ್ಯದಿಂದ ತನ್ನ ದೃಷ್ಟಿಯನ್ನು ಅತ್ತ ಹರಿಸಿದಳು. ಮೂರು ತಿಂಗಳ ಶಿಶುವೊಂದು ಅಪೂರ್ವ ತೇಜಸ್ಸಿನಿಂದ ಬೆಳಗುತ್ತ ಅವಳ ಚಿತ್ತವನ್ನು ಸೆಳೆಯಿತು. ಆ ಮುದ್ದು ಮಗುವನ್ನು ಎತ್ತಿ ಎದೆಗವಿಚಿಕೊಳ್ಳಲು ತನ್ನ ತೋಳನ್ನು ಮುಂದೆ ಚಾಚಿದಳು. ತಾಯ ಹೃದಯದ ಮರ್ಮವರಿತ ಮಾದೇವ 'ಮಾಯದಲ್ಲಿ ಮರೆಯಾದ !'

ಉತ್ತರಾಜಮ್ಮ ಕನಸು ಕಂಡಂತೆ ಬೆರಗಾದಳು. "ದೆವ್ವವೋ ದೇವರೋ ಕಂಡು ಕಾಣದಂತೆ ಹೋಯಿತಲ್ಲ !" ಎಂದು ಆತಂಕಪಡುತ್ತ ಕೊಳದ ಬಳಿಗೆ ಬಂದಳು. ಮಬ್ಬು ಹರಿದು ಬೆಳಗಾಯಿತು. ತಣ್ಣನೆಯ ಗಾಳಿ ಕೊಳದ ಮೈಯನ್ನು ಸವರಿಕೊಂಡು ಹಿತವಾಗಿ ಬೀಸಿತು. ಹೊತ್ತು ತಂದ ಮೂವತ್ತು ಮೂರು ಕೋಟಿ ಲಿಂಗಗಳನ್ನೂ ಸುರಿದುಕೊಂಡು ಪೂಜೆಗೆ ಅನುವಾದಳು. ಆದರೆ ಎಂದಿನಂತೆ 'ಪತ್ರೆ, ಪುಷ್ಪ'ಗಳೊಂದೂ ಅವಳಲ್ಲಿಗೆ ಬರಲ್ಲಿಲ ! ತನ್ನ ಭಕ್ತಿಯಲ್ಲೇನಾದರೂ ಲೋಪಬಂದಿತೋ, ತನ್ನ ನಿಷ್ಠೆ ಸಡಿಲಿತೊ, ತನ್ನ ಪತಿಗೆ ಮಂಕು ಕವಿಯಿತೋ !

ಉತ್ತರಾಜಮ್ಮ ಬಗೆಬಗೆಯಲ್ಲಿ ಯೋಚಿಸಿದಳು. ! ಎದೆಯಲ್ಲಿ ದುಃಖ ಉಕ್ಕಿಬಂದಿತು. ನಿತ್ಯವೂ ಕೊಳದ ತುಂಬ ಅರಳಿ ಕಂಗೊಳಿಸುತ್ತಿದ್ದ ಕೆಂಡದಾವರೆ ಇಂದು ಒಂದಾದರೂ ಇಲ್ಲ ! ಉತ್ತರಾಜಮ್ಮನ ಕಣ್ಣಲ್ಲಿ ಕಂಬನಿ ತುಂಬಿತು. ಮುಂದೇನು ಮಾಡಲೂ ತೋಚದೆ ಕಂಗೆಟ್ಟಳು.

'ಇಂಥ ಸತ್ಯ ಶರಣೆಯ ಕಣ್ಣಲ್ಲಿ ನೀರನ್ನು ತರಿಸುವುದೆ! '

—ಮಾದಯ್ಯನ ಮನಸ್ಸು ಕರಗಿತು. ಪೂಜೆಗೆ ಹೂವನ್ನು ಒದಗಿಸಲು ಯೋಚಿಸಿದ. ಕೊಳದ ನಡುವೆ ದೊಡ್ಡ ತಾವರೆಯೊಂದು ಕಾಣಿಸಿಕೊಂಡಿತು. ತಾನಾಗಿಯೇ ಉತ್ತರಾಜಮ್ಮನ ಕಡೆ ತೇಲಿ ಮುಳುಗಿ ಬರತೊಡಗಿತು. ಆ ಹೂವಿನ ಕಾಂತಿಗೆ ಅವಳು ಮಾರುಹೋದಳು. ಅಷ್ಟು ಸುಂದರವಾದ ಅಷ್ಟು ಮೋಹಕವಾದ ಹೂವನ್ನು ಅವಳು ಕಂಡಿರಲೇ ಇಲ್ಲ. ಆ ದಿವ್ಯ ಪುಷ್ಪವನ್ನು ಕೈಗೆತ್ತಿಕೊಂಡು ಹಿಗ್ಗುತ್ತ ಕಣ್ಣಿಗೊತ್ತಿಕೊಂಡಳು. ಅದರ ಕಂಪು ಅವಳ ಹೃದಯಕ್ಕೆ ಹಿತವಾಗಿ ತಟ್ಟಿತು. ಹೂವಿನಲ್ಲಿಯೇ ಹುದುಗಿದ್ದ 'ಮಾಯಕಾರ ಮಾದೇವ' ತಾಯ ಹೃದಯವನ್ನು ಸೇರಿಕೊಂಡ.

ಕೆಲವು ದಿನಗಳು ಕಳೆದವು. ಉತ್ತರಾಜಮ್ಮ ಏಕೋ ಅಂಜಿದಳು. ತನ್ನಲ್ಲೇನೋ ಬದಲಾವಣೆಯಾಗುತ್ತಿದೆ ಆ ಮುಗುವನ್ನು ಕಂಡಾಗಿನಿಂದ! ಆ ತಾವರೆಯನ್ನು ಕಣ್ಣಿಗೊತ್ತಿಕೊಂಡಾಗಿನಿಂದ ತನ್ನ ಮೈಯಲ್ಲಿ ಶಕ್ತಿಸಂಚಾರ ವಾದಂತೆ, ಮೈಯೇ ಭಾರವಾದಂತೆ, ಮನಸ್ಸೇ ಭಾರವಾದಂತೆ ಆಗಿದೆ!

ತನ್ನ ಪತಿಯ ಹತ್ತಿರ ಸುಳಿದವಳಲ್ಲ! ಪರ ಪುರುಷರನ್ನು ಕಣ್ಣೆತ್ತಿಯೂ ನೋಡಿದವಳಲ್ಲ ; ತಾನಾಯಿತು, ತನ್ನ ಪೂಜೆಯಾಯಿತು. ತನ್ನ ಧ್ಯಾನವಾಯಿತು! ಆದರೂ ಇದೇನು ಮಾಯೆ ತಾನು ಗರ್ಭವತಿಯಾದ ಅನುಭವಗಳು ಖಚಿತವಾಗುತ್ತಿವೆ. ಅವಳ ಭಯ ಆತಂಕಗಳ ಜೊತೆ ಜೊತೆಗೇ ತಿಂಗಳುಗಳೂ ಓಡುತ್ತಿವೆ! ತನಗಾಗಲೇ ಒಂಬತ್ತು ತಿಂಗಳು ತುಂಬಿ ಹೋಗಿವೆ! 'ಶಿವನ ಲೀಲೆ!!' ತಾನು ತಾಯಾಗುವಳೇ....ತಾಯಾಗುವಳೇ!!

ಹೌದು ಉತ್ತರಾಜಮ್ಮ ತಾಯಿಯಾದಳು. ಒಂದು ತುಂಬಿದ ಸೋಮವಾರ ಮಾದಯ್ಯ ಒಂಬತ್ತು ಗಂಟೆಯ ವೇಳೆಗೆ ತನ್ನ ತಾಯಿಯ ಗರ್ಭ ಯಾತ್ರೆಯನ್ನು ಮುಗಿಸಿದ. ಉತ್ತರಾಜಮ್ಮನ ಬೆನ್ನಿನ ಮೇಲಿದ್ದ ಮಚ್ಚೆಯೊಂದನ್ನು ತನ್ನ ಕಿರುಬೆರಳಿಂದ ಸೀಳಿ ಭೂಲೋಕಕ್ಕೆ ಅವತರಿಸಿದ ಅವನ ಮಹಿಮೆಯಿಂದ ಯಾವ ಗುರುತೂ ಇಲ್ಲದೆ ಉತ್ತರಾಜಮ್ಮ 'ಹುಸ್' ಎಂದು ಮೇಲೆದ್ದಳು. ಅಲೌಕಿಕ ತೇಜಸ್ಸಿನಿಂದ ಶಿಶುವೊಂದು ತನ್ನ ನೆರೆಯಲ್ಲಿ ಕಂಡಿದೆ!

"ಅಯ್ಯೊ ಹಸುಳೆ ನೀನು ಕೆಳಗೆ ಬಿದ್ದೆಯಲ್ಲ!" ತಾಯ ಕರುಳು ಮಿಡಿಯಿತು. ಕೆಲವು ತಿಂಗಳಿಂದ ತನ್ನ ಪಡಸಾಲೆಯನ್ನು ಬಿಟ್ಟು ಹೊರಗೆ ಬಂದವಳಲ್ಲ. ಆದರೆ ಈಗ ತಾನೊಂದು ಸೋಜಿಗದ ಶಿಶುವನ್ನು ಹಡೆದಿದ್ದಾಳೆ. ಈಗ

ಕಣ್ತೆರೆಯದು, ದನಿಯೆತ್ತಿ ಅಳದು, ಅತ್ತಿತ್ತ ಮಿಡುಕದು.

ಚಂದ್ರಶೇಖರ ಶರಣರು ಒಳಗೆ ಬಂದರು, ತನ್ನ ಮಡದಿಯನ್ನೊಮ್ಮೆ ಶಂಕೆಯ ಕಣ್ಣಿನಿಂದ ಕಂಡರು. ಸಿಡಿಮಿಡಿಗೊಂಡರು. ಇದೇನು ಶಾಪವೆಂದು ವ್ಯಥೆಗೊಂಡರು! ಆದರೆ ಉತ್ತರಾಜಮ್ಮ ಅದೇ ಶಾಂತ, ಅದೇ ಗಂಭೀರ ಮುಖ ಮುದ್ರೆಯಲ್ಲಿಯೇ ಇದ್ದಳು.

"ಇದೆಲ್ಲ ಶಿವನ ಲೀಲೆ-ಪರಶಿವನ ಪಾದದಾಣೆ ನನಗೆ ಮಾಯದಲ್ಲಿ ಈ ಮಗು ಜನಿಸಿದೆ"

ವಿನಯದಿಂದ ಪತಿಯಲ್ಲಿ ಅರಿಕೆ ಮಾಡಿಕೊಂಡಳು.

"ಮಗು ಹುಟ್ಟಿ ಎಷ್ಟು ದಿನವಾಯಿತು ?"

"ಆಗಲೇ ಆರೇಳು ದಿನಗಳು ಕಳೆದಿವೆ ; ಆಗಿನಿಂದ ಕಣ್ಣು ಬಿಟ್ಟಿಲ್ಲ, ಹಾಲು ಕುಡಿದಿಲ್ಲ. ಹೇಗೆ ಬಂದಿತೋ ಹಾಗೆಯೇ ಬಿದ್ದುಕೊಂಡಿದೆ !"

"ಹಾಗಾದರೆ ಇದು ಬದುಕಿದರೇನು!"–ತೀರಿಕೊಂಡರೇನು!–ಚಂದ್ರಶೇಖರಶರಣರು ಗಡುಸಾಗಿಯೇ ಮಾತಾಡಿದರು! ಮಗುವಿನ ಸತ್ವವನ್ನೂ ಅರಿಯುವ ಇಚ್ಛೆಯಾಯಿತು ಅವರಿಗೆ. "ಶಿವನ ಕರುಣೆಯಿದ್ದರೆ ಬದುಕಲಿ!" ಎಂದವರು ಹೊರಗೆ ಬಂದರು. ಮಗುವಿಗೆ ಹಾಲನ್ನು ತರುವುದಾಗಿ ಹೇಳಿ ಕಲ್ಯಾಣದ ಕಡೆಗೆ ಬಂದರು.

ಚಂದ್ರಶೇಖರಮೂರ್ತಿ ಕಲ್ಯಾಣ ನಗರದ ಹಾವಾಡಿಗರ ಬೀದಿಯತ್ತ ಬಂದರು. ಒಂದು ಪಾವು ಕಳ್ಳಿಯ ಹಾಲು, ಒಂದು ಪಾವು ಎಕ್ಕದ ಹಾಲು, ಜೊತೆಗೆ ಒಂದು ಪಾವು ನಾಗರಹಾವಿನ ವಿಷವನ್ನು ತರುವಂತೆ ತಿಳಿಸಿ ಬಹುಮಾನದ ಆಸೆಯನ್ನು ತೋರಿಬಂದರು. ಹಾವಾಡಿಗರು ಎಲ್ಲವನ್ನೂ ಆದಷ್ಟು ಬೇಗ ಸಂಗ್ರಹಿಸಿದರು. ಕಳ್ಳಿಯ ಹಾಲು, ಎಕ್ಕದ ಹಾಲಿನ ಜೊತೆಗೆ, ಹುತ್ತದ ಹಾವನ್ನು ಹಿಡಿದು ವಿಷವನ್ನೂ ಬಸಿದು ತಂದರು. ಬೆಳ್ಳಿಯ ಬಟ್ಟಲಲ್ಲಿ ಚಂದ್ರಶೇಖರ ಶರಣರು ಮಗುವಿಗೆ ಉಣಿಸುವಂತೆ ಹಾಲನ್ನು ತಂದು ನೀಡಿದರು.

ಉತ್ತರಾಜಮ್ಮನಿಗೆ ಕನಸಿನಲ್ಲಿ ಎಲ್ಲವೂ ಗೋಚರಿಸಿತು. ಮೌನವಾಗಿ ದುಃಖಿಸಿದಳು. ಆದರೂ ವಿರೋಧಿಸುವ ಧೈರ್ಯ ಸಾಲದಾಯಿತು. ಯಾವ ಸಂಕಟವನ್ನೂ ತೋರಗೊಡದೆ ಬೆಳ್ಳಿಯ ಬಟ್ಟಲನ್ನು ಕೈಗೆತ್ತಿಕೊಂಡಳು. ಶಿವನ ಹೆಸರನ್ನು ಹೇಳಿ, ತಾನು ನೀಡುತ್ತಿರುವುದೇನೆಂಬುದನ್ನು ಮಗುವಿಗೂ ತಿಳಿಸು

ಪಂತೆ ದನಿಯೆತ್ತಿ ಬಟ್ಟಲನ್ನು ಮುಂದೆ ಓಡಿದಳು. ಇದ್ದಕ್ಕಿದ್ದಂತೆಯೇ ಮಗು ಚಲಿಸಿತು. 'ಕಳ್ಳಿಯ ಹಾಲು' ಎಂದಾಗ ಕಣ್ಣುಬಿಟ್ಟು ನೋಡಿ, 'ಎಕ್ಕದ ಹಾಲು' ಎಂದಾಗ ಪಕಪಕನೆ ನಕ್ಕು, 'ನಾಗರಹಾವಿನ ವಿಷ' ಎಂದಾಗ ಎದ್ದು ನಿಂತು "ಕೊಡಮ್ಮ ತುಂಬಾ ದಾಹ" ಎಂದಿತು.

ಉತ್ತರಾಜಮ್ಮ ಈ ಸೋಜಿಗಕ್ಕೆ ಮೂಕಳಾದಳು. ಮಗು ಮಾತಾಡುತ್ತಿದೆ! ಎದ್ದು ಕುಳಿತಿದೆ! ಹಾಲಿನ ಬಟ್ಟಲನ್ನು ಎತ್ತಿ ಕುಡಿದಿದ್ದಾನೆ!

ಕೌತುಕದ ಜೊತೆಗೆ ಭಯವೂ ಹೆಚ್ಚಿ ಗಳಗಳನೆ ಕಣ್ಣೀರು ಕರೆದಳು. ಕೈಯಾರೆ ತನ್ನ ಶಿಶುವನ್ನು ಕಳೆದುಕೊಳ್ಳುತ್ತಿರುವ ತನ್ನ ದೌರ್ಭಾಗ್ಯಕ್ಕೆ ಮಲ ಮಲ ಮರುಗಿದಳು. ಆದರೆ ಮಗು ಉತ್ಸಾಹದಿಂದ ಕುಣಿದಾಡಿತು. "ಎಲ್ಲ ಜೀರ್ಣವಾಗಿಹೋಯಿತು. ಇಂಥ ಆಹಾರವನ್ನೇ ನನಗೆ ಕೊಡಿ!" ಎಂದು ಹೇಳುತ್ತ ಹರ್ಷವನ್ನೇ ಮೆರೆದಿದ್ದಾನೆ!

ಚಂದ್ರಶೇಖರ ಮೂರ್ತಿಯವರೂ ಈ ಅದ್ಭುತಕ್ಕೆ ಅಚ್ಚರಿಪಟ್ಟರು. 'ಅಸಾಮಾನ್ಯ ಶಿಶು' ವೆಂದು ತಿಳಿದು ಆನಂದಪಟ್ಟರು. 'ಇವನೇನು ಗುರುವಾಗಬಹುದು, ಹರನಾಗಬಹುದು' ಎಂದು ಎತ್ತಿ ಮುದ್ದಾಡಿದರು.

ಶಿಶುರೂಪಿ ಮಾದಯ್ಯ ತಾಯಿತಂದೆಯರ ಅಕ್ಕರೆಯ ಕಣ್ಮಣಿಯಾಗಿ ಬೆಳೆದನು. ಎಣ್ಣೆ, ಬೆಣ್ಣೆ, ಹಾಲುಗಳನ್ನು ಸಮೃದ್ಧವಾಗಿ ನೀಡಿ ಅವನನ್ನು ಪೋಷಿಸಿದರು. ಒಂದು ವರ್ಷದ ಮಗು ಎರಡು ವರ್ಷದವನಾಗಿ—ಎರಡು ವರ್ಷದವನು ನಾಲ್ಕು ವರ್ಷದವನಾಗಿ, ಹತ್ತು ಹನ್ನೊಂದು ವರ್ಷದವನಾಗಿ ಬೆಳೆದು ನಿಂತನು.

ತಮ್ಮ ಮಗುವಿಗೆ ಮುದ್ದಾದ ಹೆಸರನ್ನೇ ಅವರು ಇಟ್ಟರು. 'ಚಂದ ನೋಡಿ ಬುಟ್ಟು ಅಂದನೋಡಿಬುಟ್ಟು ಚಂದಕ್ಕೆ ಚಂದ್ರಶೇಖರ, ದುಂಡು ನೋಡಿದುಂಡಪ್ಪ ಅವರ ನಿಜಕ್ಕೆ ಮರಿದೇವರಪ್ಪ' ಎಂದು ಕರೆದರು. ಮಗು ಕಲ್ಯಾಣ ನಗರಕ್ಕೆ ಹೋಗಿ ಬರುತ್ತ ಚೆಂಡು, ಬುಗುರಿ, ಗೋಲಿ, ಗಜ್ಜುಗಗಳನ್ನು ಆಡಿಕೊಂಡು ಅವರನ್ನು ನಲಿಸುತ್ತಾ ಇದ್ದನು. ಹನ್ನೆರಡು ತುಂಬಿತು ಮರಿದೇವರಿಗೆ. ತನ್ನ ಗುರಿ ಬೇರೆ, ತನ್ನ ನೆಲೆ ಬೇರೆ ಎನ್ನುವುದನ್ನು ಅವನು ಅರಿತಿದ್ದನು. ತಾಯಿ ತಂದೆಯರಿಬ್ಬರನ್ನೂ ಕೊನೆಗೆ ಒಪ್ಪಿಸಲು ಪ್ರಯತ್ನಿಸಿದ. "ಅಲ್ಲಿ ಆಡಲು ದೂರ ದೂರ ಹೋಗ ಬೇಕು. ತಡೆಯದೆ ಕಳಿಸಿಕೊಡಿ."

ಮರಿದೇವರ ಮಾತನ್ನು ಕೇಳಿ ಉತ್ತರಾಜಮ್ಮ ಬೆದರಿದಳು. ಮಗನನ್ನು ತಬ್ಬಿ ಗಲ್ಲಹಿಡಿದು ಕೇಳಿದಳು.

"ಮುದ್ದಿನ ಗಿಣಿಯಾಗಿ ಬೆಳೆದೆ, ನಿನ್ನನ್ನೇ ನಂಬಿ ಬದುಕಿದ್ದೇವೆ. ನೀನು ಹೋದರೆ ನಮಗೆ ಅನ್ನ ಹಾಕಿ ಸಲಹುವವರಾದರೂ ಯಾರು ?" "ಇಂದು ಹೋದರೆ ನಾಳೆ ಬರುತ್ತೇನೆ. ನನಗೆ ಒಂದು ಹೊತ್ತಿನ ಬುತ್ತಿ ಕಟ್ಟಿಕೊಡಿ"

ಮರಿದೇವರು ಕೇಳಿದನು ; ಅವನ ದೃಢ ನಿಶ್ಚಯ ಕದಲಲಿಲ್ಲ.

ಉತ್ತರಾಜಮ್ಮ ಬೆಳ್ಳಿ ಚೆಂಬನ್ನು ತೆಗೆದು, ಒಲೆಯ ಮೇಲಿಟ್ಟು, ಒಂದು ಒಳಲೆ ಹಾಲು, ಒಂದು ಒಳಲೆ ನೀರು, ಒಂದು ಹಿಡಿ ಅಕ್ಕಿ ಸೋಸಿ ಹಾಕಿ ಅಡಿಗೆ ಮಾಡಿದಳು. ಎಳೆಯ ಬಾಳೆಯ ಎಲೆಯಲ್ಲಿ ಬುತ್ತಿ ಕಟ್ಟಿದಳು. ಒಂದು ಕಾವಿಯ ಚೌಕದಲ್ಲಿ ಅದನ್ನು ಸುತ್ತಿಕೊಟ್ಟಳು.

ಮರಿದೇವರು ಮಾದಪ್ಪನ ಬಯಕೆ ಈಡೇರಿತು. ಆದರ್ಶ ತಾಯಿ ತಂದೆಗಳನ್ನೇ ಅವನು ಪಡೆದ. ತಪಸ್ವಿಗಳ ಉದರದ ಶಿಶುವೇ ಆದ. ಅವರನ್ನು ತನ್ನ ತಾಯಿ-ತಂದೆಯರಾಗಿ ಪಡೆದುದಕ್ಕೆ ಹೆಮ್ಮೆಪಟ್ಟ. ಆದರೆ ಅವರನ್ನು ತೊರೆದು ಹೋಗುವಾಗ ಏನಾದರೂ ನೆನಪಿಗಾಗಿ ಬಿಟ್ಟು ಹೋಗಲು ಬಯಸಿದ. ತನ್ನ ಕೃತಜ್ಞತೆಯನ್ನೂ ಅವನು ತೋರುವ ಔದಾರ್ಯದಿಂದ ವಂಚಿತನಾಗಲಿಲ್ಲ. ರಾಮ, ಲಕ್ಷ್ಮಣ ಎಂಬ ಎರಡು ಕಣಜಗಳನ್ನು ಎಡದಲ್ಲಿ ಬಲದಲ್ಲಿ ಸೃಷ್ಟಿಸಿದ.

"ಇದನ್ನು ಪೂಜಿಸಿರಿ. ಒಳಗಿನಿಂದ ಮುತ್ತು ರತ್ನ ಬೀಳುತ್ತವೆ....ಅವನ್ನು ಬಳಸಿಕೊಳ್ಳಿರಿ....ಕೈಹಾಕಬೇಡಿ...."

ತಾಯಿ-ತಂದೆಯರಿಬ್ಬರಿಗೂ ಮರಿದೇವರು ಸೂಚನೆಯನ್ನು ನೀಡಿ ಹೊರಟು ನಿಂತ. ಅವರ ಪಾದಗಳಿಗೆ ವಂದಿಸುವಾಗ,

"ಯಾವ ಕಡೆಗೆ ಹೋದರು ಜಯವಾಗಲಿ" ಎಂದು ಹರಸುವಲ್ಲಿ ಅವರ ಕಣ್ಣಿನಲ್ಲಿ ಕಂಬನಿ ತುಂಬಿ ಬಂದಿತ್ತು.

* * * *

ಹೊಸ ಹುಟ್ಟನ್ನು ಪಡೆದು, ದಿವ್ಯ ತೇಜಸ್ಸಿನಿಂದ ರಂಜಿಸುತ್ತ ಮಲೆಯ ಮಾದಯ್ಯ ಹೊರಟಿದ್ದಾನೆ. ಅವನ ಅದ್ಭುತವೂ, ರಮ್ಯವೂ ಆದ ಕಥೆಯ ಒಂದೊಂದೇ ಘಟ್ಟದಲ್ಲಿ ನಿಂತು, ಮತ್ತೆ ಕಡ್ಡಿಯನ್ನು ಬೆಳಗಿ ಅನನ್ಯ ಭಕ್ತಿಯಲ್ಲಿ ದೇವರ ಗುಡ್ಡರು ಮತ್ತೆ ಮುಂದುವರಿದಿದ್ದಾರೆ.

— —

# ಈ ಮಠವೂ ನನಗೆ ತರವಲ್ಲ

ಮುಗ್ಗು ಮಗ್ಗಲಗಿರಿಗೆ-ಮೊಗ್ಗು ಬಂದವು ನೋಡಿರಿ
ಮಾದಯ್ಯ ಗಿರಿಗೆ-ಹೂವು ಬಂದವು ನೋಡಿರಿ

ಮಲೆಯ ಮಾದಯ್ಯನ ಪುಣ್ಯಸ್ಮರಣೆ ಭಕ್ತರ ಹೃದಯವನ್ನು ಅರಳಿಸುತ್ತದೆ. ಅವನ ಬಣ್ಣನೆಗಳನ್ನು ಕೇಳಿ, ಅವನ ಮಹಿಮೆಗಳಿಗೆ ತಲೆದೂಗಿ ಉತ್ಸಾಹಗೊಳ್ಳದವರಾರು ! ಆ ಮಹಾಪುರುಷನ ದಿವ್ಯ ಕಥೆ ಕಂಸಾಳೆಯ ಕಮನೀಯ ನಾದದಲ್ಲಿ ಅಲೆಅಲೆಯಾಗಿ ಕೌತುಕದ ಬಳ್ಳಿಬಳ್ಳಿಯಾಗಿ ಹಬ್ಬಿದೆ....ಮುಮ್ಮೇಳದವನು ಮೈಮರೆತು ಕಥೆ ನಡೆಸಿದ್ದಾನೆ.

ಮಲೆಯ ಮಾದೇವ ಬರುವ ಚಂದವ
ನೋಡಿ ನಮ್ಮ ಶಿವನ

ತಾಯಿತಂದೆಯರನ್ನು ಪಡೆದ ಹರ್ಷ ಮರಿದೇವರನ್ನು ಮತ್ತೆ ದಕ್ಷಿಣದ ಕಡೆಗೇ ಸಾಗಿಬರುವಂತೆ ಮಾಡಿತು. ಧರೆಯ ಸಂಚಾರವನ್ನು ಕೈಗೊಂಡು ಪಾತಕಿಗಳನ್ನು ದಂಡಿಸಿ ತನ್ನ ಗುರಿಯನ್ನು ಮುಟ್ಟಬೇಕು ; ತನಗೆ ಅನೇಕ ಕಡೆ ಒಕ್ಕಲನ್ನು ಪಡೆದು ಮತ್ತೆ ಸಂಚಾರವನ್ನು ಕೈಗೊಂಡು ದೀನದಲಿತರನ್ನು ಉದ್ಧರಿಸಬೇಕು, ದುಷ್ಟರನ್ನೂ,ದರ್ಪಿಷ್ಟರನ್ನೂ ಅಧರ್ಮಿಗಳನ್ನೂ ಶಿಕ್ಷಿಸಿ ನ್ಯಾಯ, ನೀತಿ, ಭಕ್ತಿಗಳನ್ನು ಬಿತ್ತಬೇಕು ಎಂಬುದೇ ಅವನ ನಿಲುವಾಯಿತು. ಕಲ್ಯಾಣವನ್ನು ಕಂಡು, 'ಸತ್ಯ ಶರಣೆ ನೀಲವ್ವ'ನ 'ನಿಜಭಕ್ತ ಬಸವಣ್ಣನ' ಭಕ್ತಿಯನ್ನು ಪರಿಕಿಸಿ, ವೇಷಧಾರಿ ಜಂಗಮರನ್ನು ನಡುಗಿಸಿ, ಪವಿತ್ರ ನೆಲೆಯೊಂದರಲ್ಲಿ ನಿಲ್ಲಬೇಕು ಎಂದು ನಡೆದು ಬಂದಿದ್ದಾನೆ .. ಎಲ್ಲೂ ನಿಂತವನಲ್ಲ, ಎಲ್ಲೂ ಉಳಿದವನಲ್ಲ....ತೆಂಕಣನಾಡಿನ ಮೇಲೆ ದೃಷ್ಟಿಯನ್ನು ಹರಿಸಿ, ಪಯಣದ ಮೇಲೆ ಪಯಣಗಳನ್ನು ಮುಗಿಸಿ, ದಾರಿಯುದ್ದಕ್ಕೂ ಅಪಾರ ಪವಾಡಗಳನ್ನೇ ಮೆರೆದು ಮುಂದೆ ಬಂದಿದ್ದಾನೆ, ಕೊನೆಗೆ—

ಕುಳಬಾಳ್ ಕುಳಬಾಳ್ ದಿಕ್ಕನೋಡಿ
ಕುರುಬನ ಕಟ್ಟೆ ಚಾರಿ ನೋಡಿ _

ನೂರೊಂದಯ್ಯನ ಗಿರಿಗಳ ನೋಡಿ
ಒಪ್ಪಿದ ಸೀಮೇಲಿ ಮಜ್ಜನ ಮಾಡಿ
ಕಾರು ಮಾಲೆಗಳ ಕರುಗಳ ಕೂಡಿ
ಎಮ್ಮೆಗನ ಹಳ್ಳೀಲಿ ಎಮ್ಮೇ ಕಾದು....

ಬೀರಂಬಳ್ಳಿಯ ದಾರಿ ಹಿಡಿದನು. ಆ ಊರಿನ ದೇವಮ್ಮನ ಮಾತು ಮರಿದೇವರ ಕಿವಿಯನ್ನೂ ಮುಟ್ಟಿತ್ತು. ದಾನ ಶೀಲೆಯಂತೆ ನಟಿಸಿ, ಇಟ್ಟ ಅನ್ನದಲ್ಲಿ ವಿಷ ಬೆರಸುವ ಆ 'ಮಾಯಕಾತಿ'ಯನ್ನು ತಾನೂ ನೋಡಬೇಕೆನಿಸಿತು. 'ಮುದ್ದಿ'ಡುವ ಅವಳ ಮರ್ಮವನ್ನು ತಿಳಿಯಬೇಕೆನಿಸಿತು. ಅವಳ ಮೋಸಕ್ಕೆ, ಅವಳ ವಂಚನೆಗೆ ಅದೆಷ್ಟು ಮಂದಿ ಬಲಿಯಾಗಿದ್ದಾರೆ !

("ಅನ್ಯಾಯವಾಗಿ ಪ್ರಜೆಗಳನ್ನೆಲ್ಲ ಕೊಲ್ತಾಳೆ ।")

ಮರಿದೇವರು ಅವಳ ಕ್ರೂರದೃಷ್ಟಿಗೆ ಬಲಿಯಾದ ಮಂದಿಗೆ ಮರುಗಿದ. ತನಗೂ ವಿಷವಿಕ್ಕಬಲ್ಲಳೇ, ತನ್ನನ್ನೂ ಕೊಲ್ಲುವ ಧೈರ್ಯ ಮಾಡುವಳೇ ! ಆ ಪರೀಕ್ಷೆಯೂ ನಡೆದುಬಿಡಲಿ ।

ಎಳಗಾವಿ ಎಳೆದೊದ್ದು ಸುಳಿಗಾವಿ ಹೊದ್ದದ್ದು
ದಂಡೆಕೋಲು ಬಲಗೈಲಿ ಹಿಡಿದು
ಮುತ್ತಿನ ಜೋಳಿಗೆ ಮುಂಗೈಲಿ ಆಧಾರ ಮಾಡಿ
ಮಾಯಕಾತಿಯ ಮನೆಗೆ ಇವರು ಬಿನ್ನಕೆ ಬಂದರೊ
ಮಾದೇವ !

ದೇವಮ್ಮನ ಮನೆಯ ಮುಂದೆ ಮರಿದೇವರು ಬಂದು ನಿಂತು ಒಮ್ಮೆ ಅವಳ ವೈಭವಕ್ಕೆ ತಲೆದೂಗಿದ. ಅವಳ ಸಿರಿಸಂಪತ್ತಿಗೆ ಸೋಜಿಗಪಟ್ಟ.

"ಭಿಕ್ಷಾವ್ವೋ ಭಿಕ್ಷಾವ್ವೋ"

ಮರಿದೇವರು ಮೆಲುದನಿಯಲ್ಲಿ 'ಕ್ವಾರಣ್ಯ'ವನ್ನು ಕೇಳಿದ. ದೇವಮ್ಮ ಹೊರಗೆ ಬರಲಿಲ್ಲ –

ನಮ್ಮ ಅಲ್ಲಿ ಸಂಗಯ್ಯನೋರಿಗೆ ಭಿಕ್ಷವ್ವೊ
ನಮ್ಮ ತಾಯಿ ಉತ್ತರಾಜಮ್ಮನೋರಿಗೆ ಭಿಕ್ಷವ್ವೊ
ನಮ್ಮ ತಂದೆ ಕಲ್ಯಾಣದೇವರಿಗೆ ಭಿಕ್ಷವ್ವೊ

ಮರಿದೇವರ ಕೂಗು ದೇವಮ್ಮನ ಕರೆಯುವ ಕೈಯ್ಯನ್ನು ನಿಲ್ಲಿಸಿತು. ಬೆಳ್ಳಿಯ ಅಂಡೆಗೆ ರನ್ನದ ಮಂತನು ಹೂಡಿ ಕಡೆಯುತ್ತಿದ್ದ ಅವಳು ಜಂಗಮರ ಧ್ವನಿಯನ್ನು ಕೇಳಿ ಹೊರಗೆ ಬಂದಳು. 'ಧರೆ ಕತ್ತಿ ಧರೆ ಉರಿಯುವ' ಬಾಲ ಜಂಗಮನ ತೇಜಸ್ಸಿಗೆ ಅವಳ ಕಣ್ಣು ಕುರುಡಾಯಿತು ! ಸಡಗರದಿಂದ ಒಳಗೆ ಹೋಗಿ ಬೆತ್ತದ ಮೊರದಲ್ಲಿ ಅಕ್ಕಿ ಬೇಳೆ ತುಂಬಿ ಕ್ವಾರಣ್ಯ ತಂದು ನೀಡುತ್ತ ಈ ಬಾಲ ಯೋಗಿಯನ್ನೊಮ್ಮೆ ನುಡಿಸುವ ಬಯಕೆಯಾಯಿತು ಅವಳಿಗೆ. ಮೃದು ಧ್ವನಿಯಲ್ಲಿ ಕೇಳಿದಳು ದೇವಮ್ಮ—

"ನೀವು ಯಾವ ನಾಡಿನ ಅಯ್ಯಗೋಳು ?"

ಮರಿದೇವರು ಅವಳನ್ನೊಮ್ಮೆ ಕಣ್ಣೆತ್ತಿ ನೋಡಿದ. ವ್ಯಂಗ್ಯ ನಗೆಯೊಂದು ಅವನ ತುಟಿಯ ಮೇಲೆ ಹಾದು ಹೋಯಿತು.

"ಶಹಬಾಷ್ ನನ ಕಂದ ಯಾವ ನಾಡಿನವನು
ಎಂತ ಕೇಳುವೆಯ ?"

ಅವಳೊಡನೆ ಹೇಳಬೇಕಾದುದಿತ್ತು, ಅವಳನ್ನರಿಯಬೇಕಾದುದೂ ಇತ್ತು, ತನ್ನ ನೆಲೆ-ಬೆಲೆಗಳನ್ನು ಇದ್ದಂತೆ ಹೇಳಿದ....

"ನಾನು ಹುಟ್ಟಿದ್ದು ಉತ್ತುರು ದೇಶ
ಬೆಳೆದದ್ದು ಬಾಳಳ್ಳಿ ಸೀಮೆ
.....................................
ಕುಳಬಾಳ್ ಕುಳಬಾಳ್ ದಿಕ್ಕ ನೋಡಿ
ಕುರುಬನ ಕಟ್ಟೆಬಾರಿ ನೋಡಿ
ನೂರೊಂದಯ್ಯನ ಗಿರಿಗಳ ನೋಡಿ
ಒಪ್ಪಿದ ಸೀಮೇಲಿ ಮಜ್ಜನ ಮಾಡಿ
ಕಾರ್ಮಲೇಲಿ ಕರುಗಳ ಕೂಡಿ
ಎಮ್ಮೆಗನ ಹಳ್ಳೀಲಿ ಎಮ್ಮೆಕಾದು
ಬೇವಿನ ಕೊಲ್ಲಿಗೌಡರ ಮಲ್ಲಿ ಹಗಲ ಬಿನ್ನ ತೀರಿಸಿಕೊಂಡು
ನಿನ್ನ ಮಠಮನೆಗೆ ಬಂದೆ !"

ಜಂಗಮಯ್ಯನ ನುಡಿಗಳಿಗೆ ದೇವಮ್ಮ ಸೋಜಿಗಗೊಂಡಳು ! ದೀರ್ಘ

ಯಾತ್ರೆಯಲ್ಲಿ ದಣಿದು ಬಂದ ಅವನನ್ನು ಸತ್ಕರಿಸದೇ ಕಳುಹಿಸುವುದೆ ! ತನ್ನ 'ಮತ ಮನೆಯನ್ನೇ ಕುರಿತು ಬಂದವನನ್ನು ಹಾಗೆಯೇ ಕಳುಹಿಸದರೆಂತು! ತನ್ನ ದಾನ, ತನ್ನ ಧರ್ಮ, ತನ್ನ ಕೀರ್ತಿ ನಾಡಿಗೆಲ್ಲಾ ಹಬ್ಬಿರುವಾಗ ತನ್ನ 'ಮಹಿಮೆ' ಯನ್ನು ಅರಿಯದೆಯೇ ಜಂಗಮಯ್ಯ ಮುಂದೆ ಹೋಗಿಬಿಡುವುದೆ!

"ಹಂಗಂದ ಮೇಲೆ ಸ್ವಾಮಿ ನನ್ನ ಮನೆ ಬಿನ್ನ ತೀರಿಸ್ಕೊಂಡು ಹೋಗ ಬೇಕು."

ಮರಿದೇವರು ಅವಳ ಔದಾರ್ಯವನ್ನು ಮೆಚ್ಚಿಕೊಂಡ.

"ಶಹಭಾಷ್ ನನ ಕಂದ

ನಿನ್ನ ಮನೆ ಬಿನ್ನಕ್ಕೋಸ್ಕರವೇ ಬಂದಿದ್ದೀನಿ"

ದೇವಮ್ಮ ಹಿಗ್ಗಿಹೋದಳು. ತನ್ನ ಪುಣ್ಯಕ್ಕೆ ತಾನೇ ಹೆಮ್ಮೆಪಟ್ಟಳು. ದೂರದ ಜಂಗಮರೆಲ್ಲಾ ತನ್ನ ಮನೆಯ ಕೀರ್ತಿಯನ್ನು ಕೇಳಿ ಬರುವಂತಾಗಿದೆ!

ಅಯ್ಯಯ್ಯೊ ಗುರುವೇ....
ಇದೇ ತಾನೇ ತಾರ್ಸಿ ಗುಡ್ಸಿ ರಂಗೋಲೆ
ಬಿಟ್ಟು ಬಿಟ್ಟದ್ದೀನಿ....ನೀವು ತಣ್ಣೀರು
ಕಟ್ಟೆಗೆ ಹೋಗಿ ತಾನ ಜಪ ಮಾಡಿಕೊಂಡು ಬನ್ನಿ....

ಸಡಗರದಿಂದಲೇ ನುಡಿದಳು ದೇವಮ್ಮ. ಮರಿದೇವರು ಮನಸ್ಸಿನಲ್ಲಿಯೇ ನಕ್ಕು 'ತಣ್ಣೀರು ಕೊಳಕ್ಕೆ' ಸಾಗಿದ.

ದೇವಮ್ಮ ಜಂಗಮಯ್ಯನಿಗೆ ಹೊಸ ಹೊಸ ಅಡಿಗೆಯನ್ನು ಅಣಿಗೊಳಿಸಿ ದಳು. ಒಳ್ಳೊಳ್ಳೆ ಕಜ್ಜಾಯಗಳನ್ನು ಕರೆದಳು. ಕೊನೆಯಲ್ಲಿ ಮೂರು ವಿಷದ ಕಜ್ಜಾಯಗಳನ್ನು ಮಾಡಲೂ ಅವಳು ಮರೆಯಲಿಲ್ಲ.

'ತಾನ ಜಪ' ಮುಗಿದ ಮರಿದೇವರು ದೇವಮ್ಮನ ನಡುಮನೆಯಲ್ಲಿ ಕುಳಿತ. 'ತಟ್ಟೆ ಬಟ್ಟಲು ಬೆಳಗಿ' ಶಿವಪೂಜೆಗೆ ಸಿದ್ಧ ಮಾಡಿದಳು. 'ಬಿನ್ನ'ಕ್ಕೂ ಮರಿದೇವರು ಸಿದ್ಧನಾದ. ದೇವಮ್ಮ ಬಗೆಬಗೆಯ ಭಕ್ಷ್ಯ ಭೋಜ್ಯಗಳಿಂದ ಜಂಗಮಯ್ಯನನ್ನು ತೃಪ್ತಿಪಡಿಸಿದಳು. ಮೂರು ಒಳ್ಳೆಯ ಕಜ್ಜಾಯಗಳನ್ನು ಬಡಿಸಿದಳು. ಮೂರು ವಿಷದ ಕಜ್ಜಾಯವನ್ನೂ ತಂದು ಭಯಭಕ್ತಿಯಿಂದ ನೀಡಿದಳು!

"ಆವಾಗ್ಲೆ ನಮ್ಮ ಸ್ವಾಮಿ ಹುಸಿನಗೆ ನಕ್ಕೊ—

"ಶಹಭಾಷ್ ಈ ಮಾಯಕಾತಿ ನನಗೂ ವಂಚನೆ ಇಲ್ಲದೆ ಇಕ್ಕಿದಳಲ್ಲ" ಎಂದು ತಲೆದೂಗಿದ. ತನಗೆ ಬಡಿಸಿದವಳು ತನ್ನ ಮಕ್ಕಳಿಗೂ, ತನ್ನ ಗಂಡನಿಗೂ ಬಡಿಸುವವಳೇ

ಈ ನರರು ಮಾಡ್ದ ಪದಾರ್ಥ ನಾವು ಸಲ್ಲಿಸ್ದೆ ಹೋದ್ರೆ
ಕಾಮ ಕರೆಯೋದಿಲ್ಲ—ಭೂಮಿ ಬೆಳೆಯೋದಿಲ್ಲ
ಚಂದ್ರ-ಸೂರ್ಯರು ಹುಟ್ಟೋದಿಲ್ಲ

ಮರಿದೇವರು ಬಡಿಸಿದ ಕಜ್ಜಾಯವನ್ನು ಬಿಡುವಂತಿರಲಿಲ್ಲ. ತಮ್ಮ ಮುತ್ತಿನ ಜೋಳಿಗೆಯನ್ನು ತೆಗೆದು ಎರಡು 'ಒಳ್ಳೆ ಕಜ್ಜಾಯ'ಗಳನ್ನು ಜೋಳಿಗೆ ಗಿಟ್ಟನು. ಒಂದು ವಿಷದ ಕಜ್ಜಾಯನ್ನೂ 'ಒಕ್ಕಡೆ' ಇರಿಸಿದನು. ಉಳಿದ ಕಜ್ಜಾಯಗಳನ್ನು ತಾಯಿ 'ಉತ್ತರಾಜಮ್ಮನ ಹೆಸರನ್ನು ಹೇಳಿ' ತಂದೆ 'ಚಂದ್ರ ಶೇಖರಮೂರ್ತಿ'ಯನ್ನು ನೆನೆದು.

ಹೃದಯಕ್ಕೆ ಸಲ್ಲಿಸಿಯೇ ಬಿಟ್ಟರು !

ಕೊನೆಗೆ ಸ್ವಾಮಿ 'ಈ ದುಷ್ಟಗಾತಿ ಮುಂಡೇರಮಲ್ಲಿ' ಅಪಾರ ಹೊತ್ತು ಇರಬಾರದೆಂದು ಅಲ್ಲಿಂದ ಎದ್ದು ಹೊರಗೆ ಬಂದನು.

ಆಗ ಬೇಸಿಗೆಯ ಕಾಲ, ಬೀರಂಬಳ್ಳಿಯ ಬಯಲಿನ ಮೇಲೆ ಉಗ್ರ ಬಿಸಿಲು ಹರಡಿತ್ತು ; ಊರಿನ ಸಮೀಪದಲ್ಲಿ ದಟ್ಟವಾಗಿ ಮರಗಿಡಗಳು ಕವಿದು ನೆಲೆಗೆ ಬಂದು ನೆರಳಲ್ಲಿ ನಿಂತನು. ಹತ್ತಿರದಲ್ಲೇ ಊರಿನ ಮಕ್ಕಳು 'ಇಳ್ಳೆ ಚೆಂಡು ಆಡುತ್ತಿದ್ದರು. ಆ ದನ-ಕುರಿಯ ಹುಡುಗರನ್ನು ಮರಿದೇವರು ಕೈ ಬೀಸಿ ಕರೆದನು ಕಜ್ಜಾಯವನ್ನು ತೋರಿ. ಕರೆದ ಜಂಗಮಯ್ಯನ ಬಳಿಗೆ ಹುಡುಗರು 'ಬಿದ್ದು ಕರೆದು' ಓಡಿಬಂದರು. ಮರಿದೇವರು ಆ ಮುದ್ದು ಮಕ್ಕಳಿಗೆಲ್ಲಾ ಒಳ್ಳೆಯವನ್ನು ಮುರಿದು ಕೊಟ್ಟನು. ಆನಂದದಿಂದ ಕುಣಿಯುತ್ತ ಆ ಮಕ್ಕಳೆಲ್ಲ ಸುಮ್ಮಾನವಾಗಿ ಆಡುತ್ತಿದ್ದರು.

ಮಾಯಕಾತಿ ದೇವಮ್ಮನಿಗೆ ಒಬ್ಬ ಮಗನಿದ್ದ. 'ಕಜ್ಜಾಯ ಅನ್ನೊ ಆಸೆಗೆ' ದೇವಮ್ಮನ ಮಗನೂ ಬಿದ್ದು ಓಡಿ ಬಂದ. ಮರಿದೇವರು ತನ್ನ ಜೋಳಿಗೆ

ಯಲ್ಲಿದ್ದ ವಿಷದ ಕಜ್ಜಾಯವನ್ನು ತೆಗೆದು ನೀಡಿದನು. ಆ ಹುಡುಗ ಕಜ್ಜಾಯವನ್ನು ತಿನ್ನುತ್ತಿದ್ದಂತೆಯೇ ಮೈ ಮರೆತು ಮಲಗಿದನು. ಸುದ್ದಿ ದೇವಮ್ಮನನ್ನೂ ಮುಟ್ಟಿತು. ಜಂಗಮಯ್ಯ ಕಜ್ಜಾಯ ನೀಡಿದ ಬಗೆಯನ್ನು ಬಾಲಕರು ಬಣ್ಣಿಸಿದರು. ಮರಿದೇವರು ಹಾಗೆಯೇ ಮರೆಯಾಗಿ ನಿಂತ, ದೂರದಲ್ಲಿ ದೇವಮ್ಮನನ್ನು ನೋಡಿ.

ದೇವಮ್ಮ ತನ್ನ ಮಗನ ಮೇಲೆ ಬಿದ್ದು ಹೊರಳಾಡಿ ಗೋಳಾಡಿದಳು. "ಹೊಟ್ಟೊಟ್ಟೆ ಹೊಯ್ಕೊಂಡು" ರೋದಿಸಿದಳು. ಇದ್ದೊಬ್ಬ ಮಗನೂ ಮಡಿದನೇ ಎಂದು ಕಣ್ಣೀರಿಟ್ಟಳು.

ಮರಿದೇವರಿಗೆ ಆ ನೆಲೆಯಲ್ಲಿ ಹೆಚ್ಚು ಹೊತ್ತು ನಿಲ್ಲಲು ಇಚ್ಛೆಯಾಗಲಿಲ್ಲ. ಮುಂದಿನ ತನ್ನ ಯಾತ್ರೆಯತ್ತ ಅವನ ಗಮನ ಹರಿಯಿತು, ದೇವಮ್ಮನ ಕಣ್ಣಿಗೆ ಗೋಚರಿಸುವಂತೆ.... .

ಅತ್ತಿಂದಿತ್ತಾಗಿ ಸುಳಿದಾಡಿದರಂತೆ

ದನ ಕುರಿಯ ಹುಡುಗರು ದೇವಮ್ಮನ ಬಳಿಗೆ ಗುಡುಗುಡನೆ ಓಡಿ ಬಂದರು. ಕಜ್ಜಾಯ ಕೊಟ್ಟ ಜಂಗಮಯ್ಯನನ್ನು ದೇವಮ್ಮನಿಗೆ ತೋರಿದರು. ದೇವಮ್ಮ ಮರಿದೇವನ ಬಳಿಗೆ ಬಂದು ಅವನ ಪಾದ ಹಿಡಿದು ಕಂಬನಿಯನ್ನು ಸುರಿಸುತ್ತಾ ಬಿಗಿದ ಕಂಠದಲ್ಲಿ ಕೇಳಿದಳು;

ನನ್ನ ಮಗನಿಗೆ ಏಸ್ತಾಕಿ ಕೊಂದಿರಿ ಸ್ವಾಮಿ ?

"ನೀನು ಸುಳ್ಳು ಹೇಳಿದರೆ ನಿನ್ನ ಮಗ ಬದುಕುವುದಿಲ್ಲ. ನಿನ್ನ ಮನೆ ಬಿನ್ನಕ್ಕೆ ಬಂದಾಗ ನನಗೆ ಏನು ಇಕ್ಕಿದೆ ? ನಿಜಹೇಳು!"

ಮರಿದೇವರು ಗುಡುಗಿದನು. ದೇವಮ್ಮನ ಬಾಯಿ ಕಟ್ಟಿತು. ನಿಜವನ್ನೇ ಹೇಳಬೇಕಾಯಿತು,

ಅಯ್ಯಯ್ಯೊ ಗುರೇಪಾದವೇ
ನನ್ನ ಮನೆ ಬಿನ್ನಕ್ಕೆ ಬಂದಿದ್ದಾಗ
ನನ್ನ ಹೊಟ್ಟೆ ಬ್ಯಾನಿಯ ಸಲುವಾಗಿ
ನಿಮಗೆ ಮೂರು ಇಸದ ಕಜ್ಜಾಯ ಇಕ್ಕಿದೆ

ದೇವಮ್ಮ ಸತ್ಯವನ್ನೇ ನುಡಿದಳು. ಮತ್ತೆ ಎಂದೆಂದಿಗೂ ಆ ತಪ್ಪನ್ನು ಮಾಡುವುದಿಲ್ಲವೆಂದು ಬೇಡಿಕೊಂಡಳು. ತನ್ನ ಕಂದನನ್ನು ಉಳಿಸಿಕೊಡುವಂತೆ ಅಂಗಲಾಚಿದಳು.

ಮರಿದೇವರ ಮಹಿಮೆಯಿಂದ ಬಾಲಕ ಬದುಕಿಕೊಂಡ. ಆದರೆ ದೇವಮ್ಮನಿಗೆ ಉಗ್ರ ತಾಪವೇ ಕಾದಿತ್ತು.

ಈ ಮದ್ದು ಮಾಯ ಮಾಡ್ದೋರ ವಂಶ ಹೆಚ್ಚ ಬೇಡ ನಸ ಕಂದ
ನಿನ್ನ ಬಾಯಲ್ಲಿ ಶ್ವಾಸ್ಟವಾಗಲಿ,
ನೀನು ಸಾಯೋ ಕಾಲಕ್ಕೆ ನಿನ್ನ ಮಗ್ಗುಲಲ್ಲಿ ಹುಳ ಸುರಿಯಲಿ
ನಿನ್ನ ವಂಶ ಹೆಚ್ಚ ಬೇಡ ಒಬ್ಬನೇ ಆಗಲಿ

ಮರಿದೇವರು ದೇವಮ್ಮನ 'ಮಠಮನೆ' ಏನನ್ನೂ ಉಳಿಸಲಿಲ್ಲ. ಅವಳಿಗೆ ಕಡು ಬಡತನವನ್ನೇ ನೀಡಿ, ತನ್ನ ಬದುಕಿನುದ್ದಕ್ಕೂ ಅವಳು ಪಶ್ಚಾತ್ತಾಪದ ಬೆಂಕಿಯಲ್ಲಿ ಬೇಯುವಂತೆ ಮಾಡಿ ಮುಂದೆ ಹೋದನು, 'ಮದ್ದು ಮಾಯದ' ಎಲ್ಲರಿಗೂ ಎಚ್ಚರಿಸಿ. ಸಜ್ಜನರನ್ನು ಆ ಕುತ್ತದಿಂದ ಪಾರುಮಾಡಿ, ಯಾತ್ರೆಯನ್ನು ಮುಂದುವರಿಸಿದನು.

ಮರಿದೇವರು ಮುಂದೆ ದೇವನೂರನ್ನೂ ಕಂಡು, ಅಲ್ಲಿನ ಶರಣರ ಮಠದ ಕಡೆ ಬಂದನು. ಬಾಗಿಲಲ್ಲಿ ನಿಂತು,

ಹರನ ಭಿಕ್ಷ, ಶಿವನ ಭಿಕ್ಷ, ನಾಕುಪಾದ ಜೋಳಿಗ್ಗೆ ಭಿಕ್ಷ

ಎಂದು ಸಾರಿದನು. ಹೊತ್ತಲ್ಲದ ಹೊತ್ತಿನಲ್ಲಿ ಬಂದ ಬಾಲ ಜಂಗಮನಿಗೆ ಅಲ್ಲಿಯೂ ಸರಿಯಾದ ಪುರಸ್ಕಾರ ದೊರೆಯಲಿಲ್ಲ. "ಭಿಕ್ಷೆ ಮಾಡಿದರೆ ಹೌದು, ಭಿಕ್ಷೆ ಮಾಡದಿದ್ದರೆ ಇಲ್ಲ. ಮನೆ ಮನೆ ಬಿನ್ನಕ್ಕೆ ನಮ್ಮ ಗುರುಗಳು ಹೋಗ್ಯವರೆ, ಅವರಂತೆ ಭಿಕ್ಷೆ ಮಾಡಿ ಬಿನ್ನಮಾಡಿ ಬರಬೇಕು, ಆಗ ಮಾತ್ರ ಇಲ್ಲಿರಬಹುದು" ಎಂಬ ನುಡಿಗೆ ನಕ್ಕು ಸುತ್ತೂರು ಮಠದ ದಾರಿಯನ್ನು ಹಿಡಿದು ಬಂದನು.

"ನರಲೋಕದಲ್ಲಿ ಸುತ್ತೂರು ಮಠ, ಕುಂತೂರು ಮಠ, ಹೆಚ್ಚು ಅಂತಾರೆ"–ಈ ಎರಡು ಮಠಗಳ ಹಿರಿಮೆಯನ್ನು ಅರಿತೇ ಬರಬೇಕೆಂದು ಮರಿದೇವರು ಸುತ್ತೂರಿಗೆ ಬಂದನು. ಕಪಿಲೆಯ ಬಲತೋಳಿನ ಆ ಪುಣ್ಯನೆಲೆಯ ಸಿರಿಗೆ ತಲೆದೂಗಿ, ಶ್ರೀಮಠದ ಮುಂದೆ 'ಮಾಯದಲ್ಲಿ' ಕಾಣಿಸಿಕೊಂಡನು.

ಬಿಕ್ಷವೋ........ಬಿಕ್ಷವೋ........

ಯಾರೋ ಬಾಲ ಜಂಗಮರು ಬಂದಿದ್ದಾರೆ! ಅವರ ನಿಲುವು ಅವರ ನೋಟ, ಅವರ ತೇಜಸ್ಸು ಅಪೂರ್ವವಾಗಿವೆ. ಕೇಳಿಯೇ ತಿಳಿಯಬೇಕೆನಿಸಿತು ಗುರುಗಳಿಗೆ—

ತಾವು ಯಾವ ಸ್ಥಳ.... ಯಾವ ಭೂಮಿ.... ನಿಮ್ಮ ಹೆಸರೇನು ?

ಗುರುವಿನ ನುಡಿಗೆ ಮರಿದೇವರು ಮುಂದನಗೆ ಬೀರಿ ಉತ್ತರಿಸಿದ.

"ಅಯ್ಯಾ ಜಂಗಮರೇ ನಾವು ಹುಟ್ಟಿದ್ದು ಉತ್ತರ ದೇಶ. ಬೆಳದದ್ದು ಕತ್ತಲ ರಾಜ್ಯ ....... ಪಾದಪೂಜೆ ಮಾಡಲು ಗುರುವೊಬ್ಬರನ್ನು ಹುಡುಕಿ ಬರುತ್ತಿದ್ದೇವೆ.. .....ನನಗೊಂದು ನಾಮಕರಣ ಮಾಡಬೇಕು.

ಮರಿದೇವರ ನುಡಿಗೆ ಗುರುಗಳು ಸಂತುಷ್ಟರಾದರು. ಆದರೂ ಅವನ ಸತ್ವವನ್ನು ಪರೀಕ್ಷಿಸಲು ಅವರೆಂದರು :

"ನಿನಗೊಪ್ಪುವ ನಾಮಕರಣ ಮಾಡಬೇಕಾದರೆ ಮೂಗಳ ರಾಗಿ ಕುಕ್ಕೇಲಿ ತುಂಬಿದೆ. ಅದನ್ನು ಮೂರೇ ಸುತ್ತಿಗೆ ಬೀಸಬೇಕು."

ಗುರುಗಳ ಮಾತಿಗೆ ಮರಿದೇವರು ಅಂಜಲಿಲ್ಲ. ರಾಗಿಯ ಮನೆಗೆ ಅವನನ್ನು ಕರೆತಂದರು. ಒಂದಂಕಣದ ತುಂಬ ರಾಗಿಯ ಕಲ್ಲು.........ದೊಡ್ಡ ಗೂಡೇಲಿ 'ಮೂಗಳ ರಾಗಿ'ಯನ್ನು ಕಂಡು ಮರಿದೇವರು ಬೆರಗಾದ, ಬೀಸಲೇಬೇಕು. ಬೀಸದಿದ್ದರೆ ಗುರು ಶಾಪಕ್ಕೆ ಗುರಿಯಾಗಬೇಕು! ರಾಗಿಯ ಮನೆಯ ಬಾಗಿಲನ್ನು ಹಾಕಿಕೊಂಡು ಎಲ್ಲರೂ ಹೊರಟು ಹೋಗಿದ್ದಾರೆ ! ಮರಿದೇವರಿಗೆ ತುಸು ಕೋಪವೇ ಬಂದಿತು. ಕೂಡಲೇ ತನ್ನ 'ಮಾಯದ ಜೋಳಿಗೆಗೆ ಹಸ್ತ ಬಡಿದು' ಬೂದಿಯನ್ನು ಚಿಮ್ಮಿದ. ಮೂವರು ಮಾರಿಯರು ಸೃಷ್ಟಿಯಾದರು........ ಒಳ್ಳೆಮಾರಮ್ಮ, ಕಣ್ಣುಕಾಣದ ಮಾರಮ್ಮ, ಕಿವುಡುಮಾರಮ್ಮ ಮೂವರೂ ಬಂದು ಮೂರು ದಿಕ್ಕಿನಲ್ಲಿ ಕುಳಿತು ರಾಗಿಯನ್ನು ಬೀಸಿ, ಗೂಡೆಯಲ್ಲಿ ತುಂಬಿ ಕಲ್ಲಿನ ಮೇಲಿಟ್ಟರು.

ಮರಿದೇವರ ಮಹಿಮೆಯನ್ನು ಕಂಡು ಗುರುಗಳು ಬೆರಗಾದರು. "ನಮ್ಮ ಮರಿದೇವರಾಗಿ ಇಲ್ಲಿಯೇ ಇದ್ದುಬಿಡು" ಎಂದು ಕೇಳಿಕೊಂಡರು. ಆದರೆ ಆ

ಮಾಯಕಾರ ಅಲ್ಲಿ ನಿಲ್ಲಲಿಲ್ಲ, 'ಈ ಮಠವೂ ನನಗೆ ತರವಲ್ಲ' ಎಂದು ತನ್ನ ಗುರಿಯತ್ತ ಮತ್ತೆ ಸಾಗಿದನು.

ಮುಗ್ಗು ಮಗ್ಗಲ್ಲ ಗಿಣಿಗೇ
ಹೂವು ಬಂದವು ನೋಡಿರೆ
ಮಾದಯ್ನ ಗಿಣಿಗೆ
ಮುಗ್ಗು ಬಂದವು ನೋಡಿರೆ

ಹಿಮ್ಮೇಳದವರು ಕಥೆಯ ನಿಲುಗಡೆಗೆ ದನಿಯೆತ್ತಿ ಹಾಡಿದ್ದಾರೆ........ ಮುಂದಿನ ಕಥೆಗೆ ಸ್ಫೂರ್ತಿಗೊಂಡು ಮುಮ್ಮೇಳದವನು ಅಣಿಯಾಗುತ್ತಿದ್ದಾನೆ.

——

# ಮೂಡಮಲೆಯ ದಿಕ್ಕಿನಲ್ಲಿ

ದೇವ ಪಾಲಿಸೊ.–ಮಾದೇವ ಪಾಲಿಸೊ
ಮಾದೇವ್ನ ಮಠದಲ್ಲಿ ನೂರೊಂದು ಲಿಂಗವ
-ಚೆಂದಾಗಿ ಪೂಜಿಸೋ
ಉತ್ತರ ದೇಶ್ದಲ್ಲಿ ಹುಟ್ಯಾರೊ ಮಾದೇವ
ಮೂಡಲ ಕೈಲಾಸ್ಕೆ ಹೋಗ್ಯಾರೋ ಮಾದೇವ
ಅಲ್ಲಿ ಮಾದಯ್ಯ ನೆಲೆಗೊಂಡ
ಚೆಂದಾಗಿ ಪೂಜಿಸೊ

ಕಂಡಕಂಡಲ್ಲಿ ಪವಾಡಗಳನ್ನೆಸಗುತ್ತಾ, ತನ್ನ ಮಹಿಮೆಯನ್ನು ಬಿತ್ತುತ್ತಾ ಮರಿದೇವರು ಪುಣ್ಯನೆಲೆಯೊಂದನ್ನರಸುತ್ತಾ ನಡೆದನು. ಅರಮನೆ ಗುರುಮನೆಗಳನ್ನು ಕಂಡನು, ಪಾಮರರನ್ನೂ ಪ್ರಸಿದ್ಧಪುರುಷರನ್ನೂ ಶ್ರೀಮಂತರನ್ನೂ ಪರಿಕಿಸಿದನು. ಮೆಚ್ಚುವಲ್ಲಿ ಮೆಚ್ಚಿ, ನಚ್ಚುವಲ್ಲಿ ನಚ್ಚಿ, ಕೊನೆಗೆ ಕೊಚ್ಚುವಲ್ಲಿ ಕೊಚ್ಚಿಯೂ ಸಾಗಿ ಬಂದನು.... ನಾಡಿನ ಮೇಲೆಲ್ಲ ಮಿಂಚಿನಂತೆ ಹರಿದು, ಅನ್ಯಾಯ ಕಂಡಲ್ಲಿ, ಅಧರ್ಮ ಸುಳಿದಲ್ಲಿ, ನೀತಿ ಅನೀತಿ ತಲೆಹಾಕಿದಲ್ಲಿ ಗುಡುಗಿನಂತೆ ಗುಡುಗಿ ನಡೆದನು.

ಮರಿದೇವರ ದೃಷ್ಟಿ ಇನ್ನು ಕುಂತೂರು ಮಠದತ್ತ ಹರಿಯಿತು. ಆ ಮಠವನ್ನೂ ಒಮ್ಮೆ ಹೊಕ್ಕುಬರುವ ಇಚ್ಛೆಯಲ್ಲಿ ಅತ್ತಬಂದನು.

ಕುಂತೂರು ಮಠದ ಪ್ರಭುಸ್ವಾಮಿಗಳು ನಿಷ್ಠಾವಂತ ತಪಸ್ವಿಗಳು. ಅವರ ವಾಸವಾದರೋ ಭೂಮಿಯ ಒಳಗೆ ಹನ್ನೆರಡು ಆಳುದ್ದದ ಬಾವಿಯಜಲದಲ್ಲಿ. ಅವರು ತಪೋರೂಢರಾಗಿರುವವರು. "ಅಟ್ಟುದ್ದ, ತಿನ್ನುವವರಲ್ಲ... ಹಸಿತಿನ್ನೋರಲ್ಲ, ಬಿಸಿ ತಿನ್ನೋರಲ್ಲ, ಅವರ ಆಹಾರವಾದರೋ ನಾಗರ ವಿಷ ಬೆರೆತ ಹಸುವಿನ ಹಾಲು. ರಾತ್ರಿ ಹಗಲು ಹನ್ನೆರಡು ಹೆಡೆಯ ಸರ್ಪ ಸದಾ ಅವರ ದಾಸನಾಗಿ ಸೇವಿಸುತ್ತಿರುತ್ತದೆ. 'ಆದಿಶೇಷ' ಲೋಕ 'ಚಂಚಾರ' ಮಾಡಿ ಸಮರಾತ್ರಿಗೆ ಬಂದು ಹನ್ನೆರಡಾಳುದ್ದದ ಮಾಳಿಗೆಗೆ ಇಳಿದು ಬೆಳ್ಳಿಬಟ್ಟಲಿಗೆ ವಿಷ ಕಕ್ಕಿಮುಂದೆ ಹೋಗುತ್ತದೆ. ಇಂಥ ಉಗ್ರಮೂರ್ತಿಯಾಗಿ ಪಾತಾಳದಲ್ಲಿ ಪ್ರಭುಸ್ವಾಮಿಗಳು

ತಪಸ್ಸಿನಲ್ಲಿ ಮಗ್ನರಾಗಿದ್ದರು.

ಅದೇನು ಮರಿದೇವರಿಗೆ ತಿಳಿಯದ ವಿಷಯವೇ ಬಾವಿಯ ದಡದಮೇಲೆ ನಿಂತು ಭಿಕ್ಷೆಯನ್ನು ಕೋರಿದ್ದಾನೆ.

"ಭಿಕ್ಷವೋ ಭಿಕ್ಷವೋ "

ಪಾತಾಳದಲ್ಲಿ ಗುರುಗಳಿದ್ದಾರೆ, ಹನ್ನೆರಡು ಆನೆಯ ತೂಕದ ದೊಡ್ಡ ಗುಂಡು ಬಾವಿಯ ಬಾಯಿಗೆ ಚಾಚಿಕೊಂಡಿದೆ ! ಗುರುವಿಗೆ ಮರಿದೇವರ ಧ್ವನಿ ಕೇಳಿಸಿತು. "ಯಾರಪ್ಪ ? ಅಂಥ ಪುಣ್ಯಾತ್ಮ. ನನ್ನ ಬಳಿಗೆ ಬರಬೇಕು....ನಾನು ಹೊರಗೆ ಬರುವುದಿಲ್ಲ." ಗುರುಗಳು ಒಳಗಿನಿಂದಲೇ ನುಡಿದರು. ಮರಿದೇವರು ಕ್ಷಣ ಯೋಚಿಸಿದ. ಹೇಗಾದರೂ ಗುರುಪಾದ ಸಿಕ್ಕಿದರೆ ಸಾಕು, ಶರಣು ಮಾಡಿಯೇನು ಎಂದು 'ತಾಯಿ ಉತ್ತರಾಜಮ್ಮನನ್ನು, ತಂದೆ ಚಂದ್ರಶೇಖರ ಮೂರ್ತಿಯನ್ನ ನೆನೆದು' ಬಂಡೆಯನ್ನು ಎತ್ತಿ ಗುರುವಿನ ಬಳಿಗೆ ಬಂದು ಶರಣು ಮಾಡಿದ.

ಗುರುವಿಗೆ ಮರಿದೇವರನ್ನು ಕಂಡು ಸೋಜಿಗವಾಯಿತು. ಎಲ್ಲವನ್ನೂ ಅವನಿಂದಲೇ ಕೇಳಿ ತಿಳಿದರು. ಮರಿದೇವರು ಗುರುಪಾದದಲ್ಲಿ ಅರಿಕೆಮಾಡಿ ಕೊಂಡ. "ತಮ್ಮ ಪಾದ ಚಾಕರಿ ಮಾಡಿಕೊಂಡು ಮಠದಲ್ಲಿ ಇರಬೇಕು.... ನನಗೆ ವಿದ್ಯೆ ಬುದ್ಧಿ ಕಲಿಸಬೇಕು. ಅಪ್ಪಣೆ ಕೊಡಿ....

"ಅಪ್ಪಾ....ನಿನಗೆ ಯಾವ ವಿದ್ಯೆ ಬೇಕು....?"

"ಓದುಬರಹ ಬೇಕು....ಮುಂದಲ ಮಗನಿಗೆ ವಾಂತಿ ಭೇದಿ, ಹಿಂದಲ ಸೊಸೆಗೆ ಹೊಟ್ಟೆನೋವು. ನಿಂತಿರುವದಯ್ಯ ಸೀಳಬೇಕು....ಹೂತಿರುವ ದಯ್ಯ ಕಿತ್ತು ಬಿಸಾಡಬೇಕು....ವಿಷವಿಕ್ಕಿದವರ ಮನೆ ಒಂದು ಗಳಿಗೆ ನಿರ್ನಾಮಮಾಡ ಬೇಕು....ಇದನ್ನು ಕಲಿಸಿ...."

ಅಯ್ಯೊ ಶಿವ ಶಿವ ಜಂಗಮ ಆಡುವ ಮಾತು ನನಗೆ ಬರುವುದಿಲ್ಲ.

"ಗುರುಗಳು" ವಿಸ್ಮಿತರಾದರು ಶಿಷ್ಯನ ಒತ್ತಾಯ ಹೆಚ್ಚಾಗಿದೆ. ಕಲಿಸಲು ಸಾಧ್ಯವಿಲ್ಲವೆಂದರೆ ಗುರುಗಳೆಂದು ಪೂಜಿಸನು ! ಏನು ಮಾಡಲೂ ತೋಚದ ಪ್ರಭು ಸ್ವಾಮಿಗಳು ಕೊನೆಗೆ,

"ಆಯಿತು ಕಲಿಸುತ್ತೇನೆ....ಆದರೆ ಕೆಲವು ದಿವಸ ಇರಬೇಕು.... ನಿನ್ನ ವಿದ್ಯೆ ಬುದ್ಧಿ ನೋಡಬೇಕು !" ಎಂದರು.

ಮರಿದೇವರು ಸಮ್ಮತಿಸಿದ. ಮರುದಿನ ಏಳು ಗಂಟೆಗೆ ಬರುವುದಾಗಿ ಹೇಳಿ ಕುಂತೂರು ಮಠದಲ್ಲಿ ಮಲಗುವಂತೆ ಸೂಚಿಸಿದರು ಗುರುಗಳು ! ಮರಿದೇವರು ಹಸಿವೆಂದು ಮತ್ತೆ ಗುರುವನ್ನೇ ಬೇಡಿದ.

"ಅಟ್ಟದ್ದ ಮುಟ್ಟಿದ್ದ ಸುಟ್ಟಿದ್ದ ನಾವು ಊಟ ಮಾಡುವುದಿಲ್ಲ...ಎಲ್ಲ ಹಸಿ ಊಟ" ಎಂದರು ಪ್ರಭುಸ್ವಾಮಿ.

"ಅದನ್ನೇ ಕೊಡಿ"—ಶಿಷ್ಯ ಸೋಲುವಂತೆ ಕಾಣಲಿಲ್ಲ. "ಇದು ನಾಗ ಸರ್ಪದ ವಿಷ !"

"ಕೊಡಿ ಗುರುಪ್ರಸಾದ !"

ಮರಿಸ್ವಾಮಿ ವಿಷವನ್ನು ಕೊಂಡು ಸೇವಿಸಿದ. ಗುರುವನ್ನು ಬಿಳ್ಕೊಂಡು ಕುಂತೂರು ಮಠಕ್ಕೆ ಬಂದು ಉರಿಗದ್ದಿಗೆಯ ಮೇಲೆ ಆ ರಾತ್ರಿ ಪವಡಿಸಿದ.

ಮರುದಿನ ಉದೂರಿನಲ್ಲಿ ಕುಂತೂರುಗ್ರಾಮದ ಮಂದಿ, ಅಕ್ಕಪಕ್ಕದ ಹಳ್ಳಿಯ ಜನ ಕೊಂಬು, ಕಹಳೆ, ತಮ್ಮಟೆ, ನಗಾರಿಗಳೊಡನೆ ಗುರುವನ್ನು ಎದುರುಗೊಳ್ಳಲು ಬಂದರು. ಮನೆಗೊಂದು ತಟ್ಟೆ ಆರತಿ ಹಿಡಿದುಬಂದ ಜನರ ಭಯ, ಭಕ್ತಿ, ಶ್ರದ್ಧೆಗಳನ್ನು ಕಂಡು ಮರಿದೇವರೂ ಬೆರಗಾದನು !

ಪ್ರಭುಸ್ವಾಮಿಗಳು ಪಾತಾಳದಿಂದ ಹೊರಬಂದರು. ಜಡೆಯನ್ನು ಎಳೆದು ಕೊಂಡು ಬಂದರು ! ಅಂಗಾಲು ಜಡೆ, ಮುಂಗಾಲು ಜಡೆಯ ಆ ಗುರು, ಮಠಕ್ಕೆ ಬಂದು ಕುಳಿತರು. ಕವಿದ ಭಕ್ತರು ಬಂದು ಗುರುಪಾದಕ್ಕೆರಗಿ, ಆಶೀರ್ವಾದವನ್ನು ಪಡೆದು ಮರಳಿದರು.

"ನಾನು ಕಾಯುತ್ತಿದ್ದೇನೆ "

—ಮರಿದೇವರು ಕೊನೆಯಲ್ಲಿ ಬಂದು ಗುರುಪಾದಕ್ಕೆ ಶರಣುಮಾಡಿದ. ಗುರುಗಳು ಕುಂತೂರು ಗ್ರಾಮದ ಹನ್ನೊಂದುಮಂದಿ ಹೂಕುಯ್ಯುವ ಹುಡುಗರನ್ನು ಕರೆದು ಮರಿದೇವರನ್ನೂ ಅವರ ಜೊತೆ ಸೇರಿಸಿಕೊಳ್ಳುವಂತೆ ಹೇಳಿದರು. ಹೂವಿನ ಊಳಿಗಕ್ಕೆ ಜೊತೆಯಲ್ಲಿ ಕರೆದುಕೊಂಡು ಹುಡುಗರು ಹೊರಟರು.

"ನಿಲ್ಲಿ ! ನಿಲ್ಲಿ !"

—ಮರಿದೇವರು ಎಲ್ಲರನ್ನೂ ತಡೆದ "ಇಲ್ಲಿ ಆನೆ, ಹುಲಿ, ಸಿಂಹ, ಶಾರ್ದೂಲ ಉಂಟೆ ?"

"ಉಂಟು"

"ಹುಲಿ ಬಂದು ಎಕ್ಕತ್ತಿನ ಮೇಲೆ ಕುಳಿತು ರಕ್ತ ಕುಡಿದರೆ ಏನು ಮಾಡಲಿ ?"

ಹುಡುಗರೆಲ್ಲ ಗೊಳ್ಳೆಂದು ನಕ್ಕರು. ಇವನಾರೋ ಅಂಜುಬುರುಕು ಜಂಗಮಯ್ಯ ಎಂದು ಜರಿದರು.

ಹುಡುಗರ ಜೊತೆ ಬೆರೆತು, ನಕ್ಕು ನಲಿಯುತ್ತಿದ್ದ ಮರಿದೇವರು ಹಾದಿ ಬದಿಯ ಬೇಲಿಯೊಂದರ ಮೇಲೆ ಕಾಲಿಟ್ಟ. ಎಂಟು ಗೇಣಿನ ಕಾರೆಯ ಮುಳ್ಳು ಕಾಲಿಗೆ ಬಡಿಯಿತು. "ಹಾ, ಅಯ್ಯೋ ! ಎಂದು ಸಂಕಟಪಡುತ್ತ ಕುಳಿತು ಬಿಟ್ಟ, ಹುಡುಗರಿಗೂ ಕಳವಳವಾಯಿತು. ಹೊಂಗೆಯ ಮರದಡಿ ಅವನನ್ನು ಮಲಗಿಸಿ ಆ ಮುಳ್ಳನ್ನು ಹಲ್ಲಿಂದ ಕಚ್ಚಿ ಕೀಳಲು ಪ್ರಯತ್ನಿಸಿದರು. ಮುಳ್ಳು ಬರಲಿಲ್ಲ. ಕೊನೆಗೆ ಎಲ್ಲರೂ ತಮ್ಮತಮ್ಮಲ್ಲಿಯೇ ಒಂದು ತೀರ್ಮಾನಕ್ಕೆ ಬಂದರು. ಮರಿದೇವರನ್ನು ಅಲ್ಲಿಯೇ ಬಿಟ್ಟು ತಾವು ಹೂಕೀಳಲು ಹೋದರು. ಸಂಜೆ ಮರಳುವಾಗ ಹನ್ನೊಂದು ಮಂದಿಯೂ ಒಂದೊಂದು ಹಿಡಿ ಹೂವನ್ನು ಮರಿದೇವರಿಗೆ ಕೊಟ್ಟುಬಿಡುವುದೆಂದು ಮಾತಾಡಿಕೊಂಡರು !

ಹುಡುಗರು ಅತ್ತ ಹೋದಮೇಲೆ ಮರಿದೇವರು ಮುಳ್ಳನ್ನುಕಿತ್ತೆಸೆದನು. ಬೆಳ್ಳಿಯ ಕೋಲನ್ನು ಬಿಲ್ವಪತ್ರೆಯ ಮರದ ಮೇಲಿಟ್ಟನು. ತಾನು ಕುಂತೂರು ಮಠದಿಂದ ಕಲ್ಲೂರು ಮಠಕ್ಕೆ ಬಂದನು. ಅಲ್ಲಿಂದ ಮಾಲಂಗಿ, ಮುಳ್ಳೂರು ಹುಡುಗರ ಜೊತೆ ಗೋಲಿಗಜ್ಜುಗ ಆಡಿ ಸೂರ್ಯ ಇಳಿಮುಖವಾಗುವ ವೇಳೆಗೆ ಮರಳಿದನು.

ಹೂವಿನ ಊಳಿಗವನ್ನು ಮಾಡಲಿಲ್ಲ. ಹುಡುಗರೆಲ್ಲ ಹೂವಿನೊಡನೆ ಆಗಲೇ ಹೊರಟುಹೋಗಿದ್ದಾರೆ. ಕೊನೆಗೆ ಮರಿದೇವರು ತನ್ನ ಬೆಳ್ಳಿಯ ಕೋಲನ್ನು ತೆಗೆದುಕೊಂಡು, 'ಹಾವು ಬಡಿದು. ಚೇಳು ಬಡಿದು. ಗೊದ್ದ ಬಡಿದು, ಗೋಸಂಬಿ ಬಡಿದು. ಹಲ್ಲಿ ಬಡಿದು. ಪಲ್ಲಿ ಬಡಿದು....' ಹೀಗೆ ಮುನ್ನೂರುನಾಲ್ಕು ಬಗೆಯ ಕೀಟಗಳನ್ನು ಬಡಿದು, ಕುಕ್ಕೆಗೆ ತುಂಬಿ ತಾವರೆ ಕೊಳಕ್ಕೆ ತಂದು ಮೂರುಬಾರಿ ಮುಳುಗಿಸಿದನು. ಅವೆಲ್ಲವೂ ಜಾತಿಗೊಂದು ಪುಷ್ಪವಾದುವು. ಗಮಗಮಿಸುವ ಆ ಹೂವನ್ನು ತಂದು ಗುರುವಿನ ಪಾದಕ್ಕೆ ಅರ್ಪಿಸಿದನು.

ಆವಾಗಲೀಗ ಕುಂತೂರು ಮಠವೆಲ್ಲ
ದೇಕುರಿಸಿ ಹೋಗೆ ಬಿದ್ದಿತಂತೆ !

ಮೂಗೊಡೆಯುವ ಪರಿಮಳ ಎಲ್ಲೆಡೆಯಲ್ಲಿಯೂ ತುಂಬಿಕೊಂಡಿತು! ಗುರುಗಳು ಎಂದೂ ಅಂಥ ಹೂವನ್ನು ಕಂಡಿರಲಿಲ್ಲ ! ಹುಡುಗರನ್ನೆಲ್ಲ ಕರೆದು ಇಂಥ ಹೂವನ್ನೆ ಇನ್ನು ಮೇಲೆ ತರುವಂತೆ ತಿಳಿಸಿದರು.

ಹುಡುಗರಿಗೆ ವ್ಯಥೆಯಾಯಿತು. ಮರಿದೇವರು ತರುವ ಹೂವನ್ನು ನೋಡಿಕೊಳ್ಳಲು ಮರುದಿನ ಅವರು ಮೆಳೆಯ ಮರೆಯಲ್ಲಿ ಅಡಗಿ ಕುಳಿತರು. ಮರಿದೇವರು ಎಂದಿನಂತೆ ನಾನಾ ಬಗೆಯ ಕೀಟಗಳನ್ನೆ ಹಿಡಿದು ಹೂವಗಳನ್ನು ಮಾಡಿ ತಂದು ಗುರುವಿಗೊಪ್ಪಿಸಿದ.

"ಇದು ನಮಗೆ ಬರದ ವಿದ್ಯೆಯೇ!" ಹುಡುಗರಿಗೆ ಸಂತೋಷವಾಯಿತು. ಮರುದಿನ ಎಲ್ಲರೂ ನಾನಾ ಬಗೆಯ ಹಾವು ಚೇಳು, ಹಲ್ಲಿಗಳನ್ನು ಬಡಿದು ಕುಕ್ಕೆಗೆ ತುಂಬಿ ಮಠಕ್ಕೆ ತಂದು, ತಾವರೆಕೊಳದಲ್ಲಿ ಮುಳುಗಿಸಿದರು. ಅರೆಜೀವವಾಗಿದ್ದ ಪ್ರಾಣಿಗಳೆಲ್ಲಾ ಸಜೀವಗೊಂಡು ಮಠದಲ್ಲೆಲ್ಲಾ ಓಡಾಡತೊಡತೊಡಗಿದವು. ಹುಡುಗರು ಮರಿಸ್ವಾಮಪ್ಪನ ಮೇಲೆ ದೂರನ್ನು ಹೇಳಿ ಜಾರಿಕೊಂಡರು. ಕೊನೆಗೆ ಗುರುಗಳು ಮರಿದೇವರಿಗೆ ಬೇರೆ ಊಳಿಗವನ್ನೇ ನೇಮಿಸಿದರು.

ಮರುದಿಸದಿಂದ ಮರಿದೇವರು ಬೆಳ್ಳಿಕೋಲನ್ನು ಹಿಡಿದು, ಮಠದ ದನಗಳನ್ನು ಕಾಯಲು ತೊಡಗಿದನು. ಎಲ್ಲವನ್ನೂ ಬೆಟ್ಟದಲ್ಲಿ ಮೇಯಿಸಿ ಸಂಜೆಯ ವೇಳೆಗೆ ಗೌಡನೊಬ್ಬನ ಹೊಲಕ್ಕೆ ತಂದು ಕೂಡಿದನು. ಬಡ್ಡಿಗೆ ಬಡ್ಡಿ ಚೂಡಿಗೆ ಚೂಡಿ ತೆಗೆದುಕೊಳ್ಳುತ್ತಿದ್ದ ಆ ಗೌಡ ಮಠದ ದನಗಳ ಮೇಲೆ ಪಟೇಲರಿಗೆ ದೂರು ಕೊಟ್ಟ. ಎಂಟು ಎಕರೆ ಫಸಲನ್ನು ಮೇದಿವೆ–ಅಷ್ಟಕ್ಕೂ ಹಣ ಕಟ್ಟಬೇಕೆಂದು ಒತ್ತಾಯಪಡಿಸಿದ.

ಹಲಸಿನ ಮರದ ಮೇಲೆ ಮರಿದೇವರು ಕುಳಿತು ಪ್ಯೆಮರಿತಿದ್ದ. ಸ್ವಾಮಿಗಳೊಡನೆ, ಪಟೇಲರೊಡನೆ ಗೌಡ ತನ್ನ ಹೊಲದ ಬಳಿಗೆ ಬರುತ್ತಿರುವುದನ್ನು ಗಮನಿಸಿ, ದನಗಳನ್ನು ದೊಡ್ಡಿಗೆ ಅಟ್ಟಿದನು. ತನ್ನ ಜೋಳಿಗೆಯಿಂದ ಬೂದಿಯನ್ನು ತೆಗೆದು ಮಂತ್ರಿಸಿ ಹೊಲದ ಮೇಲೆ ತಳಿಯಲು ಫಸಲು ಎಂದಿನಂತೆಯೇ ನಳನಳಿಸತೊಡಗಿತು.

ಪಂಚಾಯಿತಿ ಹೊಲದವರೆಗೆ ಬಂದಿತ್ತು. ಫಸಲು ಎಂದಿನಂತೆಯೇ ಇರಲು

ಗೌಡನೇ ತಪ್ಪು ಕೊಡಬೇಕಾಗಿ ಬಂದಿತು. ಮರಿದೇವರು ಹನ್ನೆರಡು ಖಂಡುಗ ಉಕ್ಕಿನ ಕಡಲೆಯನ್ನು, ಕೊಳ್ಳೇಗಾಲದ ಕಂಚುಗಾರರಿಂದ ಮಾಡಿಸಿಕೊಡ ಬೇಕೆಂದು ಹಟ ಹಿಡಿದನು. ಗೌಡನ 'ಹೊಲ, ಮನೆ, ಚಿನ್ನ, ಬೆಳ್ಳಿ' ಎಲ್ಲವೂ ಮಾರಿಹೋದವು. ಅವನು ನಿರ್ಗತಿಕನಾದ.

ಮರಿದೇವರಿಗೆ ಬೇರೆ ಊಳಿಗ ಗೊತ್ತಾಯಿತು. ಉಕ್ಕನಹಳ್ಳಿ ಬಸಪ್ಪನ ಪೂಜೆಯನ್ನು ನೋಡಿಕೊಳ್ಳುವಂತೆ ಗುರುಗಳು ತಿಳಿಸಿದರು. ಈ ವೇಳೆಗೆ ಮುನ್ನೂರು ಮೂವತ್ತು ಕೋಟಿ ಜಂಗಮ ದೇವರನ್ನು ಕರೆಸಿ, ತಾವರೆ ಕೊಳ ದಲ್ಲಿ ತೀರ್ಥ ಹಾಕಿ, ಮರಿದೇವರಿಗೆ ಲಿಂಗಧಾರಣೆ ಮಾಡಿ 'ಗುಡ್ಡ'ನನ್ನಾಗಿ ಮಾಡಿದರು.

ಉಕ್ಕನಹಳ್ಳಿಯ ಕಲ್ಲುಬಸವ ತನ್ನ ಉಗ್ರ ಸ್ವರೂಪದಿಂದ ಎಲ್ಲರ ಎದೆ ಯನ್ನೂ ನಡುಗಿಸಿತ್ತು. ಆ ಬಸವನ ಪೂಜೆಗೆ ನೂರೊಂದು ಒಕ್ಕಲು ತಮ್ಮಡಿ ಗಳಿದ್ದರು. ಪ್ರತಿ ನಿತ್ಯವೂ ಒಂದೊಂದು ಮನೆಯವರು ಎದ್ದು, ಮನೆ ಸಾರಿಸಿ ರಂಗವಲ್ಲಿ ಬಿಟ್ಟು, ತಲೆ ಬೋಳಿಸಿ, ಕಜ್ಜಾಯ ತುಪ್ಪದ ಹೆಡಗೆಯನ್ನು ನೆತ್ತಿ ಯಲ್ಲಿ ಹೊತ್ತು ಬಸವನ ಪೂಜೆಗೆ ಬರಬೇಕು. ಕಲ್ಲುಬಸವ ಮೇಲೆದ್ದು ಅದನ್ನು ತಿಂದು, ಹೆಡಿಗೆಯನ್ನು ತಂದವನನ್ನೂ ನುಂಗಿಬಿಡುತ್ತಿದ್ದಿತು. ಹೀಗೆಯೇ ನೂರೊಂದು ಜನರನ್ನು ನುಂಗಿದ್ದಿತು.

'ಒಬ್ಬ ತಬ್ಬಲಿ ಮಗ' ಮದುವೆಯಾಗಿ ತಿಂಗಳಿಲ್ಲ. ಆಗಲೇ ಬಸವನಿಗೆ ಬಲಿಯಾಗುವ ಸರದಿ ಬಂದು ಅವನು ಪೂಜೆಗೆ ಹೊರಟ. ಅವನ ತಾಯಿ ಮುಂದೆ, ಹೆಂಡತಿ ಹಿಂದೆ—ಅವರ ಸಂಕಟಕ್ಕೆ, ಗೋಳಾಟಕ್ಕೆ ಊರ ಮಂದಿ ಯೆಲ್ಲಾ ಕಣ್ಣೀರು ಕರೆಯಿತು. ಮರಿದೇವರು ಅಲ್ಲಿಗೆ ಬಂದಾಗ, ಬಸವನ ಕಥೆಯನ್ನು ಕೇಳಿ 'ತಬ್ಬಲಿ ಮಗ'ನನ್ನು ಸಮಾಧಾನಪಡಿಸಿ ಮನೆಗೆ ಕಳುಹಿಸಿದ. ತಾನೇ ಹೆಡಗೆಯೊಡನೆ ಬಸವನಲ್ಲಿಗೆ ಬಂದ.

ಬಸವಣ್ಣನೇನೋ ಹಣ್ಣು ಕಜ್ಜಾಯಗಳನ್ನು ಮುಗಿಸಿದ. ಆದರೆ ತಂದ ವನು ಯಾರೋ 'ಪರಸೀಮೆ'ಯವನಂತೆ ಕಂಡನು. ತಿನ್ನಲು ಶಕ್ತಿ ಬರಲಿಲ್ಲ. ಒಂದೆರಡು ದಿನ ತಡೆದುಕೊಂಡನು.

ಮರಿದೇವರೇ ನಿತ್ಯ ಪೂಜೆಗೆ ಬರ ತೊಡಗಿದನು. ಎರಡು ಮೂರು ದಿನ ಕಳೆದ ಮೇಲೆ ಹನ್ನೆರಡು ಹನ್ನೆರಡು ಖಂಡುಗ ಉಕ್ಕಿನ ಕಡಲೆಯನ್ನು ತೆಗೆದು ಕೊಂಡು ಬಸವನಲ್ಲಿಗೆ ಬಂದನು. ತನ್ನ ಬೆಳ್ಳಿಯ ಬೆತ್ತದಿಂದ ಬಸವನಿಗೆ ಎಳೆದು

ಹೊಡೆದನು. ಕಲ್ಲುಬಸವ ಗುಟುರೆ ಹಾಕಿ ಮೇಲೆ ಎದ್ದ. ಉಕ್ಕಿನ ಕಡಲೆಯನ್ನು ತಿನ್ನುವಂತೆ ಅದರ ಮುಂದೆ ಹಿಡಿದು, ತಿನ್ನದಿರಲು ಮತ್ತೆ ಹೊಡೆದ.

ಉಕ್ಕಿನಹಳ್ಳಿ ಬಸವ ಕಟಕಟನೆ
ನಡುಗಿ ಹೋದ್ನಂತೆ
ಆವಾಗ ನಮ್ಮಪ್ಪಾಜಿ ಮೂರು ಉಕ್ಕಿನ ಕಡಲೆ
ಮಡಗಿದರಂತೆ ಮುಂದಕೆ
ಬಸವಣ್ಣ ಎರಡುಸಲ ಬಾಯಿ ಹಾಕಿದನಂತೆ
ಮುಂದಿನ ಹಲ್ಲು ಒಂದೂ ಇಲ್ಲದಂತೆ
ಉದುರ್ಹೋಗಿ ಬಿಟ್ಟವಂತೆ!

ಕಲ್ಲುಬಸವನ ಸೊಕ್ಕು ತಗ್ಗಿತು. ಪ್ರಭುಸ್ವಾಮಿಗಳ ಕನಸಿನಲ್ಲಿ ಬಸವಣ್ಣ ಕಾಣಿಸಿಕೊಂಡು ತನ್ನ ಸಂಕಟವನ್ನೆಲ್ಲ ತೋಡಿಕೊಂಡ. ಅದರ ಕಷ್ಟ ಪರಿಹಾರಕ್ಕೆ ಗುರುಗಳೇ ಬಂದರು.

ಮರುದಿನ ಪೂಜೆಯ ವೇಳೆಗೆ ಬಿಳಿಯ ಪಲ್ಲಿಯಾಗಿ ಬಸವನ ಹೊಟ್ಟೆಯಲ್ಲಿ ಕುಳಿತರು.

ಮರಿದೇವರು ಎಂದಿನಂತೆ ಉಕ್ಕಿನ ಕಡಲೆಯೊಡನೆ ಬಂದನು. ಬಸವನನ್ನು ಕೂಗಿದನು. ಉತ್ತರ ಬರಲಿಲ್ಲ. ಮತ್ತೆ ಬೆಳ್ಳಿಯ ಬೆತ್ತವನ್ನು ಎತ್ತಿ ಬಿಗಿದನು. ಬಸವ ಗಡಗಡನೆ ನಡುಗಿ ಗುಟುರು ಹಾಕಿ ಮೇಲೆದ್ದಿತು. ಗುರುಗಳಿಗೆ ನಾಲ್ಕನೇ ಜ್ವರ ಬಂದಂತಾಯಿತು, ಬಸವಣ್ಣನಿಗೆ ಮೂರನೆ ಜ್ವರ ಬಂದಿತು. ನಿಜರೂಪವನ್ನು ತಾಳಿದ ಗುರುಗಳು ಮರಿದೇವರ ಮಹಿಮೆಗೆ ಬೆರಗಾಗಿ—

"ನೀನೇ ನನ್ನ ಗುರು...."ಎಂದು ಬೇಡತೊಡಗಿದರು. ಮರಿದೇವರು ತಬ್ಬಿಬ್ಬಾದನು.

"ಶಿಷ್ಯ ಗುರುವಾಗುವುದುಂಟೆ, ಈ ಗುರುದರ್ಶನವೇ ಬೇಡ...." ಎಂದು ಅಲ್ಲಿಂದ ಹೊರಟುಬಿಟ್ಟ.

"ನಿಮಗೆ ಒಂದನೇ ಪೂಜೆ....ನನಗೆ ಎರಡನೇ ಪೂಜೆ ಸಲ್ಲಲಿ" ಎಂದು ಮುನಿದು ನುಡಿದು; ನಿಲ್ಲದೆ ವೇಗವಾಗಿ ಹೊರಟು ಬಿಟ್ಟ. ಪ್ರಭುಸ್ವಾಮಿಗಳು "ಬಾ....ಬಾ...." ಎಂದು ಕೂಗಿಕೊಂಡೇ ಹೊರಟರು. ಕೊನೆಗೆ ಏಳು ಜನ

ಮಾರಿಯರನ್ನು ಸೃಷ್ಟಿಸಿ, ಮರಿದೇವರನ್ನು ಎಳೆ ತರುವಂತೆ ತಿಳಿಸಿದರು. ಅವರೆಲ್ಲ ಮರಿದೇವರನ್ನು ಹಿಡಿದು ತಬ್ಬಲು ಪ್ರಯತ್ನಿಸಿದರು. ಸ್ವಾಮಿ ಕೋಪಮಾಡಿ ಕಿರುಕಾಕು ಹೊಡೆದ, ಇದ್ದಕ್ಕಿದ್ದಂತೆಯೇ ಒಂದು ದೊಡ್ಡ ಆಲದ ಮರದ ಗಾತ್ರ ಬೆಳೆದು ನಿಂತ. ಅವರೆಲ್ಲರೂ ತಬ್ಬಲಾರದೆ ಗುರುಗಳನ್ನು ಕರೆದರು. ಮರಿದೇವರ ಗಾತ್ರವನ್ನು ನೋಡಿ "ಮಾ-ದಪ್ಪ" ಎಂದು ಕರೆದರು.

ಅಂದಿನಿಂದ ಆ ಹೆಸರನ್ನೇ ಧರಿಸುವುದಾಗಿ ಮರಿದೇವರು ತಿಳಿಸಿದನು. ಪ್ರಭುಸ್ವಾಮಿಯವರ ಮಠದಲ್ಲಿ ಅವರ ಹುಲಿ ವಾಹನವಿತ್ತು. ಮಾದಪ್ಪ ಹಿಂದಿರುಗಿ ಅದನ್ನು ನೋಡಿದ. ಅದಕ್ಕೆ ಜೀವ ಬಂತು. ಮಾದಪ್ಪನಲ್ಲಿಗೆ 'ಗುಡುಗುಡ'ನೆ ಓಡಿಬಂತು. ಮಾದಪ್ಪ ಅದನ್ನು ಏರಿ ಮೂಡು ಮಲೆಯ ದಿಕ್ಕಿನಲ್ಲಿ ಮರೆಯಾದ....

ಜೈನಮಃ ಪಾರ್ವತೀಪತೇ........
ಹರ ಹರ ಮಹಾದೇವ........

"ದೇವ ಪಾಲಿಸೊ....ಮಾದೇವ ಪಾಲಿಸೊ"

ಹಿಮ್ಮೇಳದವರು ಕಂಸಾಳೆ, ಕಿನ್ನರಿ, ದಮ್ಮಡಿಗಳ ನಾದದೊಡನೆ ಹಾಡುತ್ತಲೇ ಇದ್ದಾರೆ. ಮುಗಿಯದ ಮಾದಯ್ಯನ ಕಥೆಗೆ, ಮುಮ್ಮೇಳದವನಿಗೆ ಜೀವ ತುಂಬುತ್ತ.

——

# ಸಾಧಿಸಿ ಶ್ರವಣನ ಕೊಂದ

ಮಲೆಯ ಮಾದೇಶ್ವರರ ಅಪೂರ್ವ ಪವಾಡಗಳನ್ನು ಚಿತ್ರಿಸುವ ಕಥೆಗಳನ್ನು ಕಂಸಾಳೆಯವರು ಹಲವು 'ಸಾಲು'ಗಳಲ್ಲಿ ಹಾಡುತ್ತಾರೆ. ಬೇವಿನ ಕಾಳಿಯ ಕಥೆ, ಶಂಕಮ್ಮನ ಕಥೆ, ಜುಂಜೇಗೌಡನ ಕಥೆ, ಸರಗೂರಪ್ಪನ ಕಥೆ, ಇವೆಲ್ಲವೂ ಮಾದೇಶ್ವರರಿಗೆ ಸಂಬಧಿಸಿದಂತೆಯೇ ಬರುವ ಸುದೀರ್ಘ ಕಥಾನಕಗಳು. ಅವುಗಳ ಸಾಲಿನಲ್ಲಿ ಶ್ರವಣನ ಕೊಂದ ಕಥೆಯೂ ಸೇರುತ್ತದೆ. ಏಳು ಮಲೆಗಳ ನಡುವೆ ಹೋಗಿ ನೆಲೆಸಿದ ಮಾದೇಶ್ವರರು ಮೆರೆದ ಮಹಿಮೆಗಳ ವರ್ಣನೆಯನ್ನು ಎಲ್ಲ ಕಂಸಾಳೆಯ ಕಥೆಗಳೂ ಸಮರ್ಥ ರೀತಿಯಲ್ಲಿ ಮಾಡುತ್ತವೆ. ಆ ಬಗೆಯ ಕಥೆಗಳಲ್ಲಿ ಶ್ರವಣನ ಕಥೆಯೂ ಅತ್ಯಪೂರ್ವವಾದುದು.

ಮಲೆಯ ಮಾದೇವ ಬರುವ ಚೆಂದವ
ಸೋಡಿ ನಮ್ಮ ಶಿವನಾ....

ಕಂಸಾಳೆಗಳ ಝಣತ್ಕಾರದಲ್ಲಿ ಮುಖ್ಯ ಕಥೆಗಾರ ಪಲ್ಲವಿಯನ್ನು ಹಾಡುವಲ್ಲಿ ಏಕತಾರಿ, ದಮ್ಮಡಿಗಳೊಡನೆ ಹಿಮ್ಮೇಳದವರು ಸೊಲ್ಲು ಕೊಟ್ಟಿದ್ದಾರೆ. ಕೋಲುಪೂಜೆ, ಕಡ್ಡಿಯನ್ನು ಬೆಳಗಿ ಅಂಗಳದ ತುಂಬ ಕವಿವ ಭಕ್ತರ ಸಮ್ಮುಖದಲ್ಲಿ ಮಹಾಮಹಿಮ ಮಲೆಯ ಮಾದಯ್ಯನ ಕಥೆ ಕವಿದಿದೆ ಧೂಪದ ಕಂಪಿನಂತೆ....

ಹರಹರ ನಮ್ಮಪ್ಪಾಜಿ
ಮಾಯಕಾರ ಮಾದೇಶ್ವರ

ಏಳು ಮಲೆಗಳ ಕಣಿವೆಯೊಂದರಲ್ಲಿ ಸಂಚರಿಸುವಾಗ ಕಾಳಿ, ಕಂಕಾಳಿಯರು ಎದುರಾದರು. ಶ್ರವಣದೊರೆಗೆ ಹುಲಿಯ ಹಾಲು ಕರಡಿಯ ಹಾಲನ್ನು ಕರೆದುಕೊಂಡು ಗಡಿಗೆಗಳನ್ನು ಹೊತ್ತು ಸಾಗುತ್ತಿದ್ದ ಅವರನ್ನು ತಡೆದು ಮಾದಯ್ಯ ಕೇಳಿದನು, ತನಗೂ ಸ್ವಲ್ಪ ಹಾಲನ್ನು ಕೊಡುವಂತೆ. ಕಾಳಿಕಂಕಾಳಿ ಬೆರಗಾದರು ಮಾದಯ್ಯನ ನುಡಿಗೆ. ಬಂಕಾಪುರಿಯ ದೊರೆ ಶ್ರವಣನಿಗೆ ಕೊಂಡೊಯ್ಯುವ ಹಾಲನ್ನು ಈ ಜಂಗಮನಿಗೆ ನೀಡುವುದೇ! ಗಡಿಗೆಗಳು ಕೊರೆಯಾದರೆ ದೊರೆ ಮುನಿದು ತಮ್ಮನ್ನು ದಂಡಿಸನೇ !

"ಅಯ್ಯಯ್ಯೊ ಗುರುದೇವ ನಮಗೆ ಆಕ್ಷೇಪಣೆ ಬರುತ್ತದೆ...."

ಕರಡಿಯ ಹಾಲು, ಹುಲಿಯ ಹಾಲನ್ನು ಕೊಡದೆ, ತನ್ನ ನುಡಿಯನ್ನು ಕೇಳದೆ ಒಯ್ಯಾರದಿಂದ ಹೊರಟ ಅವರನ್ನು ಮಾದಯ್ಯ ಬಿಡಲಿಲ್ಲ. ಶ್ರವಣನ ಸೊಕ್ಕನ್ನು ಮುರಿದು ನಿಮ್ಮನ್ನು ರಕ್ಷಿಸುವೆನೆಂದರೂ ಅವರು ನಂಬಲಿಲ್ಲ. ಮಾದಯ್ಯನ ಮಹಿಮೆ ಆ ಕಾಳಿ ಕಂಕಾಳಿಯರಿಗೆ ತಿಳಿಯಲಿಲ್ಲ. ಮುನಿದ ಮಾದಯ್ಯ ಅವರನ್ನು ಹಿಡಿದು 'ಹೆಡೆಕಟ್ಟು' ಕಟ್ಟಿ, ಅವರು ಹೊತ್ತ ಬಿಂದಿಗೆಯನ್ನು ಕಾಲಿನಿಂದ ಝಾಡಿಸಿ ಒದೆದನು. ಕರಡಿ ಹಾಲು ಒಂದು ಕಡೆಗೆ, ಹುಲಿಯ ಹಾಲು ಒಂದು ಕಡೆಗೆ ಹರಿದು ಹೋಯಿತು. (ದೊಡ್ಡ ಹಾಲು ಹಳ್ಳ ಚಿಕ್ಕ ಹಾಲು ಹಳ್ಳಗಳಾಗಿ ಇಂದಿಗೂ ಅವು ಹರಿದಿವೆ.)

ಮಾದಯ್ಯನ ದೃಷ್ಟಿ ಬಂಕಾಪುರಿಯುತ್ತ ಹರಿಯಿತು. ಅಲ್ಲಿನ ಶ್ರವಣ ದೊರೆ 'ಭೂಮಿ ಭೂಮಂಡಲವನ್ನೆಲ್ಲ ಕೈಯ್ಯಲ್ಲಿ ಹಿಡಕೊಂಡವನೆ, ಸುರ ಮುನ್ನೂರು ಕೋಟಿ ದೇವಮಾನ್ಯವರನ್ನು ತಂದು ಕೈಸೆರೆ ಇಟ್ಟಿದ್ದಾನೆ. ಕೊಂಗಳ್ಳಿ ಮಲ್ಲಿಕಾರ್ಜುನ ಅವನ ತೋಟಿಯಾಗಿದ್ದಾನೆ. ಮುಡುಕುತೊರೆ ಮಲ್ಲಿಕಾರ್ಜುನ ಸೇವಕನಾಗಿ ಬಾಗಿಲ ಕಾದಿದ್ದಾನೆ, ಕಂಕುಳಲ್ಲಿ ದೊಣ್ಣೆಯನ್ನು ಇರಿಸಿ. ಬ್ರಹ್ಮ ಅವನಿಗೆ ತಲೆದಿಂಬು, ಶನಿದೇವನನ್ನೂ ಹಿಡಿದು 'ಮಕ್ಕಡೆ' ಕೆಡವಿಕೊಂಡು ನಾಲ್ಕು ಕಾಲು ಮಂಚ ಮಾಡಿಕೊಂಡವನೆ. ಅವನಿಗೆ 'ಅಗ್ನಿ ದೇವತೆ' ಅಡಿಗೆ ಮಾಡಿದ್ದಾಳೆ, ಗಂಗಾದೇವಿ ಅವನ ಪಾದಕ್ಕೆ ಅಗ್ಗವಣೆ ಕೊಟ್ಟಿದ್ದಾಳೆ. ಪಟ್ಟದ ರಂಗಸ್ವಾಮಿ, ಬಾಗಿಲಲ್ಲಿ ಪಂಚಾಂಗ ಹಿಡಿದು ಕುಳಿತರೆ, ದೇವಾಧಿದೇವ ಮಾನ್ಯವರನ್ನೆಲ್ಲ ಕೈಸೆರೆ ತಂದವನವನು, ದೇವ ಗನ್ನೆಯರು,ದಿಬ್ಬಗನ್ನೆಯರು ಕಣ್ಣಿಗೆ 'ಕಾವಡೆ' ಕಟ್ಟಿ ಶ್ರವಣದೊರೆಗೆ ನೀರನ್ನು ಹೊತ್ತಿದ್ದಾರೆ.

ಮುತ್ತಿನ ಡೇರೆಯಲ್ಲಿ ಹವಳದ ಹಾಸಿಗೆ, ಮುತ್ತಿನ ಹಾಸಿಗೆ ಮೇಲೆ ಆನಂದವಾಗಿ ಒರಗ್ಯವನೆ, ಇಷ್ಟು ದರ್ಪದಿಂದ, ಇಷ್ಟು ವೈಭವದಿಂದ ಮೆರೆ ಯುವ ಶ್ರವಣ ದೊರೆಯುತ್ತ–

ಅವರು ದೃಷ್ಟಿ ಮಡಗಿದರಪ್ಪ ಮಾದೇವ
ನೋಡಿ ನಮ್ಮ ಶಿವನಾ

ಮಲೆಯ ಮಾದೇಶ್ವರ ಬಂಕಾಪುರಿಯ ಶ್ರವಣದೊರೆಯ ಮುತ್ತಿನ ಡೇರೆಯ ಕಡೆಯ ಬಾಗಿಲಿಗೆ ಬಂದಾಗ, ಮುಡುಕು ತೊರೆ ಮಲ್ಲಯ್ಯ, ಕಡೆಯ ಬಾಗಿಲ ಕಾವಲಿನೀದ ಎಚ್ಚತ್ತು ಹತ್ತು ಬೆರಳನ್ನು ಜೋಡಿಸಿ ಮಾದಯ್ಯನಿಗೆ ವಂದಿಸಿ, ಅಲ್ಲಿಂದ ಹೊರಟು ಹೋಗುವಂತೆ ಬೇಡಿದನು. ಸವಣನ ಕ್ರೌರ್ಯ, ದರ್ಪಗಳನ್ನೆಲ್ಲ ಬಣ್ಣಿಸಿದನು. ಅಲ್ಲಿಂದ ಹೊರಟು ಹೋಗಲು ಬಂದವನಲ್ಲ ಮಾದಯ್ಯ. ಸವಣನ ಸತ್ವವನ್ನು ಕಂಡು ಹೋಗಲೆಂದೇ ನಿರ್ಧರಿಸಿ ಮಲ್ಲಿ ಕಾರ್ಜುನನ ನೆರವನ್ನು ಕೋರಿದನು. ಮಲ್ಲಿಕಾರ್ಜುನ ಅಂಜುತ್ತಂಜುತ್ತಲೇ ಒಳಗೆ ಸಾಗಿ, ಸವಣದೊರೆಗೆ ವಂದಿಸಿ ನಯ ವಿನಯಗಳಿಂದ ಅರಿಕೆ ಮಾಡಿದನು.

"ಯಾರೊ ಒಬ್ಬ ಗುಡ್ಡಯ್ಯ ಬಂದು ಕಡೆ ಬಾಕಲಲ್ಲಿ ನಿಂತವನೆ. ಅವನನ್ನು ಕರಕೊಂಡು ಬರಲೋ, ಬರಬೇಡವೋ ?"

ಸವಣದೊರೆ ಒಮ್ಮೆ ತನ್ನ ಕಿಡಿಗಣ್ಣೆತ್ತಿ ಮಲ್ಲಿಕಾರ್ಜುನನನ್ನು ನೋಡಿ ದನು ನಖಶಿಖಾಂತ. ಬಂದವನಾರೆಂದು ಅರಿಯುವ ಕುತೂಹಲ ಕೆರಳಿತು ಅಂತರಂಗದಲ್ಲಿ. ಒಳಗೆ ಕರೆತರುವಂತೆ ಸನ್ನೆ ಮಾಡಿದಾಗ, ಗುಡುಗುಡನೆ ಓಡಿದ ಮಲ್ಲಿಕಾರ್ಜುನ—

ನಮ್ಮ ಶ್ರವಣದೊರೆಯ ಸಂಧಾನಕ್ಕೆ ದಯುಮಾಡಿ
ಅಂದವನೆ ಮಹಾದೇವಾ....
ನೋಡಿ ನಮ್ಮ ಶಿವನಾ....

ಮುಂದೆ ಮುಂದೆ ಮಲ್ಲಯ್ಯ ಹಿಂದೆ ಮಾದಯ್ಯ ಸವಣದೊರೆಯ ಎದುರು ಬಂದು ನಿಂತರು. ಮಲ್ಲಯ್ಯ ಎರಡು ಕರವೆತ್ತಿ ವಂದಿಸಿದನು. ಆದರೆ ಮಾದಯ್ಯ ವಂದಿಸದೆ ನಿಂತಾಗ ಶ್ರವಣದೊರೆಯ ಎದುರು ಬಂದು ನಿಂತರು. ಮಲ್ಲಯ್ಯ ಎರಡು ಕರವೆತ್ತಿ ವಂದಿಸಿದನು. ಆದರೆ ಮಾದಯ್ಯ ವಂದಿಸದ ನಿಂತಾಗ ಶ್ರವಣದೊರೆ ಸಿಡಿದೆದ್ದನು.

"ಏನೆಲಾ ಜಂಗಮ ಮುಡುಕುತೊರೆ ಮಲ್ಲಿಕಾರ್ಜುನ ಸಾಷ್ಟಾಂಗವಾಗಿ ಕರವೆತ್ತಿ ಕೈಮುಗಿಯುತ್ತಿದ್ದರೂ ನೀನು ನನಗೆ ಶರಣು ಮಾಡದೆ ಮಟಮಟನೆ ನನ್ನನ್ನೇ ನೋಡ್ತಾ ಇದ್ದೀಯೆ !"

ಮಾದಯ್ಯ ಬೆದರಲಿಲ್ಲ ಆ ಗುಡುಗಿಗೆ ! ಯಾರಿಗೂ ವಂದಿಸಿ ಅರಿಯದವ ನವನು ! ತಂದೆ ತಾಯಿ ಗುರು ಹಿರಿಯರಾರೋ ಆ 'ಇದ್ಯೆ'ಯನ್ನು ಹೇಳಿಕೊಟ್ಟ ವರೂ ಅಲ್ಲ. ಶ್ರವಣದೊರೆಗಂತು ವಂದಿಸಿಯಾನು ! ಮುತ್ತಿನ ಗದ್ದುಗೆಯನ್ನು

ಬಿಟ್ಟು ಕೆಳಗಿಳಿದು ಬಂದು ವಂದಿಸಿ ತೋರಿದರೆ, ಅಂತೆಯೇ ವಂದಿಸುವ ತನ್ನಿಚ್ಛೆಯನ್ನು ಸಾರಿದಾಗ, ಶ್ರವಣದೊರೆಯ ಮುಖ ಗಂಟಿಕ್ಕಿತು. ಉದ್ಧಟ ತನದ ನುಡಿಗೆ ಸಿಡಿಮಿಡಿಗೊಳ್ಳುತ್ತ—

"ನೀನು ಯಾರು ? ಎಲ್ಲಿಂದ ಬಂದೆ ? ನಿನ್ನ ಹೆಸರೇನು ?" ಎಂದು ಚಡಪಡಿಸಿದನು ತನ್ನ ಗದ್ದುಗೆಯ ಮೇಲೆ. ಮಾದಯ್ಯ ಮೆಲ್ಲನುಸುರಿದನು—

"ಮಾಯಕಾರ ಮಾದೇವ !"

ಶ್ರವಣದೊರೆ 'ಮಾದಾರಿ' ಎಂದು ಕೇಳಿಸಿಕೊಂಡನೇನೋ ! ಮುಖದಲ್ಲಿ ತುಸು ಶಾಂತಿಯ ತೆರೆ ಆಡಿತು. ಮೂರು ಮೈಲ್ಲಿಯ ಅಂತರದ ತನ್ನ ಮಡದಿ ಯರ ಮನೆಗೆ ಹೋಗಿ ಬರಲು ಈ ಮಾದಾರಿ ಒಂದು ಜೊತೆ, 'ಚೆಮ್ಮಾವಿಗೆ' ಯನ್ನೇಕೆ ಮಾಡಿಕೊಡಬಾರದು !

ಮಾದಯ್ಯನೂ ಬೇಡಿದ್ದನು, ತನಗೊಂದು ಸೇವೆಯ ದಾರಿಯನ್ನು ಕಲ್ಪಿಸಲು. 'ಚೆಮ್ಮಾವಿಗೆ'ಯ ಸಿದ್ಧತೆಯ ಹೊಣೆ ಅವನದಾಯಿತು. ಏಳು ದಿನಗಳಲ್ಲಿ ಅವನ್ನು ತಂದು ಒಪ್ಪಿಸಬೇಕು. ಸಂಚಕಾರವನ್ನು ನೀಡಲು ಹತ್ತೆಲೆ, ಐದಡಕೆ,ಒಂದು ಹಣವನ್ನು ಮುಂದೆ ಒಡ್ಡಿದಾಗ ಮಾದಯ್ಯ ತನ್ನದಲ್ಲವೆಂಬಂತೆ ಕೆಳಗಿರಿಸಲು ಹೇಳಿದನು. ನೆಲದಿಂದ ಕೈಗೆತ್ತಿಕೊಳ್ಳುವಾಗ ಮಾದಾರಹರಳಯ್ಯ ನನ್ನು ನೆನೆದು, ಅವನ ಹೆಸರಿನಲ್ಲಿ ಕೈಗೆತ್ತಿಕೊಂಡಾಗ ಅವನ ತುಟಿ ಉಸುರಿತು—

"ಮಾದಾರಿ ಹರಳಯ್ಯ ಶ್ರವಣದೊರೆ ಕೊಡುವ ಚಂಚುಕಾರ ನನ್ನದಲ್ಲ ಕಾಣಪ್ಪ ನಿನ್ನದು !"

ಸರಿಯಾದ ಅಳತೆಯನ್ನು ಕೊಳ್ಳಲು ಹೇಳಿ ತನ್ನ ಪಾದವನ್ನು ಮುಂದೆ ಚಾಚಿದನು ಶ್ರವಣದೊರೆ. ಅವನ ಪಾದವನ್ನೆಂತು ಮುಟ್ಟುವನು ಮಾದಯ್ಯ ! 'ಇಸ ಬ್ರಹ್ಮಚಾರಿಯನ್ನು ಕರೆಸಿ ಶ್ರೀಗಂಧದ ಹಾವುಗೆಯನ್ನು ತನ್ನ ಅಳತೆಗೆ ಮಾಡಿಸಿಕೊಡೆಂದು ಕೋರಿದನು. ನೆರೆಯಲ್ಲಿಯೇ ನಿಂತಿದ್ದ 'ಇಸಬ್ರಹ್ಮಚಾರಿ' ಶ್ರೀಗಂಧದ ಹಾವುಗೆಯನ್ನು ಸಿದ್ಧಗೊಳಿಸಿ ತಂದಾಗ, ಶ್ರವಣದೊರೆಯ ಪಾದ ಸ್ಪರ್ಶಕ್ಕೆ ನಾಲ್ಕು ಹೋಳಾಗಿ ಸೀಳಿಹೋಯಿತು ಅರೆಗಳಿಗೆಯಲ್ಲಿ. ಆರಂಭ ದಲ್ಲಿಯೇ ಅಪಶಕುನವನ್ನು ಕಂಡ ಶ್ರವಣ ದೊರೆಯ ಮುಖ ಕಪ್ಪಿಟ್ಟಿತು ! ಪಂಚಾಂಗದ ರಂಗನಾಥನನ್ನು ಕರೆಸಿ ಕೇಳುವಲ್ಲಿ ಗುಣಿಸಿ ಹೇಳಿದನು :—

"ಭಾರಿ ಚೊಟ್ಟಕಟ್ಟುತ್ತದೆ !"

ಅಲ್ಲಿಯೇ ನಿಂತ ಮಾದಯ್ಯ ಮಾತು ಮುಗಿಯುವಲ್ಲಿ ನುಡಿದಿದ್ದ—

"ಹೌದ್ಹೌದು ಭಾರಿಪಟ್ಟ ಕಟ್ಟುತ್ತದೆ." ನಿಂತ 'ದೇವಮಾನ್ಯ'ವರೆಲ್ಲ ಮುಸಿಮುಸಿ ನಕ್ಕರು. ಶ್ರವಣ ದೊರೆ ಠೀವಿಯಿಂದಲೇ 'ಚಮ್ಮಾವಿಗೆ'ಯನ್ನು ತರಹೇಳಿ ಬೀಳ್ಕೊಟ್ಟನು ಮಾದಯ್ಯನನ್ನು.

ಕಲ್ಯಾಣ ಪಟ್ಟಣದ ಹಾದಿಯಲ್ಲಿ ಮಾದಯ್ಯ ಸಾಗಿದನು. ಮೋಡಿಯೊಂದನ್ನು ನೋಡಿ ಹಿಂತಿರುಗುತ್ತಿದ್ದ ಹರಳಯ್ಯ ಅಪೂರ್ವ ಜಂಗಮಮೂರ್ತಿಯನ್ನು ಎದುರಿಗೆ ಕಂಡು 'ಶರಣು ಶರಣಾರ್ಥಿ' ಎಂದು ವಂದಿಸಿ ನಿಂತಾಗ, ಮಾದಯ್ಯ ಎರಡು ಬಾರಿ ಶರಣುಮಾಡಿದನು. ಹೆಚ್ಚಿನ ಗುರು, ಜಂಗಮ ಮೂರ್ತಿ ಎರಡು ಬಾರಿ ಶರಣು ಮಾಡುವುದೇ ! ಆ ಕರ್ಮವನ್ನು ಇನ್ನು ಕಳೆದುಕೊಳ್ಳುವ ಬಗೆಯೆಂತು !

ಜಂಗಮ ಮೂರ್ತಿಯನ್ನೇ ಬೇಡಿದನು ಹರಳಯ್ಯ, ಆ ಮಾರ್ಗವನ್ನು ಸೂಚಿಸಲು. ತನಗೆ ಚಮ್ಮಾವಿಗೆಯನ್ನು ಮಾಡಿಕೊಟ್ಟರೆ ಕರ್ಮ ತಾನಾಗಿ ಹರಿಯುವುದೆಂದ ಮಾದಯ್ಯನ ನುಡಿಗೆ ಹರ್ಷದಿಂದಲೆ ಸಮ್ಮತಿಸಿದನು ಹರಳಯ್ಯ. ಭಾಷೆಯನ್ನು ಕೊಟ್ಟು ಸಂಚಕಾರವನ್ನು ಸ್ವೀಕರಿಸಿದನು. ಆದರೆ ಮಾದಯ್ಯನಿಗೆ ಬೇಕಾದ 'ಚಮ್ಮಾವಿಗೆ'ಗೆ ಆವ ಚರ್ಮವೂ ಅವನಲ್ಲಿಲ್ಲದಾಗ ಬೆಚ್ಚಿದನು ಹರಳಯ್ಯ. ಹುಲ್ಲೆ ಚರ್ಮ, ಹುಲಿಯ ಚರ್ಮ, ಎಮ್ಮೆಯ ಚರ್ಮ, ಕಡವೆ ಕಾಡೆಮ್ಮೆ ಚರ್ಮಗಳಲ್ಲ ಮಾದಯ್ಯ ಬಯಸಿದುದು, "ನರಚಮ್ಮಾವಿಗೆ!"

ಹರಳಯ್ಯ ಕೊಟ್ಟ ಮಾತಿಗೆ ತಪ್ಪಲಿಲ್ಲ. ಮಡದಿ ಕಲ್ಯಾಣಮ್ಮನ ಇಚ್ಛೆಯಂತೆ ಅವಳನ್ನೇ ಕೊಂದು, ಅವಳ ಚರ್ಮದಲ್ಲಿಯೇ ಹಾವುಗೆಗಳನ್ನು ಸಿದ್ಧಗೊಳಿಸುವ ಮುನ್ನ ಮನೆಯ ಮುಂದಿನ ಬೇವಿನ ಮರದಲ್ಲಿ 'ಗರುಡಾಳ ಪಕ್ಷಿ'ಯಾಗಿ ಕುಳಿತಿದ್ದ ಮಾದಯ್ಯ ಮತ್ತೆ ಕಾಣಿಸಿಕೊಂಡನು. ಒಂದೊಂದು ಚಮ್ಮಾವಿಗೆಗೂ ಒಂದೊಂದು ಕಂಡುಗ ಹುಣಿಸೆಯ ಕೆಂಡ, ಮೆಣಸಿನಕಾಯಿಗಳನ್ನು ತುಂಬಿ ಹೊಲೆಯಲು ಕೋರಿದನು.

ಹಾವುಗೆಗಳು ಸಿದ್ಧವಾದವು. ಸತಿಪತಿಗಳಿಬ್ಬರೂ ಬಂದು ತನಗರ್ಪಿಸಬೇಕೆಂಬ ಜಂಗಮಮೂರ್ತಿ ಕೋರಿದಾಗ ಹರಳಯ್ಯ ಕುಸಿದನು ಅವನ ಪಾದ ಮೂಲದಲ್ಲಿ. ಮೂರು ವಿಭೂತಿಯ ಗಟ್ಟಿಗಳನ್ನು ನೀಡಿದ ಜಂಗಮಮೂರ್ತಿ. ಚಮ್ಮಾವಿಗೆಯ ಮೇಲೆ, ಮನೆಯ ಮೇಲೆ, ಸ್ನಾನದ ಘಟ್ಟದ ಕಡೆಗೆ

ಒಂದೊಂದನ್ನು ಎಸೆಯ ಹೇಳಿದನು, ಮಹಾ ಶರಣ ಹರಳಯ್ಯನಿಗೆ. ಕೊನೆಗೆ 'ಕಲ್ಯಾಣಿ, ಕಲ್ಯಾಣಿ' ಎಂದು ಕೂಗಿದಾಗ ಕಣ್ಣೆದುರಿಗೇ ಮೂಡಿ ಬಂದ ಮಡದಿಯೊಡನೆ ಅಪೂರ್ವ 'ಚಿಮ್ಮಾವುಗೆ'ಗಳನ್ನು ತಾವೇ ಹೊತ್ತು ತಂದು ಹುಟ್ಟುರೆಕಲ್ಲಿನ ಮೇಲೆ ಇರಿಸಿ ಮರಳಿದನು.

ಗೊತ್ತಾದ ಗಡುವಿನಲ್ಲಿ ತನ್ನೆದುರು ಕಾಣಿಸಿಕೊಂಡ ಜಂಗಮನನ್ನು ಮೆಚ್ಚಿ ಕೊಂಡಾಡಿದನು ಶ್ರವಣದೊರೆ. ಹುಟ್ಟುರೆಕಲ್ಲಿನ ಮೇಲೆ ಹಾವುಗೆಗಳನ್ನು ಅರಿಯ ಎದೆಯನ್ನು ಮೆಟ್ಟುವಂತೆಯೇ ಮೆಟ್ಟಿ ತುಳಿಯಲು ಸಮ್ಮತಿಸಿ ಮುಂದೆ ಹೊರಟನು. ಹಿಂದೆ ಹಿಂದೆ 'ದೇವಮಾನ್ಯವರು' ನಡೆವರು. ಎಲ್ಲರ ಕೈಯಲ್ಲೂ ಒಂದೊಂದು ಕಟ್ಟಿಗೆಯನ್ನು ನೀಡಿ ಮಾದಯ್ಯ ಹಿಂಬಾಲಿಸಿದನು. ಹುಟ್ಟುರೆಯ ಮೇಲಿನ ಸುಂದರ ಚಿಮ್ಮಾವಿಗೆಯ ಮೇಲಿನ ಮುಸುಕನ್ನು ಅತ್ತ ಸರಿಸಿದನು. 'ವಾಸುದೇವ' ಮಾದಯ್ಯನ ಕಣ್ಸನ್ನೆಯಂತೆ 'ಅಗ್ನಿದೇವತೆ' ಸಿದ್ಧವಾಗಿ ನಿಂತಳು.

"ಹಗೆಯ ಎದೆಯ ಮೆಟ್ಟಿಕ್ಕಿದಂತೆ ಮೆಟ್ಟಿ ತಿರುಗಬೇಕು...."

ಮಾದಯ್ಯ ಮತ್ತೆ ನೆನಪಿಗೆ ತಂದನು ಮೆಟ್ಟುವ ಪರಿಯನ್ನು. ಹಾವುಗೆಯಲ್ಲಿ ಕಾಲಿಟ್ಟಾಗ ಒಂದು ಚಿಕ್ಕದಾಯಿತು, ಒಂದು ದೊಡ್ಡದಾಯಿತು.

"ಇದು ಬೇಸಗೆಯ ಬಿಸಿಲು, ಬಂಗಾರದ ಹುಡಿಯಲ್ಲಿ ಚಿಮ್ಮಾವುಗೆ ಚಿಮ್ಮ ಚಿಮ್ಮನೆ ಆರ್ತದೆ, ಇದನ್ನು ಮೆಟ್ಟಬೇಕು. ಮೆಟ್ಟಿ ಹಿಂದಕ್ಕೆ ಮುಂದಕ್ಕೆ ಲೆಕ್ಕ ಹಾಕಿ ಕಾಲು ಮಡಗಬೇಕು. ಬಿಗಿಯಾದರೆ ಬಿಗಿ ಸಡಿಲ ಮಾಡಿಕೊಡ್ತೀನಿ. ಸಡಿಲ ಆದರೆ ಬಿಗಿಮಾಡಿಕೊಡ್ತೀನಿ...."

ಮಾದಯ್ಯನ ನುಡಿಗೆ ಒಪ್ಪಿದನು ಶ್ರವಣದೊರೆ. ಹಾವುಗೆಯಲ್ಲಿ ಪಾದಗಳನ್ನೂರಿ ಮೆಟ್ಟಿ ಮೆಟ್ಟಿ ಅತ್ತಿತ್ತ ನಡೆವಾಗ 'ಅಗ್ನಿದೇವತೆ'ಗೆ ಕಣ್ಣು ಮಿಟುಕಿಸಿ ಮಾದಯ್ಯ ವಾಸುದೇವನನ್ನು ಕರೆದನು. ಧಗ್ಗನೆ ಹಾವುಗೆಗಳಿಂದ ಬೆಂಕಿ ಚಿಮ್ಮಿ, ಹೌಹಾರಿದನು ಶ್ರವಣದೊರೆ. ಬಾಗಿ ಅವೆರಡನ್ನು ಕಿತ್ತು ಬಿಸುಡಲು ಕೈ ನೀಡಿದರೆ ಮತ್ತೆ ಮೇಲೇಳದಂತೆ ಎರಡು ಕೈಗಳನ್ನೂ ಭೂಮಿತಾಯಿ ಹಿಡಿದಳು— ಮಾದಯ್ಯನ ನುಡಿಯಂತೆಯೇ ! 'ದೇವಮಾನ್ಯವರು' ಕೈಯಲ್ಲಿದ್ದ ಕಟ್ಟಿಗೆಯ ಸೀಳುಗಳನ್ನು ಎಸೆದು ಹರ್ಷವನಿ ಗೈದರು. ಕುತ್ತಿಗೆಯವರೆಗೆ ಬೆಂಕಿ ಹಬ್ಬಿ ಧಗ ಧಗನೆ ಉರಿಯುವಾಗ ಮಾದಯ್ಯ ಕೇಳಿದನು—

"ನೀನು ಬದುಕುವ ಗತಿಯಾಯಿತು, ಬೇಕಾದ್ದನ್ನು ಬೇಡಿಕೊ...."

ತನಗೆ ಮುಕ್ತಿಯನ್ನು ಬೇಡಿದ ಶ್ರವಣದೊರೆ. ತನ್ನ ತಲೆಬುರುಡೆಯನ್ನು ಕೊಂಡೊಯ್ದು ಮಾದಯ್ಯ 'ಮುದ್ರೆಗಡಿಗೆ'ಯಾಗಿ ಬಳಸಬೇಕೆಂದು ಬೇಡಿದನು. ತನ್ನ ಹೆಸರಿನಲ್ಲಿ ಶ್ರಾವಣದ ಒಂದುಅಮಾವಾಸ್ಯೆಯನ್ನು ನಡೆಸಲು ಬೇಡಿದನು. ಶ್ರವಣನ ಕೊನೆಯ ಕೋರಿಕೆಗೆ ಮಾದಯ್ಯ ಒಪ್ಪಿ ಮರಳಿದನು ತನ್ನ ಏಳು ಮಲೆಗೆ. ದೇವತೆಗಳನ್ನೆಲ್ಲ ಕೈಸೆರೆ ಬಿಡಿಸಿ, ಬೀಳ್ಕೊಟ್ಟನು ಅವರವರ ಲೋಕಕ್ಕೆ, ಅವರವರ ನೆಲೆಗೆ ! ಆ ಮಹಾಮಹಿಮನ ಕಥೆಗೆ ಮಂಗಳವನ್ನು ಹಾಡುತ್ತ ಪುಳಕಗೊಂಡಿದ್ದಾನೆ ಕಥೆಗಾರ—

ಓದಿಸಿ ಬ್ರಹ್ಮನ ಪಡೆದ
ಸಾಧಿಸಿ ಶ್ರವಣನ ಕೊಂದ
ಮಂಗಳಾರತಿ ಬೆಳಗಿರೆ ಮಾದಯ್ಯನಿಗೆ
ಮುತ್ತಿನಾರತಿ ಬೆಳಗಿರೆ
ಸಾಧಿಸಿ ಶ್ರವಣನ ಕೊಂದ
ಹುಟ್ಟರೆಯ ಮೇಲೆ ಅವನ
ಸುಟ್ಟು ಬೂದಿಯ ಮಾಡಿದ,
ಏಳು ಮಲೆಯಲಿ ನಿಂದ
ಎಣ್ಣೆ ಮಜ್ಜನಕೊಲಿದ
ಮರೆತವರ ಮನೆಯ ಮುರಿದವರೆ
ನೆನೆದವರ ಮನೆಗೊಲಿದವರೆ
ಮಾದಪ್ಪನಿಗೆ ಮಂಗಳಾರತಿ ಬೆಳಗಿರೆ

— —

## ಸತ್ಯಶರಣೆ ಶಂಕಮ್ಮ

ಕುಂತೂರಿನಲ್ಲಿ ವಿಶಿಷ್ಟಪವಾಡವನ್ನು ಮೆರೆದ ಮರಿದೇವರು 'ಮಾದಪ್ಪ'ನಾಗಿ ಮುಂದೆ ಪಯಣ ಬೆಳಸಿ, ಎಪ್ಪತ್ತೇಳು ಮಲೆ ಕೈಲಾಸವಲ್ಲಿ ನಿಂತನು. 'ಹನ್ನೆರಡಾಳುದ್ದದ ಜಲಬಾವಿ....ಏಳು ಬಾಯಿ ಹೊನ್ನುತ್ತ....ಆದರಲ್ಲೊಂದು 'ಇಸಂಪರಾಜ' ಗುತ್ತಿ, ಕೆಮ್ಮತ್ತಿ ಮರದಡಿಯಲ್ಲಿ.......

ಒಡೆದು ಮೂಡವನೆ ಮಾದಪ್ಪಾ
ನೋಡಿ ನಮ್ಮ ಶಿವನಾ

*　　*　　*

ಗದ್ದುಗೆ ಸಿಂಗಾರವೊ
ಗದ್ದಿಗೆ ಮೇಗಲ ಮುದ್ದು ಮಾದೇವನ
ಹೆಬ್ಬುಲಿ ಸಿಂಗಾರವೊ

*　　*　　*

ಸೋಲಿಗ ನೀಲಪ್ಪನೊಡನೆ 'ಸತ್ಯವಂತೆ ಶಂಕಮ್ಮ'ನ ಕಲ್ಯಾಣ ಆಗಿ ಹೋಯಿತು. ಹನ್ನೆರಡು ಕಂಬ ನೆಡಿಸಿ, ಒಪ್ಪವಾದ ಚಪ್ಪರಹಾಕಿ, ಮುತ್ತಿನ ತೋರಣಕಟ್ಟಿ ವಿಜೃಂಭಣೆಯಿಂದಲೇ ಲಗ್ನ ಮಾಡಿದರು. ನೀಲಯ್ಯ ಹನ್ನೆರಡು ವರ್ಷ ಮಡದಿಯ ತೌರಿನಲ್ಲೇ ನಿಂತ. ಆದರೆ ದಾಯದಕಾರನ ದೊಡ್ಡಿ ಅವನಿಗೇಕೊ ಒಗ್ಗಲಿಲ್ಲ. ಮಡದಿಯೊಡನೆ ಮೂಡುಮಲೆ ಕಾನಿಗೆ ಹೋಗಿ ಬಿಡುವ ಕಡೆ ಅವನ ಚಿತ್ತ ಹರಿಯಿತು. ಆ ದೊಡ್ಡಿಯ ಜನರಾದರೂ ಒಳ್ಳೆಯವರೇ ! ಕುಹಕ ನುಡಿಯಲ್ಲಿ, ಕೊಂಕು ಮಾತಿನಲ್ಲಿ ನಿಸ್ಸೀಮರು.

ಕುಂದದ ನುಡಿಯ ನುಡಿತವರೇ
ಕ್ಯಾಣದ ಮಾತನಾಡತವರೇ

ಚುಚ್ಚು ಮಾತುಗಳನ್ನು ಕೇಳಿ ಮಾವನ ಮನೆಯಲ್ಲಿ ಎಷ್ಟು ದಿನ ನಿಲ್ಲಲು ಸಾಧ್ಯ ! ನೀಲಯ್ಯ ಮಡದಿಯನ್ನು ಕರೆದು ತನ್ನ ನಿಲುವನ್ನು ಸೂಚಿಸಿದ.

ಈ ದೊಡ್ಡಿ ನಮಗೆ ತರವಲ್ಲ-ನಾವು
ಮುಂದಕ್ಕೆ ಹೋಗಾನ ನಡೆ ಹೆಣ್ಣೆ !

ಊರಿನ ಮಂದಿಯ 'ಕ್ಯಾಣ'ದ ಮಾತನ್ನು ನೆನಪು ಮಾಡಿಕೊಟ್ಟ. ಮಕ್ಕಳಿಲ್ಲದ ಅವಳ ಬಗ್ಗೆ ಊರಿನವರ ತಿರಸ್ಕಾರ ದೃಷ್ಟಿಯನ್ನೂ ವಿವರಿಸಿದ. ದೊಡ್ಡಿಯ ಹೆಂಗಸರ ಕೊಂಕು ನುಡಿ ಶಂಕಮ್ಮನ ಮನಸ್ಸನ್ನು ಕಲಕಲಿಲ್ಲ. ಊರನ್ನು ತೊರೆಯಲು ಒಪ್ಪದ ಅವಳ ಮೇಲೆ ನೀಲಯ್ಯ 'ಮಾಯದ ಬೂದಿ ತಳಿದು, ಮಂಕು ಮರಳು ಮಾಡಿ' ಅವಳನ್ನು ವಜ್ರದ ಗಿರಿಯ ಕಡೆ ಕರೆತಂದ.

ವಜ್ರದಗಿರಿಯ ದಟ್ಟವಾದ ಕಾಡಿನಲ್ಲಿ ತನ್ನ 'ಗುಡಿಸಲನ್ನು ಹೂಡಲು' ನೀಲಯ್ಯ ಯೋಚಿಸಿದ. ಯಾರೂಸುಳಿಯದ, ಯಾರೂ ಅರಿಯದ ಆ ನೆಲೆಯೇ ತನ್ನ ವಾಸಕ್ಕೆ ಯೋಗ್ಯವೆಂದುಕೊಂಡ. 'ಬಾಡಬಾಕನ ಗುತ್ತಿ' 'ಇಸಂಪರಾಜಿ ಮೆಳೆ'ಗಳನ್ನು ಕಡಿದು ಒಂದಂಕಣದ 'ಸೊಪ್ಪಿನ ಗೂಡನ್ನ ಒಪ್ಪೈಸಿ' ಮನೆ ಮಾಡಿದ. ಇನ್ನು ಆ ಕಗ್ಗಾಡಿನಲ್ಲಿ ಉಣ್ಣಲು ಅನ್ನವೆಲ್ಲಿ, ಕುಡಿಯಲು ನೀರೆಲ್ಲಿ ! ನೀಲಯ್ಯ ಎದೆಗುಂದಲಿಲ್ಲ. ಕಾಡುಬಾಳೆಯ ಹಣ್ಣನ್ನು ತಂದು ಶಂಕಮ್ಮನಿಗೆ ಕೊಟ್ಟ. ಅವಳೊಬ್ಬಳನ್ನೇ ಆ ಗುಡಿಲಲ್ಲಿ ಬಿಟ್ಟು ತಾನು ಹೊರಗೆ ಹೊರಟ.

ವಜ್ರದ ಮಲೆಯ ಕಾಡಿನಲ್ಲಿ ಬೇಟೆಯಾಡಿ ಬರಲು ತನ್ನ ಪತಿ ಹೊರಟಿದ್ದಾನೆ. 'ಕಾಡುಮಿಕ, ಗೆಡ್ಡೆಗೆಣಸು, ಕಾಡಬಾಳೆ, ಕಂಟಸಕ್ಕರೆ, ಹೆಜ್ಜೇನು ತುಪ್ಪ, ಕಿರಿಜೇನು ತುಪ್ಪ, ಬಿದರಕ್ಕಿ. ಬಿದಿರ ಕಳಲೆ !–ಎಲ್ಲವನ್ನೂ ತಿಂದು 'ವನವಾಸ' ಮಾಡುವ ಮನಸ್ಸು ಮಾಡಿದ್ದಾನೆ ! ಬೇಟೆಗೆ ಹೋಗುವುದು ಮೂರು ದಿನ, ಬರುವುದು ಮೂರು ದಿನ. ಬೇಟೆಯಾಡುವುದು ಮೂರು ದಿನ. ಒಂಬತ್ತು ದಿನಗಳವರೆಗೆ ಅವಳೊಬ್ಬಳೇ ಆ ನಿರ್ಜನ ನೆಲೆಯಲ್ಲಿ ನಿಲ್ಲಬೇಕು!ತನ್ನ ಮಡದಿಯೊಬ್ಬಳೇ ಆ ಕಾಡಿನಲ್ಲಿ ! ತಾನಾದರೂ ಹೋದ ಮೇಲೆ ಬರುವುದು ಎಷ್ಟು ದಿನಕ್ಕೊ ! ಬಳೆಗಾರ ಶೆಟ್ಟರೋ, ಮುತ್ತಿನ ಶೆಟ್ಟರೋ ಆ ಮಾರ್ಗವಾಗಿ ಬಂದರೆ, ಎಳೆ ಹರೆಯದ ಮಡದಿ ಆಸೆಪಟ್ಟು ಹೊರಗೆ ಬಂದರೆ!....ಬಂದರೇ....!

ನೀಲಯ್ಯನ ಮನಸ್ಸಿನಲ್ಲಿ ಹೊಸ ಸಮಸ್ಯೆಯೊಂದು ಮೂಡಿ ನಿಂತಿತು. ತನ್ನ ಮಡದಿಯ 'ತೋಳು ಬಾಳೆಯ ಕಂಬ. ಮಕದ ಹೋಲಿಕೆ ಚಂದ್ರ ಒಂದು ಪಾಲು, ಸೂರ್ಯ ಒಂದು ಪಾಲು ಆದಂತೆ ಉರಿಯುತ್ತದೆ !

ಬಳೆಗಾರ ಶೆಟ್ಟಿ ಬತ್ತಾನೆ....
ಬಳೆ, ಅಂತಾ ಸಾರ್‍ತಾನೆ
ಬಾಗಿಲಲ್ಲಿ ಬಗ್ಗಿ ನೋಡ್ತೀಯೇ"
ಅಂದ ಚೆಂದ ನೋಡ್ತಾನೆ
ರೂಪು ರಾವಣ್ಯ ನೋಡ್ತಾನೆ !''

ನೋಡಿದವನು 'ಎತ್ತಿಕೊಂಡೇ' ಹೋದರೆ !

ನೀಲಯ್ಯನ 'ಶಂಕೆ' ಇನ್ನೂ ಪ್ರಬಲಿಸಿತು. ಗುಡಿಲ ಮುಂದೆ ಎಪ್ಪತ್ತೇಳು ಮಂಡಲಗಳನ್ನು ಬರೆದನು. ಮಂಡಲ ದಾಟಿದವರ ಕಾಲೆರಡೂ 'ಸೇದಿ ಹೋಗಲಿ' ಎಂದು ಶಪಿಸಿದನು. 'ಚೀಟು' ಬರೆದು ಮುಂದಿಟ್ಟನು. 'ಹೆಚ್ಚಿನ ರಾಕಾಸಿ ಗೊಂಬೆ' ಮಾಡಿ ಎತ್ತಿ ಬಾಗಿಲಲ್ಲಿ ನಿಲ್ಲಿಸಿದನು. ಅದರ ಕೈಗೆ ಕತ್ತಿಯನ್ನೂ ಕೊಟ್ಟನು. ಎಪ್ಪತ್ತೇಳು ಮಂಡಲ ದಾಟಿ ಬಂದರೆ, ಅದು ಜೀವ ಪಡೆದು 'ಸಿರಸ ಎರಡು ತುಂಡು' ಮಾಡುವಂತೆ, 'ರಾವು ತಗ್ದು ಮುಸುಗಿಟ್ಟನು !'

ಇಂಥ ಸತ್ಯಭಾಮೆ ಶಂಕಮ್ಮನಿಗೆ 'ಇಷ್ಟು ಬಿಕ್ಕಟ್ಟು ಮಾಡಿ' ಅಷ್ಟಕ್ಕೇ ತೃಪ್ತನಾದನೆ ನೀಲಯ್ಯ

ಸತಿಯ ರೂಪನ್ನು ಮತ್ತೊಮ್ಮೆ ನೋಡಿದ. ಒಳಗೆ ಬಂದು ನಿಷ್ಠುರದ ದನಿಯಲ್ಲಿ ಗದರಿಸಿದ—

"ಉಟ್ಟಿದ ಸೀರೆ ಅಳಿ, ಇಕ್ಕಿದ ರವಿಕೆ ಅಳಿ ; ಕತ್ತಿನ ತಾಳಿ ಬಿಚ್ಚು"

ಶಂಕರಮ್ಮ ಮಾತ್ನಾಡುವಂತಿರಲಿಲ್ಲ. ಎಲ್ಲವನ್ನೂ ಮುದುಡಿ ವಸ್ತ್ರದಲ್ಲಿ ಬಿಗಿದು ನೀಲಯ್ಯ ಬೆನ್ನಿಗೆ ಕಟ್ಟಿಕೊಂಡ. ಹುಟ್ಟುನಿರ್ವಾಣದಲ್ಲಿ ಶಂಕಮ್ಮನನ್ನು ಇರಿಸಿ ಮತ್ತೆ–

'ಅಂಬಿನ ಸೊಪ್ಪಿನ ಉಡಿಗೆ ಉಡ್ಸಿ
ಎಕ್ಕದ ಎಲೇಲಿ ಎದೆಕಟ್ಟು ಕಟ್ಟಿ
ತೇಗಡ ಎಲೇಲಿ ಮೇಲ್ಮುಸುಕಿಟ್ಟು,

ಇಂಥ 'ಬಂದಾನ' ಕೊಟ್ಟ. ಇನ್ನೂ ಅವನಿಗೆ ತೃಪ್ತಿಯಾಗಲಿಲ್ಲ, ಹೆಂಡತಿಯ 'ಅಂದ ಚೆಂದ' ಮತ್ತೆ ಆತಂಕವನ್ನೇ ಹೆಚ್ಚಿಸಿತು.

ಬಾಯಿಗೆ ಚೂಜಿ ಕೊಟ್ಟು; ಕಣ್ಣಿಗೆ ಕಾವಾಡ ಕಟ್ಟಿಬಿಟ್ಟು;
ಹಿಂಗೈ ಮುಂಗೈ ಕಟ್ಟಿ ಅವಳ್ನ ಮೊಕಡ್ನೆ ಕೆಡವಿ

"ಹೆಣ್ಣೆ ನಾನು ವಜ್ರದ ಮಲೇಗೆ ಗೆಡ್ಡೆ ಸೊಪ್ಪಿಗೆ ಹೊಗ್ತೀನಿ.... ಸೊಪ್ಪಿನ ಗುಡ್ಲೇಲಿ ಜ್ವಾಕೆ !"

ಎಂದು ನುಡಿದು ಸೋಲಿಗೆ ನೀಲಯ್ಯ, ಜೂಲು ನಾಯಿಯನ್ನು ಹಿಡಿದು, ಬಿಸುವ ಮಚ್ಚನ್ನು ತೂಗುತ್ತ ಕಾಡಿನಲ್ಲಿ ಮರೆಯಾದ.

ಶಂಕಮ್ಮ ಒಂದಂಕಣದ ಸೊಪ್ಪಿನ ಗುಡಿಲಲ್ಲಿ, ಏಳಲಾರದೆ, ಅತ್ತಿತ್ತ ಹೊರಳಲಾರದೆ ಮೌನವಾಗಿ ಕಣ್ಣೀರನ್ನು ಹರಿಸಿದಳು. ತನ್ನ ಗಂಡ ಇಷ್ಟೊಂದು ಕೋಟಲೆಯನ್ನು ಕೊಟ್ಟಿದ್ದಾನೆ. ಉಟ್ಟ ಸೀರೆಯನ್ನು ಬಿಚ್ಚಿ, ತೊಟ್ಟ ರವಿಕೆಯನ್ನು ಕಸಿದುಕೊಂಡು ಸೊಪ್ಪಿನಲ್ಲಿ ಸುತ್ತಿ ಹೋಗಿದ್ದಾನೆ. ಏಳುವಂತಿಲ್ಲ, ಎದ್ದು ಕೂರುವಂತಿಲ್ಲ, ಕಣ್ಣಿಂದ ನೋಡುವಂತಿಲ್ಲ, ಕಾಡಿನಲ್ಲಿ ಒಬ್ಬಳೇ ಈ 'ಚಿತ್ರಹಿಂಸೆಗೆ' ಬೇಸತ್ತು. ಬೆಂದು 'ದುಃಖ ಮಾಡ್ತಾ' ಮಲಗಿದಳು. ತನ್ನ ಕುಲದೈವವನ್ನು ನೆನೆದಳು—

"ನಮ್ಮಪ್ಪನ ಮನೆ ಮರಿದೇವರು ಮಾದೇವ ನೀನಾರ ಬಂದು ನನ್ನ ಕಷ್ಟಗಳ್ನ ಕಾಯಬಾರದ !"

ಶಂಕಮ್ಮ ದೀನಳಾಗಿ ಮೊರೆಯಿಟ್ಟಳು. ತೊಟತೊಟನೆ ಅವಳ ಕಣ್ಣಲ್ಲಿ ನೀರು ಹನಿತವು.

'ಅತ್ತಂತ ಕಣ್ಣೀರು ಏಳು ಮಲೆ ಕೈಲಾಸಕ್ಕೆ ಅರಿವಾಯ್ತು !'

ಏಳು ಮಲೆ ಕೈಲಾಸದಲ್ಲಿ ಸ್ವಾಮಿ ಶಿವಪೂಜೆ ಮಾಡುತ್ತಿದ್ದ. ಶಂಕಮ್ಮನ ದುಃಖ ಅವನ ಪಾದವನ್ನು ಮುಟ್ಟಿತು. "ಅವನ ಮುತ್ತಿನ ಜೋಳಿಗೆಯ ಮೇಲೆ ಮೂರ್ಹನಿ ಕಣ್ಣೀರು ಬಿತ್ತು, ನಾಗಬೆತ್ತದಮೇಲೆ ನಾಕ್ಹನಿ ಕಣ್ಣೀರು ಬಿತ್ತು

ನರಲೋಕದಲ್ಲೆಲ್ಲೋ ಹೆಣ್ಣಿನ ಗೋಳಾಯ್ತದೆ !

ಸ್ವಾಮಿ ದಿಗ್ಗನೆ ಮೇಲೆದ್ದ. ಅವನ ಅಂತರಂಗ ಕರಗಿ ನೀರಾಯಿತು. ಪೂಜೆಯನ್ನು ಅಷ್ಟಕ್ಕೇ ನಿಲ್ಲಿಸಿ ಬೇಡರ ಕಣ್ಣಯ್ಯನನ್ನು ಮಾದೇವ ಕರೆದ, ನರಲೋಕಕ್ಕೆ ತಾನು ಕೂಡಲೇ ಹೊರಟು ನಿಂತ. 'ಹೆಣ್ಣಿನ ಗೋಳು' ಮತ್ತೆ

ಮತ್ತೆ ಅವನ ಮನಸ್ಸನ್ನು ಬಡಿಯಿತು.

"ಘನ ಶರಣ ಬ್ಯಾಡರ ಕಣ್ಣಯ್ಯ...ನಾ ಅಡಿತೆಗೆದು ಸೋಸಿಕೊಂಡು ಬತ್ತೀನಿ....ಬರೋಗಂಟ ನನ್ನ ಗುಡಿ ದೇವಸ್ಥಾನ ಜ್ವಾಕೆ !"

ಮಾದಯ್ಯನಿಗಾಗಿ ಒಂದು ಬರಗ ಸಿಂಗಾರವಾಯಿತು. ನಾಲ್ಕು ಕಾಲಿಗೂ ನಾಲ್ಕು ಬೆಳ್ಳಿಯ ಗಗ್ಗರಗಳನ್ನು ಹಾಕಿ, ಚಿನ್ನದ ಮೊಗರಂಬದೊಡನೆ ಸಿದ್ಧವಾಯಿತು. ಮಾದಯ್ಯನೂ ದೇವಾಲಯದೊಳಗೆ 'ಎಳಗಾವಿ ಎಳೆದ್ಕೊಂಡ್ದು, ಸುಳಿಗಾವಿ ಮುಸುಗಿಟ್ಟು, ಮುತ್ತಿನ ಜೋಳಿಗೆ ಮುಂಗೈನೊಳಗೆ, ಬೆಳ್ಳಿ ಬೆತ್ತ ಬಲಗೈಲಿ ಹಿಡಿದು, ಮುಂಗಾಲಿಗೆ ಜಂಗು ಧರಿಸಿ, ಬರಗನಮೇಲೆ 'ಮುಹೂರ್ತ' ಮಾಡಿಕೊಂಡು

ಸತ್ಯವಂತೆ ಸಂಕಮ್ಮನ ತಡಿಕೊಂಡು
ಹೊಯ್ತಾರೆ ಮಾದೇವಾ

ಓಹ್, ನಮ್ಮ ಅಪ್ಪಾಜಿ ಹೊರಟ ವೈಖರಿ ಏನು ! ಕೈಲಾಸದಿಂದ ಧರೆಗಿಳಿದು ಬರುವ ಅವನ ಠೀವಿಗೆ ಬರಗೂರು ಬೆಟ್ಟ ಬೆದರಿ ಹೋಯಿತು. ನೀಲಗಿರಿ ಬೆಟ್ಟ ಹುದುಗಿ ಹೋಯಿತು. ಕೊನೆಗೆ—

ತವಸರೆ ಬೆಟ್ಟದ ಮಗ್ಗುಲಾಗಿ ತಡಿಕೊಂಡು ಹೋಯ್ತಾರೆ ಮಾದೇವ....

'ಹುಟ್ಟರೆ ಕೋಡುಗಲ್ಲ'ನ್ನು ಏರಿ ಮಾದಯ್ಯ ನಾಲ್ಕೂ ದಿಕ್ಕನ್ನೂ 'ದಿಟ್ಟೈಸಿ' ನೋಡಿದ! ಅರಣ್ಯದ ಒಡಲಿನಲ್ಲಿ ಶೋಕಮಾಡುತ್ತಿರುವ ಶಂಕವ್ವನ ಸೊಪ್ಪಿನ ಗುಡಿಲು ಅವನ ಕಣ್ಣಿಗೆ ಬಿತ್ತು. ಬರಗನ ಮೇಲೆ ಗುಡಿಲಬಳಿಗೆ ಹೋದರೆ ಅವಳು 'ಹೆದರುತವಳೆ....ಬೆದರುತವಳೆ' ಎಂದವನೇ, ಬರಗದ ಮೇಲೆ ಕಪ್ಪು ಧೂಳ್ತದ ಬೀಳವು ಇಟ್ಟು ಅದನ್ನು ಕೊತ್ತಿಮರಿ ಮಾಡಿ ಕಕ್ಕೆ ಮೆಳೆ ಅಂಡೇಲಿ ಮಲಗಿಸಿಬಿಟ್ಟ. ಬರಿಗಾಲಲ್ಲಿ ಸೊಪ್ಪಿನ ಗುಡಿಸಲ ಕಡೆ ಬಂದು ತುಸು ದೂರದಲ್ಲಿ ನಿಂತು, ಅಲ್ಲಿನ ವಿಚಿತ್ರವನ್ನು ಗಮನಿಸಿದ.

"ಎಲಾ....ಮುಂ.. .ಮಗನೆ ಸೋಲಿಗಾ....ಈ ಹೆಣ್ಣು ಪ್ರಾಣೆಗೆ ಇಷ್ಟು ಬಿಕ್ಕಟ್ಟು ಮಾಡಿಹೋಗವನಲ್ಲ !"

ಸೋಲಿಗನ ಗಾಡಿಗಿದ್ಯದ ಪರಿಯನ್ನು ಅರಿತು ಮಾದೇವ ತನ್ನ ಮಾಯೆಯ ಮಹಿಮೆಯನ್ನು ಮರೆಯಲು ನಿರ್ಧರಿಸಿ ಮುಂದೆ ಬಂದ.

ಇದ್ದಕ್ಕಿದ್ದಂತೆಯೇ ನೆಲವೇ ಗುಡುಗಿತು ! ಮಾದಯ್ಯನ ಸುಳಿವನ್ನರಿತ ಆ ಎಪ್ಪತ್ತೇಳು ಮಂಡಲಗಳೂ ಹುಲಿಯ ಮೊರೆಯಂತೆ ಗರ್ಜಿಸತೊಡಗಿದವು. ಆ 'ರಾಕಾಸಿ ಗೊಂಬೆ' ಕೈಯಲ್ಲಿ ಕತ್ತಿಯನ್ನು ಹಿಡಿದು 'ಸ್ವಾಮಿ ಜೊತೇಲಿ ಚಂಡೆ ಕಾಳ್ಗಕ್ಕೆ ನಿಂತುಬಿಡ್ತು !' ಮಾದಯ್ಯನಿಗೆ 'ರುದ್ರಗ್ವಾಪ'ವೇ ಬಂತು. ಒಮ್ಮೆ ಅವುಡನ್ನು ಕಚ್ಚಿ 'ಕಪ್ಪ ಧೂಳ್ತ ತೆಗೆದು ಪಿಡಿದ' ಮೇಲೆ, ಎಪ್ಪತ್ತೇಳು ಮಂಡಲಗಳೂ ಎಪ್ಪತ್ತೇಳು ಗಾವುದಕ್ಕೆ ಜಿಗಿದವು. 'ಹೆಚ್ಚಿನ ರಾಕಾಸಿ ಗೊಂಬೆ' ಸ್ವಾಮಿಯ ರುದ್ರಗ್ವಾಪಕ್ಕೆ' ತುತ್ತಾಗಿ ತುಳಿಸಿಕೊಂಡು ನೆಲಕ್ಕೊರಗಿತು.

ಮಾದೇವ ಗುಡಿಸಲ ಬಾಗಿಲಿಗೆ ಬಂದ.

"ಭಿಕ್ಷವೋ, ಭಿಕ್ಷವೋ"

ಶಂಕಮ್ಮನಿಗೆ ಬಾಗಿಲಲ್ಲಿ ಹೊಸ ದನಿಯನ್ನು ಕೇಳಿ ಅಚ್ಚರಿಯಾಯಿತು. ಅಪ್ಪನ ಮನೆಯ ಮರಿದೇವರು ಮಾದೇವನೇ ಬಂದನೆ !

ನಿಜಲಿಂಗ ಭಿಕ್ಷವ ನೀಡಮ್ಮ
ನನ್ನ ಜಂಗಿನ ಕಾಲ ಹಿಡಿಯಮ್ಮ

ಮತ್ತೆ ಅದೇ ದನಿ. ಹೌದು ಮಾದೇವನೇ ಬಂದಿದ್ದಾನೆ. ತನ್ನ ಕರೆಯನ್ನು ಕೇಳಿ ಮೂಡುಮಲೆ ಕೈಲಾಸದಿಂದ ಕರುಣೆಯಿಂದ ಇಳಿದು ಬಂದಿದ್ದಾನೆ. ತನ್ನ ಈ ಸ್ಥಿತಿಯಲ್ಲಿ ಮನೆಸ್ವಾಮಿ ಬರುವುದೆ ! ಮೇಲೇಳುವಂತಿಲ್ಲ, ಹೊರಗೆ ಬರುವಂತಿಲ್ಲ, ಹನ್ನೆರಡು ದಿನದಿಂದ ನೆಲದಲ್ಲಿ ಒರಗಿ ಕಟ್ಟಿರುವೆಗೆ ತುತ್ತಾಗಿರುವ ತನ್ನ ಪರಿಗೆ ತಾನೇ ನಾಚಿದಳು ಶಂಕಮ್ಮ. ತನ್ನ ಪತಿ ಕ್ರೂರಿ. ಇನ್ನೇನು ಬರುವ ವೇಳೆಯೂ ಆಯಿತು. ಈ ವೇಳೆಯಲ್ಲಿ ಸ್ವಾಮಿ ಬರಬಾರದಿತ್ತು.

"ನಿಮ್ಮ ಕಂಡ್ರೆ ಕಲ್ಲ ಮಂತ್ರಿಸ್ತಾನೆ. ಕರಡಿ ಮರಿ ಮಾಡ್ತಾನೆ....ಮರಳು ಮಂತ್ರಿಸಿ ಮ್ಯಾಗಿಟ್ಟರೆ ನಾಗರ ಮರಿ ಮಾಡ್ತಾನೆ....ಅವನು ಬರೋಗಂಟ ನೀವು ಹೊಂಟೋಗಿ ಸ್ವಾಮಿ !"

ಮಾದಯ್ಯ ಹೋಗಲು ಬಂದಿಲ್ಲ.

"ಇಲ್ಲಮ್ಮ ನಿನ್ನ ಹಟ್ಟಿ ಕ್ವಾರಣಕ್ಕೆ ಮೊಟ್ಟಮೊದಲು ಬಂದುಬಿಟ್ಟೆ, ನನ್ನ ಹಟ್ಟೀಲಿ ನವಕ್ಕಿನವಧಾನ್ಯ ಅನ್ನೋದು ಮುತ್ತೈದೆರು ಹಣೆಗೆ ಹಚ್ಚಾಕೂ ಇಲ್ಲ!"

ಶಂಕಮ್ಮ ತನ್ನಲ್ಲಿಯೇ ಹಲುಬಿದಳು. ಗುಡಿಲಲ್ಲಿ ಧಾನ್ಯವೆಲ್ಲಿ ಬರಬೇಕು !

ಇರುವೆರಡು ಕಾಡುಬಾಳೆಯ ಹಣ್ಣೂ ಒತ್ತಿಬಾಡಿ ಹೋಗಿವೆ ! ಅವನ್ನಾದರೂ ನೀಡಲು ತಾನು ಹೊರಗೆ ಹೋಗುವ ಪರಿಯಲ್ಲಿಲ್ಲ !

"ಅಯ್ಯೊ ನಾನಿಲ್ಲಿ ಹುಟ್ಟಿದ ನಿರ್ವಾಣದಲ್ಲಿ ಒದ್ದಾಡುತ್ತಿದ್ದೇನೆ. ಇರುವೆರಡು ಕಾಡುಬಾಳೆಯ ಹಣ್ಣನ್ನೂ ತಂದು ಕೊಡಲಾರೆ !"

ಶಂಕಮ್ಮನ ಕೊರಳು ಬಿಗಿದು ಬಂದಿತು. ಅವಳ ದುಃಖ ಮಾದಯ್ಯನ ಎದೆಯನ್ನು ಬಂದು ತಟ್ಟಿತು, ಅವನ 'ಕಪ್ಪಿನ ಧೂಳ್ತ'ದ ಪ್ರಭಾವದಿಂದ 'ಗುಡಿಲು' ಏಳುಪ್ಪರಿಗೆಯ ದೊಡ್ಡ ಸೌಧವಾಯಿತು. ನೆತ್ತಿಯಲ್ಲಿ ಚಿನ್ನದ ಕಳಸ ಮೂಡಿತು. ಅವಳ ಕಾಲು ತೊಳೆಯಲು ಪಚ್ಚೆಯ ಕಲ್ಲು, ನೀರು ಕುಡಿಯಲು ಚಿನ್ನದ ಗಿಂಡಿ, ಮನೆಯ ತುಂಬ 'ರಾಶಿ' ತುಂಬಿಹೋಯಿತು. ಪೆಟ್ಟಿಗೆಯನ್ನು ತೆಗೆದು ನೋಡುವಂತೆಯೂ ಮಾದೇವ ತಿಳಿಸಿದ.

ಪಟ್ಟೆಯ ಸೀರೆ, ಅವಲಂಬಿ ರವಕೆ, ಕತ್ತಿನ ಪದಕ ಸೈವಾಗಿ ತುಂಬಿತ್ತು !

ಶಂಕಮ್ಮ ಹಿಗ್ಗಿದಳು. 'ನಮ್ಮಪ್ಪನ ಮನೆ ದೇವರು ಇಷ್ಟು ಭಾಗ್ಯ ಕೊಟ್ಟ'ನೆಂಬ ಹೆಮ್ಮೆ ಅವಳದಾಯಿತು.

"ಮನಸ್ಸಿಗೆ ಬೇಕಾದ ಸೀರೆ ಉಟ್ಕೊಂಡ್, ರವಕೆ ಇಟ್ಕೊಂಡ್, ಪದಕ ತೊಟ್ಕೊಂಡ್" ಭಾಗ್ಯ ಕೊಟ್ಟ ದೇವರನ್ನ ಬಾಗಿಲಲ್ಲೆ ನಿಲ್ಲಿಸಿದೆ ಎಂದು 'ಬೆತ್ತದ ಮೊರಕ್ಕೆ ಹೊನ್ನು ಚಿನ್ನ ತುಂಬಿಕೊಂಡು, ಒಂದು ಕಾಸಿನ ಮಡ್ಡಿ ಧೂಪ ಬೆಚ್ಚಲಕೊಂಡೇಲಿ ಹಾಕ್ಕೊಂಡು, ಚೆಂಬೇಲಿ ನೀರು ಮಡಿಕ್ಕಂಡು'—

"ಭಾಗ್ಯ ಕೊಟ್ಟಂತ ಭಗವಂತ ಭಿಕ್ಷ ತಗಳ್ಳಿ"

ಎಂದು ಬಾಗಿಲಿಗೆ ಬಂದು ಬೇಡಿದಳು. ಮಾದಯ್ಯ ಭಿಕ್ಷೆ ತೆಗೆದು ಕೊಳ್ಳಲಿಲ್ಲ, ಏನನ್ನೋ ಕೇಳಲು ಬಯಸಿದ.

"ನಿನ್ನ ಒಂದಿಗೆ ಹುಟ್ಟಿದವರೆಷ್ಟು ಜನ. ನಿನ್ನ ಹೊಟ್ಟೇಲಿ ಹೆಣ್ಣು ಮಕ್ಕಳೆಷ್ಟು, ಗಂಡು ಮಕ್ಕಳೆಷ್ಟು ?"

ಶಂಕಮ್ಮ ಅನಿರೀಕ್ಷಿತ ಪ್ರಶ್ನೆಗೆ ಬೆದರಿದಳು. ಆದರೂ ಧೈರ್ಯ ತಂದು ನುಡಿದಳು.

"ನಾನುಟ್ಟಿ ಮೂವತ್ತು ವರ್ಷ. ನನಗೆ ಮಂಡೆಮಾಸಿ ಹನ್ನೆರಡು ವರ್ಷ, ಮಕ್ಕಳ ಫಲವೇ ಇಲ್ಲ !"

ಬಂಜೆಯ ಕೈಯ ಭಿಕ್ಷೆ !

ಮಾದಯ್ಯ ಏಕೋ ಹಿಂದೆಗೆದ !

"ಅಮ್ಮ ಬಂಜೆ ಕೈಯ ಭಿಕ್ಷೆ ಬೇಡ. ನಿನ್ನ ಕೈಯ ಭಿಕ್ಷೆ ತೆಗೆದುಕೊಂಡು ನನ್ನ ಕೈಲಾಸಕ್ಕೆ ಹೋಗಿ ಏಳೇಳು ಕೋಟಿ ಪರಿಸೆ ಬಂದಾಗ ಹಂಚಿದರೆ ಅವರೂ ಬಂಜೆಯರಾಗುವರು !"

ಶಂಕಮ್ಮ ಮಾತಿಗೆ ಸೋಲಲಿಲ್ಲ. ಅಪ್ಪನ ಮನೆಯ ದೇವರು ಬಾಗಿಲಿಗೆ ಬಂದಿರುವಾಗ ತಾನೇಕೆ ಅಂಜಬೇಕು, ಭಾಗ್ಯ ಕೊಟ್ಟ ಭಗವಂತ ಮಕ್ಕಳ ಫಲ ವನ್ನೂ ಕೊಡಲಾರನೆ ?

ಮಾದಯ್ಯನಲ್ಲಿ ವಿನೀತಳಾಗಿ ಬೇಡಿಕೊಂಡಳು.

"ಅಮ್ಮ, ಭಾಗ್ಯ ಬದುಕು ಕೊಟ್ಟೆ....ಮಕ್ಕಳನ್ನೂ ಎಲ್ಲಿ ಕೊಡಲಿ ?"

"ಮಕ್ಕಳ ಫಲ ಕೊಡದ ಮೇಲೆ....ಭಿಕ್ಷೆ ತೆಗೆದುಕೊಳ್ಳದ ಮೇಲೆ ನಿನ್ನ ಪಾದದ ಮುಂದೆ ಪ್ರಾಣ ಬಿಡ್ತೀನಿ !"

ಶರಣೆಯ ದೃಢಭಕ್ತಿಗೆ ಮಾದಯ್ಯ ಕ್ಷಣ ಬೆಚ್ಚಿದ. ತುಸು ಯೋಚಿಸಿ ದವನು, ಏನನ್ನೋ ಕೇಳಿದ—

"ಮಕ್ಕಳ ಫಲ ಕೊಡ್ತೀನಿ ನನಗೆ ಏನು ಕೊಡ್ತಿ ಕಂದಮ್ಮ ?"

ಇನ್ನೇನನು ಕೊಡುವಳು ! "ನನಗೆ ಹೆಣ್ಣಾಗಲಿ ಗಂಡಾಗಲಿ ಹುಟ್ಟಿದ ಒಂಬತ್ತು ದಿನಕ್ಕೆ ಭಿಕ್ಷೆ ಕೊಟ್ಟುಬಿಡ್ತೀನಿ.. ....."

ಮಾದಯ್ಯ ತಲೆದೂಗಿದ. ಆದರೂ ಸಂಶಯ ಪರಿಹಾರ ಮಾಡಿಕೊಳ್ಳ ಬೇಕಾಯಿತು.

"ತಿರಕಂಡು ತಿಂಬೋ ಜಂಗಮರಿಗೆ ಧರ್ಮ ಕೊಡೋದು ನಿಜವ ?"

ಕೊಟ್ಟ ಮಾತಿಗೆ ತಪ್ಪುವವಳಲ್ಲ ಸತ್ಯ ಶರಣೆ.

"ನಿಮ್ಮ ಜಂಗಿನ ಪಾದ ಸಾಕ್ಷಿಯಾಗಿ ಮುತ್ತಿನ ಜೋಳಿಗೆ ಸಾಕ್ಷಿಯಾಗಿ, ಬೆಳ್ಳಿ ಬೆತ್ತ ಸಾಕ್ಷಿಯಾಗಿ....ಹೆತ್ತ ಒಂಬತ್ತು ದಿನಕ್ಕೆ ಮಕ್ಕಳ ಭಿಕ್ಷೆ ಕೊಡ್ತೀನಿ."

ಮಾದಯ್ಯ ಒಪ್ಪಿಕೊಂಡ. ಕಾಡು ಬೆಂಡೇಕಾಯಿ ತಂದು 'ಪಿಂಡಪರಸಾದ' ಕೊಟ್ಟ. ಎರಡು ಮಕ್ಕಳ ಫಲನೀಡಿ, ಒಂಬತ್ತು ತಿಂಗಳು ಒಂಬತ್ತು ದಿನಕ್ಕೆ ಬರುವುದಾಗಿ ತಿಳಿಸಿದ. ಆದರೆ ಶಂಕಮ್ಮ ಮತ್ತೆ ಮೊರೆಯಿಟ್ಟಳು—

"ಸ್ವಾಮಿ ಬದುಕು ಭಾಗ್ಯ ಕೊಟ್ಟೆ, ಮಕ್ಕಳ ಭಾಗ್ಯ ಕೊಟ್ಟೆ, ಏಳುಮಲೆ ಕೈಲಾಸಕ್ಕೆ ಹೋಯ್ತಿದ್ದೀರಿ....ಅರಣ್ಯದಲ್ಲಿ ಹೆಣ್ಣು ಪ್ರಾಣಿ ನಾ ಒಬ್ಬಳೇ

ವನವಾಸ ಪಡಲಾರೆ....ನನಗೆ ಕಷ್ಟ ಬಂದಾಗ ಯಾರು ಆಗುವರು ?"

ಮಾದಯ್ಯ, ಶಂಕಮ್ಮನ ರಕ್ಷಕನಾಗಿ ಅವಳ ಮನೆಯಲ್ಲಿ ಬಿಳಿಯ ಪಲ್ಲಿಯಾಗಿ ಉಳಿಯುವ ಭರವಸೆಯನ್ನು ಕೊಟ್ಟ. ಆದರೆ ಗಂಡ ನೀಲೇಗೌಡ ಬೇಟೆಯಿಂದ ಬರಲಿಲ್ಲ. ಬಂದಾಗ ಇನ್ನಾವ ಶಿಕ್ಷೆ ಕಾದಿದೆಯೊ "ಅದಕ್ಕೆ ಯಾರು ಬೆನ್ನು ಕೊಡುವರು !" ಎಂದು ಕಣ್ಣೀರಿಟ್ಟಳು ಶಂಕಮ್ಮ. ಕೊನೆಗೆ ಮಾದಯ್ಯನೇ ವಜ್ರದ ಗಿರಿಗೆ ಹೋಗಿ, ಬೇಟೆಯಲ್ಲಿ ಮೈಮರೆತಿದ್ದ ನೀಲಯ್ಯನಿಗೆ ಹೆಂಡತಿಯ ಮೇಲೆ 'ಗ್ಯಾನ' ಬರುವಂತೆ ಮಾಡಿದ.

ನೀಲೇಗೌಡ ತನ್ನ ಸೊಪ್ಪು ಗುಡಲಿನ ಹಾದಿಯಲ್ಲಿ ಮರಳಿದ. ತನ್ನ ಮಡದಿ ಶಂಕಮ್ಮ ಏನಾದಳೋ ಎನ್ನುವ ಶಂಕೆ ಕಾಡಿತು ಹಾದಿಯಲ್ಲಿ. ಆದರೆ ಬರುವ ವೇಳೆಗೆ ಗುಡಿಲ ನೆಲೆಯಲ್ಲಿ ದೊಡ್ಡ ಉಪ್ಪರಿಗೆಯ ಸೌಧ ನಿಂತಿದೆ ! ತನಗರಿಯದಂತೆ ಏನೋ ನಡೆದಿದೆ ಎನ್ನುವ ಶಂಕೆಯ ಕಣ್ಣಿನಲ್ಲಿಯೇ, ಕೋಪದ ಉರಿಯಲ್ಲಿಯೇ ಅತ್ತ ಬಂದ. ತನ್ನ ಜೂಲು ನಾಯಿ, ಗೆಡ್ಡೆ ಗೆಣಸು ಎಲ್ಲವನ್ನೂ 'ರುದ್ರಗ್ವಾಪದಲ್ಲಿ ಅಂಡಾಡಿ' ಉಕ್ಕಿನ ಕತ್ತಿಯನ್ನು ಕೊಡುಗಲ್ಲಿನ ಮೇಲೆ 'ರಸಲಾಗಿ' ಮಸೆದುಕೊಂಡು ಹೆಗಲ ಮೇಲೆ ಮಡಗಿ ಬರುತ್ತಿದ್ದಾನೆ !

ಅವನ ಬಗೆಯನ್ನರಿತ ಮಾದಯ್ಯ ಶಂಕಮ್ಮನನ್ನೇ ಹೋಲುವ ಒಂದು ಗೊಂಬೆಯನ್ನು ಮಾಡಿ ಬಾಗಿಲಲ್ಲಿ ನಿಲ್ಲಿಸಿದ. ಶಂಕಮ್ಮ ಕೋಣೆಯಲ್ಲಿ ಉಳಿದಳು. ಹೊರಗಿನಿಂದ ಬಂದ ನೀಲೇಗೌಡ ಯಾವುದನ್ನೂ ವಿಚಾರಿಸದೆ ಕತ್ತಿಯನ್ನು ಬೀಸಿದ. ಗೊಂಬೆ ಎರಡು ತುಂಡಾಗಿ ಉರುಳಿತು. ಆದರೆ ಹೊರಗೆ ಏನೋ ಸದ್ದು ಕೇಳಿ ಶಂಕಮ್ಮ ಅತ್ತ ಬಂದಳು. ನೀಲೇಗೌಡನ ಕೋಪವಾಗಲೇ ತಗ್ಗಿತ್ತು. ತಮ್ಮಪ್ಪನ ಮನೆಯ ದೇವರು ತನಗೆ ನೀಡಿದ ಭಾಗ್ಯಗಳನ್ನೆಲ್ಲ ಬಣ್ಣಿಸಿದಳು, ಪತಿಯನ್ನು ಸಮಾಧಾನಪಡಿಸುತ್ತ.

ನೀಲಯ್ಯ ಯಾವುದನ್ನೂ ನಂಬುವಂತಿರಲಿಲ್ಲ. ಅದರ ಪರೀಕ್ಷೆ ಆಗಲೇ ಬೇಕಾಯಿತು. ತನ್ನ ಮಡದಿಯ ಅಪ್ಪನ ಮನೆಯ ದೈವದ ದೃಢವನ್ನು ನೋಡ ಬಯಸಿದ.

ನೀಲಯ್ಯ ದೊಡ್ಡ ಒಲೆಯೊಂದನ್ನು ಒಡ್ಡಿದ, ಬಾರಿ ಕೊಪ್ಪರಿಗೆ ಇಟ್ಟು 'ಏಳು ಕಂಡುಗ ಎಣ್ಣೆ, ಏಳು ಕಂಡುಗ ತುಪ್ಪ ಹೂದು....ಮೂರು ಗಾಡಿ ಸೌದೆ ಒಟ್ಟಿ ಮರಳಿಸಿದ.'

"ಈ ಮಳ್ಳೋ ಎಣ್ಣೇಲಿ ಹಾಕಿ ಬಿಡ್ತೀನಿ ಹೆಣ್ಣೆ....ನಿನ್ನ ಮಾದೇವನ ಸಾಕಾರದಿಂದ ಈಚೆಗೆ ಬಾ....ಒಪ್ತೀನಿ."

ಪತಿಯ ಮಾತಿಗೆ ಶಂಕಮ್ಮ ಎದುರಾಡಲಿಲ್ಲ. "ಮಾದೇವ ನಿನಗೆ ಅರಿವಾಗಲಿ"—ಎಂದು ಮುಂದೆ ಬಂದಳು. ಕೊಪ್ಪರಿಗೆಯಲ್ಲಿ ಮುಳುಗಿದಳು. ಒಂಬತ್ತು ಗಳಿಗೆಯಲ್ಲಿ ಸೌದೆ ಮುಗಿಯಿತು. ತನ್ನ ಮಡದಿಯ ಮುಖ ತನಗೆ ಸಿಕ್ಕಲಿಲ್ಲವೆಂದು, ಬಾಯಿ ಬಾಯಿ ಬಡಿಯುತ್ತ ಇಣಿಕಿ ನೋಡಿದ, ಆದರೆ ಶಂಕಮ್ಮ ತಣ್ಣೀರಲ್ಲಿ ಮುಳುಗಿದ್ದವಳಂತೆ--

ಮಂಡೆ ಸಿಲ್ಕ ಒಡಕೊಂಡು
ಈಚೆಗೆ ಬಂದ್ಲು ನಗಿಸಾದ್ತ

ನೀಲಯ್ಯ ಬೆರಗಾದರೂ, ಯಾರೋ ಮಾಯಗಾರನ ಕೂಡಿದ್ದಾಳೆ ತನ್ನ ಮಡದಿಯೆಂದೇ ಭಾವಿಸಿದ. 'ಇನ್ನೊಂದು ಸತ್ಯ ಮಾಡಬೇಕು' ಎಂದು ಬಯಸಿದ. ಬೆಟ್ಟದ ಕಿಬ್ಬಿಯಲ್ಲಿ ಅವಳನ್ನು ಮಲಗಿಸಿ, ನೆತ್ತಿಯ ಗುಂಡೊಂದನ್ನು ಅವಳ ಮೇಲೆ ಉರುಳಿಸಿದ. ಆದರೆ ಮಾದೇವ ಶಂಕಮ್ಮನ ಮಗ್ಗುಲಲ್ಲೇ ನಿಂತು ತನ್ನ ಕೋಲಿನಿಂದ ಆ ಕಲ್ಲನ್ನು ಪಕ್ಕಕ್ಕೆ ಹಿಡಿದುಬಿಟ್ಟ !

ಶಂಕಮ್ಮ ಈಗಲೂ ಗೆದ್ದಳು. ಇದಾವುದೋ 'ಗಾಡಿಗ ಇದ್ಯೆ'ಯೇ ಎಂದು ನೀಲಯ್ಯ ತೀರ್ಮಾನಿಸಿದ. ಕಠಿಣವಾದ 'ಇನ್ನೊಂದು ಸತ್ಯ'ದ ಕಡೆ ಅವನು ತಿರುಗಿದ.

'ಮೂರು ಕಂಡುಗ ಸಾಮೆ, ಮೂರು ಕಂಡುಗ ಎಳ್ಳು, ಮೂರು ಕಂಡುಗ ರಾಗಿಗಳನ್ನು ಬೆರಸಿ ರಾಶಿ ಮಾಡಿ, ಮನೆಯೊಂದರಲ್ಲಿ ತುಂಬಿದ. ಬೆಳಗಾಗುವುದರಲ್ಲಿ ಎಲ್ಲವನ್ನೂ ಬೇರೆ ಮಾಡಬೇಕೆಂದು ಮೊರವೊಂದನ್ನು ಕೈಗೆ ಕೊಟ್ಟು, ಬಾಗಿಲಲ್ಲಿ ದೊಡ್ಡ ಗುಂಡೊಂದನ್ನು ಇಟ್ಟು, ಉಕ್ಕಿನ ಕತ್ತಿಯನ್ನು ಹಿಡಿದು ಬೆಳಗಿನವರೆಗೂ ಕಾದು ಕುಳಿತನು. ಶಂಕಮ್ಮ ಮಕ್ಕಳಾದರೆ ಕತ್ತಿಗೆ ಬಲಿಯಾಗಬೇಕು ! ಮತ್ತೆ ಮಾದೇವನನ್ನೇ ಶರಣುಹೊಕ್ಕಳು.

ಏಳು ಕೋಟಿ 'ಎರವು' ತೊಲೆಯ ಕಿಂಡಿಯಿಂದ ಒಳಗೆ ಇಳಿದವು. ಮುಂಗೋಳಿ ಕೂಗುವುದರಲ್ಲಿ, ಮೂಡು ಕೆಂಪೇರುವುದರಲ್ಲಿ ಮೂರು ರಾಶಿ ಮಾಡಿ ಹೊರಗೆ ಬಂದುವು. ನೀಲೇಗೌಡ ಬಾಗಿಲನ್ನು ತೆರೆದು ಬಾಗಿ ನೋಡಿದನು । ಇದನ್ನೂ ಗೆದ್ದಿದ್ದಾರೆ !

ಶಂಕಮ್ಮನ ಪರೀಕ್ಷೆಗಳು ಮುಗಿಯಲಿಲ್ಲ. ಇನ್ನೊಂದು ಘೋರ 'ಕಂಟಕ'ವನ್ನು ಅವಳು ಹಾಯಲೇ ಬೇಕಾಯಿತು. ಗೊಬ್ಬಳಿ, ಹುಣಸೆ, ಬೆಜ್ಜಲ ಕೆಂಡಗಳನ್ನು ಬೇಯಿಸಿ ಮಡಲಿಗೆ ತುಂಬಿದನು ನೀಲೇಗೌಡ. ಮೂರು ಗಳಿಗೆ ಅವನ್ನು ತಾನು ಕಟ್ಟಿಕೊಳ್ಳಬೇಕಾಯಿತು, ಶಂಕಮ್ಮ. ಒಂಬತ್ತು ಗಳಿಗೆಯ ಅವಧಿ ಮುಗಿಯಿತು. ತಾಳ್ಮೆಯೂ ಮಾಯವಾಗಿತ್ತು. ಪರೀಕ್ಷೆಗಳಿಂದ ಅವಳು ದಣಿದಿದ್ದಳು.

"ಏಳು ತಿಂಗಳು ತುಂಬ್ತು....ಕಾಲು ನಿಲುಭಾರ ಇನ್ನೂ ಸತ್ಯ ಮಾಡ್ತಾನಂತೆ !"

ತುಸು ಕೋಪದಲ್ಲಿ ಮಡಲಿಗೆ ಕಟ್ಟಿಕೊಂಡಿದ್ದ ಕೆಂಡವನ್ನು ಪತಿಯ ಮೇಲೆ ಚೆಲ್ಲುತ್ತ "ಇನ್ನೇನು ಸತ್ಯ ಆಗಲಿ !" ಎಂದಳು. ಕೆಂಡ ನೀಲೇಗೌಡನ ಮೈಯನ್ನು ತಾಗುತ್ತಿದ್ದಂತೆಯೇ ದಗ್ಗನೆ ಉರಿ ಹೊತ್ತಿಕೊಂಡಿತು. ಮೈಯೆಲ್ಲ 'ಉರೊಪ್ಪ....ಚಳ್ಳೊಪ್ಪ'. ನೋವು ದಗದಗನೆ ಉರಿಯ ತೊಡಗಿತು. ನೀಲಯ್ಯ ನೋವಿಗೆ ಏಳುತ್ತ ಬೀಳುತ್ತ ಕುಣಿಯ ತೊಡಗಿದ.

"ಹೆಣ್ಣೇ ನಿಮ್ಮ ಮಾದೇಸುರನ ಸತ್ಯ ಒಪ್ದೆ !"–ಎಂದು ಸೋತು ನುಡಿದ. ನೋವು ತಗ್ಗಿ ನೀಲಯ್ಯ ಚೇತರಿಸಿಕೊಂಡ. ಮತ್ತೆ ಪರಿಕಿಸುವ ಗೋಜಿಗೆ ಅವನು ಹೋಗಲಿಲ್ಲ.

* * * *

ಮಾದಯ್ಯ ತಾನು ಪಡೆದಿದ್ದ ವಾಗ್ದಾನವನ್ನು ಮರೆಯಲಿಲ್ಲ. ಶಂಕಮ್ಮನೂ ತನ್ನ 'ಅಪ್ಪನ ಮನೆಯ ದೇವರಿಗೆ' ಕೊಟ್ಟ ಮಾತನ್ನು ಗಂಡನಿಗೆ ತಿಳಿಸಿದಳು. ಬಿಳಿಯ ಹಲ್ಲಿಯಾಗಿ ತನಗೆ ಬೇಕಾದ ಮಕ್ಕಳನ್ನು ಪಡೆಯಲು ಮಾದಯ್ಯ ಅಲ್ಲಿಯೇ ಉಳಿದ, ಬೆನ್ನು ಮಚ್ಚೆಯನ್ನು ಸೀಳಿ ಒಂಬತ್ತು ತಿಂಗಳಿಗೆ ಮಾದಯ್ಯ ಎರಡು ಮಕ್ಕಳೂ ಹೊರಬರುವಂತೆ ಮಾಡಿದ.

ನೀಲೇಗೌಡನಿಗೆ ಎರಡು ಮಕ್ಕಳನ್ನೂ ಕಂಡು ಆನಂದವಾಯಿತು. ಒಂಬತ್ತು ತಿಂಗಳ ಮೇಲೆ ಒಂಬತ್ತು ದಿನ ತುಂಬಿತು. ಕೊನೆಗೆ ಮಾದಯ್ಯ ತನ್ನ ದಾನವನ್ನು ಪಡೆಯಲು ಬಂದ. ಎರಡು ಮಕ್ಕಳನ್ನೂ ತೊಡೆಯ ಮೇಲೆ ಹಾಕಿಕೊಂಡು ಕುಳಿತಿದ್ದ ನೀಲಯ್ಯ.

ಜಂಗು ಧರಿಸಿ, ಬೆಳ್ಳಿಬೆತ್ತ ಹಿಡಿದು, ಮೂಡಣಿಂದ ಬಂದ 'ಮಾಯಕಾರ' ಮನೆಯ ಬಾಗಿಲಗೆ ಬಂದು 'ಕ್ವಾರಣ್ಯ' ಬೇಡಿದ. ಹಟ್ಟಿಬಾಗಿಲಲ್ಲಿ ನಿಂತ ಮಾದಯ್ಯನನ್ನು ಕಂಡ ಶಂಕಮ್ಮ ಗಂಡನಿಗೆ ದಾನದ ನೆನಪು ತಂದಳು. ನೀಲಯ್ಯನಿಗೆ ಸಿಟ್ಟು ಬಂತು.

'ಹತ್ತು ಮಕ್ಕಳು ಹುಟ್ಟಿಲ್ಲ-ತಿರ್‍ಕೊಂಡು ತಿನ್ನೋ ಬೊಕ್ಕತಲೆ ಜಂಗಮನಿಗೆ ಮಕ್ಕಳ ಭಿಕ್ಷವಂತೆ !'

—ಗುಡುಗಿದ ನೀಲೇಗೌಡ ಮನೆಯ ಛಾವಣಿ ಹಾರುವಂತೆ! ಮಾದಯ್ಯ ಕದಲಲಿಲ್ಲ. ಕೊನೆಗೆ 'ಸೌದೆ ಸೀಳೊಂದನ್ನು ತೆಗೆದುಕೊಂಡು' ಅಟ್ಟಿಸಿಕೊಂಡು ಹೋದ ನೀಲಯ್ಯ. ಮಾದಯ್ಯ, ಕ್ಷಣಕಾಲ ಮರೆಯಾದ.

"ನೋಡಿದ ಹೆಣ್ಣೆ, ಎಲ್ಲೋ ಅರಣ್ಯ ಬಿದ್ದ!" ನೀಲಯ್ಯ ಹುರಿ ಮೀಸೆಯ ಮೇಲೆ ಕೈಯಾಡಿಸಿದ. ಮುಂದೇನು ಗತಿಯೋ ಎಂದು ಶಂಕಮ್ಮ ಭಯದಲ್ಲಿ ಆತಂಕದಲ್ಲಿ ನಡುಗಿಹೋದಳು.

ಮಾದಯ್ಯ ಹುಟ್ಟರೆ ಕಲ್ಲಿನ ಮೇಲೆ ಕುಳಿತು ಕೊತ್ತಿಯ ಮರಿಯಾಗಿದ್ದ ಬರಗನನ್ನು ಕರೆದ. 'ಕಿಡಿ ಕಿಡಿ ಮಾಡ್ತಾ ಕೆಂಗಣ್ಣು ಮರಳಿಸಿಕೊಂಡು, ನೆತ್ತಿ ಮೇಲೆ ಕೊನೆ ಇರಿಸಿಕೊಂಡು ಸ್ವಾಮಿತಾವಕೆ ಬಂತು !'

'ಕಡಿಬೇಡ....ಜಿಗುಳಬೇಡ....ಇಷ್ಟು ಮಾಯದ ಮಕ್ಕಳ ತೊಡೆಯ ಮೇಲೆ ಹಾಕಿ ತೂಗು....ನನ್ನ ಹೆಸರು ಹೇಳಿ ಕಾಣಿಕೆ ಕಟ್ಟಿದರೆ ಮಾಯದಲ್ಲಿ ನಿನ್ನ ಮರೆ ಮಾಡ್ಕೋತೀನಿ....ಏನಾದರೂ ಗುಂಡಾಗುಂಡಿ ಮಾಡಿದರೆ ಎರಡು ಮಕ್ಕಳನ್ನೂ ತೊಡೆಗೆ ಹಾಕಿ ಜೋಗುಳ ಹಾಡು' ಬರಗ ನೀಲಯ್ಯನ ಮನೆಗೆ ಬಂದಿತು. ತೆಕ್ಕೆಗಾಲು ಹಾಕಿ ಬಾಗಿಲಲ್ಲಿ ಕುಳಿತ ಬರಗನನ್ನು ಕಂಡ ಸೋಲಿಗ ನೀಲಯ್ಯ ಮಕ್ಕಳನ್ನು ಮುದ್ದಾಡುತ್ತಿದ್ದವನು ಮೇಲೆದ್ದು ಮಂತ್ರದಚೀಲವನ್ನು ತಂದ. ಅವನ ಕಟ್ಟು ಕಂದಲಿಲ್ಲ. ಕೋಡುಗಲ್ಲ ಮೇಲೆ ಮಾದಯ್ಯ ವಿಭೂತಿ ಗಟ್ಟಿಯನ್ನು ಹೊಡೆದ !

ಬರಗ ತೆವಳಿಕೊಂಡು ಮಕ್ಕಳ ಹತ್ತಿರವೇ ಬಂದಿತ್ತು! ನೀಲಯ್ಯ ನಡುಗಿ ಮಂತ್ರದ ಚೀಲ ಎಸೆದು 'ಸೌದೆ ಮೂಲೆಗೆ' ಹೋಗಿ ಕುಳಿತ. ಮಾದಯ್ಯನಿಗೆ ಹರಕೆ ಹೊತ್ತ.

* * * *

ಸ್ವಾಮಿ ಇಂಥಾ ದುಷ್ಟ ಮೂರ್ತಿ ಅಂತ ತಿಳಿಯಲಿಲ್ಲ
ಮಕ್ಕಳ ಭಿಕ್ಷೆ ಕೊಡತೀನಿ
ನಿನ್ನ ಮಾಯದ ಹುಲಿಯ ಕರಕಪ್ಪ !

ನೀಲಯ್ಯನನ್ನು ಮತ್ತೊಮ್ಮೆ ಮನ್ನಿಸಿ ನೋಡಿದ ಮಾದಯ್ಯ. ಆದರೆ ಅವನು ಆ ಮನೆಯನ್ನೇ ತೊರೆದು ಕಲ್ಲು ಗವಿಯೊಂದಕ್ಕೆ ಹೋಗಿ ದೊಡ್ಡ ಬಂಡೆಯೊಂದನ್ನು ಮುಚ್ಚಿ ಮಕ್ಕಳೊಡನೆ ಸೇರಿಕೊಂಡ. ಕೊನೆಗೆ ಬಿಳಿಗಿರಿ ರಂಗ ಮಾದಯ್ಯನ ಇಚ್ಛೆಯಂತೆ ದಾಸಯ್ಯನ ವೇಷವನ್ನು ಧರಿಸಿ, ನೀಲಯ್ಯ ಜೇನಿಗೆ ಹೋದಾಗ ಒಬ್ಬ ಮಗನನ್ನು ತಂದು ಒಪ್ಪಿಸಿದ. ಇನ್ನೊಬ್ಬ ಮಗನಿಗೆ ಮಾದಯ್ಯನೇ 'ಹುಚ್ಚು ಬೆಪ್ಪು' ಮಾಡಿ, ತಂದೆಯನ್ನು ತ್ಯಜಿಸಿ ಅವನೇ ತನ್ನ ಬಳಿಗೆ ಬರುವಂತೆ ಮಾಡಿದ. ಮಕ್ಕಳಿಬ್ಬರೂ ಸ್ವಾಮಿಯ ಆಶ್ರಯವನ್ನು ಪಡೆದರು. ಅವರೇ ಬಿಲ್ಲಯ್ಯ, ಕಾರಯ್ಯ.

"ಅಟ್ಟ ಬೆಟ್ಟದಲ್ಲಿ ಸುತ್ತಿ ಸೋತು ಬಂದಿದ್ದೀರಿ....ಎಡದಲಿ ಬಲದಲ್ಲಿ ಕುಳಿತುಕೊಳ್ಳಿ' ಎಂದನು. ಬಿಲ್ಲಯ್ಯ, ಕಾರಯ್ಯ ಮಾದಯ್ಯನ ಅವಿಚ್ಛಿನ್ನ ಭಕ್ತರಾದರು. ಅವನ ಎಡ ಬಲದಲ್ಲಿ ಸದಾ ನಿಂತು ಆ 'ಕಿಡಿಗಣ್ಣಯ್ಯ'ನನ್ನು ಸೇವಿಸಿ ಧನ್ಯರಾದರು.

ಸತ್ಯಶರಣೆ ಶಂಕಮ್ಮ 'ಕುಸುಮಾಲೆ'ಯಾಗಿ ಬಿಳಿಗಿರಿರಂಗನನ್ನು ಸೇರಿಕೊಂಡಳು. ಸೋಲಿಗ ನೀಲೇಗೌಡ ತಾನು ಮಾಡಿದ ಪಾಪಕ್ಕಾಗಿ—

ಕಾಡು ಗಿಡ ಗಂತಾರದಲ್ಲಿ ಬೆಂಕಿ ಹಾಕಿಕೊಂಡು ನೆಲೆಯಿಲ್ಲದೆ ಇರುವಂತಾಯಿತು. ನರಲೋಕದ ಯಾತ್ರೆಯನ್ನು ಮುಗಿಸಿ ಮಕ್ಕಳೊಡನೆ ಮಾದಯ್ಯ ಏಳುಮಲೆ ಕೈಲಾಸಕ್ಕೆ ಮರಳಿದ....

ಮಲೆಯ ಮಾದೇವ ಬರುವಾ ಚಂದವಾ....
ನೋಡಿ ನಮ್ಮ ಶಿವನಾ
ಎಡಚೋರಿ ಕಾರಯ್ಯ ಬಲಚೋರಿ ಬಿಲ್ಲಯ್ಯ
ಬರುವುದು ನೋಡಯ್ಯ
ಬಲಚೋರಿ ಬಿಲ್ಲಯ್ಯ ಬೆಳ್ಳಿಯ ಚವಲವ
ಬೀಸೋದು ನೋಡಯ್ಯ
'ಮಂಗಳವೊ ಜಯಮಂಗಳವೋ ಮಂಗಳ
ಮೂರ್ತಿ ಮಾದೇವರಿಗೇ !'

# ಬೇವಿನ ಕಾಳಮ್ಮ

ಹೂವಮ್ಮ ಹೂವೊ ಶಿವನೆ ಯಾವಮ್ಮ ಹೂವೊ ಶಿವನೆ
ಯಾವಮ್ಮ ತ್ವಂದರಸಿದಳಯ್ಯೊ – ರಾಜಮಲ್ಲಿಗೆಯ
ಕಾಸು ಕಮರೀಲವರೆ-ಈಗ ಕರೆತನ್ನಿ ಮಾದೇವನ
ಯಾವಮ್ಮ ತ್ವಂದರಗಿದಳಯ್ಯೊ-ರಾಜಮಲ್ಲಿಗೆಯ
ಕರಡಿ ಕಕ್ಕಾರಿದ ದೊಡ್ಡುಲಿಗಳ ಮುರಿದ
ಯಾವಮ್ಮ ತಂದರಗಿದಳಯ್ಯೊ-ದ್ಯುಂಡು ಮಲ್ಲಿಗೆಯ

ಕೇಳಪ್ಪ ಗುರವೇ, ಗುರುಪಾದವೇ ನಮ್ಮಪ್ಪಾಜಿ ಕಿಡುಗಣ್ಣಯ್ಯ....

ಮಲ್ಲಿಗೆ ಹೂವಿನ ಮಾಲೆಗಳ ನ್ವಮ್ಮೇಳುಮಲೆ ಕೈಲಾಸಕ್ಕೆ
ಯಾವಮ್ಮ ತ್ವಂದಂಡಿಳಯ್ಯೊ ದ್ಯುಂಡು ಮಲ್ಲಿಗೆಯ

ದೇವರ ಗುಡ್ಡರು ಕಂಸಾಳೆಗಳ ಓನ್ನೆಲೆಯಲ್ಲಿ ಹಾಡುವ ಮಲೆಯ ಮಾದೇಶ್ವರನ ಕಥೆಗಳಲ್ಲಿ 'ಬೇವಿನ ಕಾಳಿಯ ಸಾಲು' ಪ್ರಮುಖವಾದುದು. ಮಾದಯ್ಯ ನೀಡಿದ ಭಾಗ್ಯದಿಂದಲೇ ಬೀಗಿ, ಅವನನ್ನೇ ಮರೆತು ಮೆರೆದವಳು ಬೇವಿನ ಭಾಗ್ಯ ನೀಡಿದ ಭಗವಂತ ಬಾಗಿಲಿಗೆ ಬಂದಾಗ ಒಂದು ಓಡಿ ಎಳ್ಳೂ ಅವನಿಗೆ ಸಲ್ಲಲಿಲ್ಲ. ಅದೇನು ತಿರಸ್ಕಾರದ ನುಡಿ! ಅದೇನು ಉದ್ಧಟತನ! ಬೇವಿನಕಾಳಿ ಕಾಳಿಯ ಸೊಕ್ಕನ್ನು ಇಕ್ಕಿ ಮೆಟ್ಟಲಾಗಿಯೇ ಏಳುಮಲೆ ಕೈಲಾಸದಿಂದ ನಡೆದು ಬಂದಿದ್ದಾನೆ ನಮ್ಮಪ್ಪಾಜಿ.

'ಮಲೆಯ ಮಾದೇವ ಬರುವ ಚಂದವಾ....ಹರ ಹರ ನಮ್ಮಪ್ಪಾ.... ಕಿಡುಗಣ್ಣಯ್ಯನಿಗೆ, ಬುಟ್ಟಮಂಡೆ, ಜೋಳು ಮಸ್ತಕ, ಒಕ್ಕಳಗುಂಟ ಹುಲಿ ಚರ್ಮ....ಪಾಶುಪತಿ ಪಂಚಬಾಣ, ಧರಿಸಿಕೊಂಡು ಏರೇಳು ಲೋಕವನ್ನ ಕಟ್ಟಿ ಆಳ್ಯವರೇ....'

ಓರಿಯಗುಡ್ಡ ಕಂಸಾಳೆಗೆ ಸೊಲ್ಲು ಕೊಟ್ಟಿದ್ದಾನೆ....ದಮ್ಮಡಿ ಏಕತಾರಿಗಳು ಹಿಂದೆ ನಡೆದಿವೆ.

ಎಲ್ಲ ದೇವರಿಗೂ ಹಾಲು ಮಜ್ಜನ ಸಲ್ಲುತ್ತದೆ, ಮತ್ತೆ ನರಲೋಕದಲ್ಲಿ

ಸುತ್ತಿ ಬರಬೇಕು ಮಾದಪ್ಪನಿಗಾದರೋ ತಿಂಗಳಿಗೆ 'ಒಂದು ಜಿನ(ದಿನ) ಕಡಮೆಯಾಗಿ' ಎಣ್ಣೆಮಜ್ಜನವಾಗಬೇಕಾಗಿದೆ ; ಎಣ್ಣೆಮಜ್ಜನಕ್ಕೆ ಒಕ್ಕಲು ಪಡೆದುಕೊಂಡು ಬರಬೇಕು. ನೀರು ಮಜ್ಜನ ಸಲ್ಲುತ್ತದೆ ; ಎಳನೀರು ಮಜ್ಜನ ಸಲ್ಲುತ್ತದೆ ; ಅಂಥ ಭಕ್ತಗನ್ನು ಹುಡುಕಿ ತರಬೇಕು.

ಮಾದಯ್ಯನಿಗೆ ಯೋಚನೆಯಾಯಿತು. ಕಾರಯ್ಯನೊಡನೆ ಈ ವಿಚಾರವನ್ನು ತಿಳಿಸಿದ. ಅವನಾದರೂ ಹೋಗಿ ಹುಡುಕಿ ಬರಲು ಆಶಿಸಿದ. ಆದರೆ ಕಾರಯ್ಯನಿನ್ನೂ ಆ ಬಲವನ್ನು ಪಡೆದಿಲ್ಲ. ನರಲೋಕದ 'ದೃಢ'ವನ್ನು ಮಾದಯ್ಯನೇ ಬಲ್ಲ !

ನರಲೋಕವನ್ನೆಲ್ಲ ಸುತ್ತಿಯಾಯಿತು. ಒಂದೊಂದು ಮನೆಯಾಗಿ ಅಡಿತೆಗೆದು ಭಿಕ್ಷೆ ಮಾಡಿದರೂ....ಸೋಸಿಕೊಂಡು ಬಂದರೂ ಒಬ್ಬರ ಮನೆ 'ದೃಢ' ಒಬ್ಬರಲ್ಲಿ ಕಾಣಲಿಲ್ಲ. ನಿರಾಶನಾಗಿ ಮಾದಯ್ಯ ಮೂಡಮಲೆ ಕೈಲಾಸದ ದಾರಿಯಲ್ಲಿ ನಡೆದ. 'ಏಳುದೊರೆ ಹಳ್ಳ'ಕ್ಕೆ ಬಂದಾಗ ಏನೋ ನೆನಪಾಯಿತು. ಒಂದು ಗಳಿಗೆ ನಿಂತು ಮಾದಯ್ಯ ಯೋಚಿಸಿದ ;

ಇಲ್ಲಿಯೇ ಬೇವಿನ ಕಾಳಿಯ ಬಡತನವನ್ನು ಬಯಲು ಮಾಡಿದ ನೆನಪು. ಹರುಕು ಬಟ್ಟೆಯನ್ನುಟ್ಟು, ಗಂಡ ಹೆಂಡತಿಯರ 'ಗಾಳಿಗೆತ್ತಿದಸೊಡರಾಗಿದ್ದರು' ಗಂಡ ಏಳು ಹಟ್ಟಿಯ ದನಗಳನ್ನು ಕಾದಿದ್ದರೆ, ಏಳುಮಲೆಯ ಹಾದಿಯಲ್ಲಿ ಮಾದಯ್ಯ ಬರುವಾಗ ಹೆಂಡತಿ ಬೇವಿನಕಾಳಿ ಓಡಿ ಬಂದು ಮಾದಯ್ಯನಪಾದ ಹಿಡಿದಿದ್ದಳು. ತನ್ನ ಸ್ಥಿತಿಯನ್ನು ತೋಡಿಕೊಂಡಳು. ಕೊನೆಗೆ ಕೈ ಕೈ ಮುಗಿದು ಅಂಗಲಾಚುತ್ತ—

"ನನ್ನ ಬಡಸ್ತನ ಬಯಲು ಮಾಡಿ ಸಿರಿಸ್ತನ ಉಂಟುಮಾಡಿದ್ದೇ ಒಂದು ಹೌದಾದರೆ ಎಡಗೈಲಿ ಒಕ್ಕಲಾಗ್ತೀನಿ....ಹೆತ್ತ ಮಕ್ಕಳ ಹೆಸರ ಕೊಡ್ತೀನಿ.... ಬಿತ್ತಿದ ಬೆಳೆ ಮೊಸಲು ತೇಗಿತೀನಿ....ಅದುವರೆಗೆ ಏಳುಮಲೆ ಕೈಲಾಸಕ್ಕೆ ಹನ್ನೆರಡು 'ತಿಂಗ' ಪಾದಚಾಕರಿ ಮಾಡ್ತಿನಿ, ಏಲಕ್ಕಿಫಲಾರದಲ್ಲಿ ಬರ್‍ತೀನಿ.... ನನ್ನ ಕಷ್ಟ ಪರಿಹಾರ ಮಾಡಪ್ಪ ಮಹಾದೇವಾ....

ಬೇವಿನ ಕಾಳಿ ಕಣ್ಣೀರು ಮಿಡಿದು ಬೇಡಿದ್ದಳು. ಮಾದಯ್ಯನ ಗಿರಿಗೆ ಹೋಗಿ ಐದು ತಿಂಗಳು ನಿಷ್ಠೆಯಿಂದಲೇ ಸೇವಿಸಿದಳು. ಮಾದಯ್ಯನ ಮನಸ್ಸು ಕರಗಿತು 'ಏಳು ಲಕ್ಷ ಬದುಕು' ಎತ್ತಿ ಕೈಲಿಟ್ಟು ಬಿಟ್ಟ !

ಬೇವಿನ ಕಾಳಿಗೆ ಇನ್ನಿಲ್ಲದ 'ಐಶ್ವರ್ಯ' ತುಂಬಿ ತುಳುಕಿತು. 'ಮಾದೇವ ಅಂಬೋ ಮಾತೇ' ಅವಳಿಗೆ ಮರೆತು ಹೋಯಿತು. ಇನ್ನೂ ಏಳು ತಿಂಗಳ ಸೇವೆಯನ್ನಾದರೂ ಮುಗಿಸುವ ಕಡೆ ಮನಸ್ಸು ಬರಲಿಲ್ಲ. ಏಳು ಮಂದಿ ಗಂಡು ಮಕ್ಕಳಾದರು ಅವಳಿಗೆ. ದೇವಾಜಿ, ವೀರಾಜಿ, ಭದ್ರಾಜಿ, ಲಿಂಗಾಜಿ, ಶಿವಲಾಜಿ, ಗೌರಾಜಿ, ಚೆನ್ನಾಜಿ ಎಂಬ ಏಳು ಮಂದಿ ಸೊಸೆಯರು ಬಂದರು. ನೀರು ಕುಡಿಯಲು ಚಿನ್ನದ ಗಿಂಡಿ, ಕಾಲು ತೊಳೆಯಲು ಪಚ್ಚೆಯ ಕಲ್ಲು. ನಾನೂರೆಪ್ಪತ್ತೈದು ಕಂಡುಗ ಎಳ್ಳಿನ ಬೆಳೆ, ಗಂಡ ಕೆಂಡಗೌಡಯ್ಯನಿಗೆ ಈಗ ಏಳು ಹುಂಡಿ ದನ ಕುರಿ.

ಬೇವಿನಕಾಳಿಯ ಸಿರಿ ಸಂಪತ್ತು 'ಏಳು ಮಲೆ ಕೈಲಾಸಕ್ಕೆ ಹಗಲಾಯ್ತು'. ಮಾದಯ್ಯನಿಗೂ ನೆನಪಾಯಿತು. ಎಣ್ಣೆಮಜ್ಜನಕಿನ್ನಾವ ಕೊರತೆ! ತಾನು ನೀಡಿದ ಭಾಗ್ಯದಲ್ಲಿ ಬೇವಿನ ಕಾಳಿ ತುಂಬು ಮನೆಯಲ್ಲಿ ಬದುಕಿದ್ದಾಳೆ.ಅವಳನ್ನೇ ಕೇಳಿದರಾಯಿತು!

ಮಾದಯ್ಯ ಬೇವಿನ ಹಟ್ಟಿಯ ದಾರಿ ಹಿಡಿದ.

ಇತ್ತ ಬೇವಿನ ಕಾಳಿ ತನ್ನ ಎಳ್ಳು ಕಣಕ್ಕೆ ಹೊರಟಿದ್ದಾಳೆ. ಹಿರಿಯ ಸೊಸೆ ದೇವಾಜಿಯನ್ನು ಕರೆದು ಎಚ್ಚರಿಸಿದ್ದಾಳೆ. "ನೀನು ಹಟ್ಟಿಒಳಗೆ ಜ್ವಾಪಾನ.... ಎಲ್ಲರಿಗೂ ನೀನು ಗೊತ್ತುಗಾತಿ, ನನ್ನ ಹಟ್ಟಿಗೆ ಗುಡ್ಡಗಳು, ಗುರುಗಳು, ಜೋಗ್ಗಳು, ದಾಸಗಳು ಬತ್ತವರೆ....ಬಂದವರಿಗೆಲ್ಲ ಒಂದೊಂದು ಹಿಡಿ ಲಿಂಗದ ಭಿಕ್ಷೆ ಕೊಟ್ಟುಬಿಟ್ಟರೆ....ನಮ್ಮ ಹಟ್ಟಿ ಒಳಗೆ ಎಷ್ಟು ಕಮ್ಮಿ ಆಗೋಯ್ತದೆ.... ಏಳು ಜನ ಉಂಡ ಎಂಜಲ ನೀರ ಕಲಗಚ್ಚಿಗೆ ಹುಯ್ಯಿರಿ"

ಸೊಸೆಯರಿಗೆಲ್ಲ ಕಟ್ಟು ಮಾಡಿದಳು ಬೇವಿನ ಕಾಳಮ್ಮ. ಕಲಗಚ್ಚನ್ನು ಕಾಗೆ ಗೂಗೆಗಳು ಬಂದು ಕುಡಿದಾವೆನ್ನುವ ಅಳುಕು ಅವಳಿಗೆ. ಆ ತೊಟ್ಟಿಗೆ ' ಮಂಜಿನ ಬಲೆ ' ಬೀಸಿದಳು. ಹಟ್ಟಿಗೆ ದೊಡ್ಡ ಗುಂಡನ್ನು ಚಾಚಿದಳು. ಕತ್ತೆ ನಾಯಿ ಕಾವಲು ಹಾಕಿದಳು. ಕಡಿಯೋ ಸರ್ಪವನ್ನು, ಬಿಚ್ಚುಗತ್ತಿಯ 'ಪಾರ' ವನ್ನೂ ಕಾವಲಿಗೆ ನೇಮಿಸಿದಳು. ಕೊನೆಗೆ ಕಿರಿಯ ಸೊಸೆ ಚೆನ್ನಾಜಿಯನ್ನು ಕರೆದು ತಿಳಿಸಿದಳು.

"ನನ್ನ ಹಟ್ಟೀ ಒಳಗೆ ಮೂವತ್ತು ಮೂರು ಹಸುಗಳು ಕರೀತವೆ ಕಂದಮ್ಮ! ಉತ್ತಂಬಳ್ಳಿ, ಚಾರುಬಳ್ಳಿ ಗಾಣಸೆಟ್ಟಿಗಳ್ಗೆ ಬೆಣ್ಣೆ ಗುತ್ಗೆ ಕೊಟ್ಟು

ಬಿಟ್ಟಿವಿನಿ, ಹೊತ್ತೊತ್ತಿಗೆ ನೀನು ಹಾಲುಕರೆ....ಏನಾದರೂ ಅದರಲ್ಲಿ ಅರಪಾವು ಹಾಲುಕಮ್ಮಿ ಆದ್ರೆ ಕಿವಿ ಹರ್ರು ಕಿರುಬೆರಳಿಗೆ ಉಂಗರ ಮಾಡ್ಕತ್ತೀನಿ....ಗಾಜಿನ ಕಂಬಕ್ಕೆ ಕಟ್ಟಿಸ್ತೀನಿ....ನಿನ್ನ ಮೂವತ್ತುಮೂರು ಮೊಳದ ಮಂಡೆ ಕೊಂಡೋಗಿಗೆ ಮುಂಗೈಗೆ ಸುತ್ಗಂಡು ಕೋಲೇಲಿ ಕೊಲ್ತೀನಿ...."

ಬೇವಿನ ಕಾಳಮ್ಮನ ನುಡಿಯಲ್ಲಿ ದರ್ಪವಿತ್ತು. ಸೊಸೆಯರನ್ನು ಎಂದೂ ನಂಬಿದವಳಲ್ಲ; ಎಂದೂ ಅವರಿಗೆ ಸಲಿಗೆಯನ್ನು ಕೊಟ್ಟವಳಲ್ಲ; ಸ್ವಾತಂತ್ರ್ಯ ನೀಡಿದವಳಲ್ಲ. ತನ್ನ ಕೆಬ್ಬೆಯ ಹೊಲದಿಂದ ಬರುವುದು ಒಂದೆರಡು ದಿನವೇ ಆಗ ಬಹುದು. ಮನೆಯ ವಸ್ತುಗಳನ್ನೇ ಮಾರಿ 'ಪುಡಿಗಂಟು' ಮಾಡಿಕೊಂಡರೆ! ಕೊನೆಗೆ ಆ ಎಚ್ಚರಿಕೆಯ ನುಡಿಯೂ ಸೊಸೆಯರ ಪಾಲಿಗೆ ಕಾದಿತ್ತು.

"ನಿಮ್ಮ ಕಲ್ಲಗಾಣಕ್ಕೆ ಹಾಕಿ ಅರಿಸ್ತೀನಿ....ನಿಮ್ಮ ಅಪ್ಪನ ಹಟ್ಟಿಹಾಳಾಗ, ಇದೇ ಮಟ್ಟಿಗೆ ಮಾರಿ ಮಾರಿ ಪುಟ್ಟಗಂಟ ಕಟ್ಗತೀರಿ!"

ಸೊಸೆಯರಾರೂ ಎದುರು ನಿಂತು ಮಾತಾಡುವಂತಿಲ್ಲ. ಬೇಕಾದುದನ್ನು ಬೇಡವಾದುದನ್ನು ಕೇಳುವಂತಿಲ್ಲ. ಅತ್ತೆಯ ನುಡಿಗೆ ಮೌನವಾಗಿಯೇ ಸಮ್ಮತಿಸಿದರು. ಹೊರಬಾಗಿಲಿಗೆ ಹೋಗಿದ್ದ ಬೇವಿನ ಕಾಳಿ ಏನನ್ನೋ ನೆನಸಿ ಕೊಂಡು ಮತ್ತೆ ಒಳಗೆ ಬಂದು, ಕಿರಿಯ ಸೊಸೆಯನ್ನು ಕರೆದಳು.

"ಅದರಲ್ಲಿ ಅರಪಾವು ಹಾಲು ಕೊಂಡ್ಹೋಗಿ ಏಳು ಜನ ಮೊಮ್ಮಕ್ಕಳಿಗೂ ಹಂಚಿಕೊಡು."

ಅತ್ತೆಯ ಔದಾರ್ಯಕ್ಕೆ ಚೆನ್ನಾಗಿ ನಿಟ್ಟುಸಿರು ಬಿಟ್ಟಳು !

ಬೇವಿನ ಕಾಳಿಗೆ ಏಳು ಮಂದಿ ಸಂಬಳದ ಆಳುಗಳು, ಏಳುಮಂದಿ 'ಕಂಬಳದ' ಆಳುಗಳು. ಎರಡು ಬಳ್ಳ ರಾಗಿಯಲ್ಲಿ ನಿತ್ಯವೂ ತನ್ನ ಹಟ್ಟಿಯ ಜೀತಗಾರರಿಗೆ ಆಳುಕಾಳಿಗೆ ಊಟವಾಗಬೇಕು! ತನ್ನ ಬಾಣದ ಕೆಬ್ಬೆಯ ಹೊಲಕ್ಕೆ ಅವರನ್ನು ಕರೆದೊಯ್ದಾಗ, ಒಬ್ಬೊಬ್ಬರು ಒಂದೊಂದು ಹಿಡಿ ಎಳ್ಳನ್ನು ತಿಂದರೆ ತನಗೆಷ್ಟು ನಷ್ಟ ಎನ್ನುವ ಶಂಕೆ ಅವಳಲ್ಲಿ! ಅದಕ್ಕಾಗಿಯೇ ಕಣದ ಬಳಿ ಬಿಂದಿಗೆಯಲ್ಲಿ ನೀರನ್ನು ತರಿಸಿ ಇಟ್ಟುಕೊಂಡಳು. ಆಗಾಗ ಆ ಆಳು ಗಳ ಬಾಯನ್ನು ಮುಕ್ಕಳಿಸಿ ಕಲ್ಲಮೇಲೆ ಉಗಿಯಬೇಕು. ಒಂದು 'ಎಳ್ಳತರಿ' ಸಿಕ್ಕರೂ ಅವರಿಗೆ ಕೊಡುವ ಮೂರು ಹಣವನ್ನು ಹಿಡಿದುಕೊಳ್ಳುವ ಮನಸ್ಸು ಮಾಡಿದಳು. ಇನ್ನು ಇರುವೆಗಳು, ಎಳ್ಳಿನ ರಾಶಿಯಲ್ಲಿ ಒಂದೊಂದನ್ನು ಕಚ್ಚಿ

ಹೋದರು ಅಪಾರ ನಷ್ಟವೇ ! ಕೊನೆಗೆ ಕಣದ ಸುತ್ತಲೂ ' ಕೊಂಡದ ಗುಳಿ ' ತೆಗೆಸಿದಳು. ಬೆಂಕಿಯನ್ನು ಹಾಕಿಸಿದಳು.

ಇಷ್ಟೆಲ್ಲ ಸಿದ್ಧತೆಯೊಡನೆ ಬೇವಿನ ಕಾಳಿ ಎಳ್ಳು ಕಣಕ್ಕೆ ಹೊರಟು ನಿಂತಳು. ಮೂವತ್ತು ಮೊಳದ 'ತಾರ ಸೀರೆ' ಒಂದೇ ಸುತ್ತಿಗೆ ಉಟ್ಟಳು. 'ಅವಲಂಬಿ ರವಕೆ ತೊಟ್ಟಳು'. ಕತ್ತಿಗೆ ಪದಕ ಧರಿಸಿ ಹೊರಟಳು. ಈ 'ಸಿರಿ ಸಂಪತ್ತಿನಲ್ಲಿ ವಾಲಾಡುವ' ಅವಳಿಗೆ ಮಾದೇವನ ನೆನಪೆಲ್ಲಿ!

ಕಣದ ಬಳಿ 'ಮುಕ್ಕಾಲು ಮಂಚದ' ಮೇಲೆ ಬಂದು ಅವಳು 'ಒರಗಿದಳು' ಒಂದುಕಣ್ಣಿನ ರೆಪ್ಪೆ ಮುಚ್ಚಿಕೊಂಡಿತು. ಒಬ್ಬ ಆಳನ್ನು ಕರೆದು ಚಿನ್ನದ ಕೊಕ್ಕೆಯಲ್ಲಿ ರೆಪ್ಪೆಯನ್ನು ಎತ್ತಿಸಿಕೊಂಡು ಕಣದ ಕಡೆ ಎಚ್ಚರಿಕೆಯಿಂದ ದೃಷ್ಟಿಯನ್ನು ನೆಟ್ಟಳು!

ಮಾದಯ್ಯ ಬೇವಿನ ಕಾಳಿಯ ಐಶ್ವರ್ಯಕ್ಕೆ ತಾನೇ ಸೋಜಿಗಗೊಂಡ. ಮೊದಲು ಮನೆಗೆ ಹೋಗಿ ದೇವಾಜಿಯ ಭಕ್ತಿಯನ್ನು ಕಂಡು ಅನಂತರ ಕಣದ ಕಡೆ ಹೋಗಲು ನಿರ್ಧರಿಸಿದ.

"ಧಾನ್ಯ ಕೊಟ್ಟಂತ ಮಾದೇವ ಬಂದ ಅಂದುಬಿಟ್ರು, ಒಂದು ಕೊಳಗ ಎಳ್ಳು ಎತ್ತಿ ನನ್ನ ಮುತ್ತಿನ ಜೋಳಿಗ್ಗೆ ನೀಡಿ ಪಾದಮುಟ್ಟಿ ಪಟ್ಟಾಭಿಷೇಕ ಮಾಡಿಬುಟ್ರು ನನ್ನ ಪೂಡಲು ಮನೆ ಕೈಲಾಸಕ್ಕೆ ಕಳಿಸಿಬಿಟ್ಟರೆ ಅವಳಿಗಿನ್ನಷ್ಟು ಭಾಗ್ಯಕೊಡಬಲ್ಲೆ!"

ಮಾದಯ್ಯ ಬೇವಿನ ಕಾಳಿಯ ಹಟ್ಟಿಯ ಕಡೆ ಹೆಜ್ಜೆ ಇಡುವಾಗ 'ನಮ್ಮಪ್ಪಾಜಿ, ಕಿಡಿಗಣ್ಣಯ್ಯ ಮುಂಗಾಲಿಗೆ ಜಂಗು ಧರಿಸಿ, ಮುತ್ತಿನ ಕಿರೀಟ ಧರಿಸಿ, ಬೆರಳಿ ಬೆತ್ತ ಬಲಗೈಲಿ ಹಿಡಿದು' ಒಪ್ಪಿದನು. ಹಟ್ಟಿಯ ಬಾಗಿಲ 'ಬಿಚ್ಚುಗತ್ತಿ ಪಾರ'ದವರನ್ನು ತನ್ನ ಕಪ್ಪು ಧೂಳ್ತದಿಂದ 'ಮಂಕು ಮರಳು' ಮಾಡಿ—

ಕ್ವಾರಣ್ಯ ಸಾರವರೆ ಮಾದೇವಾ?....

ದ್ಯಾವಾಜಮ್ಮ ಬಾಗಿನೋಡಿದಳು. ಮನೆಯ ಬಾಗಿಲಲ್ಲಿ ಜಂಗಮರು ಬಂದು ನಿಂತಿದ್ದಾರೆ! ಭಿಕ್ಷೆ ನೀಡಲು ಅವಳ ಕೈ ಕಟ್ಟಿಹೋಗಿದೆ. ತನ್ನ ಅತ್ತೆಯ 'ಕಟ್ಟ'ನ್ನು ಮೀರುವಂತಿಲ್ಲ. ಅಸಹಾಯಕಳಾಗಿ ಕಣ್ಣಲ್ಲಿ ನೀರು ತುಂಬಿದಳು!

"ರಾಗಿಕಾಳು ಬೇಡ....ನಾ ಅಟ್ಟಬೆಟ್ಟವನೆಲ್ಲ ಸುತ್ತಿಬಂದೆ....ನಿನ್ನ ಹಟ್ಟಿ

ಒಳಗೆ ಮೂವತ್ತು ಮೂರು ಹಸು ಕರೀತವೆ....ಹಿಂದೆ ಒಂದು ಕುಂಟ್ಹಸು ಬತ್ತದೆ ....ಅದರಲ್ಲಾದರೂ ಅರಪಾವು ಹಾಲ ಕರಿದು ಬೆರಳಿ ಬಟ್ಟಲಿಗೆ ಬುಡು....ಬೇವಿನ ಹಟ್ಟೀಲಿ ಹಾಲು ಮಜ್ಜನ ಮಾಡಿ ಏಳುಮಲೆಗೆ ಹೋಗಿ ಎಣ್ಣೆ ಮಜ್ಜನ ಮಾಡಿ ಸಿಗತೀನಿ...."

ನೀ ಹಾಲನಾರ ನೀಡೆ ಕಂದಮ್ಮಾsss....

ಮಾದಯ್ಯ ಮತ್ತೆ ಕೇಳಿದ. ದೇವಾಜಮ್ಮ ಅತ್ತೆಯ ಆಜ್ಞೆಯನ್ನು ತಿಳಿಸಿ ಬೇಡಿಕೊಂಡಳು. ಕೊನೆಗೆ ಎಳ್ಳುಕಣದ ಹಾದಿಯನ್ನಾದರೂ ತೋರಲು ಏಳು ಮಂದಿ ಸೊಸೆಯರೂ ಒಪ್ಪಿದರು.

ಎಳ್ಳುಕಣದ ಬಳಿ ಬಂದ ಮಾದಯ್ಯ ಬೇವಿನ ಕಾಳಿಯ 'ಭಾಗ್ಯ'ವನ್ನು ಕಂಡು ಮೆಚ್ಚಿದ. ಮಂಚದ ಮೇಲೆ 'ಗುಡಾರ'ದಲ್ಲಿ ಒರಗಿ 'ಆಳುಕಾಳು' ಗಳಿಂದ ಕೆಲಸ ಮಾಡಿಸುವ ಅವಳ ಠೀವಿಗೆ ಬೆರಗಾದ. ಸೂರ್ಯಚಂದ್ರರಂತೆ ಹೊಳೆಯುವ ಅವನು 'ಮೂಡುಮುಕ'ನಾಗಿ ನಿಂತು, ಗುಡಾರದ 'ಎಡಚೊರಿ ಪಾರಸದಲ್ಲಿ' ಕಾಣಿಸಿಕೊಂಡು....

ಅವರು ಕ್ವಾರಣ್ಯ ಸಾರ್ಯಾರೊ ಮಹಾದೇವಾsss

ಬೇವಿನ ಕಾಳಿಗೆ 'ಕ್ವಾರಣ್ಯ'ದ ಧ್ವನಿ ಕೇಳಿತು. ಮೂರುಗಳಿಗೆಯ ಮೇಲೆ ಎದ್ದು ಕುಳಿತಳು. ಅವಳ ಕಣ್ಣು 'ಬೆಳ್ಳುಳ್ಳಿ ಗೆಡ್ಡೆ'ಯಾಯಿತು. "ನಮ್ಮ ಅತ್ತೆಮ್ಮ ಹತ್ತು ಬೆಳ್ಳಿಗೆ ಮುತ್ತಿನ ಉಂಗುರ ಧರಿಸವಳೆ! ಮತಾಪು ಕತ್ಕೊಂಡು ಉರಿಯಂಗೆ ಉರೀತಾಳೆ"ಎಂದಿದ್ದರು ಸೊಸೆಯರು. ಮಾದಯ್ಯ ಅವಳ ಎದುರಿಗೆ ಬಂದು ನಿಂತ. ಒಂದು ಕೊಳಗ ಎಳ್ಳನ್ನು ನೀಡುವಂತೆ ಕೇಳಿದ.

ಬೇವಿನ ಕಾಳಿಗೆ 'ರುದ್ರಗ್ವಾಪ' ಬಂತು. "ನಿನ್ನ ಹೆಂಡ್ತಿ ಹಿಟ್ಟಿನ ಕುಕ್ಕೆ ಹೊತ್ತು ತಲೆಕೂದ್ಲು ಉದುರೋಗಿದ್ದದ....ನಿನ್ನ ಗಂಡು ಮಕ್ಕ ಬಂದು ನನ್ನ ಹಟ್ಟಿ ಆರಂಬ ಮಾಡಿ ನಿನ್ನ ಗುಳ ಗುದ್ಲಿ ಸವದ್ಹೋಗಿದ್ದದ...." ಎಂದವಳೇ ಸಿಡುಕಿನಿಂದ ಚಡಪಡಿಸಿದಳು....

ನನ್ನ ಬಳ್ಳ ಕಣಬಿಟ್ಟು ಕಡೆದ್ಹೋಗೋ ಜಂಗಮಯಾsss

ಬೇವಿನ ಕಾಳಿಯ ರಭಸಕ್ಕೆ ಮಾದಯ್ಯ ಬೆದರಲಿಲ್ಲ. ಮತ್ತೆ ಕೇಳಿದ:

"ಕೇಳು ನನ ಕಂದ ಕಾಳವ್ವ... ಒಂದು ಕೊಳಗ ಎಂದರೆ ಬಹಳ ಹೆಚ್ಚಾಯಿತು. ಅದರಲ್ಲಿ ಒಂದು ಸೇರು ನೀನೇ ಇಟ್ಟುಕೊ. ಉಳಿದ ಎಳ್ಳನಾದರೂ ಕೊಡು."

ಬೇವಿನ ಕಾಳಿ ಅಷ್ಟನ್ನು ಕೊಡಲೂ ಒಪ್ಪಲಿಲ್ಲ. ಮೂರು ಸೇರಲ್ಲ, ಮೂರು ಪಾವನ್ನೂ ಅವಳು ಕೊಡಬಲ್ಲಳೇ ! ಯಾರೋ ಹಾದಿ ಬೀದಿಯ ಜಂಗಮನಿಗೆ ತನ್ನ ಎಳ್ಳನ್ನು ನೀಡುವುದೇ! ಕೊಡದ ಕೋಪದಲ್ಲಿ ಒಡ ಜಂಗಮ ತನಗೇನು ಮಾಡಬಲ್ಲ ! ತನ್ನನ್ನೇನೂ ಜಗ್ಗಿಸಲಾರನು.

"ಕೇಳು ಜಂಗಮಯ್ಯ....ನಾನು ಕೊಡದಂತ ಹೊಟ್ಟೆಕಿಚ್ಗೆ, ನನ್ನ ಗಂಡ ಕೆಂಡಗಾಡಯ್ಯ, ಮೂರ್ಸ್ಹಿಂಡಿ ಕುರಿ ಹೊಡಕೊಂಡ್ಹೋಗಿ ಬೆಟ್ಟದ ಕಿಬ್ಬೀಲಿ ಮೇಯಸ್ತವನೆ. ಮೇಯಿಸ್ಬಿಟ್ಟು ಸಾಲಗಂಬಿ ಚೀಲ ಬುಟ್ಗಂಡು ಮೂಡುಮಕ್ಕೆ ತಿರಿಕಂಡು, ವೀಳೈಮಾಡ್ತವನೆ.... ನಿನಗೆ ಎಳ್ಳುಕೊಡದ ಹೊಟ್ಟೆಕಿಚ್ಚಿಗೆ ನಿನ್ನ ಎಪ್ಪತ್ತೇಳು ಹುಲೀನೂ ಗಂಡನ ಮೇಲೆ ಬಿಡು....ಎಪ್ಪತ್ತೇಳು ಹುಲಿನೂ ನನ್ನ ಗಂಡನ ಮೆಟ್ರೆಹಿಡ್ದು ಕುಕ್ಕಿಬಿಟ್ಟು ಬೇಲಿಗೊಂದು ಕಂಡ ಮಾಡಿಬಿಟ್ರೂ ಸರಿಯೆ. ನನ್ನ ಗಂಡ್ನ ಹುಲಿತಿಂತು ಅನ್ನೊಸುದ್ದಿ ಬಂದರೆ ನಾ ಇಲ್ಲೇ ಲಬಲಬನೆ ಬಾಯಿ ಬಡ್ಕೋತೀನಿ. ನನ್ನ ಕತ್ತಿನ ಮಾಂಗಲ್ಯಸೂಸ್ತ್ರ ಕಿತ್ತು ನಡುಮನೆ ಗೂಡ್ನಲ್ಲಿ ಮಡಗಿಬಿಟ್ಟರೂ ಸರಿಯೆ, ನನ್ನ ಮುಂಗೈ ಬಳೆ ಬಾಡಿಗೆ ಒಡೆದುಬಿಟ್ರು ಸರಿಯೆ."

ನಾ ಕೈಯಾರ ಕೊಡುವಂಥ ಮಗಳಲ್ಲೋsss

ಬೇವಿನ ಕಾಳಿಯು ಮಾತಿನ ವೈಖರಿಗೆ ಮಾದಯ್ಯ ತಲೆದೂಗಿದ. ತಾನು ಕೊಟ್ಟ ಭಾಗ್ಯ ತಂದ ಬಿಂಕಕ್ಕೆ ಸೋಜಿಗಪಟ್ಟ.

"ನಿನ್ನ ಗಂಡನನ್ನ ಹುಲಿ ತಿಂದರೆ ನನಗೇನು ಬಂತು ಮಗಳೇ ಮೂರು ಸೇರು ಬೇಡ....ಎರಡು ಸೇರನ್ನಾದರೂ ಕೊಡು !"

ಜಂಗಮಯ್ಯನ ನುಡಿಗೆ ಬೇವಿನ ಕಾಳಿ ಕರಗಲಿಲ್ಲ. ಅವನ ಮೃದು ನುಡಿಗೆ ಸೋಲಲಿಲ್ಲ.

"ಎರಡು ಸೇರ್ನೂ ಕೊಡೋದಿಲ್ಲ....ಎರಡು ಕಾಳ್ನೂ ಕೊಡೋದಿಲ್ಲ.... ನಾನು ಕೊಡ್ದೇ ಇದ್ದ ಹೊಟ್ಟೆಕಿಚ್ಗೆ.... ನನ್ನ ಗಂಡು ಮಕ್ಕಳು ಏಳೂ ಜನವೂ ಅರವತ್ತು ಏರುಕಟ್ಟಿಸಿಕೊಂಡು ಆರಂಬ ಮಾಡ್ತಾ ಅವರೆ ಅವರಿಗೆಲ್ಲ ವಾಂತಿಭೇದಿ ಕೊಟ್ಟುಬಿಡು....ಏಳುಮಂದಿ ಗಂಡು ಮಕ್ಕಳೂ ಸತ್ತರೂ ಅಂತ ಸುದ್ದಿ ಬಂದು

ನನ್ನ ಹೊಟ್ಟೆಗೆ ಕಲ್ಲು ಮುಳ್ಳು ಹಾಕ್ಕೊಂಡ್ರೂ ಸರಿಯೇ ನಾ ನಿಂಬಳಿಸ್ಕೋತೀನಿ ಜಂಗಮಯ್ಯಾ."

ನಾ ಕೈಯಾರ ಕೊಡುವವಂಥುಗಳಲ್ಲೋss

ಮಾದಯ್ಯನೂ ಸೋಲಲಿಲ್ಲ. ಅವಳ ಮನಸ್ಸನ್ನು ಮತ್ತೆ ಕೆಣಕಿದ. ಕೊನೆಗೆ ಏಳು ಪಾವನ್ನಾದರೂ ಕೊಡುವಂತೆ ಕೇಳಿದ.

"ಏಳು ಪಾವ್ನ ಕೊಡೋದಿಲ್ಲ....ಏಳು ಕಾಳ್ನ ಕೊಡೋದಿಲ್ಲ....ನನ್ನ ಏಳು ಮಂದಿ ಮೊಮ್ಮಕ್ಕಳ್ಗೂ ನಿನ್ನ ಕಿಡಿಗಣ್ಣ ಬಿಟ್ಟುಬಿಡು....ಏಳು ಮಂದಿಗೂ ಮಾಯದ್ವಾರ ಕೊಟ್ಟುಬಿಡು....ಏಳು ಮಂಡಿ ಮೊಮ್ಮಕ್ಕಳೂ ಸತ್ತು ಇವತ್ತು ಹೊನ್ನ ಹುತ್ತಕ್ಕೆ ಹಾಕಿಬಿಟ್ರು ಅಂತ ಸುದ್ದಿ ಬಂದ್ರೆ ನಾ ನಿಂಬಳಿಸಿಕೊಂತೀನಿ...."

ನಾ ಕೈಯಾರ ಕೊಡುವಂಥ ಮಗಳಲ್ಲೋss

ಬೇವಿನ ಕಾಳಿ ಯಾವುದಕ್ಕೂ ಮಣಿಯಲಿಲ್ಲ. ತನ್ನ ಏಳು ಮಂದಿ ಸೊಸೆಯರ ಕಣ್ಣು ಹೋದರೂ, ತನ್ನ ಏಳು ಹಟ್ಟಿಯ ಮೇಲೆ ಅವನ ಕಿಡಿಗಣ್ಣು ಬಿಟ್ಟು ಸುಟ್ಟರೂ, ಅವನ ಪರಿಸೆ, ಹೆಣ್ಣು ಏಳುಕೋಟಿ ಗಂಡು ಏಳುಕೋಟಿ ಅವಳ ಹಟ್ಟಿಗಳ ಮೇಲೆ ದಾರಿಮಾಡಿಕೊಂಡರೂ, ಅವಳ ಏಳು ಕಣಜ ನಗ ನಾಣ್ಯಕ್ಕೂ ಅಲಂಬೋಡಿ ಸೀಮೆಯಿಂದ ಹಗಲುಗಳ್ಳರು ಬಂದು ಅಪಹರಿಸಿ ಹಾಲುಹಳ್ಳದ ಮಡುವಿನ ಬಳಿ ಹಂಚಿಕೊಂಡರೂ, 'ದೇವಿಂದ್ರಾಯ' ಕಾಳಿ, ಕಂಕಾಳಿ, ಯಮಧೂತಿ ಅನ್ನುವ ಮಳೆ ಬಿಟ್ಟು 'ಗುಂಡ್ಲು' ಬಂದು ತನ್ನ ಎಳ್ಳೆಲ್ಲ ಕೊಚ್ಚಿಕೊಂಡು ಹೋದರೂ, ಅವಳ ಮೂವತ್ತು ಮೊಳದ 'ತಾರಸೀರೆ' ಅಳಿದು ಹುಟ್ಟಿದ ನಿರ್ವಾಣಕ್ಕೆ ಅವಳು ನಿಂತರೂ, ಅವಳ ಏಳುಗುಳಿ ರಾಗಿ ಅವನ ಕಿಡಿಗಣ್ಣಿನಿಂದ 'ಗೊಬ್ಬರದ ಇಂಟೆಯಾದರೂ' ಅವಳು ಉಣ್ಣುವ ಅನ್ನ ವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಅಲೆದರೂ, ಅವಳ ಮುಕ್ಕಾಲು ಮಂಚ ಅಲ್ಲೇ ಬೆಂದುಹೋದರೂ, ಅವಳು ಬೀದಿ ಬೀದಿಯಲ್ಲಿ ತಿರುಪೆ ಮಾಡಿದರೂ

ನಾ ಕೈಯಾರ ಕೊಡುವಂಥ ಮಗಳಲ್ಲೋ ಜಂಗುಮಯ್ಯಾss

—ಎಂದೇ ತನ್ನ ಛಲವನ್ನು ಸಾಧಿಸಿದಳು. ಮಾದಯ್ಯನೂ ಕದಲಲಿಲ್ಲ. "ನಾನು ಕೈಯಾರೆ ಈಸಿಕೊ ಬೇಕು, ನೀನು ಕೈಯಾರ ಕೊಡಬೇಕು ನಿನ್ನ. ಇದ್ದಂಥ

ಬದುಕು ಇದ್ದ ಹಾಗೇ ಇರಲಿ....ಕೈ ಕಾಲು ಮುಖ ತೊಳೆದು ನನ್ನ ಹೆಸರು ಹೇಳಿ ಹಣೆಗೆ ವಿಭೂತಿಹಚ್ಚಿ ನಿನ್ನ ತೇವದ ಕೈಯ್ಯ ರಾಶಿಯ ಮೇಲೆ ಮಡಗು, ಕೈಗೆ ಹತ್ತಿಕೊಂಡ ಎಳ್ಳುತಂದು ನನ್ನ ಮೂಡ್ಲ ಮಲೆಗೆ ಕಳುಹಿಸು; ನಿನಗೆ ಭಾಗ್ಯ ಕೊಟ್ಟಂಥ ಮಾದೇವ ನಾನೇ...."

ಬೇವಿನ ಕಾಳಿ ಇನ್ನು ತಡೆಯದಾದಳು. ಭಿಕ್ಷೆಗೆ ಬಂದ ಜಂಗಮ ಭಾಗ್ಯ ಕೊಟ್ಟವನು ತಾನೇ ಅನ್ನುತ್ತಿದ್ದಾನೆ! ಅವನ ಸೊಕ್ಕನ್ನು ಮುರಿಯಬೇಕು, ಅವನ ನಾಲಿಗೆಯನ್ನು ಸೀಳಬೇಕು, ಕಣದಿಂದ ಅಟ್ಟಿಬಿಡಬೇಕು!—ಬೇವಿನ ಕಾಳಿ ಗುಡುಗಿಕೊಂಡು ಮೇಲೆದ್ದಳು, ಮೂರುಗಳಿಗೆಯ ಮೇಲೆ.

ನನ್ನ ಕಣಬಿಟ್ಟು ಕಡದ್ಹೋಗೋ ಜಂಗಮಯ್ಯss

ಮೂಡುಹೊತ್ತಿನಲ್ಲಿ ಬಂದು ಹೊತ್ತು ಬೀಳುವವರೆಗೆ ಭಿಕ್ಷೆ ಭಿಕ್ಷೆ ಎಂದೇ ನಿಂತಿದ್ದಾನೆ—

"ನಿನ್ನ ಬೊಕ್ಕತಲೆ ಮೇಲೆ ಬೆಚ್ಚಗೆ ನೀರು ಕೊಡುವೆ"

ಬೇವಿನ ಕಾಳಿ 'ಮೆರೆದೊಣ್ಣೆ'ಯನ್ನು ಕೈಗೆತ್ತಿಕೊಂಡು, ನಿಂತ ಜಂಗಮಯ್ಯನ ಕಡೆ ನುಗ್ಗಿದಳು. ಮಾದಯ್ಯ ಅಲ್ಲಿಂದ ಮಾಯದಲ್ಲಿ ಜಾರಿದ. ಎಳ್ಳು ರಾಶಿಯಲ್ಲಿ ತಲೆಕೊಟ್ಟು ಎರಡು ಕಾಲನ್ನೂ ನೀಡಿ ನೆಲದ ಮೇಲೆ ಒರಗಿದ.

ಬೇವಿನ ಕಾಳಿ ಬೆಚ್ಚಿದಳು! ತಾನು ಬಂದ ರಭಸಕ್ಕೆ ಹೆದರಿ ಜಂಗಮಯ್ಯ ಮಡಿದು ಹೋಗಿದ್ದಾನೆ. ಎಳೆದು ಕೊರಕಲಿಗಾದರೂ ಹಾಕಬೇಕೆನಿಸಿ ಮುಂದೆ ಬಂದಳು. ಮಾದಯ್ಯನ ಕಾಲನ್ನು ಹಿಡಿದು ಎಳೆದಳು. ಆದರೇನು! ಅವನ ಕಾಲೇ ಕಿತ್ತು ಬಂದಿತು! ಕೈಯನ್ನು ಹಿಡಿದು ಎಳೆದಳು, ಕೈಯೇ ಕಿತ್ತು ಬಂದಿತು!

ಬೇವಿನಕಾಳಿ 'ಇದೆಲ್ಲಿಯ ಮೂರು ಮಗ!' ಎಂದು ಬೇಸತ್ತಳು. ತಾನು ಮತ್ತೆ ಕೈ ಹಾಕಲು ಹೇಸಿದಳು. ತನ್ನ ಸೊಸೆಯರನ್ನೇ ಬರಮಾಡಿಕೊಂಡಳು. ಏಳು ಮಂದಿ ಸೊಸೆಯರೂ ಅವನನ್ನು 'ಮಣ್ಣುಮಾಡಿಬಿಡಲು' ಬಂದರು. ಬಂದವರೇ ಮುಸುಗು ತೆಗೆದು ನೋಡಿ ಹೌಹಾರಿದರು.

"ಶಿವನೇ, ನಮ್ಮಟ್ಟಿಗೆ ಭಿಕ್ಷಕೆ ಬಂದ ಅಯ್ಯನವರು!" ಎಲ್ಲರೂ ನಿಟ್ಟುಸಿರು ಬಿಟ್ಟರು. 'ಧರ್ಮ ಕರ್ಮವನ್ನರಿಯದ ಅತ್ತೆ ಹೊಡೆದು ಕೊಂದಳೆಂದು'

ಸೊಂದರು. ಕಂಬಳಿ ಜೋಲಿಯನ್ನು ಮಾಡಿ ಮಾದಯ್ಯನನ್ನು 'ಹೂವಿ' ನಂತೆ ಎತ್ತಿ ತಂದರು. ಕಂಚಾಲದ ಮರದ ಬುಡದಲ್ಲಿ ಮಾದಯ್ಯನನ್ನು ಮಲಗಿಸಿ ಭಯಭಕ್ತಿಯಿಂದ ನಮಸ್ಕರಿಸಿದರು.

"ನಾವು ಏಳು ಜನ ಸೊಸೇರು ಸತ್ಯಶೀಲರಾದರೆ ನಮ್ಮೊಂದಿಗೆ ಎದ್ದು ಕೂತು ಮಾತಾಡಪ್ಪ ಮಾಯಕಾರ ಮರಿ ದೇವರೇ...."

—ಸೊಸೆಯರು ಬೇಡಿಕೊಂಡರು. ಮಾದೇವ ನಿದ್ದೆ ತಿಳಿದವನಂತೆ ಮೇಲೆದ್ದು ಅವರನ್ನು ಹರಸಿದ. ಬೇವಿನಕಾಳಿ ಕಣದಲ್ಲಿ ತನ್ನ 'ಮುಕ್ಕಾಲು' ಮಂಚದ ಮೇಲೆಯೇ ಮತ್ತೆ ಒರಗಿದಳು. ಸೊಸೆಯರು ಜಂಗಮಯ್ಯನನ್ನು 'ಮಣ್ಣು' ಮಾಡಿ ಬಂದ ಸುದ್ದಿಯನ್ನು ತಿಳಿಸಿ ಮರಳಿದರು. ಮಾದಯ್ಯನ 'ಕಪ್ಪುಧೂಳ್ತ' ಬೇವಿನ ಕಾಳಿಯ ಸಿರಿಸಂಪತ್ತನ್ನು ನೀರಿನಂತೆ ಕರಗಿಸಿತು. ಅವಳ ಮಕ್ಕಳು, ಸೊಸೆಯರು ಯಾರೂ ಕಾಣದಾದರು. ಮೂರು ದಿನದಲ್ಲಿ ತನ್ನೆಲ್ಲ ಐಶ್ವರ್ಯವೂ ಮರೆಯಾಗಿ ಉಟ್ಟ ಸೀರೆಯೂ ಹರಿದು ಹಳೆಯ ಬಟ್ಟೆಗಳನ್ನು ಸುತ್ತಿಕೊಂಡಳು. ತನ್ನ ಜೀತಗಾರರ ಮನೆಯ ಬಾಗಿಲಲ್ಲಿ ತಿಂದುಣ್ಣುವ ಗತಿ ಅವಳದಾಯಿತು. ತಿರಿದು ತಂದ ಅನ್ನವನ್ನು ಕುಕ್ಕೆಯಲ್ಲಿ ಇರಿಸಿ, ಕೆರೆಯ ಏರಿಯ ಮೇಲೆ ಹೋಗುತ್ತ, ಇನ್ನೂ ತನ್ನ ಸೊಕ್ಕನ್ನು ಬಿಡದೆ ಜಂಗಮಯ್ಯ ನನ್ನು ಅಣಕಿಸಿದಳು.

"ಕೇಳು ಮರಿದೇವರು ಮಾದೇವ ನನಗೆ ದಿನಕಿಷ್ಟು ಅನ್ನ ದೊರೆತರೆ ನಿನಗೆ ನಾ ಬಗ್ಗೀನ ಜಂಗುಮಯ್ಯ...."

ಬೇವಿನ ಕಾಳಿಯನ್ನು ನರಲೋಕದಲ್ಲಿನ್ನು ಮಡಗ ಬಾರದೆನಿಸಿತು ಮಾದಯ್ಯನಿಗೆ.

ಮುತ್ತಿನ ಜೋಳ್ಗಿ ಕಪ್ಪು ಧೂಳ್ತವ
ಕಾಳಮ್ಮನ ಮೇಲೆ ಹಿಡಿದೇ ಬಿಟ್ಟರಲ್ಲೋ
ಕಾಳಮ್ಮನ ಮೇಲೆ ಹಿಡಿದ ಮೇಲಿನ್ನು
ಗೋವುಗಲ್ಲಾಗಿ ನಿಂತುಗಂಡಳಲ್ಲೋ

ತಂದಾನಿ ತಾನಿ ತಾನಿ ತಂದನ್ನೋ....ತಂದೇನಾನಾ
ತಂದಾನಿ ತಾನಿ ತಾನಿ ತಂದನ್ನೋ....

ಹರ ಹರ ಶಿವ ಶಿವ ಆಗ ನಮ್ಮಪ್ಪಾಜಿ ಕಿಡಿಗಣ್ಣಯ್ಯ "ಅಟ್ಟ ಬೆಟ್ಟದ ಮೇಲೆ ಮೇದ ಗೋವ್ರುಗಳೆಲ್ಲ ಈ ಕಟ್ಟೇಲಿ ನೀರ ಕುಡಕೊಂಡು, ಈ ಗೋವ್ಗಳ್ಗೆ ಒತ್ತರಿಸಿ ಬಿಡಲಿ....ನೀನು ಮಾಡ್ದಂಥ ಪಾಪಕ್ಕೆ ಒಳಗಾಗು ಮಗಳೇ...." ಎಂದು ಗೋವ್ಗಲ್ಲು ಮಾಡಿಬಿಟ್ಟು ಬೇವಿನ ಕೊಲ್ಲಿಗೆ ಬಂದರಲ್ಲೋ ಮಾದೇವಾ....

ದೇವಾಜಿಯೇ ಮೊದಲಾದ ಸೊಸೆಯರು ಮಾದಯ್ಯನ ಕಾಲನ್ನು ಹಿಡಿದರು. ಅವರ ಬದುಕುಬಾಳೆಲ್ಲ ಮರಳಿತು. ಆಲಂಬೋಡಿ ಸೀಮೆಗೆ ಅವರು ಹೋಗಿ ನೆಲೆಗೊಳ್ಳುವಂತೆ ತಿಳಿಸಿದ. ಬೇವಿನ ಕಾಳಿಯ ಏಳು ಹಟ್ಟಿಯ ಮೇಲೆ ಮಾದಯ್ಯನ ಪರಿಸೆಗೆ ದಾರಿಯಾಯಿತು. ದೇವಾಜಮ್ಮ ತಿಂಗಳಿಗೊಂದು ದಿನ ಕಡಮೆಯಾಗಿ ಎಣ್ಣೆಮಜ್ಜಣಕ್ಕೆ ಎಳ್ಳನ್ನು ಕಳಿಸುವಂತೆ ಮಾದಯ್ಯನೇ ಹೇಳಿದ ಮೇಲೆ ಅವರನ್ನು ಒಕ್ಕಲು ಪಡೆದ ಮೇಲೆ....

ಅವರು ಏಳುಮಲೆಯಲ್ಲಿ ಹೋಗಿ ಒರಗವರೇ
ನೋಡಿ ನಮ್ಮ ಶಿವನಾ ಽ ಽ ಽ

ಹಿರಿಯ ಗುಡ್ಡ ತನ್ಮಯನಾಗಿ ಕಥೆಯ ಅಂತ್ಯವನ್ನು ಮುಟ್ಟಿದ್ದಾನೆ. ಬೆಳಗಿನ ಮಬ್ಬು ಹರಿಯುವುದರಲ್ಲಿ ಹಿಮ್ಮೇಳದವರು ದನಿಯೆತ್ತಿದ್ದಾರೆ...

ಮಂಗಳವೋ ಜಯ ಮಂಗಳವೋ
ಮಂಗಳಾರ್ತಿ ಮಾದೇವನಿಗೇ

—o—

# ಯೋಗಿ ಬಂದವರೆ ನೋಡಿರಿ

ತಲೆಯಲ್ಲಿ ಕೆಂಪು ರುಮಾಲು, ಮೈಯಲ್ಲಿ ಕರಿಯ ಮೇಲಂಗಿ, ಮಂಡಿಯಿಂದ ತುಸು ಕೆಳಗೆ ಚಾಚಿರುವ ಕಚ್ಚೆಯ ಪಂಚೆ, ಕೈಯಲ್ಲಿ ಪುರಾತನದೆಂಬಂತಿರುವ ಅಷ್ಟೇನೂ ಉದ್ದವಲ್ಲದ ನಾಗರ ಹೆಡೆಯ ಅಥವಾ ಸಿಂಹಮುಖದ ಕರಿಯ ತಂಬೂರಿ, ಜೊತೆಯಲ್ಲಿ ಚಿಟಗಿ ಬೇರೆ........

ಮಂಟೇದೇವರು ಬರುತ್ತಿರುವರೇ !

ಹೌದು, ಮಂಟೇಸ್ವಾಮಿಯ ಸಂಪ್ರದಾಯದ ನೀಲಗಾರರು ಅವರು. ಆ ಮಹಾಮಹಿಮರ, ಅವರ ಶಿಷ್ಯರಾದ ಚಿಕ್ಕಲ್ಲೂರ ಸಿದ್ದಪ್ಪಾಜಿಯವರ, ಕಪ್ಪಡಿ ರಾಚಪ್ಪಾಜಿಯವರ, ಮಳವಳ್ಳಿ ಹಾಗೂ ಬೊಪ್ಪಗೌಡನಪುರದ ಅರಸುಮನೆತನದ ಸ್ವಾಮಿಗಳ ಮಹಿಮೆಯ ಪ್ರಸಾರಕ್ಕೆ ಮೀಸಲಾದ ವಿಶಿಷ್ಟ ಭಕ್ತರು. ಎಂಟುನೂರು ವರ್ಷಗಳ ಹಿಂದಿನ ಧಾರ್ಮಿಕ ಹೊನಲೊಂದು ಕರ್ನಾಟಕದ ಆ ತುದಿಯ ಕಲ್ಯಾಣದಿಂದ, ದಕ್ಷಿಣದ ಅಂಚಿನ ಚಿಕ್ಕಲ್ಲೂರವರೆಗೆ ಹರಿದು ಹಬ್ಬಿದುದರ ಅದ್ಭುತ ಕಥೆಯನ್ನೇ ಪ್ರಧಾನವಾಗಿ ಹಾಡಿದ್ದಾರೆ. ಆ ಮಹಿಮಾಪುರುಷರ ಲೀಲೆಗಳನ್ನು ಸಾರುತ್ತಾ ಸಾಗಿದ್ದಾರೆ.

ಇವರೇ ಲೀಲೆಗಾರರು, ಜನರ ಬಾಯಲ್ಲಿ ನೀಲಗಾರರು, ತಿಳಿದವರ ಬಾಯಲ್ಲಿ ವಚನಕಾರರು, ತಾವು ಹೇಳಿಕೊಳ್ಳುವಂತೆ ಮಂಟೇದವರು. ಮಂಟೇದೇವರು, ಮಂಟೇಸ್ವಾಮಿಗಳು! ಹಣೆಯಲ್ಲಿ ಭಸಿತ, ಜೊತೆಗೆ ತಿಲಕ. ಕೊರಳಲ್ಲಿ ಮೂರು ರುದ್ರಾಕ್ಷಿ....ಭಕ್ತಿತನ್ಮಯರಾಗಿ ಮಂಟೇಸ್ವಾಮಿಯ ಕಥೆಗಳನ್ನೂ, ಹತ್ತು ಹಲವು ಲೌಕಿಕ ಕಥೆಗಳನ್ನೂ ಹಾಡುವ ಇವರಿಗೆ ಶರಣೆನ್ನಿ....

ಚಿಕ್ಕಲ್ಲೂರು, ಕಪ್ಪಡಿ, ಬೊಪ್ಪಗೌಡನಪುರದ ಜಾತ್ರೆಯ ದಿನಗಳಲ್ಲಿ ಮಂಟೇದವರ ಸಂಭ್ರಮ, ಸಡಗರ ! ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಯ ಕಥೆಗಾರರೆಲ್ಲ ಕಲೆಯುವ ಆ ಪುಣ್ಯದಿನಗಳಲ್ಲೇ ಪವಿತ್ರ ಕಥಾ ಕಾವೇರಿಯಲ್ಲಿ ಮೀಯುವ ಭಾಗ್ಯ ನಮ್ಮದಾಗಲಿ....

ಆದಿ ಸಿದ್ಧರಿಗೆಲ್ಲಾ ಅತಿಮುದ್ದು ಘನಲೀಲೆ
ಪರಂಜ್ಯೋತಿ ನೀವೆ ಬನ್ನಿ ಮಂಟೇದ
ಲಿಂಗಯ್ಯ ನೀವೆ ಬನ್ನಿ

ಏಕತಾರಿ, ದಮ್ಮಡಿಗಳ ಹಿಮ್ಮೇಳದೊಡನೆ ಮುಖ್ಯ ಕಥೆಗಾರ ತನ್ನ ತಂಬೂರಿಯನ್ನು ಸುಶ್ರಾವ್ಯವಾಗಿ ಮಿಡಿದಿದ್ದಾನೆ....ಇದು ಪರಂಜ್ಯೋತಿ ಸ್ವರೂಪರಾದ 'ಧರೆಗೆ ದೊಡ್ಡೋರ' ವಚನ....ಮಂಟೇಸ್ವಾಮಿಯವರ, ಅವರ ಶಿಷ್ಯರ ಕಥಾಮಾಲೆ....

ಪರಾಪರ ವಸ್ತು ನಿರಾಕಾರ ಪರಂಜ್ಯೋತಿ ಅವರು. ಧರೆಗೆ ದೊಡ್ಡವರು. ತಾಯಿ ಮೊದಲಿಲ್ಲ. ತಂದೆ ಮೊದಲಿಲ್ಲ. ಅವರೇ ಅವರಾಗಿ ಜನಿಸಿದವರು. ಎಲ್ಲ ಲೋಕಗಳನ್ನೂ ಆಳಿ ಬಾಳಿ ಕೊನೆಗೆ ಭೂಲೋಕದಲ್ಲಿ ಬಸವಣ್ಣನವರ ಭಕ್ತಿಯನ್ನು ನೋಡ ಬಂದವರು.

ಕಲ್ಯಾಣದಲ್ಲಿ ಬಸವಣ್ಣನವರು, ಅವರ ಮಡದಿ ನೀಲಮ್ಮನವರು, ಒಕ್ಕಳ ಅಕ್ಕಿ ಹಾಕಿ ಒಂದು ಮಾನ ಬೇಳೆ ಹಾಕಿ ಒಂದೇಬದನೆಕಾಯಲ್ಲಿ ಒಂದೇಬಾಣಲೆಯಲ್ಲಿ ಅಡಿಗೆ ಮಾಡಿ, ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರಿಗೆ ನಿತ್ಯವೂ ಎಡೆಮಾಡುತ್ತಿದ್ದವರು. ತಮಗೊಬ್ಬ ಗುರುವನ್ನು ಬಯಸಿ 'ಕಲ್ಯಾಣ ಪಟ್ಟಣದ ಕಡೇ ಬಾಗಿಲಲಿ ಆನೆಗಾತ್ರದ ಪಂಚಲೋಹದ ನಾಲಿಗೆ ಇಲ್ಲದ ಗಂಟೆ ಮಾಡಿಸಿ' ಕಟ್ಟಿದ್ದರು. ಅದು 'ನಾದಸಪ್ಪ' ಮಾಡಿದಾಗ ಗುರು ಬಂದರೆಂದು ತಿಳಿಯಲಾಗಿ ಕಾದರು.

ಅವರ ಹರಕೆ ಫಲಿಸಿತು. ಧರೆಗೆ ದೊಡ್ಡವರು ಭೂಮಿಗಿಳಿದರು, ಅದರೇನು ಬಸವಣ್ಣನವರನ್ನು ಪರಿಕಿಸಲೆಂದೇ ಬಂದವರು !

ಕೈಯುವೆ ಸೊತ್ತಗಳು-ಕಾಲುವೆ ಕುಂಟಗಳು
ಕಣ್ಣುವೆ ಕುರುಡುಗಳು-ಕಿವೀಲಿ ಭಂಗೀಸೊಪ್ಪು
ಕೈಲಿ ಸುರಿಗಡಿಗೆ-ಪರಂಜ್ಯೋತಿ ನೀವೆ ಬನ್ನಿ

ವಿಕಾರ ರೂಪನ್ನೇ ಧರಿಸಿ, ಸತ್ತ ಎಮ್ಮೆಯ ಕರುವನ್ನು ಹೊತ್ತು, ಸತ್ತ ಬಸವನ ಚರ್ಮವನ್ನು ಹೊದೆದು ಕಲ್ಯಾಣದ ಕಡೆಯ ಬಾಗಿಲಿಗೆ ಬಂದಾಗ, ನಾಲಿಗೆ ಇಲದ ಗಂಟೆ ಢಣೀರ್ ಢಣೀರ್ ಎಂದು ಶಬ್ದ ಮಾಡಿತು !

ಜಂಗಮದಾಸೋಹದಲ್ಲಿದ್ದ ಬಸವೇಶ್ವರರು ಮಡದಿ ನೀಲಮ್ಮನವ ರೊಡನೆ ಅತ್ತಬರುವುದುಒಂದು ಗಳಿಗೆ ತಡವಾಯಿತೇನೊ! ಕಾವಲಿನವರು ಕಾಡು ಗೊರವನನ್ನು ಒಳಗೆ ಬಿಡಲಿಲ್ಲ; ಅವರು ತಳ್ಳುವ ಮೊದಲೇ ಧರಗೆ ದೊಡ್ಡವರು ಹರಳಯ್ಯನವರ ಬೂದಿಗುಡ್ಡೆಗೆ ಬಂದರು.

ಹುಲ್ಲೆಚರ್ಮವನ್ನು ಹಾಸಿ 'ಗಗ್ಗರಿ ಗುಡಿ ಗುಡಿ'ಯನ್ನು ಸೇದುತ್ತ ಕುಳಿತರು ; ಸತ್ತ ಎಮ್ಮೆಯ ಕರು ಎದ್ದು ಮೇಯುತೊಡಗಿತು. ಸುರೆಯ ಗಡಿಗೆ ಉಕ್ಕತೊಡಗಿತು. ಮತ್ತೆ ಕಡೆಯ ಬಾಗಿಲ ಗಂಟೆ ನಾದ ಮಾಡಿತು.

ತಮ್ಮ ಗುರು ಬಂದ ಸೂಚನೆಗೆ ಹಿಗ್ಗಿ ಓಡೋಡಿ ಬಂದವರು ಬಸವಣ್ಣ-ನೀಲಮ್ಮನವರು! ತಮ್ಮಲ್ಲಿ ಚಿನ್ನದ ಗುರುಮಠವಿರಲಿಲ್ಲವೆ ? ಬೆಳ್ಳಿಯ ಗುರು ಮಠ ಇರಲಿಲ್ಲವೆ ? ನಿಜಗುರು ಬಂದು ಇಲ್ಲಿ ಕೂರುವುದೆ ! ಗುರುವಿನ ಪಾದಕ್ಕೆ ಶರಣೆಂದು ನುಡಿದರು........

"ನನ್ನ ಅರಮನೆಗೆ ದಯಮಾಡಿ"

ಉತ್ತರ ಬರಲಿಲ್ಲ. ಗುರು ಮುನಿದರೆಂದೇ ಬಗೆದರು ಅವರು. ಇಬ್ಬರೂ ಮುಂದೆ ಬಂದರು. ಭಕ್ತಿ, ಭಯಭರಿತರಾಗಿ ಧರೆಗೆ ದೊಡ್ಡವರ ತೋಳನ್ನು ಹಿಡಿದು ಎತ್ತಲೆಂದೇ....ತೋಳೆ ಕಿತ್ತು ಬಂದಿತೆ! ಪಾದ ಹಿಡಿದರೆ ಪಾದವೆ ಕೈಗೆ ಬಂದಿತೆ !

ಸ್ವಾಮಿಯವರ ಸಿರಸ ಹಿಡ್ಕೊಂಡೆತ್ತಿದರಂತೆ ಸಿರಸವೇ ಕಿತ್ಹೋಯಿತಂತೆ! ಪರಂಜ್ಯೋತಿ ನೀವೆ ಬನ್ನಿ.

ತಮ್ಮ ದೃಢವನ್ನು ಪರೀಕ್ಷಿಸಲೆಂದೇ ಸ್ವಾಮಿ ಈ ರೂಪನ್ನು ಧರಿಸಿರ ಬಾರದೇಕೆ ? ಸುರೆಯ ಗಡಿಗೆ ಉಕ್ಕಲಿಲ್ಲ, ಎದ್ದು ಮೇಯುತ್ತಿದ್ದ ಎಮ್ಮೆಯ ಕರುವೂ ಸತ್ತು ಮಲಗಿದೆ. ಇದೇನು ಸೋಜಿಗವೊ ! ಇದಾವ ಪರಿಯ ಪರೀಕ್ಷೆಯೊ ! ಬಸವಣ್ಣನವರು ಉತ್ತರೀಯವನ್ನೇ ಹಾಸಿದರು. ಸ್ವಾಮಿಯ ರುಂಡ ಮುಂಡವನ್ನೇ ಬಿಗಿದುಕಟ್ಟಿ ನೆತ್ತಿಯಲ್ಲಿ ಹೊತ್ತರು. ನೀಲಮ್ಮ ತಾಯಿ ಸತ್ತ ಎಮ್ಮೆಯ ಕರುವನ್ನು ಹೊತ್ತು, ಸುರೆಯ ಗಡಿಗೆಯನ್ನು ಹಿಡಿದು ನಡೆದರು. ಎಲ್ಲೆಲ್ಲಿಯೂ ಕೌತುಕದ ಸುದ್ದಿ !

ಬಸವಣ್ಣ ಭಕ್ತನೆಂದು ಬಂದರೆ ಸತ್ತ ಜಂಗಮನನ್ನು ಹೊತ್ತುತರುವುದೆ! ಭಕ್ತಿ ಹಾಳಾಯಿತು ! ಶೀಲ ಕೆಟ್ಟಿತು !

ಭಕ್ತರೆಲ್ಲ ಎಡೆಬಿಟ್ಟು ಓಡಿಹೋದರು. ಮಿಂದು ಮಡಿಯಾಗುವ ಕಾತುರದಲ್ಲಿ ಕಾಣೆಯಾದ ಲಿಂಗಗಳನ್ನು ಮರೆತರು! ಸುರೆಯ ಗಡಿಗೆಯಲ್ಲಿ ಬಂದುಬಿದ್ದ ಲಿಂಗಗಳನ್ನು ನೀಲಮ್ಮ ತಾಯಿಯೇನು ಬಲ್ಲರು !

ಅರಮನೆಯ ಪದ್ಮಪೀಠದ ಮೇಲೆ ಧರೆಗೆ ದೊಡ್ಡವರನ್ನು ಇಳಿಸಿದರು– ಭಕ್ತಿ ಗೌರವದಿಂದ ಕರ್ಪೂರವನ್ನು ಅಂಗೈಯ ಮೇಲೆ ಹಚ್ಚಿ ಬಸವಣ್ಣ– ನೀಲಮ್ಮ ಗುರುಪಾದವನ್ನು ಸ್ಮರಿಸಿದರು.

ತಪ್ಪಿದೊ ಗುರುಸಾಮಿ ನಿಜರೂಪ ತಾಳಬೇಕು
ಪರಂಜ್ಯೋತಿ ನೀವೆ ಬನ್ನಿ-ಮಂಟೇದ
ಲಿಂಗಯ್ಯ ನೀವೆ ಬನ್ನಿ

ಭಕ್ತಿಗೆ ಪ್ರಸನ್ನರಾದ ಧರೆಗೆ ದೊಡ್ಡವರು 'ಜ್ಯೋತಿ ಪ್ರಕಾಶ'ವಾಗಿ ಉರಿಯುತ್ತ ದರ್ಶನವಿತ್ತರು. ದಿವ್ಯಯೋಗಿಯನು 'ಪರಂಜ್ಯೋತಿ' ಎಂದೇ ನೀಲಮ್ಮ ಕರೆದರು. ಗುರುಪದಕ್ಕೆರಗಿ ಬಸವಣ್ಣನವರು ಬೇಡಿದರು.

"ಹೋದ ಭಕ್ತರನ್ನು ದೊರಕಿಸಿಕೊಡಿ. ಹೋದ ಭಕ್ತಿಯನು ಕೂಡಿಸಿ ಕೊಡಿ". ಧರೆಗೆ ದೊಡ್ಡವರ ತುಟಿಯ ಮಂದನಗೆಯೊಂದು ಸುಳಿಯಿತು. ಭಕ್ತರೆಲ್ಲ ಭವಿಗಳಾದರು. ಅಂತರಂಗದ ಶುದ್ಧಿಯಿಲ್ಲದ ಅವರಾವ ಭಕ್ತರು? ನಿಜ ಭಕ್ತ ಬಸವಣ್ಣನವರಿಗೆ ಶ್ರೇಷ್ಠ ಶರಣರನ್ನೇ ಸೃಷ್ಟಿಸಿದರು. ಕಾಂಚಿಯಪಟ್ಟಣದತ್ತ ತಿರುಗಿ, ನಮ್ಮ ಗುರು ಧರೆಗೆ ದೊಡ್ಡವರು ಒಂದು ಬುಟ್ಟಿ ತುಂಬೇಹೂವನ್ನು ಪಡೆದರು. ಲಕ್ಷ ತೊಂಬತ್ತಾರುಸಾವಿರ ಶರಣರನ್ನೇ ಸೃಷ್ಟಿಸಿದರು! ಇಂಥ ಗುರು ಬಂದಿರಲು ತಾವೇಕೆ ಕಲ್ಯಾಣವನ್ನು ಆಳಬೇಕು; ಇನ್ನೆಲ್ಲವೂ ಅವರದೇ!

"ತಾವು ಬಂದ ಮೇಲೆ ನೀವೇ ಕಲ್ಯಾಣವನ್ನು ಆಳಿರಿ........ನಮಗೆ ಕೈಲಾಸಕ್ಕೆ ಅಪ್ಪಣೆ ಕೊಡಿ...." ಬಸವಣ್ಣನವರು ವಿನಯದಿಂದ ಬೇಡಿದರು!

ಕಲ್ಯಾಣವನ್ನು ಆಳಲು ಬಂದವರಲ್ಲ ಧರೆಗೆ ದೊಡ್ಡವರು. ಜಂಗಮ ದಾಸೋಹದಲ್ಲಿ 'ಈಳ್ಯ' ನೀಡುತ್ತಿದ್ದತೇಜಸ್ವಿ ರಾಚಯ್ಯನನ್ನು ಬಯಸಿತುಅವರ ಮನ, ಸುರಮ್ಮ ಕೂಡಲಸಂಗಯ್ಯರ ಮಗ ರಾಚಪ್ಪಯ್ಯನವರನ್ನು ಬಸವಣ್ಣನವರಿಗೆ ಅರ್ಪಿಸುವಾಗ 'ಮದುವೆ ಕಲ್ಯಾಣ' ಮಾಡುವಂತೆ ಹೇಳಿದ್ದರು. ತಮ್ಮ ಮೆಚ್ಚಿನ ರಾಚಪ್ಪಯ್ಯನನ್ನು ಗುರು ಕೇಳಲು–ಕೊಡದಿರುವುದೇ ? ಆದರೆ ಒಲಿಸಿ

ಕರೆದುಕೊಂಡು ಹೋಗುವ ಹೊರೆ ಧರೆಗೆ ದೊಡ್ಡವರದೇ ಆಯಿತು.

"ಮರ್ತ್ಯಲೋಕಕ್ಕೆ ಹೋದಾಗ ತಿಪ್ಪೂರ ರಾಮಸಮುದ್ರ ಕಾವೇರಿ ಚದುರ ಮಧ್ಯದಲ್ಲಿ ಕಪ್ಪಡಿ ಒಳಗೆ ನಿನ್ನ ದೇವರ ಮಾಡಿನಿಲ್ಲಿಸ್ತೀವಿ. ನಿನಗೆ ಮದುವೆ ಕಲ್ಯಾಣ ಮಾಡ್ತೀವಿ....ನಿನಗೆ ಸಿರಿಗಂಧದ ರೊಟ್ಟಿ ಕೊಡ್ತೀವಿ ಬಾರಪ್ಪಾ....

ಗುರುವಿನ ಕರೆಗೆ ರಾಚಪ್ಪಯ್ಯ ಒಲ್ಲೆನೆನಲಿಲ್ಲ. ಜೊತೆಯಲ್ಲೇ ಫಲಾಹಾರ ದಯ್ಯನೂ ಹೊರಟರು. ತಂಗಿ ಚೆನ್ನಾಜಮ್ಮನೂ ಸಿದ್ಧಳಾದಳು.

ಧರೆಗೆ ದೊಡ್ಡವರ ಮಹಿಮೆ ಎಡೆಬಿಟ್ಟ ಜಂಗಮರಿಗೆ ಅರಿವಾಯಿತು. ಲಿಂಗವನ್ನು ತಡಕಿಕೊಂಡು ಗುರುವಿನೆಡೆಗೆ ಓಡೋಡಿ ಬಂದು ಬೇಡಿದರು. ಆದರೂ ಗುರುಶಾಪ ತಟ್ಟಿತು. ಭವಿಗಳಾಗಿಯೇ ಉಳಿದು, ಮುಸಲ್ಮಾನರಾಗಿ ಹಸ್ತಪೂಜೆ ಮಾಡಿಕೊಂಡಿರಲು ನುಡಿದ ಗುರುವಿಗಂಜಿ ಅತ್ತ ಸರಿದರು.

ಗುರು ಪರಿವಾರ ಕಲ್ಯಾಣದ ಕಡೆಯ ಬಾಗಿಲನ್ನು ದಾಟುವಾಗ ಬಾಚಿ ಬಸವಯ್ಯ ಬಂದು ಪಾದ ಹಿಡಿದ, 'ಶಿಶುಮಗ'ನಾಗಲು ಬೇಡಿ. ಮುದ್ದೋಜಿಯ ಮಡದಿ ಲಿಂಗಮ್ಮನ ಗರ್ಭದಲ್ಲಿ ಹುಟ್ಟಿ ಬರಲು ಗುರುವು ಅವನ ಅಸುವನ್ನು ಅತ್ತ ಎಸೆದು ಸಾಗಿದರು. ಕಲ್ಯಾಣವನ್ನು ತೊರೆದು ತೆಂಕಣ ನಾಡಿನ 'ಮರ್ತ್ಯಲೋಕ'ದ ಕಡೆಗೆ ನೋಡಿದರು

* * * *

ಎಳೆಯ ಶಿಷ್ಯರನ್ನು ಕೂಡಿಕೊಂಡು ಗಾವುದ ಗಾವುದ ನಡೆದರು, ಧರೆಗೆ ದೊಡ್ಡವರು. ತೆಂಕಣ ದಿಕ್ಕಿನಲ್ಲಿ, ಪವಿತ್ರನಾದ, 'ಅಮೃತ ಮಣ್ಣಿನ' ನೆಲೆಯೊಂದನ್ನು ಅರಸಿ ಸಾಗಿ ಬಂದರು. ಬೇಸಿಗೆಯ ಬಿಸಿಲು ದಾರಿ ಸಾಗಿದಂತೆ ತೀವ್ರವಾಯಿತು. ನಿಡಿದಾದ ಕಲ್ಲೊಂದು ಮಾರ್ಗಮಧ್ಯದಲ್ಲಿ ತನ್ನ ಮಡಿಲೊಡ್ಡಿ ವಿಶ್ರಾಂತಿಗಾಗಿ ಅವರನ್ನು ಅತ್ತ ಕರೆಯಿತು. ಮಕ್ಕಳು ಸೋತರೇನೊ! ಅವರಿಗಾದರೂ ದಣಿವಿಂಗಲಿ !

ಧರೆಗೆ ದೊಡ್ಡವರು ಆ ಕಲ್ಲಿನ ಬಳಿ ಬಂದರು. ಕಲ್ಲು ಆ ಮಹಿಮಾಪುರುಷನನ್ನು ಕಂಡು ವಿನಯದಿಂದ ತಲೆ ಬಾಗಿತೇನೊ !

ಅರೆಕಲ್ಲು ಸ್ವಾಮಿಯ ನೋಡಿ ಬಿಟ್ಟು
ಕಲ್ಲೆ ಕೊಡೆಯಾಗಿ ಬೇಗದಿಂದ ಬೆಳೆಯಿತಂತೆ
**ಪರಂಜೋತಿ ನೀವೆ ಬನ್ನಿ !**

ಕೊಡೆಯ ಕಲ್ಲಿನ ತಲದಲ್ಲಿ ಧರೆಗೆ ದೊಡ್ಡವರು ಆಗ–

ಹುಲ್ಲೆ ಚರ್ಮ ಹಾಕಿಕೊಂಡ್ರು
ಹುಲಿಯ ಚರ್ಮ ಹೊದ್ದುಕೊಂಡ್ರು
ಬಲ ಮಗ್ಗುಲಾಗಿ ಪವಾಡಿಸಿಕೊಂಡ್ರು ನಮ್ಮ ಗುರುವು
ಪರಂಜೋತಿ ನೀವೆ ಬನ್ನಿ !

ಫಲಾಹಾರದಯ್ಯ ಚೆನ್ನಾಜಮ್ಮ ಇಬ್ಬರೂ ಗುರುಪಾದದಲ್ಲಿ ಮಲಗಿದರು. ಆದರೆ ಕಿಡಿಗಣ್ಣ ರಾಚಪ್ಪಯ್ಯಯನವರಿಗೆ ವಿಶ್ರಾಂತಿ ಬೇಡವಾಯಿತು. ಗುರು ಕಣ್ಣು ಮುಚ್ಚುತ್ತಿದ್ದಂತೆಯೇ ಅವರು ಮೇಲೆದ್ದು ಎತ್ತಲೋ ಹೊರಟರು.

ಬಳಿಯಲ್ಲಿಯೇ 'ವಿಧಿಯ ನಗರ.' ಆ ವಿಜಯನಗರ(?)ದ ಮಕ್ಕಳೊಡನೆ ಇಳ್ಳಿ ಕೋಲು, ಗೋಲಿ,ಗಜ್ಜುಗಗಳನ್ನು ಆಡಬಯಸಿತು ಅವರ ಎಳೆಯ ಚೇತನ. ವಿಜಯನಗರದಲ್ಲಾದರೋ ಏಳುನೂರು ಮಂದಿ ಗಾರುಡಿಗರು ! ಮಂತ್ರ ಮಾಟ ದಲ್ಲಿ ನಿಪುಣರು. ಆ ಊರಿನತ್ತ ಮಾರಿ, ಮಸಣಿ, ದುರ್ಗಿ, ಚೌಡಿ ಯಾರೂ ಸುಳಿಯರು ! ಊರ ಮುಂದೆ ಗಾರುಡಿಗರ ಮಕ್ಕಳು ಗೋಲಿ ಗಜ್ಜುಗಗಳನ್ನಾಡು ವಾಗ, ರಾಚಪ್ಪಯ್ಯ ತಾವು ಅವರೊಡನೆ ಕಲೆತು ಆಡಿದರು.

ಗಾರುಡಿಗರ ಮಕ್ಕಳು ಒಬ್ಬೊಬ್ಬರಾಗಿ ಸೋತರು. ಗೋಲಿ ಗಜ್ಜುಗಗ ನ್ನೆಲ್ಲಾ ರಾಶಿ ರಾಶಿಯಾಗಿ ಗೆದ್ದುಕೊಂಡರು ರಾಚಪ್ಪಾಜಿ. ಎಂದೂ ಯಾರೂ ಅವರೊಡನೆ ಆಡಿ ಗೆದ್ದಿರಲಿಲ್ಲ, 'ಪರದೇಶಿ' ಹುಡುಗ ಗೆದ್ದಿದ್ದಾನೆ. ತಮ್ಮ ಗೋಲಿ ಗಜ್ಜುಗಗಳನ್ನೆಲ್ಲಾ ಅಪಹರಿಸಿದ್ದಾನೆ !

—ಗಾರುಡಿಗರ ಹುಡುಗರು ಸಿಡಿದೆದ್ದರು.

ದೂರ ವಿಜಯನಗರಕ್ಕೆ ಹೋಯಿತು. ಆ ಹುಡುಗರ ಹೆತ್ತಯ್ಯ ಮುತ್ತಯ್ಯ ಎಲ್ಲರೂ ಅಲ್ಲಿಗೆ ಬಂದರು.ಒಂದು ಮುಡಿ ಬಳಿಯಲ್ಲಿ ಏಳು ಸುತ್ತಿನ ಕೋಟೆ ಕಟ್ಟಿಸಿದರು ಅವರು. ಯಾವನೋ ಪರದೇಶಿ ಬಂದು ಅವರ ಮಕ್ಕಳ ಗೋಲಿ ಗಜ್ಜುಗಗಳನ್ನು ಕಸಿದುಕೊಳ್ಳುವುದೇ !

ಗಾರುಡಿಗರು ಒಂದು ಘನ ಮೋಡಿಯನ್ನು ಹಾಕಲು ತೀರ್ಮಾನಿಸಿದರು. ಆ ಪರದೇಶಿ ಬಾಲಕನನ್ನು ಕಂಡು ಕೇಳಿದರು.

ನಮ್ಮ ಮಕ್ಕಳತಾವು ಗೋಲಿ ಗಜ್ಜುಗ ಗೆದ್ಕೊಂಡಲ್ಲ
ಅಗ್ನಿ ಸ್ತಂಭಬಲ್ಲ ? ಪಂಪವಿದ್ಯೆ ಕಲ್ತಿದ್ದೀಯ
ಗಾಡಿಗ ವಿದ್ಯ ಕಲ್ತಿದ್ದೀಯ
ನಿಮಗೊಂದು ಮೋಡಿಯ ಹಾಕತೀವಿ ಕಾಣಿರಯ್ಯ
ಪರಂಜೋತಿ ನೀವೆ ಬನ್ನಿ

ರಾಚಪ್ಪಾಜಿಯವರು ಆ ಮೋಡಿಯನ್ನು ಎತ್ತಿದರೆ ಅವರ 'ನಗಾರಿ, ಭೇರಿ ಹುಯ್ಲುದಮ್ಮಟೆ, ಕೊಂಬಿನ ಕಹಳೆ. ಮಾಯದ ಕಪ್ಪ, ಮಲೆಯಾಳದ ಬೂದಿ, ಎಲ್ಲವನ್ನೂ ಅವರಿಗೇ ಅರ್ಪಿಸಿಬಿಡುವುದಾಗಿ ಸಾರಿದರು.

ರಾಚಪ್ಪಾಜಿಯವರು ಎದೆಗುಂದಲಿಲ್ಲ. ಗುರುವನ್ನು ಸ್ಮರಿಸಿ ಮುಂದಿನ ಪರೀಕ್ಷೆಗೆ ಸಿದ್ಧರಾದರು.

ಯಾವ ಮೋಡಿ ಹಾಕತೀರಿ ಹಾಕರಪ್ಪ ಗಾರುಡಿಗರೇ !

ಊರ ಅಂಕದಲ್ಲಿ ಸೀತಾಳೆ ಚಪ್ಪರ ಹಾಕಿದರು. ನಾಲ್ಕೂ ಮೂಲೆಗೂ ನಾಲ್ಕು ಬಾಳೆಯ ಕಂಬ ನಿಲ್ಲಿಸಿದರು. ಚಪ್ಪರದ ಮುಂದೆ ಆಳುದ್ದದ ಗುಂಡಿ ತೆಗೆದರು. ಕಳ್ಳಿ ಹಾಲು, ಎಕ್ಕದ ಹಾಲನ್ನು ಆ ಗುಂಡಿಗೆ ತುಂಬಿದರು. ನಾಲ್ಕು ಮೂಲೆಗೂ ನಾಲ್ಕು ಕೋಣಗಳನ್ನು ಕಡಿದು, ನಡು ಚಪ್ಪರದಲ್ಲೂ ಒಂದನ್ನು ಕಡಿದರು. ಆ ಕೋಣನ ತಲೆಯ ಮೇಲೆ 'ರಾಗದೀವಿಗೆ'ಯನ್ನು ಇರಿಸಿ ಅದರ ದಂಡೇಲಿ ಒಂದು ಬಂಗಾರವನ್ನು ಇಟ್ಟರು.

"ಈಗ ನಾವು ಹಾಕಿದಂಥ ಮೋಡಿಯನ್ನು ಎತ್ತಿಗೊಳ್ಳಿ"—ಎಂದು ಸಾರಿದರು. ರಾಚಪ್ಪಾಜಿಯವರು ಅವರ ಮೋಡಿಯ ವೈಖರಿಯನ್ನು ಹುಸಿನಗೆಯಿಂದಲೇ ಗಮನಿಸಿದರು. ಏಳುನೂರು ಮಂದಿ ಗಾರುಡಿಗರ ದೊಡ್ಡ ಸವಾಲನ್ನು ಎದುರಿಸಲು ಅವರು ಮುಂದೆ ಬಂದರು. ಗಾರುಡಿಗರು ಒಬ್ಬೊಬ್ಬರೂ ಮೋಡಿಯ ತೀವ್ರತೆಯನ್ನು ಹೆಚ್ಚಿಸಲು ಟೊಂಕಕಟ್ಟಿ ನಿಂತರು.

ಅಕ್ಕಿ ಮಂತ್ರೀಸಿದೋರೆ ಬೇಳೆ
ಈಬತ್ತಿ ಮಂತ್ರಿಸಿದೋರೆ
ಏಳನೂರು ಗಾಡಿಗರು ಪಂಪುವಿದ್ಯೆ ನಡೆಸುತಾರೆ
ಅಪ್ಪಸ್ಥಳ ನಡಸುವರು ಬೇರೆ

ಜಲಸ್ಥಳ ನಡೆಸುವರು ಬೇರೆ
ಎತ್ತಿಗಳ್ಳೊ ಪರದೇಶಿ ನಮ್ಮ
ಮೋಡಿಯನ್ನು ಎಂದರಂತೆ
ಪರಂಜೋತಿ ನೀವೆ ಬನ್ನಿ

ರಾಚಪ್ಪಾಜಿಯವರು ಗಾಡಿಗರ ಸಂದಣಿಯತ್ತ ತಿರುಗಿ ನುಡಿದರು,

'ಏನರಪ್ಪ ಗಾಡಿಗರ ಮೋಡಿ ಎತ್ತಿದರೆ ನನಗೇನು ಕೊಡುತೀರಿ' ?
'ನೀ ಮೋಡಿ ಎತ್ತಿದರೆ ನಮ್ಮ ತಾವ ಇರುವ ಬಿರದು
ಭಿಕ್ಷವೆಲ್ಲ ಕೊಟ್ಟುಬಿಡುತೀವಿ....ನೀ ಎತ್ತಲಾರದೆ ಹೋದರೆ
ನೀ ಏನ ಕೊಟ್ಟಿ ಪರದೇಶಿ !'

ಗಡಸಿನ ನುಡಿಗೆ ರಾಚಪ್ಪಾಜಿಯವರು ದಿಟ್ಟತನದ ಉತ್ತರವನ್ನೇ ನೀಡಿದರು—

ನಮ್ಮ ತಾವ ಇರುವಂಥ ಬಿರುದು ಭಿಕ್ಷವೆಲ್ಲ
ನಿಮ್ಮದೆ ಕಾಣಿರಪ್ಪ !

ರಾಚರಾಯರು ಪಂತಕ್ಕೆ ನಿಂತರು ! ಕಾಲಿಗೆ ಹುರಿಗೆಜ್ಜೆ ಕಟ್ಟಿ ; ತಮ್ಮ ತಾಯಿ ಸುರಮ್ಮನವರನ್ನು ನೆನೆದು, ತಂದೆ ಕೂಡಲ ಸಂಗಯ್ಯನವರನ್ನು ಸ್ಮರಿಸಿ, ಗುರು ಧರೆಗೆ ದೊಡ್ಡವರಿಗೆ ಮಣಿದು ಉನ್ಮತ್ತರಂತೆ ಕುಣಿಯತೊಡಗಿದರು. ಹಾಗೆ ಮೂರು ಮೂರ್ತಿಗಳನ್ನು ನೆನೆದು, ತಮ್ಮ ರಂಗದಿಂದ ಅವರ ರಂಗಕ್ಕೆ ಜಿಗಿದರು. ಆ ದೊಡ್ಡ ಗುಂಡಿಯ ಕಳ್ಳಿ ಹಾಲು ಎಕ್ಕದ ಹಾಲನ್ನು ಸೇವಿಸಿ ಬಾವಿಯಿಂದ ಮೇಲೆ ಹಾರಿದರು ಹಕ್ಕಿಯಂತೆ.

ಆ ಬಾವಿಯಿಂದ ಮೇಲಕೆ ಹಾರಿ
ಕ್ವಾಣನ ತಲೆಮ್ಯಾಲೆ ಇರುವ
ರಾಗದೀವಿಗೆ ಕಾಲಲಿ ಒದ್ದು
ಅಲ್ಲಿದ್ದ ಬಂಗಾರದ ಗಂಟೆ ಎತ್ತಿಗಂಡು
ತಮ್ಮರಂಗಕೆ ಬಂದರಂತೆ-ಪರಂಜೋತಿ ನೀವೆ ಬನ್ನಿ

ತಮ್ಮ ರಂಗಕ್ಕೆ ಬಂದ ರಾಚಪ್ಪಾಜಿಯವರು ಉಲ್ಲಾಸದಿಂದ ಮತ್ತೆ ಕುಣಿಯತೊಡಗಿದರು. ಏಳುನೂರು ಗಾರುಡಿಗರೂ ಬೆರಗಾಗಿ ನಿಂತು ನೋಡುತ್ತಿದ್ದರು. ತಮ್ಮ ಮೋಡಿಯನ್ನು ಮೆಟ್ಟಿದ ಆ 'ಪರದೇಶಿ'ಯ

ಮೇಲೆ ಕೋಪ ಉಕ್ಕಿತು. ಅವನ ಮೋಡಿಯನ್ನು ಎದುರಿಸಲು ಸಿದ್ಧರಾದರು.

ತಮ್ಮ ರಂಗದಲ್ಲಿ ಮೋಡಿಯನ್ನು ಅಣಿಗೊಳಿಸಲು ಸಮ್ಮತಿಸಿದರು ರಾಚಪ್ಪಾಜಿಯವರು. ತಮ್ಮ ಜೋಳಿಗೆಯ ಕಮಂಡಲುವನ್ನು ಈಚೆ ತೆಗೆದರು. ಮೂರು ಮಂಡಲವನ್ನು ಬೆತ್ತದಲ್ಲಿ ಬರೆದು, ಅದನ್ನು ನಡುವೆ ಇಟ್ಟರು.

ಏಳುನೂರು ಗಾರುಡಿಗರೂ ಮಂತ್ರವನ್ನು ಪಠಿಸುತ್ತ ರಾಚಪ್ಪಾಜಿಯವರ ರಂಗಕ್ಕೆ ಬಂದರು. ಮೋಡಿ ಎತ್ತುವ ಅವರ ಸಾಹಸ ಕುಸಿಯಿತು. 'ಪಂತ ಪೌರುಷದಿಂದ' ಬಂದ ಅವರೆಲ್ಲ ಮರು ಕ್ಷಣದಲ್ಲಿ ರಕ್ತವನ್ನು ಕಾರಿದರು. ನಿಂತ ನಿಂತಲ್ಲಿಯೇ 'ಸತ್ತು ಸತ್ತು ಒರಗುತಾರೆ.'

ಗಾರುಡಿಗರ ಮಡದಿಯರು ಮಕ್ಕಳು ಆ ಘೋರ ದೃಶ್ಯಕ್ಕೆ ಬೆಚ್ಚಿ, ಬೆರಗಾಗಿ ಗೋಳಿಟ್ಟರು.

ಕೊಡೆಯ ಕಲ್ಲಿನ ನೆರಳಲ್ಲಿ ಪವಡಿಸಿದ್ದ ಧರೆಗೆ ದೊಡ್ಡವರ ಪಾದಕ್ಕೆ ಆ ಗೋಳು ಅರಿವಾಯಿತು. ದಿಗ್ಗನೆ ಮೇಲೆದ್ದು ನೋಡಿದರು. ರಾಚರಾಯರು ಕಾಣಲಿಲ್ಲ. ನಿರ್ಜನ ನೀರವ ಅರಣ್ಯದಲ್ಲಿ ಏಳು ವರ್ಷದ ಬಾಲ ಶರಣ ಏನಾದರೊ ! ಯಾವ ಹುಲಿ ಕೊಂದಿತೊ ! ಯಾವ ಆನೆ ಸಿಗಿಯಿತೊ !

—ಧರೆಗೆ ದೊಡ್ಡವರು ಅರಸುತ್ತ ಸಾಗಿದರು ವಿಜಯನಗರದ ಕಡೆಗೆ. ಊರ ಅಂಕದಲ್ಲಿ ಅದ್ಭುತವನ್ನು ಕಂಡು ತಲೆದೂಗಿ ನಿಂತರು. ಊರ ಗಾರುಡಿಗರ 'ಬಿರುದು ಭಿಕ್ಷವನ್ನೆಲ್ಲ, ಧರಿಸಿದ್ದಾನೆ, ತಮ್ಮ 'ಶಿಶು ಮಗ' ರಾಚಪ್ಪಾಜಿ ! ಎಲ್ಲವನ್ನೂ ಹೆಗಲಲ್ಲಿ ತೂಗುತ್ತ ಕುಣಿಯುವ ಬಾಲ ಯೋಗಿಯು ಕಣ್ಣಲ್ಲಿ ಕಿಡಿ ಉದುರಿವೆ. ಗಾರುಡಿಗರೆಲ್ಲ ಮಡಿದು ಮಲಗಿರುವಲ್ಲಿ, ಹೆಂಗಸರ, ಮಕ್ಕಳ ಗೋಳಿಗೆ ಕರಗಿ ಕಿಡಿಗಣ್ಣ ರಾಚರಾಯರನ್ನು ನೋಡಿ ಪುಳಕಗೊಂಡು ಹಾಡಿದರು—

ಯೋಗಿ ಬಂದವರೆ ನೋಡಿರೆ  
ನಮ್ಮ ಶರಣ  
ಯೋಗಿ ಬಂದವರೆ ನೋಡಿರೆ  
ಘನ ವಿದ್ಯೆಕಾರ  
ಗಾಢ ಬಂದವರೆ ನೋಡಿರಿ

ರಾಚರಾಯರನ್ನು ನೋಡಿ ಹಿಗ್ಗಿದ ಗುರು ಹಾಡಿ ಮೈ ಮರೆತರು ! ಗಾರುಡಿಗರ ಮಡದಿ ಮಕ್ಕಳು ಪಾದಕ್ಕೆರಗಿದಾಗಲೇ ಗುರುವಿಗೂ ಎಚ್ಚರ ! ಕಣ್ತುಂಬ ನೋಡಿದರು ; ಶಿಷ್ಯನನ್ನು ಮನದಲ್ಲಿ ತುಂಬಿಕೊಂಡರು. ಜೋಳಿಗೆಯಿಂದ 'ಕಪ್ಪು ಧೂಳ್ತ'ವನ್ನು ತೆಗೆದು 'ಪಿಡಿದ' ಗಳಿಗೆಯಲ್ಲೆ ಗಾರುಡಿಗರು ಎದ್ದು ಗುರುವಿನ ಮರೆ ಹೊಕ್ಕರು. ಅವರ ಬಿರುದು ಭಿಕ್ಷವೆಲ್ಲಾ ಮತ್ತೆ ದೊರೆತವಾದರೂ ಮಾಯದ ಕಪ್ಪು, ಮಲೆಯಾಳದ ಬೂದಿ ಮಾತ್ರ ಕೊಡದೆ ಎಲ್ಲರನ್ನೂ ಒಕ್ಕಲು ಪಡೆದರು. ಅಲ್ಲಿಂದ ಮುಂದೆ–

ರಾಚರಾಯ್ರು ಕರಕೊಂಡು
ಇಬ್ಬರು ಶರಣ ಮಹಾತ್ಮರ ಕರಕಂಡು
ಮುಂದೆ ದಯ ಮಾಡ್ತಾರೆ-ಪರಂಜ್ಯೋತಿ
ನೀವೆ ಬನ್ನಿ
ಮಂಟೇದ ಲಿಂಗಯ್ಯ
ನೀವೆ ಬನ್ನಿ

ಮಂಟೇಸ್ವಾಮಿಯ ಕಥೆ ಅವರ ಶಿಷ್ಯರ ಕಥೆಯೂ ಹೌದು. ತಮ್ಮ ಮಹಿಮೆಯ ಜೊತೆಜೊತೆಯಲ್ಲೇ ಶಿಷ್ಯರ ಮಹಿಮೆಯನ್ನೂ ಶ್ರುತಪಡಿಸುತ್ತಲೇ ಸಾಗುವ ಆ ದಿವ್ಯ ಯೋಗಿಯ ಉದಾತ್ತ ಕಥನದಲ್ಲಿ ಭಕ್ತರು ಮೈ ಮರೆಯುವಾಗ ಹಂತ ಹಂತದಲ್ಲಿ ನಿಂತು ಮತ್ತೆ ಸಾಗಿದ್ದಾನೆ ಕಥೆಗಾರ....

—o—

# ಮಂಟೇದ ಒಡೆಯರೇ ಮುಂದೆ ಹೋಗಿ

'ತಾಳುಗತೆ' ಯ ತರಂಗಗಳನ್ನು ಹಾದು ಮುಂದೆ ಧರ್ಮಗುರು ಧರೆಗೆ ದೊಡ್ಡವರ ತೆಂಕಣದ ಯಾತ್ರೆಯತ್ತ ದನಿಗೈದಿದೆ ಕೈಯ ತಂಬೂರಿ, ಯೋಜನ ಯೋಜನಗಳ ಹಾದಿ ಸವೆಯುವಾಗ ಹತ್ತುಹಲವು ರೀತಿಯಲ್ಲಿ ಯೋಗಿವರ್ಯರ ಮಹಿಮೆ ಪ್ರಕಟಗೊಂಡಿದೆ, ಅವರ ಪರಿವಾರ ವಿಸ್ತರಿಸುತ್ತಲೇ ಸಾಗಿದೆ. ಮನ ಮೆಚ್ಚಿದವರನ್ನು ಶಿಷ್ಯರಾಗಿ ಪಡೆದು, ಶರಣು ಎಂದವರನ್ನು ಒಕ್ಕಲಾಗಿ ಕರೆದು ಮುಂದೆ 'ನಡುರಾಜ್ಯ' ಮಳವಳ್ಳಿ ಪ್ರಾಂತದ ತಮ್ಮ ತಪೋಭೂಮಿಯನ್ನು ಅರಸಿ ನಡೆದರೇ........ಆ ನಡುವಿನ ಕಥಾವಿಸ್ತಾರಕ್ಕೆ ಹಿಮ್ಮೇಳ ಪಲ್ಲವಿಯ ಸೊಲ್ಲೆತ್ತಿದೆ........

ಪರಂಜ್ಯೋತಿ ನೀವೆ ಬನ್ನಿ-ಮಂಟೇದ ಲಿಂಗಯ್ಯ ನೀವೆ ಬನ್ನಿ

ಕಿಡಿಗಣ್ಣ ರಾಚರಾಯರಿಗೆ ವಧುವೊಂದನ್ನು ಅರಸಲೆಂದೇ ಕಾಗಿನೆಲೆಯತ್ತ ದೃಷ್ಟಿಯನ್ನು ಹರಿಸಿದರು ಧರೆಗೆ ದೊಡ್ಡವರು. ಊರ ಹೊರಗೆ ಹೊಂಗೆಯ ತೋಪಿನಲ್ಲಿ ಉಳಿದ ಶರಣ ಮಹಾತ್ಮರು ಉಳಿದಾಗ ತಾವೊಬ್ಬರೆ ನಡೆದು ಬಂದರು ಕಲ್ಯಾಣಮ್ಮನ ದಾನಗುಣವನ್ನು ಮೆಚ್ಚಿ. ಪತಿಬಸವಲಿಂಗಯ್ಯ ಮನೆಯಲ್ಲಿಲ್ಲದಿರುವಾಗ ಮುತ್ತುರತ್ನದ ಭಿಕ್ಷೆ ಬೇಡವಾಗಿದೆ ಜಂಗಮಯ್ಯನಿಗೆ, ಹಡೆದ ಮಗಳನ್ನೇ, ತಮ್ಮ ಮುದ್ದು ಕಂದಮ್ಮನನ್ನೇ 'ಕನ್ಯಾರಣ್ಯ' ನೀಡಿರೆನ್ನುವುದೆ! ಪತಿಯನ್ನು ಬಹುಬೇಗ ಕರೆಸಿಕೊಂಡಳು ಕಲ್ಯಾಣಮ್ಮ ಬಂದು ಗುರುವಿನ ಬಿಗಿಮುಷ್ಟಿಗೆ ಬೆದರಿ.

ಬಸವಲಿಂಗಯ್ಯ ಹೌಹಾರಿದರು, ಹಾರಿ ಬೊಬ್ಬಿರಿದರು. ಮನೆಯನ್ನು ಕೊಟ್ಟಾರು, ಸಿರಿಸಂಪತ್ತನ್ನು ಕೊಟ್ಟಾರು, ಊರು ಕೇರಿಯನ್ನು ತೊರೆದು ಅವರ ಹಿಂದೆ ಹೊರಟಾರು, ತಮ್ಮ ಕುವರಿಯನ್ನು ಕೊಡಬಲ್ಲರೇ!

ಧರ್ಮಗುರು ಕದಲಲಿಲ್ಲ, ರಾಚಪ್ಪಾಜಿಯವರಿಗಾಗಿ ಆ ಹಸುಳೆಯನ್ನು ಪಡೆಯುವ ಮನ ಸಡಿಲಲಿಲ್ಲ. ತಾಯ ಸೆರಗನ್ನು ಹಿಡಿದು ಹೊಳೆವ ಎಳೆಯ ಕಂಗಳಲ್ಲಿ ಬಾಗಿಲಿಗೆ ಬಂದ ಸ್ವಾಮಿಯನ್ನು ಭಕ್ತಿ ಗೌರವಗಳಿಂದ ತುಂಬಿಕೊಳ್ಳುವಾಗ, ಧರೆಗೆ ದೊಡ್ಡವರ 'ನಾಕು ಪಾದದ ಜೋಳಿಗೆಯ ಕಪ್ಪು ಧೂಳ್ತ' ಮಗು

ವಿನ ಮೇಲೆ ಹರಡಿತು. ಮರುಗಳಿಗೆಯಲ್ಲಿ ಗುರು ಹೊಂಗೆ ತೋಪನ್ನು ಸೇರಿ 'ಭಂಗಿ ಫಲಾಹಾರ' ದಲ್ಲಿ ತೊಡಗಿದರು.

ಇತ್ತ 'ಮಗೀಗೆ ಯಮದ ಸಳಿ, ಯಮದ ಜರ ಬಂದುಬಿಡ್ತು' ಬಸವಲಿಂಗಯ್ಯ, ಕಲ್ಯಾಣಮ್ಮ ಕಳವಳದಲ್ಲಿ ತತ್ತರಿಸಿದರು. ತಮ್ಮ ಮುದ್ದುಗಿಣಿ ಜ್ವರದ ತಾಪದಲ್ಲಿ ಕುದಿದು ಕುದಿದು 'ಚಣಮಾತ್ರ'ದಲ್ಲಿ ಅಸುವನ್ನು ನೀಗಿದಾಗ ಕಂಗೆಟ್ಟು ಕುಸಿದರು, ಆಗಲೇ ಮನೆಗೆ ಬಂದು ಹೋದ ಪರದೇಶಿಯ ಮೇಲೆ ಸಂಶಯವೂ ಅಂಕುರಿಸಿತು. ಮಗುವನ್ನು ಸಿಂಗರಿಸಿ ಪಲ್ಲಕ್ಕಿಯಲ್ಲಿ ಹೊತ್ತು ಊರಿನಲ್ಲಿ ಮೆರವಣಿಗೆ ಮಾಡಿದರು. ಮಸಣದಲ್ಲಿ 'ಒಪ್ಪ' ಮಾಡಿ ಬಂದರು. ಮನೆಯಲ್ಲಿ ಬಸವಲಿಂಗಯ್ಯ-ಕಲ್ಯಾಣಮ್ಮ ದೀಪವನ್ನುಹಚ್ಚಿ, ಮಂಚವೇರಿ ಕಣ್ಣುಮುಚ್ಚದೆ ಇರುಳೆಲ್ಲ ಕಂಬನಿ ಹರಿಸಿದರು.

ಜನ ಮರಳಿದ ಮೇಲೆ ಮಹಾ ಮೌನ ಮಸಣದ ಮೇಲೆ ಆಡಿತು, ಧರೆಗೆ ದೊಡ್ಡವರು ಶಿಷ್ಯರನ್ನು ಹೊಂಗೆಯ ತೋಪಿನಲ್ಲೇ ಬಿಟ್ಟು ಎತ್ತಲೋ ಹೊರಟು ನಿಂತರು. ಕೈಯಲ್ಲಿ ಕಂಡಾಯ, ಕಂಕುಳಲ್ಲಿ ಜೋಳಿಗೆ, ತಲೆಯಲ್ಲಿ ಮುಕ್ಕಣ್ಣ ಕುಲಾವಿ, ಕಾಲಲ್ಲಿ ಜಂಗು ಧರಿಸಿದ್ದ ಅವರು ರಾತ್ರಿಯ ಮೌನವನ್ನು ಕಲಕುತ್ತ ಮಗುವಿನ ಸಮಾಧಿಯ ಬಳಿ ಬಂದು ನಿಂತರು. ಆ ದಿವ್ಯ ಯೋಗಿಯ ಜೋಳಿಗೆಯ 'ಕಪ್ಪು ಧೂಳತ್ತ' ಸಮಾಧಿಯಲ್ಲಿ ಜೀವಶಕ್ತಿ ಮಿಡಿಯುವಂತೆ ಮಾಡಿತು.

"ಏಳೇಳು ಮಗಳೆ ನಿನಗೆ ಜಯ ಜಯ"

ಗುರುವಿನ ದನಿ ತಿಳಿಗಾಳಿಯಲ್ಲಿ ತೇಲಿತು. 'ಗುದ್ದು' ಅದುರಿತು. ಹೊಸ ಜೀವವನು ಪಡೆದ ಮಗು,ಮೇಲೆದ್ದು ಗುರುಪಾದದತ್ತ ನಡೆದು ಶರಣುಮಾಡಿತು. ಗುರು ಮುಂದೆ ನಡೆದರು. ಕಂಡಾಯದ, ಕಾಲ ಜಂಗಿನ ನಾದವನ್ನು ತುಳುಕುತ್ತ, ಹಿಂದೆ ಹಿಂದೆಯೇ ಮಗುವೂ ನಡೆಯಿತು. ಹರಿವ 'ಜಲಧಿ'ಗೆ ಬಂದು ಮಗುವಿಗೆ 'ಮಿಂಯಾಣ' ಮಾಡಿಸಿದರು, ಧರ್ಮಗುರು.

ಕಾವಿದೇವಾಂಗ ಉಡಿಸಿದರು
ಈಬತ್ತಿ ಕಪ್ಪಿನ ಬಟ್ಟು ಧರಿಸಿದರು
ಜೋಳ್ಗಿ ಮುಂಗೈಗೆ ನೇರಹಾಕಿದರು

ಬಲಚೋರಿಹೆಗಲ ಮೇಲೆ ನಾಗಬೆತ್ತ ಹೊರಿಸಿದರು
—ಪರಂಜ್ಯೋತಿ ನೀವೆ ಬನ್ನಿ

ರಾಚರಾಯರ ವಧು ದೊಡ್ಡಮ್ಮ ತಾಯಿಯನ್ನು ಪಡೆದು ಹಿಗ್ಗಿದರು ಗುರುದೇವ. ಆದರೇನು ತಂದೆ ತಾಯಿಯರನ್ನು ವಂಚಿಸಿ ಮಗುವನ್ನು ಕರೆದೊಯ್ಯುವುದೇ ಈಗಲಾದರೂ ಒಪ್ಪಿ ದಾನ ಮಾಡಲಾರರೇ ಕೇಳಿಯೇ ನೋಡಲೆಳಸಿದರು.

ಮುಂಗೋಳಿ ಕೂಗಿ ಮೂಡು ಕೆಂಪೇರಿತು. ಅರಮನೆಯಲ್ಲಿ ತಾಯಿ-ತಂದೆಯರು ಮಗಳನ್ನು ನೆನೆದು ಹಲುಬಿದ್ದಾರೆ; ಹಂಬಲಿಸಿದ್ದಾರೆ. ದೀವಿಗೆ ಉರಿದೇ ಇದೆ. ತೂಗುಮಂಚದ ಮೇಲೆ ಕುಳಿತವರು ಅಲುಗಿಲ್ಲ ; ಅತ್ತಿತ್ತ ತಿರುಗಿಲ್ಲ ಕಣ್ಣೀರು ಹರಿದು ಮುಖ ಕಂದಿದೆ.

ಮಬ್ಬು ಹರಿಯುವ ಮೊದಲೇ ಹೊರಗೆ ದನಿಯಾದಂತಾಯಿತು–

"ಧರ್ಮಗುರು ಕ್ವಾರಣ್ಯದ ಭಿಕ್ಷವೊ !"

ಮತ್ತೆ ಬಡ ಜಂಗಮನೇ ಬಂದನೇ ! ತಮ್ಮ ಮನವನ್ನೂ ಮನೆಯನ್ನೂ ಬರಿದು ಮಾಡಿ ಹೋದ ಅವನೇ ಮತ್ತೆ ಇಲ್ಲಿ ಸುಳಿದನೇ !

ಬಸವಲಿಂಗಯ್ಯ ಉರಿವ 'ಕೆಂಡವಾಗಿ' ಆರ್ಭಟಿಸುತ್ತ ಹೊರಗೆ ಬಂದರು. ಅವ್ವುಡು ಕಚ್ಚಿ ಹುಚ್ಚನಾಗಿ ಅಬ್ಬರಿಸಿದರು !

"ಹಟ್ಟಿ ಬಿಟ್ಟು ಆಚೆಗೋಗೊ
ಹುಚ್ಚು ಕಾಡು ಜಂಗಮಯ್ಯ !"

ರೋಸಿದ ತಂದೆಯ ರೋಷಕ್ಕೆ ನಕ್ಕರು ಧರ್ಮಗುರು.

"ಎಲ್ಲಯ್ಯ ಸಿಟ್ಟು ಮಾಡಬೇಡಿ
ಈ ಹೆಣ್ಣು ಮಗ
ಯಾರದು ನೋಡಿರಯ್ಯ...."

ಬಸವಲಿಂಗಯ್ಯನವರ ಬಾಯಿ ಕಟ್ಟಿತು, ಕಲ್ಯಾಣಮ್ಮ ಕನಸೆಂದು ಭ್ರಾಂತರಾದರು. ತಮ್ಮ ಮಗುವೇ ! ಆದರೆ ಕೊರಳಲ್ಲಿ ಮಣಿ, ಮೈಯಲ್ಲಿ ಕಾವಿ, ಹಣೆಯಲ್ಲಿ ಭಸಿತ, ಭುಜದಲ್ಲಿ ಜೋಳಿಗೆ, ಹೆಗಲಲ್ಲಿ ನಾಗಬೆತ್ತ.. .ಪುಟ್ಟ ಶರಣೆ....ಆದರೂ ತಮ್ಮ ಮಗಳೇ

"ಈ ಮಗು ನಮ್ಮದೇ !"

–ಇಬ್ಬರೂ ಹೊರಗೆ ಬಂದರು.

"ನಿಮ್ಮ ಮಗಳಾದರೆ ನೀವು ಕರೆದು ಕೊಳ್ಳಿ !"

ಧರೆಗೆ ದೊಡ್ಡವರು ಅಡ್ಡಿಪಡಿಸಲಿಲ್ಲ. ಕೈಹಿಡಿದು ಕರೆದರು. ಕಣ್ಣೀರಿಟ್ಟು ಕರೆದರು ; ಕಾಡಿಬೇಡಿ ಕರೆದರು....ತಾಯಿ ತಂದೆಗಳತ್ತ ತಿರುಗಿ ನುಡಿದಳು ಆ ಕಿರಿಯ ಶರಣೆ,

''ಯಾವಾಗ ನನ್ನ ಅಸು ಹೋಯಿತೊ
ಆಗಲೇ ಒಂದು ಯುಗಾಂತರ
ತುಂಬಿತು.
ಈಗ ಯಾವ ಸ್ವಾಮಿ ಬಂದು ನನ್ನನ್ನು ಪಡೆದರೊ
ಅವರ ಪಾದ ಕಂಡು ಬದುಕುತೀನಿ
ಪರಂಜೋತಿ ನೀವೆ ಬನ್ನಿ''

ದೀನರಾಗಿ ತಮ್ಮ ಮುಖ ನೋಡಿದ ದಂಪತಿಗಳಿಗೆ ಧರ್ಮಗುರು ಭರವಸೆ ನೀಡಿದರು :

"ಈ ಹೆಣ್ಣು ಮಗುವ ನಾವು
ದೇವರ ಮಾಡಿ ನಿಲ್ಲಸ್ತೀವಿ....
ಇದಕೆ ಕಟ್ಟಿದಂಥ ಕಾಣಿಕೆಯ
ಬಿಟ್ಟಂತ ಜನ್ನಿಗೆಯ
ನೀವೇ ಬಳಸಿಕೊಳ್ಳಿ ಎಂದರಂತೆ....
ಮಠದ ಕಡೆಯ ಬಾಗಿಲಲ್ಲಿ
ಇದ್ದು ಕೊಳ್ಳಿ ಎಂದರಂತೆ
ಈ ಮಗುವಿನ ಪೂಜೆ ನಿಮಗೆ ನೇಮಿಸ್ತೀವಿ ಎಂದರಂತೆ,
ಪರಂಜ್ಯೋತಿ ನೀವೆ ಬನ್ನಿ....

ದಂಪತಿಗಳು ಮಗುವಿನ ಮುಂಗೈ ಹಿಡಿದುಗುರುವಿಗೆ ದಾನ ಮಾಡಿದರು. ತಾವೂ ಗುರುವಿನ ಜೊತೆಯೇ ಹೊರಟರು. ಬದುಕುಬಂಗಾರವನ್ನೆಲ್ಲ ಸತ್ಪಾತ್ರರಿಗೆ ದಾನ ಮಾಡಿದರು.

ಧರೆಗೆ ದೊಡ್ಡವರ ಪರಿವಾರ ಸ್ವಲ್ಪ ಸ್ವಲ್ಪವೇ ಬೆಳೆಯುತೊಡಗಿತು. ಪಯಣ ಮುಂದುವರಿಯಿತು.

ಗುಂಬಳ ಪುರಕೆ ಬೇಗದಲ್ಲಿ
ದಯಮಾಡುತ್ತಾರೆ ನಮ್ಮ ಗುರುವು
ಅಲ್ಲಿ ಬಾಳ ಪೂಜೆ ಆದವಂತೆ
ಬಾಳ ಭಕ್ತರ ಪಡೆದರಂತೆ
ಗುಂಬಳಪುರದಲಿ ಪಾದ ಊರಿ
ಶರಣ ಮಹಾತ್ಮರ ಪಡೆದುಕೊಂಡು
ಸಕ್ಕರೆ ಪಟ್ಟಣಕ್ಕೆ ದಯಮಾಡಿಸ್ತಾರೆ
ನಮ್ಮ ಗುರುವು ಪರಂಜೋತಿ
ಮಂಟೇದ ಲಿಂಗಯ್ಯ ನೀವೆ ಬನ್ನಿ

ಸಖರಾಯಪಟ್ಟಣವನ್ನು ಇಬ್ಬರು ಕ್ಷತ್ರಿಯ ವಂಶದ ಅರಸರು ಆಳುತ್ತಿದ್ದರು. ದಾನ, ಧರ್ಮ, ಜಂಗಮ ಸೇವೆಯಲ್ಲಿ ನಿಷ್ಣಾತರಾದ ಅವರು ನಿತ್ಯವೂ ಏಳು ಮಂದಿ ಜಂಗಮರಿಗೆ 'ಎಡೆ' ಮಾಡಿ ಪುಣ್ಯ ಭಾಜನರಾಗುತ್ತಿದ್ದವರು. ಧರ್ಮ ಗುರುವಿನ ದೃಷ್ಟಿ ಅತ್ತ ಹರಿಯಿತು. 'ತಮ್ಮ ಡಂಗೂರ ಕೂಚು ಮಾಡಿಕೊಂಡು ಎಡೆಪಡಿಸುವ ಸ್ಥಳಕ್ಕೆ ಹೋಗಿ ನಿಂತರು.

"ಕ್ವಾರಣ್ಯದ ಭಿಕ್ಷವೋ ಭಿಕ್ಷ...."

ಜಂಗಮರು ಎಡೆಯನ್ನು ಮುಟ್ಟುವ ಮುನ್ನವೇ ಮತ್ತಾರೋ ಹೊಸ ಜಂಗಮರು ಬಂದಂತಿದೆ. ಅವರನ್ನು ಆಹ್ವಾನಿಸುವುದು ಅವರ ಧರ್ಮ, ಜಂಗಮರು ರಾಜರಿಗೆ ಬಿನ್ನೈಸಿದರು :

"ನಮ್ಮ ಶ್ರೀಲಾಂಛನ ಬಂದು ನಿಂತಮೇಲೆ ಅವರ ಬಿಟ್ಟು ಊಟ ಮಾಡತಕ್ಕದ್ದು ನಮಗೆ ತರವಲ್ಲ, ಅವರನ್ನೂ ನಮ್ಮ ಹಂತೀಲಿ ಕರೆದು ಕೂರಿಸಿ, ಅವರಿಗೂ ಎಡೆ ಬಡಿಸಿಬಿಡಿ."

ಸಹ ಪಂಕ್ತಿಯಲ್ಲಿ ಧರೆಗೆ ದೊಡ್ಡವರ ಪರಿವಾರವೆಲ್ಲ ಮಂಡಿಸಿತು. ಎಲೆ ಹಾಕಿ 'ಅಗ್ಗವಣಿ'ಯನ್ನು ನೀಡಿದರು. ಹಪ್ಪಳ, ಉಪ್ಪಿನಕಾಯಿ, ಕಡುಬು

ಕಜ್ಜಾಯ, ಒಬ್ಬಟ್ಟು, ಹೋಳಿಗೆ, ಸ್ವಾಮಿಗೆ 'ಪರಸಾದ' ನೀಡಿ ಬಿನ್ನಕ್ಕೆ ಪಟಿಸಿದ್ರು ಊಟಮಾಡಿ ಎಂದರು.

ಆಗ ನಮ್ಮ ಸ್ವಾಮಿಯವರು :

ಜಂಗಮರ ಜೊತೆಯಲ್ಲಿ ಬಿನ್ನವನು ಅಳೆಯುತ್ತಾರೆ
ಜಂಗಮರ ದೃಷ್ಟವನ್ನು ನೋಡಬೇಕು ಎಂದರಂತೆ !
ಶೇಷದ ಕೈಯಲ್ಲಿ ಮೈ ಕೈನ್ನೆಲ್ಲ ಮುಟ್ಟಿಗಂಡು
....ಪರಂಜೋತಿ ನೀವೆ ಬನ್ನಿ

ಸಹಪಂಕ್ತಿಯ ಜಂಗಮರು ಹೇಸಿದರು ಇವರ ವರ್ತನೆಗೆ, ತಡೆಯಲಾರದ ಕೋಪ ಎಡೆಯನ್ನೂ ತೊರೆದು ಮೇಲೇಳಿಸಿತು. "ಇದೆಲ್ಲಿಯ ಕೆಟ್ಟ ಮನುಷ್ಯ!" ಎಂದು ಮೂಗು ಮುರಿದು ಹೊರಗೆ ಬಂದರು. ಕೈತೊಳೆದು ರಾಜರ ಬಳಿಗೆ ಬಂದರು. ಆ ಜಂಗಮನನ್ನು ವಿಷದ ಕಜ್ಜಾಯ ನೀಡಿ ಕೊಲ್ಲುವಂತೆ ಹೇಳಿ ಹೊರಟುಹೋದರು.

ಧರೆಗೆ ದೊಡ್ಡವರ ಪರಿವಾರವೆಲ್ಲ ರಾಜರ ಒತ್ತಾಯಕ್ಕಾಗಿ ಅಂದು ಅಲ್ಲಿಯೇ ಉಳಿಯಬೇಕಾಯಿತು. ಮರುದಿನ ರಾಜರಿಬ್ಬರೂ ಬೀಳ್ಕೊಡಲು ತಾವೇ ಬಂದರು. ಜಂಗಮಯ್ಯನಿಗೆ ಮೀಸಲಾದ ದಾನವೊಂದನ್ನು ತಂದರು–

''ಕ್ವಾರೋ ಜಂಗುಮಯ್ಯ,
ನಮ್ಮ ಅರಮನೆ ಒಳಗೆ ತಂಗಳ ಕಜ್ಜಾಯ ಮಿಕ್ಕಿದ್ದೊ....
ಮಕ್ಕಳೊಂದಿಗೆ ಊಟ ಮಾಡಿಕೊ ಹೋಗಪ್ಪ !''

ಧರೆಗೆ ದೊಡ್ಡವರು ತಿರಸ್ಕರಿಸಲಿಲ್ಲ. 'ಕಾವಿಯ ಜೋತ್ರಕ್ಕೆ' ಸುರಿಸಿಕೊಂಡು, ಹೆಗಲಮೇಲೆ 'ಸೇದಿ'ಕೊಂಡು ಗುಂಬಳಾಪುರದ ಹೊಳೆಯ ಕಡೆ ಬಂದರು.

ಹುತ್ತಾಳುದ್ದ ನೀರಿನಲ್ಲಿ ಗುರು ಶಿಷ್ಯರೆಲ್ಲ ಮಿಂದು ಬರುವಲ್ಲಿ ಹೊತ್ತೇರುತ್ತಿತ್ತು.

ಹರ ಹರ ಶಿವ ಶಿವ ಎಂದು ನಮ್ಮ ಸ್ವಾಮಿಯವರು
ಈಭೂತಿ ಆಧಾರ ಮಾಡುತಾರೆ,
ಒಂದು ಕಂಡುಗ ಕರ್ಪೂರ, ಓಂದು ಕಂಡುಗ

ಸಂಭ್ರಾಣೆಯನ್ನು ಬೇಯಿಸಿ
ಓಂ ಹರ ಹರ ಸಕಲ ಕಂಟಕ ನಿವಾರ್ಯ
—ಪರಂಜೋತಿ ಪ್ರಕಾಶ

ಹಾಗೆನ್ನೋದಾಗಿ ಉಪದೇಶ ಮಾಡುತ್ತ ಕಜ್ಜಾಯಗಳನ್ನು ಎಲ್ಲರಿಗೂ ಹಂಚಿದರು.

ಸಖರಾಯ ಪಟ್ಟಣದ ರಾಜರಿಗೆ ಇಬ್ಬರು ಗಂಡುಮಕ್ಕಳು. ಹಿರಿಯ ದೊರೆಯ ಮಗ, ಕಿರಿಯ ದೊರೆಯಮಗ ಇಬ್ಬರೂ ಗುಂಬಾಳಪುರದ ಗುರು ಮಠಕ್ಕೆ ಓದಲು ಹೋಗಿದ್ದರು. ಮಠದಿಂದ ಮರಳುವಾಗ ಹೊಳೆಯಂಚಿನ ಹಾದಿಯಲ್ಲೇ ಬಂದರು. ನೆನ್ನೆ ಅರಮನೆಗೆ ಬಂದು ತಂಗಿದ್ದ ಜಂಗಮರ ಪರಿ ವಾರವನ್ನು ನೋಡಿ ಕಿರಿಯ ರಾಜಕುಮಾರ :

"ಅಣ್ಣಯ್ಯ ಅಣ್ಣಯ್ಯ.. ನೆನ್ನೆ ಅರಮನೆಗೆ ಬಂದಿದ್ದ ಜಂಗಮರು ಇಲ್ಲಿ ದ್ದಾರೆ........" ಎಂದು ಅಣ್ಣನನ್ನು ತಡೆದ, ಕಂಡ ಶರಣರಿಗೆ ವಂದಿಸಿ ಹೋಗ ಲೆಂದು ಇಬ್ಬರೂ ಅತ್ತ ಬಂದಾಗ, ಗುರು ಅವರತ್ತ ಕರುಣೆಯ ದೃಷ್ಟಿಯನ್ನು ಚೆಲ್ಲಿದರು. ಅವರನ್ನು ಮೆಚ್ಚಿ. ಮನದಲ್ಲಿ ಕೊಂಡಾಡಿದರು. ಸುಳಿ ಮಿಂಚೊಂದು ಅವರ ದಿವ್ಯ ದೃಷ್ಟಿಯಲ್ಲಿ ಹಾದುಹೋಯಿತು.

ಗುರುಪಾದಕ್ಕೆ ವಂದಿಸಿದ ರಾಜಕುಮಾರರಿಬ್ಬರೂ ಅರಮನೆಯ ಕಜ್ಜಾಯ ವನ್ನು ತಾವಾಗಿಯೇ ಬಯಸಿದರು. ಕೇಳಿದ ಮಕ್ಕಳಿಗೆ ಇಲ್ಲವೆನ್ನುವ ಮನ ಬರ ಲಿಲ್ಲ ಧರ್ಮಗುರುವಿಗೆ. ಪ್ರೀತಿಯಿಂದ ಹರಸಿ ಅವರ ಹಸ್ತಕ್ಕೆ ಎರಡು ಕಜ್ಜಾಯ ವನ್ನಿಟ್ಟರು. ಗುರುಪ್ರಸಾದವನ್ನು ವಿನಯದಿಂದ ಪಡೆದು ಅರಮನೆಯತ್ತ ಕುಣಿ ಯುತ್ತ ಓಡಿದರು. ಅವರು ಹೋದ ದಾರಿಯನ್ನೇ ಗುರು ಎವೆಯಿಕ್ಕದೆ ನೋಡಿ ನಸು ನಕ್ಕರು! ಹೊಳೆಯ ಅಂಚಿನಲ್ಲಿ ಶರಣ ಪರಿವಾರ ಕಜ್ಜಾಯವನ್ನು ಸೇವಿಸಿ ತೃಪ್ತವಾಯಿತು.

ರಾಜಕುಮಾರರು ಅರಮನೆಯನ್ನು ಎಟುಕಿಸಿಕೊಳ್ಳುವುದರಲ್ಲಿ ಕೈಯ ಕಜ್ಜಾಯ ಮುಗಿದಿತ್ತು. ಏಕೋ ತಲೆ ಸುತ್ತಲು ಆರಂಭವಾಯಿತು. ತಡವರಿಸಿ ಕೊಂಡೇ ಅರಮನೆಯ ಬಾಗಿಲಿಗೆ ಬಂದು ಕುಸಿದು ಬಿದ್ದರು.

ರಾಜರಿಬ್ಬರೂ ಓಡಿಬಂದರು. ರಾಣಿಯರು ಮಕ್ಕಳನ್ನು ತಬ್ಬಿ ಅತ್ತರು, ರಾಜಪರಿವಾರ ಕವಿದು ಕಣ್ಣೀರು ಕರೆಯಿತು,

ಹೊಳೆಯ ದಡದಲ್ಲಿ ಪರಂಜ್ಯೋತಿ ಧರೆಗೆ ದೊಡ್ಡವರ ಕಿವಿಯನ್ನು ತಟ್ಟಿತು ಅರಮನೆಯ ಗೋಳು. ಬಳಗವನ್ನು ಅಲ್ಲಿಯೇ ಬಿಟ್ಟು ಪೋಲಿದ್ದರು. ಅರಮನೆಯವಮುಂದೆ ಮತ್ತೆ ಆ ಜಂಗಮನೇ ಬಂದಿದ್ದಾನೆ! ಅವನೇ.... ಅವನು ಬಂದ ಗಳಿಗೆಯಲ್ಲೇ ಮಕ್ಕಳಿಬ್ಬರೂ ಮೃತ್ಯುವನ್ನು ಅಪ್ಪಿದ್ದಾರೆ.

ಸತ್ತ ಮಕ್ಕಳನ್ನು ತೊಡೆಯ ಮೇಲೆ ಹಾಕಿ ಕಣ್ಣೀರನ್ನು ಮಿಡಿದ ರಾಜರಿಬ್ಬರೂ ಕೈಯ ಕಂಡಾಯದ, ಕಾವಿಯ ದಾಳದ ಜಂಗಮಯ್ಯನನ್ನು ಕಂಡು ಮುನಿದರು. ಧರೆಗೆ ದೊಡ್ಡವರು ನಡೆದ ಕಥೆಯನ್ನು ಬಣ್ಣಿಸಿದರು.

"ನೀವು ಕೊಟ್ಟ ಕಜ್ಜಾಯವನ್ನು ಹೊಳೆಯದಡದಲ್ಲಿ ಊಟಮಾಡುತಿದ್ವೊ, ಮಕ್ಕಳು ಬಂದು ಕೇಳಿದರು ಇಲ್ಲವೆನ್ನಲಾರದೆ ಎರಡನ್ನು ಕೊಟ್ಟೆವು.... ನಮ್ಮ ಮೇಲೇಕೆ ಕೋಪ ಮಾಡುವಿರಿ!"

ಧರ್ಮಗುರುವಿನ ಗಂಭೀರ ನುಡಿ ರಾಜರನ್ನು ಎಚ್ಚರಿಸಿತು. ಗುಡುಗುಡನೆ ಓಡಿ ಬಂದು ಶರಣರ ಪಾದ ಹಿಡಿದು ಕಣ್ಣೀರಿನಿಂದ ತೊಯ್ದರು.

"ಅಯ್ಯಯ್ಯೊ ಗುರುವಿಗೆ ವಿಷಹಾಕಿದ ಕರ್ಮ ಎಲ್ಲಿ ಕಳೆಯೋದು.... ನಾವು ಇಕ್ಕಿದ್ದ ವಿಷ ನಮ್ಮ ಮಕ್ಕಳಿಗೆ ತಾಗಿತಯ್ಯ... ನಮ್ಮ ಮಕ್ಕಳ ಪಡೆದು ಕೊಡಿ ಪ್ರಭುಸ್ವಾಮಿ !"

ಅಂಗಲಾಚಿದರು. ಗುರುಪಾದವನ್ನು ಬಿಡದೆ ಬೇಡಿದರು. ಗುರುಸ್ವಾಮಿಯ ತುಟಿಯಂಚಿನ ಮೇಲೆ ತಿಳಿನಗೆಯಾಡಿತು. ಕೊಂಚ ತಡೆದು ಉತ್ತರಿಸಿದರು :

"ಏನರಯ್ಯ....ನಿಮ್ಮ ಮಕ್ಕಳ ಪ್ರಾಣವನ್ನು
ಕ್ಷಣಮಾತ್ರದಲ್ಲಿ ಪಡೆದು ಕೊಡುತೀನಿ
ನಮ್ಮ ಶಿಷ್ಯರ ಮಾಡುವಿರ
ಬಂಟರ ಮಾಡುವಿರ ?"

ರಾಜಕುಮಾರರನ್ನು ಜಂಗಮರ ದಾನ ಕೇಳುವರೇ ! ಸುಖಸಂಪತ್ತಿನ ತೂಗುದೊಟ್ಟಿಲ ಕಂದಮ್ಮಗಳನ್ನು ಕಡು ಕಷ್ಟದ ಬದುಕಿನ ಶರಣರ ಪಾಲು ಮಾಡುವುದೇ....ಮಾಡದೊಡೆ ಬದುಕರು........ಬದುಕರು !

"ಆದರೆ ಸ್ವಾಮಿ ನಾವೇನೊ ದೊರೆತನ ಆಳ್ತಾ ಇದ್ದೀವಿ...ನಮ್ಮ ಮಕ್ಕಳ ಶಿಷ್ಯರು ಮಾಡಿಕೊಡುತೀವಿ....ನಮ್ಮ ಮಕ್ಕಳಿಗೆ ಏನ ಕೊಡ್ತೀರಿ ಧರ್ಮಗುರುವೆ ?"

ರಾಜರ ಕಾತರಕ್ಕೆ ಗುರುವಿನ ಕರುಣೆಯ ನುಡಿ ಬೆಳಕಾಯಿತು. ಮರ್ತ್ಯ ಲೋಕಕ್ಕೆ ಹೋದಾಗ ರಾಜಕುಮಾರರಿಗಾಗಿ ಬಸವನ ಬೆಟ್ಟ ಬೆಳ್ಳಿಯಾಗುತ್ತದೆ. ಕುಂದೂರು ಬೆಟ್ಟ ಚಿನ್ನವಾಗುತ್ತದೆ. ಗುರುಕರುಣೆಯಲ್ಲಿ ಅವರ ಹರಕೆಯ ಶಿಶುವಾಗಿ ಬಾಳುತ್ತಾರೆ....

'ಕಪ್ಪುಧೂಳ್ತ'ವನ್ನು ಪಿಡಿದ ಗುರುವಿನ ಪದತಲದಲ್ಲಿ ರಾಜಕುಮಾರರು ಎದ್ದು ನಮಿಸಿದರು. ಗುಂಬಳಾಪುರದ ಹೊಳೆಯಲ್ಲಿ 'ಮೀಯಣ' ಮಾಡಿಸಿ ಅಲ್ಲಿಯೇ 'ಬಲಚೋರಿ ಕರ್ಣಕ್ಕೆ ಗುರು ಬೋಧನೆ ಮಾಡಿ ಬೇವಿನಕಾಯಿ ಗಾತ್ರದ ಲಾಂಛನವನ್ನು ಇಬ್ಬರ ಕೊರಳಿಗೂ ಕಟ್ಟಿದರು.' ಹಿರಿಯ ದೊರೆಯ ಮಗ, ಹಿರಿಯಗುರು ಬಸವರಾಜೇಂದ್ರ ಸ್ವಾಮಿ, ಕಿರಿಯ ದೊರೆಯ ಮಗ ಕಿರಿಯ ಗುರುರಾಜ ಪಟ್ಟದ ವೀರಭದ್ರಸ್ವಾಮಿ, ಇಬ್ಬರೂ ಹೊಸ ನಾಮ ಕರಣದಿಂದ 'ಶರಣ ಮಹಾತ್ಮ'ರಾಗಿ ಗುರುವಿನ ಹಿಂದೆ ಪರಿವಾರದಲ್ಲಿ ಕಲೆತು ಸಾಗಿದರು.

ಧರೆಗೆ ದೊಡ್ಡವರಿಗೂ ಹೊಸ ನಾಮಕರಣ ಕಾದಿತ್ತು. ತೆಂಕಣದಿಕ್ಕಿನಲ್ಲಿ ನಡೆದು ನಡೆದು, ಚೆನ್ನಪಟ್ಟಣವನ್ನು ಹಾದು, ನಡು ರಾಜ್ಯದತ್ತ ಹರಿದು ಮಳವಳ್ಳಿಯ ಬಳಿಯ ಹೊನ್ನಾಯಕನ ಹಳ್ಳಿಗೆ ಮೊದಲ ಪಾದ ಊರಿದರು. ಗುರುವಿನ ಮೊದಲ ಹೆಜ್ಜೆಯ ಪುಣ್ಯ ಆ ಊರಿನದಾಗಿ 'ಆದಿ ಹೊನ್ನಾಯಕನ ಹಳ್ಳಿ'ಯಾಯಿತು.

ಆದಿಹೊನ್ನಾಯಕನ ಹಳ್ಳಿಯ ಹಾಲು ಕುರುಬರ ಮುದ್ದಮ್ಮನ ಮನೆಯ ಮುಂದೆ ಶ್ರೀಗುರು–ಬಂದು 'ಕ್ವಾರಣ್ಯ' ಸಾರಿದರು. ಕಾಲಜಂಗು, ಕೈಯ ಕಂಡಾಯಗಳ ಶಬ್ದ ಮೊಳಗಿತು ಮನೆಯ ಅಂಗಳದಲ್ಲಿ. ಕಂಚಿನ ತಂಬಿಗೆಯಲ್ಲಿ ಹಾಲು ಕರೆಯುತ್ತಿದ್ದಳು, ಮುದ್ದಮ್ಮ. ಆಕಳು ಬೆದರಿತು. 'ಜಾಗಟೆಯ ಸದ್ದು ಜಂಗಿನ ಸದ್ದಿಗೆ' ಚಂಗನೆ ಪಕ್ಕಕ್ಕೆ ಚಿಮ್ಮಿತು. ತಂಬಿಗೆ ಕೆಳಗುರುಳಿ ಹಾಲು ಚೆಲ್ಲಿತು. ಮುದ್ದಮ್ಮ ತಾನೂ ಬಿದ್ದು ಮೇಲೆದ್ದು ತಿರುಗಿ ನೋಡಿದಳು. ವಿಚಿತ್ರ ವೇಷದಲ್ಲಿ ನಿಂತ ಗೊರವಯ್ಯನತ್ತ ವ್ಯಗ್ರವಾಗಿ ಕೂಗಿದಳು.

"ಹಾಳಾದ ಮಂಟೇದ ಒಡೆಯರೇ ಮುಂದೆ ಹೋಗಿ !"

ಮುದ್ದಮ್ಮನ ನುಡಿಗೆ ಧರ್ಮಗುರು ತಲೆದೂಗಿದರು. ನಡುರಾಜ್ಯದ ಹೊಸ್ತಿಲಲ್ಲೇ ತಮಗಾದ ನಾಮಕರಣಕ್ಕೆ ತೃಪ್ತರಾದರು.

"ಸಹಭಾಷ್ ಮಗಳೆ ಮುದ್ದಮ್ಮ ...ನಮ್ಮ ಕೈಲಾಸದಿಂದ ಬರುವಾಗ, ಏಳೇಳು ಲೋಕವನ್ನೆಲ್ಲ ಆಳಿಬಾಳಿ ಬಂದೆ....ಯಾರೂ ನನಗೆ ಇಂಥ ನಾಮ ಕರಣ ಕರೆಯಲಿಲ್ಲ. ನೂರೊಂದು ನಾಮಕರಣ ಚೆನ್ನಾಗಿಲ್ಲ....ನೀ ಕರೆದ ಮಂಟೇದಲಿಂಗಯ್ಯನೇ ನನ್ನ ಹೆಸರಾಗಲಿ.

ನೀ ನನ್ನ ಹೆತ್ತ ತಾಯಿ ಎಂದರಂತೆ
ಪರಂಜೋತಿ ನೀವೆ ಬನ್ನಿ
ಮಂಟೇದ ಲಿಂಗಯ್ಯ ನೀವೆ ಬನ್ನಿ



# ಸಿದ್ಧಯ್ಯ ಶಿವನೇ ಬನ್ನಿ

ನಿಜಭಕ್ತ ನೀನೆ ಪವಾಡ ಬಲ್ಲೆ ಸಿದ್ಧಯ್ಯಾs ಸ್ವಾಮಿ ಬನ್ನಿ
ಪವಾಡ ಗೆದ್ದಯ್ಯಾs ಸ್ವಾಮಿ ಬನ್ನಿ
ನಂಬಿದ ಭಕ್ತರ ಮಲ್ಲಿ ತುಂಬಿ ತುಳುಕಾಡ ಬಲ್ಲೆ
ಸಿದ್ಧಯ್ಯ ಶಿವನೇs ಬನ್ನಿ
ಸಿದ್ಧ ಸಿದ್ಧರಿಗೆಲ್ಲ ಅತಿ ಮುದ್ದು ಘನಲೀಲೆ
ಸಿದ್ಧಯ್ಯ ಶಿವನೇ ಬನ್ನಿsss........

ಮಂಟೇದೇವರ ಕಥೆಯಲ್ಲಿ ಅವರ ಪರಮಶಿಷ್ಯ ಸಿದ್ದಪ್ಪಾಜಿಯವರ ಪಾತ್ರ ವಿಶಿಷ್ಟವಾದುದು, ಉಜ್ವಲವಾದುದು ; ಅವರ ಪ್ರವೇಶವೇ ಅತ್ಯಂತ ಆಕರ್ಷಕವೆನಿಸಿ ಕಥೆಗೆ ತೀವ್ರತೆಯನ್ನೂ, ಜೀವಶಕ್ತಿಯನ್ನೂ ತಂದುಕೊಡುತ್ತದೆ. ಕಥೆಯ ಮಧ್ಯಂತರದಲ್ಲೆಲ್ಲೊ ಗುರುವಿಗೆ ಪ್ರಾಪ್ತವಾಗುವ ಈ 'ಯೋಗಿ ಸಿದ್ಧಯ್ಯ' ಲೌಕಿಕದಿಂದ ಅಲೌಕಿಕಕ್ಕೆ ಚಿಮ್ಮಿದ ಒಂದು ಮಿಂಚು, ಗುಡುಗು. ಕೆಲವು ರೋಮಾಂಚಕಾರಕ ಪವಾಡಗಳಲ್ಲಿ ರಂಜಿಸುವ ಅವನ ವ್ಯಕ್ತಿತ್ವ ಗಂಭೀರವಾದುದು ; ಗಹನವಾದುದು. ಆದುದರಿಂದಲೇ ಇವನು 'ಘನಲೀಲೆ ಸಿದ್ದಯ್ಯ' ಗುರು ಮಂಟೇದೇವರ ಮಹಿಮೆಯ ಪ್ರಸಾರಕ್ಕೆ ತಾನೆ ಆದ್ಯ ಪ್ರವರ್ತಕ; ಗುರು, ಮೂಲ ಮೂರ್ತಿಯಾದರೆ ತಾನು ಉತ್ಸವಮೂರ್ತಿಯಾಗಿ, ದಳವಾಯಿಯಾಗಿ ಹೊರಟವನು. ಕನ್ನಡ ಜನಪದ ಸಾಹಿತ್ಯಲೋಕದಲ್ಲಿ ಇದೊಂದು ವಿಸ್ಮಯಕಾರಕ ರಸಸೃಷ್ಟಿ. ಭವ್ಯ ಬಾಹುಬಲಿ ಮೂರ್ತಿಯಂತೆ ಬಂಧುರ........ಸುಮನೋಹರ........

ಧರೆಗೆ ದೊಡ್ಡವರ 'ಮಂಟೇದ ಒಡೆಯ' ಎನ್ನುವ ಬಿರುದನ್ನು ಧರಿಸಿದರು ಆದಿ ಹೊನ್ನಾಯಕನ ಹಳ್ಳಿಯಲ್ಲಿ. ಮುಂದೆ ಮಳವಳ್ಳಿಯಲ್ಲಿ ತಂಗಿ, ತೆಂಕಣದ ಮುಗಿಲೆತ್ತರದ ಕುಂದೂರ ಬೆಟ್ಟವನ್ನು ಹತ್ತಿ 'ನಾಲ್ಕೂ ರಾಜ್ಯ'ವನ್ನೂ ನಿಟ್ಟಿಸಿ, ಕಾಡಂಕನ ಹಳ್ಳಿಯ ಮಡಿವಳ ಮಾಚಯ್ಯನ ಹುಬ್ಬೆಯ ಒಲೆಯ 'ಅಮೃತ ಮಣ್ಣ'ನ್ನು ಕಂಡು ಪರಿವಾರದೊಡನೆ ಅತ್ತ ಹರಿದರು, ಊರ ದಣಿ ಕುರುಬ ಬೊಪ್ಪಗೌಡನ ಗರ್ವವನ್ನು ಮುರಿದು, ಏಳು ಸೋಲಿಗೆ ಕುರಿಗಳನ್ನು

ತನ್ನ ಭಂಗಿಯ ಹೊಗೆಯಲ್ಲೇ ಕೊಂದು ಮತ್ತೆ ಬದುಕಿಸಿದರು. ಅವನನ್ನು ಒಕ್ಕಲಾಗಿ ಪಡೆಯಲು ಮಡಿವಳ ಮಾಚಯ್ಯ ಇನ್ನಿಲ್ಲದ ಅನನ್ಯ ಭಕ್ತಿಯಿಂದಲೇ ಗುರುವಿಗೆ ಶರಣು ಬಂದು ತನ್ನೆಲ್ಲ 'ಮಠಮನೆ'ಯನ್ನೂ ಅರ್ಪಿಸಿ ತಾನೂ ಮುಟ್ನೂರಿಗೆ ಹೋಗಿ ನೆಲಸಿದನು.

ಬೊಪ್ಪಗೌಡನಿಂದ ಹನ್ನೆರಡು ಅಂಕಣದ ಮಠ ಎದ್ದಿತು ಉಬ್ಬೆಯ ಒಲೆಯ ಸುತ್ತಲೂ! ಬಡಗ ಬಾಗಿಲ ಮನೆ, ಬೆಡಗಿನ ಚಂದ್ರಶಾಲೆ, ಉರಿಗದ್ದಿಗೆ ಗಳೆಲ್ಲವೂ ಸಿದ್ಧವಾದವು. 'ಸೋಮವಾರದ ಹೃದಯದಲ್ಲಿ' ಗುರುಮಠವನ್ನು ಪ್ರವೇಶಿಸಿ ಉರಿ ಗದ್ದುಗೆಯಲ್ಲಿ ಮೂರ್ತಮಾಡಿದರು.

ನಾಡು ನಾಡನ್ನೆಲ್ಲ ನೋಡಿ, ಈ ನೆಲೆಯನ್ನರಸಿ ಬಂದರೆ ಧರೆಗೆ ದೊಡ್ಡ ವರು, ಮಂಟೇಲಿಂಗಯ್ಯನವರು ! ಕಾಡ ಅಂಕನಹಳ್ಳಿಯನ್ನು ಅವರು ಒಪ್ಪಿ ಕೊಂಡರು. ಒಪ್ಪಿಕೊಂಡ ಪುರವೇ ಬೊಪ್ಪಗೌಡನಪುರ........ಮಂಟೇಸ್ವಾಮಿ ಯವರ ಸುಂದರ ತಪೋಭೂಮಿ....

* * * *

ಮಠವಾಯಿತು, ಮಾಳಿಗೆಯಾಯಿತು. ಇನ್ನು ತಮಗೆ ನೀಡಿದ ಮಾತನ್ನು ಉಳಿಸಿಕೊಳ್ಳಲು ಗುರುಪಾದವನ್ನು ಹಿಡಿದರು ಸಖರಾಯಪಟ್ಟಣದ ರಾಜ ಕುಮಾರರು. 'ಮರ್ತ್ಯಲೋಕದಲ್ಲಿ ಕುಂದೂರು ಬೆಟ್ಟ ಚಿನ್ನಮಾಡಿ, ಬಸವನ ಬೆಟ್ಟ ಬೆಳ್ಳಿಮಾಡಿ' ಕೊಡುವ ತಮ್ಮ ಮಾತನ್ನು ಉಳಿಸಲೆಂದೇ–

ಬಾರಿಕಂಡಾಯ ಹೆಗಲಲ್ಲಿ ಹೊತ್ತು
ಮಾರಳ್ಳಿ ತಳಕೆ ದಯಮಾಡುತಾರ
ಕುಂದೂರು ಬೆಟ್ಟಕ್ಕೆ ಬಂದು
ಅರೆಕಲ್ಲು ಚಚ್ಚಿದರು
ಇಟ್ಟಿಗೆ ಉದ್ದಕ್ಕೆ ಅಪರಂಜಿ ಪಾಳು ಎದ್ದು ಬತ್ತು
ಊಟ ಮಾಡಿರಯ್ಯ ಹೆಚ್ಚಿನ ಶರಣರೇ....
ಸಿದ್ದಯ್ಯಸ್ವಾಮಿ ಬನ್ನಿ !

ಸ್ವಾಮಿಗಳಿಬ್ಬರೂ ಬೆರಗಾದರು ಗುರುವಿನ ಮಹಿಮೆಗೆ! ಮುಂದೆ ಕಲಿ ಹೆಚ್ಚಲಿದೆ. ಚಿನ್ನ ಬೆಳ್ಳಿಯ ಆಸೆಗೆ ನರರು ಕಚ್ಚಾಡುವ ಈ ವಸ್ತುವೇಕೆ! ಗುರು

ವನ್ನು ಪೂಜಿಸಿ, ಪುಣ್ಯ ಭಾಜನರಾಗುವುದೇ ತಮ್ಮ ಗುರಿಯೆನಿಸಿ ಮತ್ತೆ ಬೇಡಿದರು—

ಸೋಮವಾರ ಶುಕ್ರವಾರ ನಮಗೆ
ನಿಮ್ಮ ಮುಟ್ಟಿ ಪೂಜೆ ಮಾಡುವುದಕೆ
ಹೂ ತಂದುಕೊಡುವ ಶಿಶುಮಗನ
ಪಡದುಕೊಡಿ ನಮ್ಮ ಗುರುವೆ
ಸೊಪ್ಪು ಸುಂಡೇಕಾಯಿ ತಂದುಕೊಡುವ ಮಗನ
ತಂದುಕೊಡಿ
ಸಿದ್ದಯ್ಯಸ್ವಾಮಿ ಬನ್ನಿ

ಕುಂದೂರು ಬೆಟ್ಟದಿಂದ ಹಿರಿಯ ಗುರು ರಾಜೇಂದ್ರಸ್ವಾಮಿಗಳು, ರಾಜ ಪಟ್ಟದ ವೀರಭದ್ರ ಸ್ವಾಮಿಗಳು ಮಠಕ್ಕೆ ಮರಳಿದ ಮೇಲೆ ಶಿಶು ಮಗನನ್ನು ಅಂತರಂಗದಲ್ಲಿ ಅರಸಿ........

ಎಲ್ಲಿಗೆ ಗ್ಯಾನ ದಿಟ್ಟಿ ಮಡುಗುತಾರೆ ನಮ್ಮ ಗುರುವು
ನಿಡುಗಟ್ಟಿ ಗ್ರಾಮಕ್ಕೆ ದಿರುಗು ದಿಟ್ಟಿ ಮಡುಗುತಾರೆ
ಸಿದ್ದಯ್ಯ ಸ್ವಾಮಿ ಬನ್ನಿ

ಕಲ್ಯಾಣದ ಕಡೆಯ ಬಾಗಿಲಲ್ಲಿದ್ದು, ಗುರುವಿನ ಹರಕೆ ಹೊತ್ತು ಬಾಚಿ ಬಸವಯ್ಯ ಇಲ್ಲಿ ಕೆಂಪಣ್ಣನಾಗಿ ಜನಿಸಿದ್ದಾನೆ. ಲಿಂಗವಂತ ಪಾಂಚಾಳರ ಮುದ್ದೋಜಿ ಲಿಂಗಮ್ಮನವರಿಗೆ ಆರು ಮಂದಿ ಗಂಡುಮಕ್ಕಳು, ಏಳು ಮಂದಿ ಜೀತಗಾರರು ಅವರಿಗೆ—

ಹರಬಿಯ ಹಣವಂತೆ ಮೊರದ ಬಂಗಾರವಂತೆ
ಏಳು ಕೊಪ್ಪರಿಗೆ ದಿವ್ಯ ಭಾಗ್ಯ ಸಾಲುಗುಳಿ ಧಾನ್ಯವಂತೆ
ಏಳು ದೊಡ್ಡಿ ದನಗಳಂತೆ ಏಳು ಸೊಲಿಗೆ ಕುರಿಗಳಂತೆ
ಏಳು ದೊಡ್ಡಿ ಸರಳಮ್ಮೆಯಂತೆ

ಹಟ್ಟಿಗೆ ಅಪರಂಜಿಯು ಕೆತ್ತನೆಯ ಕಲ್ಲನ್ನೆ ಹದ್ದಿದ್ದಾರೆ, ಅಪರಂಜಿಯ ಕಂಬಸಾಲು, ಕಾಲು ತೊಳೆಯಲೂ ಅಪರಂಜಿಯ ಕೆತ್ತನೆಯ ಕಲ್ಲೆ! ಅರಮನೆಯ ಮೇಲೆ ಹೊಂಗಳಸ, ಎಂಜಲುನೀರು ಸುರಿಯಲೂ ಅಪರಂಜಿಯ 'ರಂಜಳಿಗೆ'

ಹಾಸುವುದೂ ಅಪರಂಜಿ, ಹೊದೆಯುವುದೂ ಅಪರಂಜಿ. ಮುದ್ದೋಜನಿಗಾದರೊ ಏಳೂರು ಗುರಿಕಾರಿಕೆ, ಪಾರುಪತ್ತೆ. ಮಾರಳ್ಳಿಯ ಊರ ಸುತ್ತ ಆರು ಮೈಲಿ ಜಹಗೀರಿ. ಉಂಬಳಿ, ತನ್ನ ಐದು ಮಂದಿ ಹಿರಿಯ ಮಕ್ಕಳಿಗೆ ಕಬ್ಬಿಣದ ಉದ್ಯೋಗವಾದರೆ ಕಿರಿಯವನು ಕೆಂಪಣ್ಣನಿಗೆ ಚಿನ್ನದ ಉದ್ಯೋಗ.

ಮುದ್ದೋಜನ ಮಗ ಧೀರಮರಿ ಕೆಂಪಣ್ಣನ
ಶಿಷ್ಯನ ಮಾಡಿಕೊಳ್ಳಬೇಕು-ಅನ್ನೋದಾಗಿ
ನಮ್ಮ ಸ್ವಾಮಿ ನಿಡುಗಟ್ಟಕೆ ದಯ ಅನ್ನೋದಾಗಿ
ಮಾಡುತವರೆ ಸಿದ್ದಯ್ಯs ಸ್ವಾಮಿ ಬನ್ನಿ

ತಮ್ಮ ಹರಕೆಯಿಂದಲೇ ಹುಟ್ಟಿದ ಶಿಶು ಕೆಂಪಣ್ಣ. ಅವನು ಹುಟ್ಟಿದ ಮೇಲೆ ಅಷ್ಟೆಲ್ಲ ಭೋಗಭಾಗ್ಯವನ್ನು ಅವರು ಕಂಡವರು. ಮುದ್ದೋಜನ ಅರಮನೆಯ ಮುಂದೆ ಬಂದು ನಿಂತ ಧರ್ಮಗುರು 'ಬಾರಿ ಡಂಗೂರ ಕೂಟು ಮಾಡಿಕೊಂಡು' ಹೊಡೆದು–ಸಾರಿದರು :

"ಭಿಕ್ಷವನ್ನು ನೀಡು ತಾಯಿ ಭಕ್ತಿಯುಳ್ಳ
ಲಿಂಗಮ್ಮ ತಾಯಿ !
ದಾನವ ನೀಡಿರಮ್ಮ ಧ್ಯಾನವುಳ್ಳ
ಲಿಂಗಮ್ಮ ತಾಯಿ !"

ಭಿಕ್ಷೆಯ ದನಿಯನ್ನು ಕೇಳಿ ತೂಗು ಮಂಚದಿಂದ ಮೇಲೆದ್ದಳು ಲಿಂಗಮ್ಮ ತಾಯಿ. ಮುತ್ತಿನ ಕಟ್ಟಿನ ಬೆತ್ತದ ಮೊರದಲ್ಲಿ ಮುತ್ತುರತ್ನಗಳನ್ನು ತುಂಬಿ ಕೊಂಡು ಹೊರಗೆ ಬಂದ ಬೆರಗಾದಳು.

"ಶಿವ ಶಿವ ಯಾವ ಯತಿಗಳೊ ಕಾಣೆ
ಮಠಪತಿಗಳೊ ಕಾಣೆ-ಋಷಿಗಳೊ ಕಾಣೆ
ಮಹಾತ್ಮರೊ ಕಾಣೆ–ನಮ್ಮಪ್ಪನ ಮನೆಯ ಗುರು
ಪಾವನ ಮೂರ್ತಿಯವರೊ ಕಾಣೆ !
ಏಳು ಕೋಟಿ ಸೂರ್ಯ ಪ್ರಕಾಶದೊಳಗೆ ಸ್ವಾಮಿ
ಭಿಕ್ಷವ ಸಾರುತಾರೆ........
ಸಿದ್ಧಯ್ಯ ಸ್ವಾಮಿ ಬನ್ನಿ...."

''ಮುತ್ತು ರತ್ನ ದಾನಕೆ ಬರಲಿಲ್ಲ
ಲಿಂಗಮ್ಮನವರೇ !
ನಿನ್ನ ಅರಮನೆಯ ಮುತ್ತು ರತ್ನ
ನನ್ನ ಮಠದ ಮುಗ್ಗುಲ ಜೋಳವಮ್ಮ"
''ಇನ್ನೇನ ಒಪ್ಪಿ ಬಂದ್ರಿ ನೆಚ್ಚಿನ
ಜಂಗಮಯ್ಯ !"

ಪಟ್ಟೆಸೀರೆ, ಪಟ್ಟೆ ಕುಪ್ಪಸದ ಲಿಂಗಮ್ಮ ತಂದ ಭಿಕ್ಷೆ ಗುರುವಿಗೆ ಬೇಡ ವಾಯಿತು.

"ಅಮ್ಮ ನಿನ್ನ ಧೀರಮರಿ ಕೆಂಪಣ್ಣ, ಪ್ರೀತಿಯಾದ ಚಿಕ್ಕಮಗನಿಗೋಸ್ಕರ ಬಂದಿದ್ದೀನಿ....ನೀವು ಸತಿ ಪತೀರು ಒಂದೇ ದೃಢದಲ್ಲಿ ಒಂದೇ ಮನಸ್ಸಿನಲ್ಲಿ ನಿಮ್ಮ ಮಗನ ಎತ್ತಿ ನಮ್ಮ ನಾಕು ಪಾದ್ದ ಜೋಳಿಗೆಗೆ ದಾನ ಕೊಟ್ಟುಬಿಡಿ....ನಿಮ್ಮ ಮಗನಲ್ಲದೆ ನನ್ನ ಮಗನ ಮಾಡಿ ಕೊಟ್ಟುಬಿಡಿ....ಈಗ ಬದುಕಾಡುವಂಥ ಸಿರಿ ಸಂಪತ್ತಿನ ಮೇಲೆ ಎರಡರಷ್ಟು ಭಾಗ್ಯವ ಕೊಡುತೀನಿ!"

ಗುರುವಿನ ಮಾತಿಗೆ ಲಿಂಗಮ್ಮ ತಾಯಿ ಬೆಚ್ಚಿದಳು. ಮನಸ್ಸನ್ನು ಸಿಟ್ಟು ಮೆಟ್ಟಿ ನಿಂತಿತು—

"ನೀ ಎತ್ತಲವನು ಜಂಗಮಯ್ಯ, ಯಾವ ನಾಡಿನವನು? ನನ್ನ ಹಟ್ಟಿ ಬಿಟ್ಟು ಆಚೆಗೆ ಹೋಗು ಹುಚ್ಚು ಕಾಡು ಪರದೇಶಿ! ನನ್ನ ಐದು ಜನ ಗಂಡು ಮಕ್ಕಳು ಕಂಡರೆ ದೊಡ್ಡ ಬಾಚಿ ತಗಂಡು ದಡ್ಡ ದಡ್ಡನ ತರೀತರೆ. ಇಕ್ಕಳದಲ್ಲಿ ಹಿಡಿದು ರಾವುಗೋಲು ಹೊಡಿತಾರೆ, ಮೂಡು ಗಟ್ಟು – ಕಟ್ಟುತಾರೆ, ಅಡ್ಡಬರೆ ಬರೀತರೆ....ಎಳೆ ಕೆಂಪಣ್ಣನ ಕೇಳೊ ಶಕ್ತಿಯುಂಟಾಯಿತೆ!"

ಸಿಡಿಮಿಡಿಗೊಂಡು ಒಳಗೆ ನಡೆದರೂ ಗುರು ಅಲುಗಲಿಲ್ಲ. ಮುದ್ದೋಜನ ಬಳಿಗೂ ದೂರು ಹೋಯಿತು. ದೊಡ್ಡ ಕುಲುಮೆಯ ಬಳಿ ತಾನು ಸಿಡಿದು ಗುಡುಗಿದನು.

"ಹಿಟ್ಟು ಬೆಲ್ಲವಾಗಿತ್ತು, ಅಂಬಲಿ ಪಾಯಸವಾಗಿತ್ತು. ಜೋಪಡಿ ಅರಮನೆ ಅಸ್ಥಾನವಾಯಿತು. ಕೆಂಪಣ್ಣ ಹುಟ್ಟಿದ ಗಳಿಗೆ ಬೇಕಾದಷ್ಟು ಭಾಗ್ಯ ಬಂತು! ಭಿಕ್ಷಕೆ ಬಂದವನು ಬಿಸಿ ಹಿಟ್ಟು ಕೇಳಿದಂಗೆ ಭಾಗ್ಯದ ಕೆಂಪಣ್ಣನ ಕೇಳಿದನೆ! ಹನ್ನೆರಡು ಜನ ಕಾಲಾಳು ಬಿಟ್ಟು ಕತ್ತಿನ ಮೇಲ ಗುದ್ದಿಸಿ ಆಚೆಗೆ ಬಿಡು!"

ಗರ್ವದ ನುಡಿ ಧರ್ಮಗುರುವಿಗೂ ಅರಿವಾಯಿತು. "ನಾವು ಕೊಟ್ಟ ಮಗನ ಕೊಡದೆ, ತಳ್ಳಿಸಿಕೊಂಡು ಹೋಗಬೇಕೆ !" ಅಲ್ಲಿ ನಿಲ್ಲದೆ ಕೆಂಪಣ್ಣನ ಗುರುಭಕ್ತಿಯನ್ನು ಕಾಣಲು ಅವನ ಕುಲುಮೆಯ ಕಡೆ ಬಂದರು. ಎಳೆಯ ಕೆಂಪಣ್ಣ ಹನ್ನೆರಡು ಆಳ ನಡುವೆ ಚಿನ್ನದ ಚಡಾವು ಮೆಟ್ಟಿಕೊಂಡು ತೂಗು ಮಂಚದ ಮೇಲೆ ತೂಗುತ್ತ ಬಾಗುತ್ತ ಕುಳಿತಿರುವಾಗ-ಭಿಕ್ಷೆ ಸಾರಿದರು ಧರ್ಮಗುರು. ಕೆಂಪಣ್ಣ ಮೂರು ಗಳಿಗೆ ತಲೆ ಎತ್ತಲಿಲ್ಲ.

"ಇಷ್ಟಾರ್ಥವಾಗಲಯ್ಯ ಗಟ್ಟಿವಾಳ ಪ್ರಭುವಿಗೆ
ರಕ್ಷಣವಾಗಲಿ ಸಿಟ್ಟಿಗೆ ಸಂಗಯ್ಯನಿಗೆ"

ಮತ್ತೆ ದನಿಯಾಡಿದಾಗ, ತಲೆಯೆತ್ತಿ ನೋಡಿದ ಕೆಂಪಣ್ಣ ನಸುನಕ್ಕ !

"ಕಬ್ಬಿಣದ ಅಂಗಡೀಲಿ ಸೋಣವಿಗಿನ್ನೇನಾಸೆ
ಕೇರಿ ಮನೆಯ ಮೇಲೆ ರಾಗಿ ಬೇಡೋಕೆ ಹೋಗೋ"

ಉದ್ಧಟನಾಗಿ ನುಡಿವ 'ಧೀರಮರಿ'ಯನ್ನು ಕಂಡ ಗುರು ಮತ್ತೆ ನುಡಿದರು—

"ಬಹಳ ದೂರದಿಂದ ಬಂದಿದ್ದೀನಿ....ಮುಪ್ಪಿನ ಕಾಲ, ಕಣ್ಣು ಕಾಣೋದಿಲ್ಲ, ಕಿವಿ ಕೇಳೋದಿಲ್ಲ....ಹೊತ್ತು ಹೊತ್ತಿಗೆ ಭಂಗಿ ಫಲಹಾರ ಮಾಡಬೇಕು.... ಬೆಂಕಿ ಕೆಂಡ ತಂದು ದಂಡೆಗೆ ಕೊಡು ಮಗನೆ ! ಗೋಡೆ ಬೆಣ್ಣೆಯಲ್ಲಿ ಮಡಗಿ, ಬಾಕಿ ಚಕ್ಕೇಲಿ ಇರಿಸಿ ಕೊಡು !"

ಕೆಂಪಣ್ಣನ ಕೋಪದ ಕಣ್ಣು ಕಿಡಿಕಾರಿತು. ಕಿಡಿನುಡಿಗಳನ್ನಾಡುತ್ತಲೇ ಇಕ್ಕಳದಲ್ಲಿ ಕೆಂಡವನ್ನು ತಂದು ಅರ್ಭಟಿಸಿದನು--

"ಹಿಡಿಯೊ ನಿನ್ನ ಅಂಗಯ್ಯ !"

ಧರೆಗೆ ದೊಡ್ಡವರು 'ಹರ ಹರ ಶಿವ ಶಿವ' ಎಂದು ಕೆಂಡವನ್ನು ಬರಿಗೈಯಲ್ಲೇ ಸ್ವೀಕರಿಸಿದರು. ಕೆಂದಾರೆಯಾಗಿ ಅವರ ಕೈಯಲ್ಲಿ ಕೆಂಡ ಅರಳಿ ಮೃದುವಾಯಿತು !

"ಇದೇ ಬೆಂಕಿ ಕೆಂಡದಲ್ಲಿ ಅಜ್ಜಿಸಿ ಮುಳುಗಿಸಿ ತೇಲಿಸದೇ ಹೋದರೆ, ಮುಳ್ಳು ಫಲಾರ, ಕಳ್ಳಿ ಫಲಾರ, ಮಾಡಿಸಿ, ಹುಚ್ಚು ಬೆಪ್ಪ ತರಿಸಿ, ಹೆಚ್ಚಿದ ಹಲಗೂರಿಗೆ ಕಳಿಸುತೀನಿ ಮೂರು ಮುಕ್ಕಾಲು ಗಳಿಗೆಯೊಳಗೆ ರಾಗಿ ಬೇಡೋ ದಾಸನ ಮಾಡ್ತೀನಿ...."

ಒಬ್ಬೊಬ್ಬರ 'ದೃಢ'ವನ್ನೂ ಪರಿಕಿಸಿ ಮಾರಳ್ಳಿಯ ಗೊಂಬೆ ಚಾವಡಿಗೆ ಬಂದು ಕುಳಿತರು ಧರೆಗೆ ದೊಡ್ಡವರು, 'ಕುಂಡುಮಾರಿ'ಯನ್ನು ಕರೆದು ಮುದ್ದೋಜನ ಅರಮನೆಗೆ ಕಳಿಸಿದರು. 'ಎಂಟು ದಿನದಲ್ಲಿ ಹಟ್ಟಿ ಹಾಳಾಗಿ, ಕೊಟ್ಟಿಗೆ ಬರಿದಾಗಬೇಕು' ಎನ್ನುವ ನುಡಿಗೆ ಬೆದರಿದಳು ಮಾರಿ. ಧರ್ಮಗುರು ವಿನ ಆಜ್ಞೆ ! ಮಾರಿ ನುಗ್ಗಿದ ಮನೆ ಉಳಿಯಲಿಲ್ಲ. ಜನ ಉಳಿಯಲಿಲ್ಲ. ಅವರು ಹಚ್ಚಿದ ಕಿಚ್ಚಿನಲ್ಲಿ ಅವರೇ ಬಿದ್ದು ಅಳಿದರು.

ಹಟ್ಟಿ ಹಾಳಾಯಿತು, ಕೊಟ್ಟಿಗೆ ಬರಿದಾಯಿತು
ಹೊನ್ನು ಚಿನ್ನವೆಲ್ಲ ಮಣ್ಣಾಗಿ ಹೋಯಿತು
ಎಳು ಗುಳಿ ದವಸ ಅಣ್ಣೆಬೀಜವಾಯಿತು
ಐದುಮಂದಿ ಮಕ್ಕಳು ಊರ ಮುಂದೆ
    ಹುಟ್ಟುಗಲ್ಲಾದರು

ದನ ಕುರಿಯೆಲ್ಲವೂ ವಿಚಿತ್ರರೋಗದಿಂದ ಸತ್ತವು. ಮುದ್ದೋಜ, ಲಿಂಗಮ್ಮ ಕೊರಗಿನಲ್ಲಿ ಕೊನೆಯುಸಿರೆಳೆದರು. ಕೆಂಪಣ್ಣ ಮಾತ್ರ 'ಹುಚ್ಚು ಬೆಪ್ಪ' ಒಡಿದವನಾಗಿ ಊರೂರು ಸುತ್ತಿದನು. ಕಳ್ಳಿಯನ್ನು ತಿಂದನು. ಮುಳ್ಳನ್ನೇ ಮೆದ್ದನು. ಅಲೆದಲೆದು ಕುಂದೂರು ಬೆಟ್ಟದ ಹಾದಿ ಹಿಡಿದನು, ಗುರುವನ್ನೇ ಹಿಂಬಾಲಿಸುತ್ತ.

ನಮ್ಮ ಧರೆಗೆ ದೊಡ್ಡವರು ಮುಂದುಗಡೆ
ಕೆಂಪಣ್ಣ ಹಿಂದುಗಡೆ
ನಮ್ಮ ಧರೆಗೆ ದೊಡ್ಡೋರಿಗೆ ಕಲ್ಲೇಲಿ ಹೊಡಿತಾನೆ
ಅವರಿಗಿಟ್ಟಿಟ್ಟ ಕಲ್ಲೆ ಮಲ್ಲಿಗೆ ಹೂವೆ ಆಗುತಾವೆ
ಸಿದ್ದಯ್ಯ ಶಿವನೆ ಬನ್ನಿ

ಕುಂದೂರು ಬೆಟ್ಟದಲ್ಲಿ ಕೆಂಪಣ್ಣ ಈದ ಹುಲಿಯ ಜೊತೆಯಲ್ಲಿ ಸರಸವಾಡುವಾಗ, ಗುರು ಕೈಹಿಡಿದರು. ಕನಿಕರದಿಂದ ಕೇಳಿದರು :

"ಈಗಲಾದರೂ ನಮ್ಮ ಶಿಷ್ಯ ಆದೀಯ ಕೆಂಪಣ್ಣ ?"

"ಸ್ವಾಮಿ ಶಿಷ್ಯನಾಗತೀನಿ ನನಗೇನು ಕೊಡುತೀರಿ !"

"ಹರಕು ಜೋಳಿಗೆ ಕೊಡುತೀನಿ, ಮುರುಕು ಬೆತ್ತ ಕೊಡುತೀನಿ, ಆರು

ಮನೆ ಕ್ವಾರಣ್ಯಕೆ ಹೋಗಬೇಕು. ನಿನಗೆ ಮೂರು ಮನೇಲಿ ಮುಂದಕ್ಕೆ ಹೋಗು ಅನ್ನಬೇಕು. ಮೂರು ಮನೇಲಿ ಕೊಟ್ಟ ಭಿಕ್ಷ ನಿನ್ನ ಮುತ್ತಿನ ಜೋಳಿಗೆ ತುಂಬಿ ಭೂಮಿಗೆ ಸುರಿದುಹೋಗಬೇಕು." ಗುರು ಕೊಟ್ಟ ಭಾಗ್ಯಕ್ಕೆ ಕೆಂಪಣ್ಣ ತಲೆದೂಗಿದ. ಇಷ್ಟೆಲ್ಲ ಮಾಡಿಯೂ ಎಡಬಿಡದೆ ಗುರುವಿನ ಸ್ತೋತ್ರ ಮಾಡಿದರೇನು ದೊರೆಯುವುದು ಎಂದ ತೇಲುಗಣ್ಣಿನಲ್ಲಿ. ಮಂಟೇಸ್ವಾಮಿ ಯವರು ತುಸು ಕೋಪದಿಂದಲೇ ನುಡಿದರು—

"ಮಳವಳ್ಳಿಯಿಂದ ಹನ್ನೆರಡು ಮಾರುದ್ದ ಸೂಲ್ಬಗ್ಗ ತರಿಸ್ತೀನಿ. ನಿನ್ನ ಕೈಕಾಲು ಪೀಚಂಡಿ ಕಟ್ಟು ಕಟ್ಟಿಸ್ತೀನಿ. ಏಳು ಹಂತಸ್ತಿನ ಕಾಳಿಂಗನ ಗವಿಗೆ ಎತ್ತಿ ಹಾಕಿಸ್ತೀನಿ...."

"ಏಳು ಹಂತಸ್ತಿನ ಕಾಳಿಂಗನ ಗವಿಯಲ್ಲಿ ಕುಂತಗಂಡು ಎಡಬಿಡದೆ ನಿಮ್ಮ ಸ್ತೋತ್ರ ಮಾಡಿದರೆ ಏನು ಕೊಡುವಿರಿ ?"

ಶಿಷ್ಯನ ನಿಷ್ಠೆಗೆ ಗುರು ಮೆಚ್ಚಿದರು. ಇನ್ನೇನು ಕೆಂಪಣ್ಣ ತಮ್ಮವನೇ ಆದನೆಂದು ಬಗೆದರು—

"ಏಳು ಪಂತಸ್ತಿನ ಪಾತಾಳ ಗವಿಯಲ್ಲಿ ಎಡಬಿಡದೆ
ನನ್ನ ಸ್ತೋತ್ರವ ಮಾಡಿದರೆ ನನ್ನ ಸಮಾನ ಮಾಡ್ತೀನಿ !"

ತಮ್ಮ ಶಕ್ತಿಯೆಲ್ಲವನ್ನೂ ಕೆಂಪಣ್ಣನಿಗೆ ನೀಡಲು ಬಯಸಿದ ಗುರು ಬಿರುಸಾದ ಉತ್ತರವನ್ನೇ ಪಡೆದರು. ಗಹಗಹಿಸಿ, ಕುಂದೂರು ಬೆಟ್ಟ ಅಲುಗುವಂತೆ ನಕ್ಕ ಕೆಂಪಣ್ಣ—

ನನ್ನ ಸಮಾನ ಮಾಡ್ತೀನಿ ಎಂದರಲ್ಲ....
ದೊರೆತನ ಏನಾರ ಮಾಡೀರಾ....
ನಿಮ್ಮಂಗೆ ನನ್ನೂ ತಿರುಕನ ಮಾಡುತಿರಯ್ಯ
ಸಿದ್ಧಯ್ಯಸ್ವಾಮಿ ಬನ್ನಿ....

ಧರೆಗೆ ದೊಡ್ಡವರು ಮುನಿದರು. ಅವರ ಕಣ್ಣು ಕೆಂಪೇರಿತು. ಸಿಟ್ಟು ಹೆಡೆಯಾಡಿತು. 'ಇನ್ನೂ ಕೆಂಪಣ್ಣನ ಹಮ್ಮು ಹರಿದಿಲ್ಲ' ಎಂದು ಮುಂದೆ ಹಾರಿ, ಅವನ ರಟ್ಟೆಯನ್ನು ಹಿಡಿದು ದರದರನೆ 'ಕಾಳಿಂಗನ ಗವಿ' ಯತ್ತ ಎಳೆ ತಂದರು.

ಕಾಳಿಂಗನ ಗವಿಯಲ್ಲಾದರೋ ಏಳು ಮಂದಿ ಋಷಿಗಳು, ಹುಣಿಸೆ ಗಾತ್ರದ ಕೆಂಡದಲ್ಲಿ ಭಂಗಿ ಫಲಹಾರ ಮಾಡುತ್ತಿದ್ದ ಅವರು ಗವಿಯನ್ನು ಬಿಟ್ಟುಕೊಡಲಿಲ್ಲ. ಅವರು ಕುಳಿತು ಸವಾರಿ ಮಾಡುವ ಏಳು ಹೆಜ್ಜೆ 'ಬರಗ' ನ ಮೇಲೆ ಕೆಂಪಣ್ಣ ಕುಳಿತರೆ ತಾವು ಬಿಡುವುದಾಗಿ ನುಡಿದರು.

ಏಳು ಹೆಜ್ಜೆಯ ಕರಿಯ ಹುಲಿ, ಭೂಮಿಗೂ ಆಕಾಶಕ್ಕೂ ಹಾರುತ್ತ ಬಂದಿತು.

ಒಂದು ಹಾರ ಹಾರುತದೆ
ಒಂದು ಗಡುಗ ಗುಡುಗುತದೆ
ಪಂಜದಲ್ಲಿ ಕೆಂಧೂಳ
ಗಗನಕ್ಕೀಡಾಡುತದೆ
ಬಾಳರೂಡಿ ಕ್ವಾಪದಲ್ಲಿ
ಬಂದಿತಲ್ಲೊ ಕರಿಯ ಬರಗ
ಸಿದ್ಧಯ್ಯ ಶಿವನೇ ಬನ್ನಿ

ಧರೆಗೆ ದೊಡ್ಡವರು ಮೈಮುಟ್ಟಿದಾಗ ಬರಗ ಶಾಂತವಾಯಿತು. ಕಡಿ ಪಾಣ ಹಾಕಿ 'ಉರಸಂಗಿ ಕೊರಡ'ನ್ನು ಬಾಲ ಕೆಂಪಣ್ಣನಿಗೆ ನೀಡಿ ಅದರ ಮೇಲೆ ಎತ್ತಿ ಕೂರಿಸಿದಾಗ, ಆ ಕೊರಡಿನ ಏಟಿಗೆ ಉರಗ ತತ್ತರಿಸಿತು. ಅದರ ಹೊಟ್ಟೆಯ ಕರುಳು ಹೊಗೆ ಎದ್ದಿತು. ಬೆನ್ನ ಚರ್ಮ ಹರಿದು ಹೋಯಿತು. ಕೆಳಗೆ ಭೂಮಿಯನ್ನು ಬಿಟ್ಟು ಮೇಲೆ ಆಕಾಶಕ್ಕೆ ಹಾರಿತು. ಚಂದ್ರಮಂಡಲ, ಸೂರ್ಯಮಂಡಲಗಳನ್ನು ಸುತ್ತಿ ಬಂದಿತು.

ಋಷಿಗಳು ಶರಣಾದರು. ಗವಿಯನ್ನು ತೊರೆದು ಹೊರಟುಹೋದರು. ಕೆಂಪಣ್ಣನನ್ನು ಗವಿಗೆ ತಳ್ಳಿ ದೊಡ್ಡ ಗುಂಡೊಂದನ್ನು ಅದರ ಬಾಯಿಗೆ ಚಾಚಿ, ರಾಜ ಬೊಪ್ಪಗೌಡನಪುರಕೆ ಮರಳಿದರು ಧರ್ಮಗುರು—

ರಾಯ ಚಂದ್ರಶಾಲೆಯಲ್ಲಿ
ಹೋಗಿ ಮೂರ್ತ ಮಾಡುತಾನೆ
—ಸಿದ್ಧಯ್ಯ ಶಿವನೇ ಬನ್ನಿ

——

# ಮಂಟೇ ಲಿಂಗಯ್ಯ ಮದ್ದಾನೆ

ಹಾವನೆ ಮೆಟ್ಟಿಕೊಂಡು ಸ್ವಾಮಿಯ ನೆನೆದ್ವರೆ
ಹಾವು ಅಂಬಾಗಿ ಹರಿದ್ವಾವು ಚಿಕ್ಕಲ್ಲೂರ
ನೀಲಿ ಸಿದ್ದಯ್ನ ನೆನೆದಾರೆ

ನಡುರಾಜ್ಯ ಮಳವಳ್ಳಿ ಸೀಮೆಯ ಬೊಪ್ಪಗೌಡನಪುರದ ಮಡಿವಳ ಮಾಚಯ್ಯನ ಆವುಗೆಯ ಒಲೆ ಅಪರ ಗದ್ದುಗೆ ; ಸುತ್ತಲು ಮಠಮಾಳಿಗೆ ಚಂದ್ರಶಾಲೆಗಳು. ಕೆಂಪಣ್ಣನನ್ನು ಶಿಷ್ಯನನ್ನಾಗಿ ಪಡೆಯುವ ಹಿರಿಯಾಸೆ.... ಎಂದೋ ಕುಂದೂರು ಬೆಟ್ಟದ ಕಾಳಿಂಗನ ಗವಿಯಲ್ಲಿ ಅವನನ್ನು ಕೂಡಿ ಬಂದ ಗುರುವಿನ ಮನಸ್ಸು ತಳಮಳಗೊಂಡು, ಬಲಮುಗ್ಗುಲಾಗಿ ಮೇಲೆದ್ದರು, ಹನ್ನೆರಡು ವರ್ಷಗಳು ಕಳೆದ ಮರುಗಳಿಗೆ....

'ಒಬ್ಬ ಶಿಷ್ಯನ ನಾನು ಕಾಳಿಂಗನ ಗವಿಗೆ ಕೂಡಿಬಂದೆ
ಹಾವೆ ತಿಂದಿತೊ ಕಾಣೆ
ಗೆಜ್ಜಲೆ ತಿಂದಿತೊ ಕಾಣೆ
ಹೋಗಿ ಕರೆತನ್ನಿರಯ್ಯ ...'

'ತಕ್ಕಾದ ಬಿರುದು ಭಿಕ್ಷದೊಡನೆ ಹಿರಿಯ ಗುರು ರಾಜೇಂದ್ರಸ್ವಾಮಿಯವರು, ಕಿರಿಯ ಗುರು ವೀರಭದ್ರಸ್ವಾಮಿಯವರು, ಮಡಿವಳ ಮಾಚಯ್ಯ ಕುಂದೂರು ಬೆಟ್ಟದತ್ತ ನಡೆದುಬಂದರು. ಎಳೆಯ ಮಾವಿನ ಮರವೊಂದರ ಕೆಳಗೆ ನಿಂತು ಕೂಗಿದರು ಆ ನಿರ್ಜನ ನೀರವಪ್ರದೇಶದಲ್ಲಿ....

''ಕೆಂಪಣ್ಣಾ....ಕೆಂಪಣ್ಣಾ''

ಬೆಟ್ಟ ಬಯಲಲ್ಲಿ ಬಾಸಿರೆ ಬೆನ್ನೊಡ್ಡಿ ನಿಂತ ಕುಂದೂರ ಬೆಟ್ಟ ಮರುದನಿಗೊಟ್ಟಿತು. ಕೆಂಪಣ್ಣ ಮಾತಾಡಲಿಲ್ಲ. ಹನ್ನೆರಡು ವರ್ಷಗಳ ಹಿಂದೆ ಗವಿಯನ್ನು ಸೇರಿದವನು ಏಳದಿರುವನೆ ಧರ್ಮಗುರು ಧರೆಗೆ ದೊಡ್ಡವರ ಮಹಿಮೆಯಿಂದ, ಕೂಗುವ ಸೊಲ್ಲನ್ನು ಬದಲಿಸಿದರು.

ಧರೆಗೆ ದೊಡ್ಡೋರ ಮಠದ ನಮ್ಮ ದಳವಾಯಿ
ಘನ ನೀಲಿ ಸಿದ್ದಯ್ಯ ಬನ್ನಿ....
ಕೆಂಡಗಣ್ಣ ರಾಚರಾಯ್ರ ವಜ್ಜರದ ಘನನೀಲಿ
ಸಿದ್ಧಯ್ಯ ಸ್ವಾಮಿ ಬನ್ನಿ....
ತೋಪಿನ ದೊಡ್ಡಮ್ಮ ತಾಯ
ಪಟ್ಟದಾನೆ ದಳವಾಯಿ
ಸಿದ್ಧಯ್ಯ ಸ್ವಾಮಿ ಬನ್ನಿ....
ಮಂಟೆಯ ಲಿಂಗಯ್ನ ಮಸ್ತಿಯ ಮದ್ದಾನೆ
ಸಿದ್ದಯ್ಯ ಶಿವನೆ ಬನ್ನಿ...

ಎಲ್ಲಿಯೋ ಯಾರೋ, ಮಾನವರು ಕೂಗಿದ ಕರೆ ಮಾರ್ಮೊಳಗಿದೆ ಗವಿಯಲ್ಲಿ. ಹನ್ನೆರಡು ವರ್ಷಗಳ ಕತ್ತಲ ಗವಿಯ ಈ ಅಜ್ಞಾತ ನೆಲೆಗೆ ಗುರು ಕರುಣೆ ಈಗ ಹರಿಯಿತೋ !

ಎಡ ಮಗ್ಗುಲಿಂದ ಬಲ ಮಗ್ಗುಲಿಗೆ ಹೊರಳಿದರು ಸಿದ್ದಪ್ಪಾಜಿ ! 'ಅನ್ನವಿಲ್ಲ ಆಹಾರವಿಲ್ಲ, ಕಣ್ಣಿಗೆ ನಿದ್ದರೆ ಇಲ್ಲಿ, ಸಲಿಸಲು ಭಂಗಿ ಫಲಾಹಾರವಿಲ್ಲ....' ಕಠಿಣ ವ್ರತದಲ್ಲಿ, ದೀರ್ಘ ತಪದಲ್ಲಿ ಉಜ್ವಲ ತೇಜಸ್ಸನ್ನು ಪಡೆದ ಮೈ ಮಿಂಚಿತು ಕತ್ತಲಲ್ಲಿ. ಸ್ವಾಮಿಯ ನೆತ್ತಿಯ ಮೇಲೆ ಹನ್ನೆರಡು ಆಳೆತ್ತರದ 'ಮೂಗ್ಬುತ್ತ' ಬೆಳೆದಿದೆ. ಮೂಗಿನ ಮೇಲೆ ಮೂರಾಳೆತ್ತರದ 'ಮೂಗ್ಬುತ್ತ' ಹೆಕ್ಕತ್ತಿನ ಮೇಲೆ ಮತ್ತಿಯ ಮರ ಹುಟ್ಟಿದೆ. ಕಿವಿಯ ಸಂದುಗಳಲ್ಲಿ ಶಕುನದ ಪಕ್ಕಿ ಮರಿ ಮಾಡಿದೆ. ಕಣ್ಣಿನ ರೆಪ್ಪೆಯಲ್ಲಿ ಕಣಜ ಗೂಡು ಕಟ್ಟಿದೆ. ಮೂಗಿನಲ್ಲಿ ಹೆಜ್ಜೇನು ಕಟ್ಟಿದೆ. ನಡು ನಾಲಿಗೆಯಲ್ಲಿ ಚಿಕ್ಕ ಚಿಕ್ಕ ಮರ ಹುಟ್ಟಿವೆ !

ಹತ್ತು ಹಲವು ವಿಚಿತ್ರಗಳ ಮೈಮೇಲೆ ಕಣ್ಣಾಡಿಸಿದ ಆ ದಿವ್ಯಯೋಗಿ ನಸುನಕ್ಕ ತನ್ನ ಸ್ಥಿತಿಯನ್ನೊಮ್ಮೆ ನೆನೆದು,

"ನನ್ನ ಕಂಕುಳ ಸಂದೀಲಿ ಗರುಡಾಳ ಮರಿಮಾಡಿದೆ
ಎದೆ ತೊಕ್ಕೆ ಒಳಗೆ ಹದ್ದು ಮರಿಮಾಡಿದೆ
ಎಡದಲ್ಲಿ ಬಲದಲ್ಲಿ ಕಾಳಿಂಗ ಸರ್ಪ ಮರಿ ಮಾಡಿದೆ
ಹಾವಿನಲ್ಲಿ ಹಾಸಿಗೆ—ನನಗೆ ಚೇಳಿನಲ್ಲಿ ತಲೆದಿಂಬು
ಉಗುರುಗಣ್ಣ ಜಲದ ಪರಿಯಂತ ಇಳಿದಿದೆ

ನೂರೊಂದು ಕಿರಿಜಡೆ ಗವಿತುಂಬ ಅಂಬಾಗಿ ಹರಿದಿದೆ
ನಾ ಹ್ಯಾಗೆ ಎದ್ದು ಬರಲಿ ನನ್ನ ತಂದೆ ಮಂಟೇದ ಸ್ವಾಮಿ"

ಸಿದ್ದಪ್ಪಾಜಿಯವರ ಮನಸ್ಸಿನಲ್ಲಿ ಏನೋ 'ನೀಲಿಗ್ಯಾನ' ಮೂಡಿತು. ಇದ್ದಕ್ಕಿದ್ದಂತೆಯೇ 'ಹೋ' ಎಂದು ಸಿಡಿಲದನಿಯಲ್ಲೊಮ್ಮೆ ವೀರ ಗರ್ಜನೆ ಮಾಡಿದರು. ಆ ಪಾತಾಳ ಗವಿಯಿಂದ ಆರ್ಭಟಿಸಿ ಚಿಮ್ಮಿ ಬಂದ ಧ್ವನಿಗೆ ಕುಂದೂರು ಬೆಟ್ಟ ಹೊಡೆದು ಎರಡು ಸೀಳಾಯಿತು. ಬಾಗಿಲಿಗೆ ಚಾಚಿದ್ದ ಹೆಗ್ಗುಂಡು ದಡದಡನೆ ಉರುಳಿಹೋಯಿತು. ಅಲ್ಲಿದ್ದ 'ಕಾಕನವಿಲು, ಕನ್ನನವಿಲು ಏಕದಾಳಿ ಗೀಜಗ, ಬೋರಿ ಗರವ ಮದ್ದಾನೆ ಹೆದರಿ ಅಪ್ಪಳಿಸಿಹೋದವು.'

ನೆತ್ತಿಯ ಮೇಲಿನ ಹುತ್ತು
ಆಕಾಶಕೆ ಹಾರಿಹೋಯಿತು
ಎಡದ ಬಲದ ಕಾಳಿಂಗ ಅರುಗಾದವು

ಹೊರಗೆ ಕೂಗಿದ ಶರಣ ಮಹಾತ್ಮರಿಗೆ 'ಸಳಿಜರ, ಈ ನಡುಗ ಮಹಾ ನಡುಗ' ಬಂದವು. ಅಲ್ಲಿ ನಿಲ್ಲುವ ಸತ್ವವಡಗಿ, ಬಿರುದು ಬಾವಲಿಗಳನ್ನೆಲ್ಲ ಮಾವಿನ ಮರಕ್ಕೆ ಕಟ್ಟಿ ರಾಜ ಬೊಪ್ಪಣಪುರಕೆ ಓಡೋಡಿಬಂದು ಗುರು ಪಾದಕ್ಕೆ ರಗಿದರು.

ಸಿದ್ದಪ್ಪಾಜಿಯ ಸಿಡಿಲ ಶಕ್ತಿಗೆ ಧರೆಗೆ ದೊಡ್ಡವರ ಎದೆಯಲ್ಲಿ ಅಭಿಮಾನ ಉಕ್ಕಿ ಹರಿಯಿತು. 'ಆರು ಗಳಿಗೆ ಮೂರುಜಾವ'ಕ್ಕೆ ತಮ್ಮ ಶಿಷ್ಯ ತಾನಾಗಿಯೇ ನಡೆದು ಬರುವ 'ಸುಜ್ಞಾನ'ವನ್ನು ಕರುಣಿಸಿದರು.

ಹನ್ನೆರಡು ವರ್ಷ ದೀರ್ಘತಪದಲ್ಲಿ 'ನರರಂಗು ಹೋಗಿ ಸುರರಂಗು ಬಂದ ಸಿದ್ದಪ್ಪಾಜಿ ಗವಿಯಿಂದ ಆಚೆ ಬಂದರು. ಮಾವಿನ ಮರದಲ್ಲಿ ತೂಗಾಡುತ್ತಿದ್ದ 'ಬಿರುದು ಭಿಕ್ಷೆ'ಗಳನ್ನು ಕಂಡು ಗುರುವಿನ ಕಾಣಿಕೆಯೆಂದು ಮುಂದೆ ನಡೆದರು. ಧರೆಗೆ ದೊಡ್ಡವರ ಪಾದಕ್ಕೆ ಮೊದಲ ಶಿಷ್ಯನಾಗಿ ಮೊದಲ ಬಾರಿಗೆ ಅವರನ್ನು ಕಾಣುವ ದಿನ 'ಉಲ್ಪೆ' (ಕಾಣಿಕೆ)ಯನ್ನು ಅರ್ಪಿಸಿಯೆ ಶರಣೆನ್ನುವ ಹಂಬಲ ದಲ್ಲಿ ಯೋಚಿಸಿದರು. ಮಾಗಡಿಯ ಬೇರನ್ನು ಕಿತ್ತು ಹೊರೆಗಟ್ಟಿ ಗುರುವಿಗೆ ಕೊಂಡೊಯ್ಯಲು ಬಂದ ಸಿದ್ದಪ್ಪಾಜಿಯವರು 'ನೀಲಿ ಗ್ಯಾನ'ದಲ್ಲಿ ನೂರೊಂದು ಬಿರುದ ಭಿಕ್ಷ ಧರಿಸಿದರು.

'ಭಾರಿ ಕಂಡಾಯವಂತೆ, ಬಟವೀನ ಕಿರೀಟವಂತೆ ಅಷ್ಟ ಕೊಳದ ಕತ್ತಿಯಂತೆ ಮುಕ್ಕಣ್ಣ ಕುಲಾವಿಯಂತೆ, ಈರಜಾಡಿ, ಇಂಬಿ ಹಣ್ಣು, ಸಾಣೆ ಕಂಡಾಯಗಳು ನವಿಲುಗರಿ ದಗ್ಗೆಯಂತೆ, ಗಜೆ ದಂಡಾಯಿಗಳು, ಹಕ್ಕಿಗೂಡು, ಹಕ್ಕಿಪಾಜಿ, ಹುಲಿ ಚರ್ಮ, ಹುಲ್ಲೆ ಚರ್ಮ ಎಡಪಾದಕ್ಕೆ ಎಳೆಬಾರಿ ಜಂಗು, ಬಲಪಾದಕೆ ನೆಲ್ಲುಪೆಂಡೆ' ಧರಿಸಿ—

'ತೂಗುತಾರೆ ಬಾಗುತಾರೆ ನೀಲಿ ಬಂದೋಲಾಡುತಾರೆ, ನಿದ್ರೆ ಬಂದು ತೂಗುತಾರೆ........'

ಬೆಟ್ಟವನ್ನೆಲ್ಲ ಬಳಸಿ ಬಗೆಬಗೆಯ ಹಾವು ಚೇಳುಗಳನ್ನೆ ಹಿಡಿದರು. 'ಬಿಳಿಯ ಕಬ್ಬಿನ ಜಲ್ಲೆ, ಕರಿಯು ಕಬ್ಬಿನ ಜಲ್ಲೆ ಎಂದು ಬಗೆದು, ಹೊರೆ ಕಟ್ಟಿ ಹೊತ್ತು ತಂದರು. ಬೊಪ್ಪಗೌಡನಪುರದ ಗುರು ಮಠದ ಹೆಬ್ಬಾಗಿಲಿಗೆ, ನೂರೊಂದು ಬಗೆಯ ಹಾವು ಚೇಳನ್ನು ಕಟ್ಟಿನ ಹಾವಿನಲ್ಲಿ ಬಿಗಿದು ಕಟ್ಟಿ ಬಂದು ಶರಣು ಮಾಡುವ ಶಿಷ್ಯನನ್ನು' ಗುರು ಕೇಳಿದರು–

"ನನಗೇನು ಕಾಣಿಕೆ ತಂದಿರುವೆ ?"

ತಂದ ಕಾಣಿಕೆಯನ್ನೆಲ್ಲ ಸಿದ್ದಪ್ಪಾಜಿ ಗುರುಪಾದಕ್ಕೆ ಅರ್ಪಿಸಿದರು. ಕರಿಯ ಕಂಬಳಿ ಗದ್ದುಗೆ ಸಿದ್ಧವಾಗಿತ್ತು ಶಿಷ್ಯನಿಗೆ. ಮಡಿವಳ ಮಾಚಯ್ಯ ಪಂಚ ದೀವಟಿಗೆ ಹಿಡಿದು ನಿಂತಿದ್ದ. ಗುರುವಿನ ಇಚ್ಛೆಯಂತೆ ಕಡೆ ಬಾಗಿಲ ಕಟ್ಟೆಯ ಹತ್ತಾಳುದ್ದ ನೀರಿನಲ್ಲಿ ಜಡೆ ತಿಕ್ಕಿ ಮಿಂದು ಬಂದರು. ಕರಿ ಕಂಬಳಿ ಗದ್ದುಗೆಯ ಮೇಲೆ ಸ್ವಾಮಿ 'ಮೂರ್ತ' ಮಾಡಿದಾಗ—

ಒಂದು ಕಂಡುಗ ಸಾಂಬ್ರಾಣಿ ಬೇಯಿಸಿ
ಕಳಸ ಕನ್ನಡಿ ತಯಾರು ಮಾಡಿ
ಕಪ್ಪಿನ ಬೊಟ್ಟು ಕಾವಿ ಬೊಟ್ಟಿಟ್ಟು
'ಓಂ ನಮಃ ಹರಹರ'
ಎಂದು ಗುರು ಬೋಧನೆ ಉಪದೇಶ ಮಾಡಿ,
ಬೇವಿನ ಕಾಯಿ ಗಾತ್ರದ ಲಾಂಛಾಣ ಧರಿಸಿದರ.

ಗುರು ಪಟ್ಟವಾಯಿತು. 'ಘನಲೀಲೆ ಸಿದ್ಧಯ್ಯ' ಎನ್ನುವ ನಾಮಕರಣವನ್ನೂ ಕರುಣಿಸಿದರು. ಹೊಕ್ಕಳವರೆಗೆ ಹುಲ್ಲೆಯ ಚರ್ಮ ಉಟ್ಟು ಮೈಮೇಲೆ

ಹುಲಿಯ ಚರ್ಮ ಹೊದೆದು, ಪಾದದಲ್ಲಿ ಉಕ್ಕಿನ ಮುಳ್ಳಿನ ಹಾವುಗೆಯನ್ನು ಧರಿಸಿ, ತೋಳಲ್ಲಿ ರುದ್ರಾಕ್ಷಿ ಸರ ಐದು, ಭದ್ರಾಕ್ಷಿಸರವೈದು, ಕೈಯ ಕಂಡಾಯ, ಕುತ್ತಿಗೆಯ ಗಂಡುಗತ್ತರಿ, ಬೆನ್ನ ತ್ರಿಶೂಲದೊಡನೆ ಶೋಭಿಸಿದರು, ಆ ಮಹಾ ಮಹಿಮ ಸಿದ್ದಪ್ಪಾಜಿ.

'ಉರಸಂಗಿ ಕೊರಡು' ಬಲಗೈಗೆ. ಎಡದ ಕೈಯಲ್ಲಿ ಚಾಗಟೆ, ಢಮರುಗ, ಸೂರೊಂದು ಕಿರುಜಡೆ ಜೋಲುವಾಗ ನಿದ್ರೆ ತೂಗಿ ತೂಗಿ ಬಂದಿತು.

ಹೆಚ್ಚಿನ ಶಿಶು ಮಗನ ಕಂಡು
ಹೆಚ್ಚಳಗೊಂಡರಂತೆ
ಹೆತ್ತಯ್ಯ ಮಂಟೇಸ್ವಾಮಿ !
ಸಿದ್ದಯ್ಯ ಸ್ವಾಮಿ ಬನ್ನಿ

ಹನ್ನೆರಡು ವರ್ಷ ಅನ್ನಾಹಾರವಿಲ್ಲ. ನೀರು ನಿದ್ರೆಯಿಲ್ಲದ ತಮ್ಮ ಶಿಶು ಮಗ ತಂದ 'ಉಲ್ಪೆ'ಯನ್ನು ನೋಡಿ ಗುರು ನಕ್ಕರು. ಅವೆಲ್ಲವನ್ನು ತಾನೆ ಧರಿಸಲು ಹೇಳಿದರು.

ಎಳೆನಾಗರು, ಸುಳಿನಾಗರು, ಗೆಜ್ಜೆ ನಾಗರು, ಗಿಲುಕುನಾಗರು, ಹುಳುಕು ಮಂಡಲ, ಕೊಳಕ ಮಂಡಲ, ಯಮಕ ಮಂಡಲ ಎಲ್ಲವನ್ನು ಎಳೆದು ಧರಿಸಿದರು. ಕೇರೆ ಹಾವು, ಕಿರೀಟವಾಯಿತು. ಮಣ್ಣು ಜಲ್ಲಿ ಹಾವು ಕಿರುಜಂಗಾಯಿತು. ದಾಸರ ಹಾವು ಸ್ವಾಮಿಗೆ ಬೀಸೋ ಚವಲ ಆಯಿತು. ಬೆಳ್ಳು ಮುರುಕಿನ ಹಾವು ಬೆರಳಿಗೆ ಉಂಗುರವಾಯಿತು.

'ಲೀಲೆ ಬಂದು ವೋಲಾಡುವ' ಶಿಷ್ಯನನ್ನು ನೋಡಿ ಧರೆಗೆ ದೊಡ್ಡವರು ಭಂಗಿಯನ್ನು ಸೇವಿಸಲು ಅಪ್ಪಣೆ ನೀಡಿದರು. ಹನ್ನೆರಡು ಕಂಡುಗ ಭಂಗಿಯ ಸೊಪ್ಪನ್ನು ಒಮ್ಮೆಗೇ ಸೇವಿಸಿದ ಸಿದ್ದಯ್ಯನವರು, ಕಳ್ಳಿಯ ಹಾಲು ಕರೆದು ಕಂಡುಗ ಸೇವಿಸಿದರು. ಎಕ್ಕದ ಹಾಲ ಎರಡು ಕಂಡುಗ ಸೇವಿಸಿದರು. ತಂಪಾಗಲಿ ಎಂದು ಗುರುವಿನ ಅನುಜ್ಞೆಯಲ್ಲಿ ಸುಣ್ಣದ ತಿಳಿನೀರು ಐಗಂಡುಗ ಸೇವಿಸಿದರು.

ಮದದ ಮದ್ದಾನೆಯಾಗಿ ಜೋಲುತಾರೆ ವಾಲುತಾರೆ
ನಿದ್ರೆ ಬಂದು ತೂಗುತಾರೆ
ಲೀಲೆ ಬಂದು ವಾಲಾಡುತಾರೆ
ಸಿದ್ದಯ್ಯ ಸ್ವಾಮಿ ಬನ್ನಿ....

ತೂಗುತ್ತ ಬಾಗುತ್ತ ಬಂದು ಗುರುಚರಣಕ್ಕೆ ವಂದಿಸಿದ ನೆಚ್ಚಿನ ಶಿಷ್ಯ ಸಿದ್ಧಪ್ಪಾಜಿಯುವರನ್ನು ನೋಡಿ ಗುರು ಹಿಗ್ಗಿದರು.

ಮಾರಿ ಹೊಕ್ಕ ಊರಿಗೆ ನಿಜದ ಗುರುವೆಂದು ಶಿಷ್ಯನನ್ನು ಹರಸಿದರು. ಅವನು ಚಂಡಿಗೆ ಗಂಡನಾದರೆ, ಚಾಮುಂಡಿಗೆ ಬಲದವನು. ಧರೆಗೆ ದೊಡ್ಡವರ ಕರುಣೆಯ ಶಿಶುವಾಗಿ, ಮಹಿಮೆಯ ಮೂರ್ತಿಯಾಗಿ, ಶೋಭಿಸಿದ ಸಿದ್ದಪ್ಪಾಜಿ ಯವರಿಗೆ 'ನಿದ್ರೆ, ನಿಷಾಬಾಧಿ ತಿಳಿಯುವವರೆಗೆ, ಕಡೆಯ ಬಾಗಿಲಲ್ಲಿ ಪವಡಿಸು'ವ ಅಪ್ಪಣೆಯಾಯಿತು. ಹುಲ್ಲೆ ಚರ್ಮ ಹಾಸಿ, ಹುಲಿ ಚರ್ಮ ಹೊದ್ದು ಬಲ ಮಗ್ಗುಲಲ್ಲಿ ಇತ್ತ ಕಡೆಯ ಬಾಗಿಲಲ್ಲಿ ಶಿಷ್ಯ, ಅತ್ತ ಉರಿಗದ್ದಿಗೆಯ ಮೇಲೆ ಗುರು ಧರೆಗೆ ದೊಡ್ಡವರು ಪವಡಿಸಿದರು.

* * * *

ಧರೆಗೆ ದೊಡ್ಡವರಿಗೆ ಒಮ್ಮೆ ಇದ್ದದ್ದಂತೆಯೇ ಎಚ್ಚರವಾಯಿತು. ಕಲಿ ಬರುವ ಸೂಚನೆಯನ್ನು ಕಂಡು ಅವರು ನಿಟ್ಟುಸಿರುಬಿಟ್ಟರು. ಮಾಲಂಗಿ, ತಲಕಾಡುಗಳನ್ನು ದಾಟಿ ಕಲಿಪುರುಷನಾಗಲೇ ಬೊಪ್ಪಗೌಡನಪುರದ 'ಊರಂಕ' ದಲ್ಲಿ ಸಾಗಿದ್ದ. ಮಡಿವಳ ಮಾಚಯ್ಯನನ್ನು ಕರೆದು ಅತ್ತ ಹೋಗಿ ಬರುವಂತೆ ತಿಳಿಸಿದರು.

ತೆಂಕಣದಿಂದ ಬಡಗದೆಸೆಯತ್ತ ಸಾಗಿದ್ದ ಆ ಹೊಸವ್ಯಕ್ತಿಯನ್ನು ಮಾಚಯ್ಯ ಊರ ಮುಂದೆ ನಿಲ್ಲಿಸಿದ. ಹೆಗಲ ಮೇಲೆ ಹೆಂಗಸೊಬ್ಬಳನ್ನು ಕೂರಿಸಿ ಕೊಂಡಿದ್ದಾನೆ. ಬದಿಯಲ್ಲೊಬ್ಬಳು ವೃದ್ಧೆ, ಕೈಯಲ್ಲಿ ಪಾದರಕ್ಷೆ, ಪೀಕದಾನಿ.

"ಯಾರಪ್ಪ ಶಿವಶರಣ?" ಮಾಚಯ್ಯ ಕೇಳಿದ. "ನಾನು ಕಲಿಪುರುಷ. ಬಲೀಂದ್ರ ಚಕ್ರವರ್ತಿಯ ಪಟ್ಟಣದಿಂದ ಮೊದಲ ಕಲಿಯಾಗಿ ಬಂದಿದ್ದೀನಿ."

ಹೆಡ್ತಿ ಹೆಗಲ ಮೇಲೆ
ತಾಯಿ ಕಾಲ್ಕೆಡಿಗೇಲಿ
ಹೆಡ್ತಿ ಮೆಟ್ಟೊ ರಕ್ಷೆ ತಾಯ ಕೈಯಲಿ !"

ಮಡಿವಳ ಮಾಚಯ್ಯ ಬೆರಗಿನ ದಿಟ್ಟಿಯಲ್ಲಿ ನೋಡಿದ ಕಲಿಯನ್ನು ! ಮುಂದೆ ಬಿಡಲಿಲ್ಲ. ಉತ್ತರ ದೇಶದಲ್ಲಿ ಗುರು ಧರೆಗೆ ದೊಡ್ಡವರು ಸಾರಿ ಕೊಂಡು ಬಂದ ಕಾಲಜ್ಞಾನದ ಕಲಿ ಕಣ್ಣೆದುರಿಗೆ ಬಂದನೇ ! ಲೋಕದ ಮೇಲೆ

ಇವನನ್ನು ಬಿಡಬಾರದೆನಿಸಿ ಶಾಪ ಹಾಕಿದ ಸತ್ಯಶರಣ ಮಡಿವಳ ಮಾಚಯ್ಯ. ಕಲಿ ಗೋವುಗಲ್ಲಾಗಿ ಬೊಪ್ಪಗೌಡನಪುರದ ಮುಂದೆ ನಿಂತಸು.

ಮಡಿವಳ ಮಾಚಯ್ಯ ಗುರು ಮಠಕ್ಕೆ ಒಂದು ಶರಣು ಹೇಳಿದ—

"ಕಲಿ ಹೆಚ್ಚಿ ಒಂತಲ್ಲ ಮುಂದೆ ನಮ್ಮ ಗತಿಯೇನು !" ಮಂಟೇಸ್ವಾಮಿಯುವರು ತುಸು ಯೋಚಿಸಿ ನುಡಿದರು. ಮುಂದೆ ಬರುವ ಕಲಿಯ ವೈಚಿತ್ರ್ಯಗಳನ್ನು ಬಣ್ಣಿಸಿದರು :

'ಆಕಾಶ ನಡಗುತದೆ, ನಕ್ಷತ್ರ ಸುರಿಯುತದೆ
ಆ ಜಾತಿ ಈ ಜಾತಿಯೆಲ್ಲ ಏಕಜಾತಿ ಆಗುತ್ತದೆ
ಮೇಲೆ ಕೀಳಾಗುತದೆ ಕೀಳೆ ಮೇಲಾಗುತದೆ
ಅಣ್ಣನ ಮನೆಗೆ ತಮ್ಮ ಹೋಗಲಾರ
ತಮ್ಮನ ಮನೆಗೆ ಅಣ್ಣ ಹೋಗಲಾರ
ಅಗ್ಗಮ್ಮ ಏಳು ದಿವಸ
ಮಾಯವಾಗಿ ಹೋಗುತಾಳೆ
ಗಂಗಮ್ಮ ಏಳು ದಿವಸ
ಮಾಯವಾಗಿ ಹೋಗುತಾಳೆ....
ಹಗಲುಗತ್ತಲೆ ಕವಿಯುತತೆ
ಹಗರಣ ಆಯ್ತುದೆ
ಹಾದೀಲಿ ಬೀದೀಲಿ ಹೆಣ ಅಪುಕುನಾಥವಾಗುತದೆ
ಸಿದ್ಧಯ್ಯ ಶಿವನೆ ಬನ್ನಿ'

ಕಲಿಯ ಭೀಕರ ಸ್ವರೂಪವನ್ನು ಎದೆ ನಡುಗುವಂತೆ ಬಣ್ಣಿಸಿದ ಗುರುದೇವ ತಾವಿನ್ನು ನರರ ಮುಖ ನೋಡಬಾರದೆಂದೇ ಭಾವಿಸಿದರು. ಪಾತಾಳ ಲೋಕದಲ್ಲಿ ಮರೆತು, ನಿದ್ದೆ ಮಾಡುವ ಬಗೆಯನ್ನು ಚಿಂತಿಸಿದರು.

ಕಡೆಯ ಬಾಗಿಲಲ್ಲಿ ನಿದ್ರಿಸಿದ್ದ ಸಿದ್ಧಪ್ಪಾಜಿಯುವರು ಗುರುವಿನ ಕರೆಗೆ ಎದ್ದು ಬಂದು ನಮಿಸಿದರು.

ಹಲಗೂರಿಗೆ ಹೋಗಿ ಒಂಬತ್ತು ಬಗೆಯ 'ಲಗ' (ಹಾರೆ, ಗುದ್ದಲಿ, ಮೊನೆ ಗುದ್ದಲಿ, ಎಲೆಗುದ್ದಲಿ....ಇತ್ಯಾದಿ)ವನ್ನು ತರುವ ಹೊಣೆ ಸಿದ್ಧಪ್ಪಾಜಿಯದಾಯಿತು.

—೦—

# ಹಲಗೂರ ಪಾಂಚಾಳ ಕೇರಿಗೆ

ಮಂಟೇ ಸ್ವಾಮಿಯ ಕಥೆಗಳಲ್ಲಿ 'ಹಲಗೂರು ಪವಾಡ', ಸುಪ್ರಸಿದ್ಧ ವಾದುದು. ಮಂಟೇಸ್ವಾಮಿಯ ಕಥೆಗಳಲ್ಲಿ ಸಿದ್ಧಪ್ಪಾಜಿಯೊಂದು ಸಿಡಿಲ ಶಕ್ತಿ ಎನ್ನುವುದೂ ಗೋಚರವಾಗುತ್ತದೆ. 'ಹಲಗೂರು ಪವಾಡ' ಒಂದು ಐತಿಹಾಸಿಕ ಸತ್ಯವೋ ಎಂಬುದನ್ನು ದೃಢಪಡಿಸುವಂತೆ ಅಲ್ಲಲ್ಲಿ ದೊರೆಯುವ ಕುರುಹುಗಳು ಅಚ್ಚರಿಯನ್ನುಂಟುಮಾಡುತ್ತವೆ.

ತಂಬೂರಿಯ ತಂತಿಯನ್ನು ಮೀಟಿ ಮುಂದೆ ನಡೆದಿದ್ದಾನೆ ಕಥೆಗಾರ....

ಸಿದ್ದ ಸಿದ್ದರಿಗೆಲ್ಲ ಅತಿ ಮುದ್ದು ಘನನೀಲಿ
ಸಿದ್ದಯ್ಯ ಸ್ವಾಮಿ ಬನ್ನಿ
ಪವ್ವಡ ಗೆದ್ದಯ್ಯ ನೀವೆ ಬನ್ನಿ

ದೊಡ್ಡ ಪವಾಡವನ್ನೇ ಎದುರಿಸಬೇಕಾಯಿತು, ಧರೆಗೆ ದೊಡ್ಡವರ ಮುದ್ದಿನ ಶಿಷ್ಯ ಹತ್ತೊಂಬತ್ತರ ಹರೆಯದ ಸಿದ್ದಪ್ಪಾಜಿ. ಕಲಿಯನ್ನು ಕಂಡ ಮೇಲೆ ಪಾತಾಳದಲ್ಲಿ ಪವಡಿಸಲೆಳಸಿದ್ದಾರೆ ನಿಜಗುರು. 'ಹನ್ನೆರಡು ಆಳುದ್ದದ ಜಲ ಬಾವಿ'ಯನ್ನು ತೋಡಲು ಲೋಹದ ಸಲಕರಣೆಗಳು ಬೇಕು. ಹೆಸರಾದ ಹಲಗೂರಿನಲ್ಲಲ್ಲದೆ ಮತ್ತೆಲ್ಲಿ ಪಡೆಯಲು ಸಾಧ್ಯ ! ದೃಢಚಿತ್ತದ ಸಿದ್ದಪ್ಪಾಜಿ ಯಲ್ಲದೆ ಮತ್ತಾರು ಅವನನ್ನು ಪಡೆದು ಬರಲು ಸಾಧ್ಯ ! ಕುಲದವರ ಮನೆಗೆ, ಹಲಗೂರು ಪಾಂಚಾಳರ ಮನೆಗೆ ಭಿಕ್ಷೆಗೆ ಹೊರಟಾಗ ಅವರೆದೆಯೂ ಅಳುಕ ದಿರಲಿಲ್ಲ.

"ಭಸ್ಮಾಂಗದ ಒಳಗೆ ಬಸವಣ್ಣ, ಕಪ್ಪಿನ ಮಟ್ಟಿಯೊಳಗೆ ರಾಚಪ್ಪಾಜಿ, ಮುಂದೆ ಫಲಾಹಾರದಯ್ಯ ತಲೆಯ ಮೇಲೆ ದೊಡ್ಡಮ್ಮ ತಾಯಿ" ಇವರೆಲ್ಲರಿಗೂ ಮಿಗಿಲಾಗಿ–'ನಿಂದಕ ಆಡಿದವರ ನಿರುಬಯಲು ಮಾಡಲು' ನಿಂತ ಗುರು ಮಂಟೇಸ್ವಾಮಿ !

ಸಿದ್ದಪ್ಪಾಜಿ ಹಲಗೂರಿಗೆ ಹೊರಟು ನಿಂತಿದ್ದಾರೆ ಗುರುವಿಗೆ ಶರಣುಮಾಡಿ,

ಆದಿದಯ್ಯ ಆಡುತಾವೆ
ಬೀದಿದಯ್ಯ ಕುಣಿಯುತಾವೆ

ಹಾದಿಯ ಬೀದಿಯ ಮಾರೀರೆಲ್ಲ
ಹೆದರಿ ದಾರಿ ಬಿಟ್ಟಿದ್ದಾರೆ

ಕುಂದೂರು ಬೆಟ್ಟದ ನೆತ್ತಿಯನ್ನೇರಿ, ಮಟಮಟ ಮಧ್ಯಾಹ್ನದಲ್ಲಿ ಒಂಬತ್ತು ಕಂಡುಗ ಭಂಗಿಯ ಸೊಪ್ಪನ್ನು ಮೂರೇ 'ದಮ್ಮಿ'ಗೆ ಎಳೆದು, ತೂಗುತ್ತ, ಬಾಗುತ್ತ ಹಲಗೂರ ಅಂಕವನ್ನು ಸೇರಿದಾಗ ಹಲಗೂರು—

ಆ ಅಂತ ಅನ್ನುತದೆ
ಕ್ವಾ ಅಂತ ಕೂಗುತದೆ
ಭೂಮಿಯಿಂದ ಆಕಾಶದವರೆಗೆ ಚಿನ್ನದ ಹೂಗೆ
ಬೆಳ್ಳಿಯ ಹೊಗೆ ರೆಟ್ಟೆಯ ಗಾತ್ರಕ್ಕೆ ಆಡಿದೆ

ಊರ ಹೊರಗೆ ನಿಂತ ಸಿದ್ದಪ್ಪಾಜಿ ಬಂದ ಸೂಚನೆಯನ್ನು ನೀಡುವಂತೆ ಘೋರ ಗರ್ಜನೆಯೊಂದನ್ನು ಮಾಡಿದಾಗ, ಹಲಗೂರ ನೆಲ ಕಂಪಿಸಿತು !

ಮೂಡ್ಲಾಗಿ ಗುಡುಗಿಕೊಂಡು ಹೋಯಿತು
ಮಾರಿಯೊ ಮಸಣಿಯೊ ಕಾಣೆ !
ಹಾಲಿನಂಥ ಹಲಗೂರಿಗೆ ಏನು ಕೇಡು ಬಂತೊ !

ನಂದಿ ಹಜಾರದಲ್ಲಿ, ಹಲಗೂರಿನ ಏಳು ಮಂದಿ ಪಾಂಚಾಳ ದಣಿಗಳು–ಹೊನ್ನೋಜ, ಚೆನ್ನೋಜ, ಬೋಲೋಜ, ಬೆಟ್ಟೋಜ, ಕಾಳೋಜ, ಲಿಂಗೋಜ, ನರಸೋಜ–ಪಗಡೆಯ ಕೈ ನಿಲ್ಲಿಸಿದರು. 'ಸಣ್ಣಕ್ಕಿ ಬೋನ ಮೆದ್ದು, ಸರಳಮ್ಮೆ ನೊರೆ ಹಾಲು ಕುಡಿದು, ಚನ್ನಪಟ್ಟಣದ ರಾಮಪ್ರಡಿ ಸಕ್ಕರೆ ಊಟ ಮಾಡಿ, ಗಂಟಲಲ್ಲಿ ಇಳಿದು ವಾಲಾಡುವ' ಮಂದಿಯುವರು. ಎಳನೂರ ಐವತ್ತು ಒಕ್ಕಲ, ಏಳು ಬೀದಿಗಳ ಅರಸರ ಅಂತರಂಗದಲ್ಲಿ ಯಾವುದೋ ಭೀತಿಯ ಛಾಯೆಯಾಡಿದರೂ ಕ್ಷಣದಲ್ಲಿ ಕರಗಿ ಹೋಯಿತು. 'ದಾಯ ಪಗಡೆ'ಯಲ್ಲಿ ಮೈ ಮರೆತರು.

ಧರ್ಮಗುರು ಕ್ವಾರಣ್ಯದ ಭಿಕ್ಷವೋ ಭಿಕ್ಷ
ದಾನವ ಕೊಟ್ಟವರಿಗೆ ಜೋಳಿಗೆ ಹೊನ್ನಾಗಲಯ್ಯೊ
ಭಾಗ್ಯ ಕೊಟ್ಟವರಿಗೆ ಲಕ್ಷ ಹೊನ್ನಾಗಲಯ್ಯೊ

ಬೀದಿ ಬೀದಿಯಲ್ಲಿ ಭಿಕ್ಷೆ ಸಾರುತ್ತ ಬಂದ, ನೂರೊಂದು ಜಡೆಯ ಕೈಯ

ಕಂಡಾಯುದ ಕಂಕುಳ ಜೋಳಿಗೆಯ, ಸಿದ್ದಯ್ಯನವರನ್ನು ತಡೆದನೊಬ್ಬ ಕೊನೆಯ ಕುಲುಮೆಯ ವೃದ್ಧ. ನಂದಿ ಚಾವಡಿಯಲ್ಲಿ ಏಳು ಮಂದಿ ದಣಿಗಳತ್ತ ಕೈ ತೋರಿದ. ಸಿದ್ದಪ್ಪಾಜಿ ಅತ್ತಲೆ ನಡೆತಂದು 'ಭಾರಿ ಡಂಗೂರ ಕೂಚು ಮಾಡಿ' ದನಿಯೆತ್ತಿ ಕೇಳಿದರು—

ದಾನವ ಕೊಡಿರಯ್ಯ ಹಲಗೂರ ಪಂಚಾಳರೀರ
ಬಿಕ್ಷವ ಕೊಡಿರಯ್ಯ ಲಕ್ಷಪತಿಗಳಿರ !

ನೀಡಿದ ಕಾಲನ್ನು ತೆಗೆಯಲಿಲ್ಲ ಹಲಗೂರ ಪ್ರಭುಗಳು! ಮೂರು ಗಳಿಗೆಯ ಮೇಲೆ ಮುಖ ನೋಡಿಕೊಂಡಾಗ, ಕೋಪ ಕಿಡಿ ಕಣ್ಣಿನಲ್ಲಿ ಚಿಮ್ಮಿತು. ಕಾಡ ಪರದೇಶಿ ತಮ್ಮೆದುರಿನಲ್ಲಿ ನಿಂತು ಭಿಕ್ಷೆ ಸಾರುವುದೇ! ಊರ ಮೂಡಲಲ್ಲಿ ದುಷ್ಟ ಮಾರಿ ಕಾಳಮ್ಮನ ಕಾವಲು, ತೆಂಕಲಲ್ಲಿ ಪಡುವಲಲ್ಲಿ ಹುಚ್ಚು ವೀರಭದ್ರನ ರಕ್ಷೆ, ಬಡಗಲಲ್ಲಿ ಮೂರು ಕೊಂಬಿನ ಬಸವನ ರಕ್ಷೆ....ಯಾರು ಬಿಟ್ಟರು ಕಾಡುಗೊರವನನ್ನು ಊರಿಗೆ !

"ಭೂಮಿಗೆ ದೊಡ್ಡವರು ನಡು ರಾಜ್ಯದಲ್ಲಿ ಪವಡಿಸುವರೆ

ಕಬ್ಬಿಣದ ಭಿಕ್ಷಕೆ ಬಂದೆ–ಬೇಕಾದ ಒಂಬತ್ತು ಬಗೆಯ ಲಗಗಳನ್ನು ಕೊಟ್ಟರೆ ಈಗ ಬದುಕುವ ಸಿರಿ ಸಂಪತ್ತಿನ ಮೇಲೆ ಇನ್ನಷ್ಟು ಭಾಗ್ಯ ಕೊಡುತೀನಿ"—ವಿವರಿಸಿದರು, ವಿನಯದಿಂದ ಸಿದ್ದಪ್ಪಾಜಿ.

"ನೀನೊಬ್ಬನೆಂದರೇನು ! ನಿನ್ನ ಗುರುವೊಬ್ಬನೆಂದರೇನು !"

–ಗಹಗಹಿಸಿ ನಕ್ಕರು ಚಾವಡಿ ಕುಸಿಯುವಂತೆ ಏಳು ಮಂದಿ ದಣಿಗಳು. ಕಾಡ ಕಲ್ಲನ್ನು ತಂದು ಎಡಗಾಲಲ್ಲಿ ಒದೆದು,ವಿಗ್ರಹ ಗೇದರೆ ಬೇಡಿದ ವರಗಳನ್ನು ಕೊಡುತ್ತದೆ! ಭೂಮಿಯ ಮೇಲೆ 'ಇಸ ಬ್ರಹ್ಮಚಾರಿ' ಮುಟ್ಟದ ಲಿಂಗ ತೋರಿದರೆ ಅವನ ಮಕ್ಕಳಾದಾರು !

"ಅಂಥ ಲಿಂಗ ಯಾರ ಹತ್ತಿರವೂ ಇಲ್ಲ ನಮ್ಮ ಗುರು ಮಂಟೇಸ್ವಾಮಿ ಒಬ್ಬರೇ !"—ದೃಢವಾಗಿ ಉತ್ತರಿಸಿದರು ಸಿದ್ದಪ್ಪಾಜಿ.

ಮುಖ ಗಂಟಿಕ್ಕಿತು ಏಳು ಮಂದಿ ದಣಿಗಳಿಗೆ.ಸೊಕ್ಕಿನ ನುಡಿಯ ಗೊರವನನ್ನು ಚುಚ್ಚಿ ಮಾತಾಡಿದರು–

"ನಾವು ಏಳು ನೂರು ಐವತ್ತು ಒಕ್ಕಲು ಏಳುಮಂದಿ ದೊರೆಗಳು ಕಬ್ಬಿಣ ಭಿಕ್ಷ ಕೊಟ್ಟ ಕಾಲದಲ್ಲಿ ಹಿಡಿವಂತ ಶಕ್ತಿ ಇದೆಯೆ ?"

ಸಿದ್ದಪ್ಪಾಜಿ ನಸುನಕ್ಕರು, ಅವರ ಮಡಿಗೆ. ಧೃತಿಗೆಡಲಿಲ್ಲ. ಮನಸ್ಸು ಕದಡಲಿಲ್ಲ.

"ಹಿಡಿಯತೀನಿ ಕಾಣಿರಯ್ಯ ಹೆಚ್ಚಿನ ಪಾಂಚಾಳದವರೇ !"

ಮೂರುಕ್ಷಣ ಮೌನವಾವರಿಸಿತು ನಂದಿ ಚಾವಡಿಯಲ್ಲಿ. ಹೂವಿನ ಪಲ್ಲಕ್ಕಿಗಳು ಸಿದ್ಧವಾದವು. ಹಿಂದೆ ಪಹರೆ. ಮುಂದೆ ಪಹರೆ. ಹಗಲು ದೀವಟಿಗೆಯ ಸಿರಿಯಲ್ಲಿ ನಡೆದರು ಪಾಂಚಾಳ ದಣಿಗಳು ಹೆಗ್ಗುಲುಮೆಗೆ.

ನೂರೆಂಟು ಜಡೆಗಳನ್ನು ಭೂಮಿಯ ಮೇಲೆ ಎಳೆಯುತ್ತ, ಮುಳ್ಳ ಹಾವಿಗೆಯನ್ನು ಮೆಟ್ಟಿ ನಡೆದು ಹೋಗುವ ಸಿದ್ದಪ್ಪಾಜಿಯವರ ಮೈಮೇಲಿನ ಹಾವು, ಚೇಳನ್ನು ನೋಡಿ ನಗುತ್ತ ಜನ ಹಿಂದೆ ಸಾಗಿದರು.

ಹೆಗ್ಗುಲುಮೆಯನ್ನು ಸಾರಿಸಿ, ಗುಡಿಸಿ ರಂಗವಲ್ಲಿ ಇಟ್ಟರು. ಸೇಗಿಲ ತುಂಡು ಗಾತ್ರದ ಕಬ್ಬಿಣವನ್ನು ಒಲೆಗೆ ಹಾಕಿದರು. ಇಜ್ಜಲು ಸುರಿದು, ನೆಲ್ಲ ಹೊಟ್ಟು ಸುರಿದು ಪಾಂಚಾಳರು ತಿದ್ದಿ ಒತ್ತಿದರು. ನಿಗಿನಿಗಿ ಕೆಂಡವಾಯಿತು, ಕಬ್ಬಿಣದ ತುಂಡು. ನೂರು ಮಂದಿ ಪಾಂಚಾಳರು 'ಕೊಂಗಿಕ್ಕಳ'ದಲ್ಲಿ ಎತ್ತಿ ತಂದರು ಮುಂದೆ. ಏಳು ಮಂದಿ ದಣಿಗಳೂ ನಿಂತು ನುಡಿದರು–

"ಹಿಡಿಯೊ ಪರದೇಶಿ ನಿನ್ನ ಎರಡು ಕೈಯ !"

ಸಿದ್ದಪ್ಪಾಜಿ ಕಣ್ಣು ಮುಚ್ಚಿದರು. ಗುರು ಧ್ಯಾನ ಮಾಡಿದರು. ಎರಡು ಕೈಯನ್ನೂ ಮುಂದೆ ಚಾಚಿದರು.

ಹರ ಹರ ಶಿವ ಶಿವ ! !

ಕಬ್ಬಿಣ ಕೈಮೇಲೆ ಬಿತ್ತು. ಮೂರುಗಳಿಗೆ ಹಿಡಿದೇ ನಿಂತರು. ಎರಡು ಕಣ್ಣಿಗೂ ಒತ್ತಿ ಹಿಗ್ಗಿದರು. ಧರೆಗೆ ದೊಡ್ಡವರ ಶಿಸುಮಗನಾಗಿ ಹಲಗೂರಿಗೆ ಬಂದುದಕ್ಕೆ ಮೊದಲ ಭಿಕ್ಷೆ ! ಮೂರು ತುಂಡಾಗಿ ಮುರಿದು ಜೋಳಿಗೆಗೆ ಇರಿಸಿ ಕೊಂಡರು, ಕಾದ ಕಬ್ಬಿಣವನ್ನು, 'ಇವೆಲ್ಲ ಪವಾಡವಲ್ಲ. ಇನ್ನೊಂದು ಪವಾಡ ಮಾಡಬೇಕು'

–ದಣಿಗಳ ಮನ ಕರಗಲಿಲ್ಲ. ಸಿದ್ದಪ್ಪಾಜಿ ಒಮ್ಮೆ ಮಂದ ನಗೆ ಬೀರಿದರು.

ಕಾದಗಟ್ಟಿಯ ಕುಲುಮೆಗೆ ಸಿದ್ದಪ್ಪಾಜಿ ಬಂದರು. ಕಿಕ್ಕಿರಿದ ಮಂದಿಯ ನಡುವೆ ಎತ್ತಿನ ಗಾತ್ರದ ಕಬ್ಬಿಣದ ತುಂಡು ಏಳು ದಿನದಿಂದ ಕಾದಿತ್ತು, ಏಳು ತಿದಿಗಳಲ್ಲಿ. ಅದರ ಧಗೆಗೆ ಆಕಾಶದಲ್ಲಿ ಹಾರುವ ಹಕ್ಕಿ ಪಕ್ಷಿಗಳು ಸೀದು ಕಾದ ಗಟ್ಟಿಯ ಮೇಲೆ ಬೀಳುತ್ತಿದ್ದವು. ಸಿದ್ದಪ್ಪಾಜಿಯೊಮ್ಮೆ ಎಡಪಾದದಲ್ಲಿ ಮೆಟ್ಟಿ

ದಾಗ ಹಲಗೂರು ಚಿನ್ನಾಪುರದ ಹೊಳೆಗೆ ಸಿಡಿಯಿತು ಆ ಕಾದ ಗಟ್ಟಿ.

ಏಳು ಮಂದಿ ಪಾಂಚಾಳ ದಣಿಗಳ ಕಣ್ಣು ಕೆಂಪಡರಿತು. ಕವಿದ ಮಂದಿಯ ಎದುರಿನಲ್ಲಿ ಕಾಡುಗೊರವ ಕಾದ ಗಟ್ಟಿಯನ್ನು ಚೆಂಡಿನಂತೆ ಚಿಮ್ಮಿದ್ದಾನೆ. ದೊಡ್ಡ ಪವಾಡವನ್ನೇ ಒಡ್ಡಿ ಇನ್ನವನು ಇಲ್ಲದಂತೆ ಮಾಡಿಬಿಡಬೇಕು! ಏಳು ಸಾವಿರ ವರಹದ ಆನೆ ಗಾತ್ರದ ಪಂಚಲೋಹದ ತುಂಡಿನತ್ತ ಅವರ ದಿಟ್ಟಿ ಹೊರಳಿತು. ಹನ್ನೆರಡು ದಿನ ಕಾದ ಆ ಗಟ್ಟಿಯನ್ನೇರಿದರೆ ಹನ್ನೆರಡರ ಮೇಲೆ ಮತ್ತೊಂದು 'ಲಗ'ದ ಭರವಸೆ ಅವರದಾಯಿತು. ಸಿದ್ದಪ್ಪಾಜಿ ಮುಂದಿನ ಪರೀಕ್ಷೆಗೂ ಕಾದು ನಿಂತರು, ಅಂಜದೆ, ಅಳುಕದೆ!

ಬಸವನ ಬೆಟ್ಟದಿಂದ ಏಳು–ಸಾವಿರ ಕಂಡುಗ ಬಿದಿರಿಜ್ಜಲು ಬಂದಿತು. ರಾಗಿಯ ಕಣದಗಲದ ಹೆಗ್ಗುಲುಮೆ ಊರ ಮೂಡಲ ಸಣ್ಣ ಹಳ್ಳದ ಅಂಚಿನಲ್ಲಿ ಹದಗೊಂಡಿತು. ಆಡಿನ ತಿದಿಯಾಗದು ಈ ಗಟ್ಟಿಗೆ. ಕೋಣದ ತಿದಿಯೇ ಬೇಕಾಯಿತು. ಏಳು ನೂರ ಐವತ್ತು ಒಕ್ಕಲೂ ಕುಲುಮೆಯನ್ನು ಒತ್ತಲು ಸಿದ್ಧವಾಯಿತು.

ಹಗಲು ತಿದಿಯ ಬಿಡಬೇಡಿ
ಇರಳು ತಿದಿಯ ಬಿಡಬೇಡಿ!

ರಾಜರ ಕಟ್ಟಾಜ್ಞೆ. ಹನ್ನೆರಡು ದಿನ ಗಟ್ಟಿ ಕಾಯ್ತ್ರುವಲ್ಲಿ ಆ 'ಪರದೇಶಿ' ಎಲ್ಲಿಯಾದರೂ ಕಣ್ಮರೆಯಾದರೆ? ಎಳೆತಂದು ಊರದೇವತೆ ಕಾಳಮ್ಮನ ಗುಡಿಗೆ ಕೂಡಿ ಬೀಗ ಮುದ್ರೆ ಮಾಡಿದರು. ಗುಡಿಯ ಸುತ್ತ ಏಳು ಸುತ್ತಿನ ಬಿಚ್ಚುಗತ್ತಿ ಪಹರೆ ಕಾದಿತು.

'ಘನಲೀಲೆಯ ಗುರು, ಕಾಳಮ್ಮನ ಗುಡಿಯ ಕತ್ತಲಲ್ಲಿ ತಡವರಿಸುತ್ತ ಗರ್ಭಗುಡಿಯತ್ತ ನೋಡಿದರು. ಗೆರಸಿಯಗಲದ ಬಾಯಿ, ಒಂದು ಕಿವಿಯನ್ನು ಹಾಸಿ ಮತ್ತೊಂದನ್ನು ಹೊದೆದು ಮಲಗಿದ್ದಾಳೆ' ರಕ್ತವನ್ನು ತೊಟ್ಟಿಕ್ಕಿಸುತ್ತ ನರಭಕ್ಷಕಿ ಮಹಾಕಾಳಿ. ಸಿದ್ದಪ್ಪಾಜಿಯ ಧ್ವನಿಯನ್ನು ಕೇಳಿಯೇ ಉರಿಗದ್ದುಗೆಯಿಂದ ಭುಗಿಲನೆ ಎದ್ದು ಬಂದಳು ವಿಕಾರವಾಗಿ ಬಾಯನ್ನು ತೆರೆದು.

ಸಿದ್ದಯ್ಯ ಒಮ್ಮೆ ಬಿರುನೋಟವನ್ನು ಚೆಲ್ಲಿದರು ಕಾಳಮ್ಮನ ಮೇಲೆ. ಮುಂದಲೆಯನ್ನು ಹಿಡಿದು ಬುಗುಬುಗನೆ ಮೂರು ಸುತ್ತು ಸುತ್ತಿ ಕಾಳಮ್ಮನ

ಎಡಗೆನ್ನೆಯ ಮೇಲೆ ಬೀಸಿ ಬಿಗಿದಾಗ, ಕಣ್ಣ ಗುಡ್ಡೆಗಳು ಎರಡೂ ಕಳಚಿ ಹೋದವು. ಕಾಳಮ್ಮ ಕ್ಷಣದಲ್ಲಿ ಸೌಮ್ಯ ರೂಪನ್ನು ಧರಿಸಿದಳು. ಕಾಲಿಗೆ ಬಿದ್ದು ಬೇಡುವ ಅವಳನ್ನು ಕ್ಷಮಿಸುವ ಮುನ್ನ ಸಿದ್ದಪ್ಪಾಜಿ ಕೇಳಿದರು.

"ಪಾಂಚಾಳರು ಬಂದು ಕೇಳಿದರೆ ಪ್ರಸಾದವನ್ನು ಕೊಡಕೂಡದು"

ಕಾಳಮ್ಮನ ಮಾತಿನ ಶಕ್ತಿ ಉಡುಗಿ ಹೋಗಿತ್ತು. ಸ್ವಾಮಿಯ ಪಾದಗಳನ್ನು ತನ್ನ ತೊಡೆಯ ಮೇಲಿಟ್ಟು ಒತ್ತಿ ಓಲೈಸಿದಳು.

ಪಾಂಚಾಳರ ಕಿರುಕುಳಕ್ಕೆ ಬೇಸತ್ತ ಮನಸ್ಸು ಗುರುವಾದವನ್ನು ಸ್ಮರಿಸಿತು. ಸಿದ್ದಪ್ಪಾಜಿ ನಿಟ್ಟುಸಿರು ಬಿಟ್ಟರು. ಊಟ ಇಲ್ಲ. ಕಣ್ಣಿಗೆ ನಿದ್ರೆಯಿಲ್ಲ. ಕಾದ ಗಟ್ಟಿಯ ಪವಾಡ ಗೆಲ್ಲುವ ಬಗೆ ಎಂತು!ಗುರು ಮರೆತು ಮಲಗಿದರೆ ಇತ್ತ ಅಟ್ಟಿ!

ಕುಗ್ಗಿ ಕುಳಿತ ಸಿದ್ದಪಾಜಿಯ ಕಣ್ಣಂಚಿನಲ್ಲಿ ನೀರಾಡಿದಾಗ, ಅತ್ತ ಉರಿ ಗದ್ದುಗೆಯ ಮೇಲೆ ಎದ್ದು ಕುಳಿತರು ಮಂಟೇಸ್ವಾಮಿ. ಹಲಗೂರ ಹಾದಿಯಲ್ಲಿ ಬರಿಗಾಲ ನಡಿಗೆಯಲ್ಲೇ ಬಂದ ಅವರು ಕಾವಲಿನವರಿಗೆ ಮಾಯದ ನಿದ್ದೆ ಕೊಟ್ಟರು. ಸಿದ್ದಪ್ಪಾಜಿಗೂ ಮಂಕು ಕವಿದು ನಿದ್ದೆ ಹತ್ತಿತ್ತು, ಗುರು ಬಂದ ವೇಳೆಯಲ್ಲಿ! ಗುರು ಚಿತ್ತೈಸಿ ಮುಡಿಯ ಬಳಿ ಕುಳಿತು, 'ಸಪುನ ಸಂದಾಯ'ದಲ್ಲಿ ಧೈರ್ಯ ತುಂಬಿದಂತಾಗಿ ಗಕ್ಕನೆ ಕಣ್ಣು ತೆರೆದರು ಸಿದ್ದಪ್ಪಾಜಿ. ಹೊಸ ಚೈತನ್ಯ ಹರಿದಾಡಿತ್ತು ನರನಾಡಿಯಲ್ಲಿ.

ಗುಡಿಯ ಕಾಳಮ್ಮ ಅರಿಯದಂತೆ, ಹೊರಗಿನ ಕಾವಲಿನವರರಿಯದಂತೆ ಗುಡಿಯಾಚೆಗೆ ನಡೆದು, ಮುತ್ತತ್ತಿಯನ್ನು ಸೇರಿ 'ಭಂಗಿ ಫಲಾಹಾರವನ್ನು' ಮುಗಿಸುವ ವೇಳೆಗೆ ಹನ್ನೆರಡು ದಿನ ತುಂಬಿತು. ಕಾದ ಗಟ್ಟಿ ಗಣಗಣನೆ ಕಾದು ಹೆಗ್ಗಂಡವಾಯಿತು.

ಕಾಳಮ್ಮನ ಗುಡಿಗೆ 'ಕಾಡು ತಿರುಗುವ ಪರದೇಶಿ'ಯನ್ನು ಹಿಡಿತರಲು ಪಾಂಚಾಳರು ಧಾವಿಸಿದರು. ಬರಿಯ ಗುಡಿ. ಕಾವಲಿನವರು ಕಾದಿದ್ದಾರೆ, ಬೀಗ ಮುದ್ರೆ ಅಣಕಿಸಿದೆ. ಮೇಲ್ಛಾವಣಿಯಲ್ಲಿ ಹೋಗಲು ಬಿಗಿದ ಕಲ್ಲಮಾಳಿಗೆ!

ಸುದ್ದಿ ದಣಿಗಳನ್ನು ಮುಟ್ಟಿತು. ಕಾವಲಿನವರನ್ನೇ ಕಾದಗಟ್ಟಿಯ ಮೇಲೆ ಸುಟ್ಟು ಬಿಡುವ ಕಟ್ಟಾಜ್ಞೆಗೆ ಮಂದಿ ನಡುಗಿದರು.ಆದರೇನು, ಸಿದ್ದಪ್ಪಾಜಿ ನಸುನಗುತ್ತಲೇ ಪಾಂಚಾಳರ ನಡುವೆ ಬಂದು ನಿಂತರು. ದೊಡ್ಡ ಪವಾಡಕ್ಕೆ ಎಲ್ಲರ ಕಣ್ಣ ಕುತೂಹಲ ಅರಳಿತು.

ಗಟ್ಟಿಯನ್ನು ಏರುವ ಮುನ್ನ ಎಲ್ಲರೂ ನೋಡಬೇಕು. ಕೂಸೂ ತಪ್ಪದೆ ಬರಬೇಕು. ಎಲ್ಲರ ಸಮ್ಮುಖದಲ್ಲಿ ಏಳು ದಿನದವರೆಗೆ ಕಾದಗಟ್ಟಿಯ ಮೇಲೆ ಕುಳಿತಾಗ ಕಾಣೆ ಎನ್ನುವವರು ಯಾರೂ ಇರಬಾರದು.

—ಸಿದ್ದಪ್ಪಾಜಿಯವರ ಬಯಕೆಗೆ ಡಂಗೂರ ಸಾರಿತು ಹಲಗೂರಲ್ಲಿ.

ಕಾಡು ತಿರುಗೊ ಪರದೇಶಿ-ಕಾದಗಟ್ಟಿ ಏರುತಾನೆ
ನೋಡ ಬನ್ನಿ ಅಣ್ಣಯ್ಯನವರೆ-ಹಲಗೂರು ಪಾಂಚಾಳದವರೆ

ಜನ ಕಿಕ್ಕಿರಿದರು, ಸುತ್ತ ಹತ್ತು ಹಳ್ಳಿಯ ಜನ ರೊಟ್ಟಿಬುತ್ತಿಯನ್ನು ಕಟ್ಟಿ ಬಂದರು. ದೊಡ್ಡ ಜಾತ್ರೆಯೇ ಅಲ್ಲಿ ಕವಿಯಿತು.

ಪಾಂಚಾಳ ದಣಿಗಳು ಮುಂದೆ ಬಂದರು. ಕಾದಗಟ್ಟಿಯನ್ನೊಮ್ಮೆ ಸಿದ್ದಪ್ಪಾಜಿಯುವರನ್ನೊಮ್ಮೆ ನೋಡಿದ ಅವರ ತುಟಿಯಲ್ಲಿ ವಿಷದ ನಗೆಯಾಡಿತು.

''ಈಗ ಬೇಗ ನಿನ್ನ ಸತ್ಯ ತೋರೋ ಪರದೇಶಯ್ಯ !"

ಇಪ್ಪತ್ನಾಲ್ಕೂ ಕೋಣನ ತಿದಿ ಕ್ಷಣ ನಿಂತಿತು. ಸಿದ್ದಪ್ಪಾಜಿ ಕಾದ ಗಟ್ಟಿಯ ಸುತ್ತ ಮೂರು ಪ್ರದಕ್ಷಿಣೆ ಮಾಡಿ, ಮನದಲ್ಲಿ ಗುರುವನ್ನು ನೆನೆದರು:

ಧರೆಗೆ ದೊಡ್ಡೋರೆ ನಿಮ್ಮ ಪಾದವೇ ಗತಿ
ಕೆಂಡಗಣ್ಣ ರಾಚಪ್ಪಯ್ರೆ ನೀವೆ ಗತಿ
ತೋಪಿನ ದೊಡ್ಡಮ್ಮ ತಾಯಿ ನೀನೇ ಗತಿ !

ಹಿಡಿದ ಕಂಡಾಯದಿಂದ ಕಾದ ಗಟ್ಟಿಗೆ ಒಂಬತ್ತು ಮೆಟ್ಟಿಲು ತಿವಿದರು. ನವಿಲ ಗರಿಯಿಂದ ಅದರ ಧೂಳು ಕೊಡಹಿದರು. ಬಲ ಪಾದ ಊರಿ, ಗಟ್ಟಿಯನ್ನೇರಿ ಕುಳಿತು, ಕೈಯ ಡಮರುಗವನ್ನು ನುಡಿಸಿದರು. ಉನ್ಮತ್ತರಾಗಿ ಪಾಂಚಾಳರು ನೋಡುತ್ತಲೇ ಇದ್ದರು.

ಅಯ್ಯ ಕಂಡೊ ಅಂತ ಅನ್ನಬೇಡಿ
ಕಾಣೊ ಅಂತ ಅನ್ನ ಬೇಡಿ
ನೋಡಿರೋ ಪಾಂಚಾಳದವರೆ—
ಹಲಗೂರ-ಪಾಂಚಾಳದವರೆ

ಹುಲ್ಲೆಯ ಚರ್ಮವನ್ನು ಹಾಕಿದರು ಕಾದ ಗಟ್ಟಿಯ ಮೇಲೆ. ಹುಲಿಯ

ಚರ್ಮವನ್ನು ಹೊದೆದರು. ಉರಿವ ಕಂಡಾಯವನ್ನು ತಲೆಯ ಕೆಳಗಿಟ್ಟು 'ಹರ ಹರ ಶಿವ ಶಿವ' ಎಂದು ಮಲಗಿದರು.

ಹನ್ನೆರಡು ದಿನ ಕಾದ ಪಂಚಲೋಹದ ಗಟ್ಟಿ ಸಿದ್ಧಯ್ಯ ಮಲಗಿದ ಮೇಲೆ ಕಾಣದಂತೆ ಮತ್ತೆ ಇಜ್ಜಲು ತುಂಬಿದರು. ಬಿಡದೆ ಒತ್ತಿದರು ಕೋಣನ ತಿದಿಯನ್ನು. ಆದರೂ ಸಿದ್ದಪ್ಪಾಜಿಯ ತಲೆಯ ಬಳಿ 'ಲಾವದ ಹಕ್ಕಿ' ಕೇಕೆ ಹಾಕಿ ಹಾಡಿತು !

ಪಾಂಚಾಳ ದಣಿಗಳು ಬೆರಗಾಗಿ ನೋಡಿದರು. ನಿಂದೆಯ ನುಡಿಯಾಡಿದರು. ಕಾದ ಗಟ್ಟಿಯೊಮ್ಮೆ ಭೂಮಿಗೂ ಆಕಾಶಕ್ಕೂ ಭುಗ್ಗನೆ ಹತ್ತಿ ಉರಿಯಿತು. ಕಾಡು ಪರದೇಶಿ ಹೊತ್ತಿ ಉರಿದನು : ಸೀದು ಬೆಂದು ಹೋದನು.... ತಿದಿಯ ಕೈ ನಿಲ್ಲಲಿ....ನಿಲ್ಲಲಿ !!

ಸಿದ್ದಪ್ಪಾಜಿ ನುಡಿಯನ್ನು ಕೇಳಿ ನಕ್ಕರು ಕಾದ ಗಟ್ಟಿಯ ಮೇಲೆ ! ಇನ್ನೂ ನಿದ್ದೆಯೇ ಹತ್ತದು. ಕೈ ನಿಲ್ಲಿಸಿದರೋ !

ನಿಮ್ಮ ತಿದಿಯ ಕೈ ನಿಲ್ಲಿಸಬೇಡಿ ಹೆಚ್ಚಿನ ಪಾಂಚಾಳದವರೇ !

ಮತ್ತೆ ಕವಿದರು ಪಾಂಚಾಳರು. ಏಳನೂರ ಐವತ್ತು ಒಕ್ಕಲೂ ಹಿಡಿದ ಉಸಿರಿನಲ್ಲಿ ತಿದಿ ಒತ್ತಿದರು. ಹೆಗ್ಗುಲುಮೆ ಮಾರಿ ಉರಿಯನ್ನು ಚೆಲ್ಲುತ್ತ ನಕ್ಕಿತು ಬೆಂಕಿಯ ನಾಲಿಗೆಯಲ್ಲಿ. ಮೇಲೆ ಸದ್ದಡಗಿತು. ಪಾಂಚಾಳರೂ ಕರಗಿದರು ಸಿದ್ದಪ್ಪಾಜಿಯನ್ನು ಮರೆತು.

ಸದ್ದಡಗಿದ ವೇಳೆ. ಸಿದ್ದಪ್ಪಾಜಿ ಪಕ್ಕಕ್ಕೆ ಹೊರಳಿದರು ಕಾದ ಗಟ್ಟಿಯ ಮೇಲೆ. ಪಾಂಚಾಳರು ನಿರ್ಗಮಿಸಿದ್ದಾರೆ. ಕಂಡಾಯವನ್ನೂರಿ ಕೆಳಗಿಳಿದು ಬಂದರು. ಗುರು ಧರೆಗೆ ದೊಡ್ಡವರಿಗೆ 'ಹುಯ್ಲುದಮ್ಮಟೆ, ನಗಾರಿ, ಬೇರ್ಮೆ–' ಎಲ್ಲದಕ್ಕೂ ಆಗಿ ಉಳಿಯುತ್ತದೆ ಕಾದ ಗಟ್ಟಿ. ಇಲ್ಲಿನ್ನು ಉಳಿಯ ಬಾರದು.... ಬಾರದು

"ಕಾದು ನೀರಿನ ಭಾವದಲ್ಲಿ ನೀರಾಗಿ ಹರಿದುಹೋಗಲಿ" ಎಂದ ಅವರ ನುಡಿಗೆ ಕಾದ ಗಟ್ಟಿ ಕಲ್ಲಾಗಿ ಕರಗಿ, ನೀರಾಗಿ ಹರಿದು ಹಲಗೂರು ನಡುಬೀದಿಯಲ್ಲೇ ಹರಿದುಹೋಯಿತು.

* * * *

ಹಿರಿಯ ಕೊಪ್ಪರಿಗೆಯ ಪವಾಡದಲ್ಲೂ ಸಿದ್ದಪ್ಪಾಜಿ ಗೆದ್ದರು. ಕಾದ

ಕೊಪ್ಪರಿಗೆ ಅವರ ಕೂಗಿಗೆ ಮುಗಿಲಿಗೆ ಹಾರಿ ಮುದುಕು ತೊರೆಯಲ್ಲಿ ಹೋಗಿ ಬಿದ್ದಿತು. 'ಉಕ್ಕಿನ ತೇಜಿ'ಗೆ ಜೀವ ತುಂಬಿ ಅದನ್ನೇರಿ ಗಗನದಲ್ಲಿ ಸಂಚರಿಸಿ ಉಕ್ಕಿನ ಕಡಲೆಯನ್ನು ತಿನ್ನಿಸಿದರು. ಹೆತ್ತಯ್ಯನ ಕಾಲದ ಗುಳಿಗೆಗಳಲ್ಲಿ ಹನ್ನೆರಡು ಕಂಡುಗ ಸುಣ್ಣ, ಹನ್ನೆರಡು ಕಂಡುಗ ಮೆಣಸಿನಕಾಯಿ, ಹನ್ನೆರಡು ಕಂಡುಗ ಹುಣಿಸೆಯ ಬೀಜಗಳ ಬೇಗೆಯನ್ನು ಸಹಿಸಿ ಏಳು ದಿನದ ಮೇಲೆ ಹೊರ ಬಂದರು.

ಮೂರು ತಿಂಗಳು ತುಂಬಿತು. ಕಬ್ಬಿಣದ ಭಿಕ್ಷೆ ದೊರೆಯಲಿಲ್ಲ. ಆರನೆಯ ಪವಾಡ ಮುಗಿದರೂ ಪಾಂಚಾಳ ದಣಿಗಳ ಮನ ಕರಗಲಿಲ್ಲ. ಬರಿ ಗೈಯಲ್ಲಿ ಕವಿದ ದುಃಖದಲ್ಲಿ ಪಾಂಚಾಳರಿಂದ ಊರ ಹೊರಗೆ ತಳ್ಳಿಸಿಕೊಂಡು ಬೊಪ್ಪ ಗೌಡನಪುರದ ಗುರುಪಾದಕ್ಕೆ ಮರಳಿದರು, ಸಿದ್ದಪ್ಪಾಜಿ.

* * * *

ಪಾಂಚಾಳಕೇರಿಗೆ ಘೋರ ಮೃತ್ಯುವೇ ಮುಂದೆ ಬರಸಿಡಿಲಾಗಿ ಎರಗಿತು. ಏಳು ಮಂದಿ ಮಾರಿಯರನ್ನು ಗುರುವಿನ ಹರಕೆಯಂತೆ ಸಿದ್ದಪ್ಪಾಜಿ ಹಲಗೂರಿಗೆ ಕೂಡಿ 'ಒಂದೇ ವಾಂತಿ ಒಂದೇ ಭೇದಿ'ಯಲ್ಲಿ ಪಾಂಚಾಳರ ಕುಲವೆಲ್ಲ ಗುಡಿಸಿ ಹೋಗುವಂತೆ ಮಾಡಿದರು. ಶರಣಾಗಿ ಬಂದ ಪಾಂಚಾಳ ದಣಿಗಳಿಗೆ ಪ್ರಸನ್ನರಾಗಿ ಮತ್ತೆ ಮಡಿದವರನ್ನೆಲ್ಲ ಬದುಕಿಸಿದರು. 'ಕಬ್ಬಿಣ ಭಿಕ್ಷೆಯೊಡನೆ ಎಲ್ಲರನ್ನೂ ತಂದು ಗುರುಪಾದಕ್ಕೆ ಒಕ್ಕಲು ಮಾಡಿದರು. ಗುರು ನೀಡಿದ ಪ್ರಸಾದವನ್ನು ಜರಿದು ಹಲಗೂರಿಗೆ ಸೇರಿದ ಪಾಂಚಾಳರೂ, ಮತ್ತೊಂದು ಉಗ್ರರೋಗಕ್ಕೆ ಬೆದರಿ ಗುರುವಿನ ಆಶ್ರಯವನ್ನು ಕೋರಿಬಂದು ಶರಣಾದರು. ಧರೆಗೆ ದೊಡ್ಡವರು ಪವಡಿಸಲು 'ಜಲಬಾವಿ' ಸಿದ್ಧವಾಯಿತು. ನಾಲ್ಕೂ ಕಡೆಯಲ್ಲಿ ನಂದಾದೀವಿಗೆ ಗೂಡು ಮಾಡಿದರು. ಚಿನ್ನದ ತೊಟ್ಟಿಲು ಬೆಳ್ಳಿಯ ನೇಕೆಯನ್ನು ಇಳಿಬಿಟ್ಟು ವರವನ್ನು ಬೇಡಿದರು ಪಾಂಚಾಳರು:

"ಸಾವಿರ ತಂದರು ಸಂಜೆಗೆ ಲಯವಾಗಲಿ
ಕಂಡ ತಂದ್ರು ಮನೆಯಲ್ಲಿ ತಂಬಿಗೆ ಗಾತ್ರ ಬರವಿರಲಿ
ಊರಿಗೊಂದು ಒಕ್ಕಲಾಗಿ ಇರಹೋಗಿ ಪಾಂಚಾಳರೆ !"

ಗುರು ಮಂಟೆಸ್ವಾಮಿಯ ಶಾಪ ಪಾಂಚಾಳರ ಬದುಕನ್ನು ಕಲಕಿತು. ಕಂದಿ ಕುಂದಿ ಮುಂದೆ ನಡೆದು ಕರಗಿ ಹೋದರು.

ಪಾತಾಳದಲ್ಲಿ ಸ್ವಾಮಿ ಪವಡಿಸುವ ಮುನ್ನ ಮಾತಿನಂತೆ ರಾಚಪ್ಪಾಜಿ ಯವರೊಡನೆ ದೊಡ್ಡಮ್ಮ ತಾಯಿಯ ಕಲ್ಯಾಣವನ್ನು ಮುಗಿಸಿದರು. ರಾಚ ಪ್ಪಾಜಿಯವರು ಕಪ್ಪಡಿ ಕೈಲಾಸದಲ್ಲಿ ಪವಡಿಸುವಂತೆ ಹರಸಿದ ಗುರು ಸಿದ್ದ ಪ್ಪಾಜಿಗೆ ಪೂರ್ವ ಘಟ್ಟಗಳ ಕಾಡಿನ ಒಡಲ ಚಿಕ್ಕಲ್ಲೂರಿನಲ್ಲಿ ಪವಡಿಸಲು ಹೇಳಿ ದರು. ಹಿರಿಯ ಗುರು ರಾಜೇಂದ್ರಸ್ವಾಮಿಗಳು ಮಳವಳ್ಳಿಯಲ್ಲಿ ಕಿರಿಯ ಗುರು ರಾಜ ಪಟ್ಟದ ವೀರಭದ್ರ ಸ್ವಾಮಿಗಳು ಬೊಪ್ಪಗೌಡನಪುರದಲ್ಲಿ ಮಠಗಳನ್ನು ಆಳಲು ದಾರಿ ತೋರಿದರು. ಫಲಾಹಾರದಯ್ಯನವರು ಮುಟ್ಟನಹಳ್ಳಿ ತೋಪಿ ನಲ್ಲಿ ಉಳಿಯುವಂತಾದರೆ, ಪತಿಯ ಜೊತೆಗೆ ಹೊರಟ ದೊಡ್ಡಮ್ಮ ತಾಯಿ ಮುಟ್ಟನ ಹಳ್ಳಿಯ ತೋಪಿನಲ್ಲಿ 'ಮುಟ್ಟಾಗಿ' ಮರಳಿ ಹಿಂದೆ ಉಳಿದರು. ಕಿಡಗಣ್ಣ ರಾಚರಾಯರೇ ಕಾವೇರಿಯ ತೀರದ ಕಪ್ಪಡಿ ಕ್ಷೇತ್ರದಲ್ಲಿ ನೆಲಸಿದರು. ಚೆನ್ನಾಜಮ್ಮನೂ ಅಣ್ಣನ ಹಾದಿಯನ್ನೇ ಹಿಡಿದಳು.

'ಆಕಾಶ ಹೊದಿಕೆ ಮಾಡಿ ಭೂಮಿಯ ತೊಟ್ಟಿಲು ಮಾಡಿ
ಚಂದ್ರಸೂರ್ಯಾಧಿಗಳ ತಾಣ ದೀವಿಗೆ ಮಾಡಿ
ಗುಡುಗು ಮಿಂಚು ಶಂಖ ಜಾಗಟೆ ಮಾಡಿ
ಪರರ ಹಂಗು ನಮಗೆ ಬೇಡ
ನಮ್ಮ ಹಂಗು ನರರಿಗಿರಲಿ'

–ಎಂದೇ ಆ ಎಲ್ಲ ಮಹಾಮಹಿಮರೂ ಆಳವಾದ 'ಜಲ ಬಾವಿ'ಗಳಲ್ಲಿ ಪಾತಾಳದಲ್ಲಿ ಪವಡಿಸಿ ಲೋಕಕ್ಕೆ ಮಂಗಳವನ್ನೆಸಗಿದ್ದಾರೆ. ಶಿಷ್ಯರಾಗಿ ಬಂದ ಸಖರಾಯಪಟ್ಟಣದ ರಾಜಕುಮಾರರ ಪರಂಪರೆಯವರಿನ್ನೂ ಮಳವಳ್ಳಿ ಬೊಪ್ಪ ಗೌಡನಪುರದಲ್ಲಿ ಸ್ವಾಮಿಗಳಾಗಿ, ಆಗಿ ಹೋದ ಒಂದು ಸಾಂಸ್ಕೃತಿಕ ಕ್ರಾಂತಿಗೆ ಭಕ್ತಿಯ ಪ್ರವಾಹಕ್ಕೆ ನಿತ್ಯಸಾಕ್ಷಿಯಾಗಿ ಇಂದಿಗೂ ಉಳಿದಿದ್ದಾರೆ.

೦ ೦ ೦ ೦

ಸಂಕ್ರಾಂತಿಯ ದಿನಗಳಲ್ಲಿ ಚಿಕ್ಕಲ್ಲೂರಿನ ತಪೋಭೂಮಿಯಲ್ಲಿ ಆರು ದಿನಗಳವರೆಗೆ ಸಿದ್ದಪ್ಪಾಜಿಯವರ ಜಾತ್ರೆ ನಡೆಯುತ್ತದೆ. ಮುಂದೆ ಶಿವ ರಾತ್ರಿಯ ದಿನಗಳಲ್ಲಿ ಯುಗಾದಿಯವರೆಗೆ ಎಡತೊರೆಯ ಬಳಿಯ ಕಪ್ಪಡಿ

ರಾಚಪ್ಪಯ್ಯನವರ ಒಂದು ತಿಂಗಳ ಜಾತ್ರೆ ನಡೆಯುತ್ತದೆ. ಮಂಟೇಸ್ವಾಮಿಯ ಮಠದ ಸ್ವಾಮಿಗಳು ಬಸವನನ್ನು ಮುಂದೆ ಮಾಡಿಕೊಂಡು ಜಾತ್ರೆಗಳಿಗೆ ಹೋಗಿ ಭಕ್ತರನ್ನು ಹರಸಿ, ಜಾತ್ರೆಗಳನ್ನು ನಡೆಸಿ ಮಠಕ್ಕೆ ಮರಳುವ ಸಂಪ್ರದಾಯ ಇಂದಿಗೂ ನಡೆದುಬಂದಿದೆ.

–o–

# ಹೆತ್ತಯ್ಯ ರಾಚಪ್ಪನವರು

ಮಂಟೇದ ಲಿಂಗಯ್ಯನ ಮುದ್ದಿನ ಮಗ
ಎಷ್ಟು ದಿನವಯ್ಯ ಬಡಸ್ತಾನ-ರಾಚರಾಯ
ಬಿಟ್ಟು ನೋಡಯ್ಯ ಅರೆಗಣ್ಣ
ಇಂದು ರಾಚಪ್ಪಯ್ಯನವರಿಗೆ ಇಂದ್ರಲೋಕದ ಪೂಜೆ
ತುಂಬೆ ಹೂವಲ್ಲಿ ಶಿವಪೂಜೆ-ಮಾಡಿ ಬರುವಾಗ
ಬೆಳ್ಳಿಯ ಗಂಟೆ ಘಣರೆಂದೊ

ಮಂಟೇಸ್ವಾಮಿಯ ಕಥೆಗಳು ಮೈಸೂರು, ಮಂಡ್ಯ, ಬೆಂಗಳೂರು ಜಿಲ್ಲೆಗಳಲ್ಲಿ ಹೆಚ್ಚು ಪ್ರಚಾರದಲ್ಲಿವೆ. ಮಳವಳ್ಳಿಯ ಬಳಿಯ ಬೊಪ್ಪಗೌಡನಪುರ ಮೂಲಗುರು ಮಂಟೇಲಿಂಗಯ್ಯನವರು ನೆಲಸಿರುವ ಪುಣ್ಯನೆಲೆ. ಅವರ ಶಿಷ್ಯರೇ ಸಿದ್ದಪ್ಪಾಜಿ, ರಾಚಪ್ಪಾಜಿಯವರು. ಗುರು ಮಂಟೇಸ್ವಾಮಿಯವರು ಬೊಪ್ಪಗೌಡನ ಪುರದಲ್ಲಿ ತಪೋನಿರತರಾದ ಮೇಲೆ ಅವರ ಶಿಷ್ಯರೂ ತಮ್ಮ ಗುರುವಿನ ಸೂಚನೆಯಂತೆ ಒಂದೊಂದು ತಪೋಭೂಮಿಯನ್ನರಸಿ ಒಂದೊಂದು ದಿಕ್ಕಿಗೆ ತೆರಳುವರು, ಸಿದ್ದಪ್ಪಾಜಿಯವರು ಕೊಳ್ಳೆಗಾಲದಾಚೆಯ ಚಿಕ್ಕಲ್ಲೂರಿನಲ್ಲಿ ನೆಲಸಿದರೆ, ರಾಚಪ್ಪಾಜಿಯವರು ಮೈಸೂರಿನ ಮಾರ್ಗವಾಗಿ ಎಡತೊರೆಯ ಬಳಿಯ ಕಪ್ಪಡಿ ಕ್ಷೇತ್ರಕ್ಕೆ ಹೋಗಿ ತಪೋರೂಢರಾಗುತ್ತಾರೆ. ಅವರ ಪುಣ್ಯ ಕಥೆಯಲ್ಲಿ ಕಾರುಗಹಳ್ಳಿಯ ಕಾಳಗದ ಕಥೆಯೂ ಬೆರೆತು ಬರುತ್ತದೆ....ನೀಲಗಾರರು ಹಾಡುವ ಈ ಮನೋಜ್ಞ ಕಥೆಯನ್ನು ಕೇಳೋಣ.

ದೊಡ್ಡಮ್ಮ ತಾಯಿಗೂ, ರಾಚಪ್ಪಾಜಿಯವರಿಗೂ ಬೊಪ್ಪಗೌಡನಪುರದಲ್ಲೇ, ಗುರು ಸನ್ನಿಧಿಯಲ್ಲಿಯೇ ಲಗ್ನವಾಯಿತು. ಕಾವೇರಿಯ ತೀರದ ಕಪ್ಪಡಿ ಕೈಲಾಸದಲ್ಲಿ ಹೋಗಿ ನೆಲಸುವಂತೆ ಗುರುವಿನ ಅಪ್ಪಣೆಯೂ ಆಯಿತು. ಮಡದಿ ದೊಡ್ಡಮ್ಮ ತಾಯಿಯೊಡನೆ ರಾಚರಾಯರು ಹೊರಟು ತುಸುದೂರ ನಡೆದಿದ್ದರು. ಸಮೀಪದ ಹಳ್ಳಿಯೊಂದರ ಬಳಿ ತಾಯಿ ಮುಟ್ಟಾದರು.

ಆ ಹಳ್ಳಿಯ ತೋಪಿನಲ್ಲಿ ಏಳು ದಿವಸ ರಾಚರಾಯರು ತಂಗಿದರು.

ದೊಡ್ಡಮ್ಮ ತಾಯಿಗೆ ಏಳು ಸ್ನಾನವಾಯಿತು. ಏಳು ಮಡಿಯನ್ನೂ ಉಟ್ಟರು. ಪತಿಯ ಆಜ್ಞೆಯಂತೆ ಅವರು ಮರಳಿ ಗುರುಸನ್ನಿಧಿಗೆ ಬಂದು ನೆಲಸಿದರು. ತಾಯಿ ಮುಟ್ಟಾದ ನೆಲೆ ಮೂಟ್ಟೂರಾಯಿತು.*

ಮಡದಿಗೆ ಮನ್ನಣೆಯ ಮಾತ ಆಡಿಬಿಟ್ಟು
ಸ್ವಾಮಿ-ಅಮ್ಮನವರ ಹಿಂದಕ್ಕೆ ಕಳಿಸಿಬಿಟ್ಟು
ಅಲ್ಲಿಂದ ಮುಂದಕೆ ದಯ ಮಾಡುತ್ತಾರೆ

—ರಾಚರಾಯ್ರು ಸಿದ್ದಯ್ಯ ಸ್ವಾಮಿ ಬನ್ನಿ

ರಾಚಪ್ಪಾಜಿಯವರು 'ಕೊಳ್ಳೂರು ಮೇಲೆ ಕಡೆದು' ಬನ್ನೂರಿಗೆ ಬಂದರು. ಬಹಳ ಬಗೆಯ ಪೂಜೆಗಳಾದವು. ಅಲ್ಲಿಂದ ಹೊರಟವರು ಎಷ್ಟೋ ಹರಿದಾರಿ ನಡೆದು 'ಹೆಚ್ಚಿನ ಮೈಸೂರಿಗೆ ಬಂದರು. ಕಾರಂಜಿ ಕೆರೆಯ ಏರಿಯ ಮೇಲೆ ನಿಂತು ಮೈಸೂರಿನತ್ತ ಒಮ್ಮೆ ದೃಷ್ಟಿ ಹರಿಸಿದರು. ಆಗ ತಾನೆ ಹೊತ್ತು ಮೂಡಿ ಬರುತ್ತಿದೆ. ಅರಮನೆಯ ತೋಟಗಾರರು ಎಲೆ ಮುಂಡಿಗ್ಗೆ ಅಗ್ಗಣಿ (ಅಗ್ಗವಣಿ–ನೀರು)' ಎರೆಯುತ್ತಿದ್ದರು.

'ತ್ವಾಟಗಾರಾ, ತ್ವಾಟಗಾರಾ, ತ್ವಾಟಗಾರಾ....'

ಮೂರು ಬಾರಿ ಕೂಗಿದರು ನಮ್ಮಪ್ಪಾಜಿ ರಾಚರಾಯ್ರು. ಬೆಳಗಿನ ಮಬ್ಬು ಇನ್ನೂ ಹರಿಯದಿರುವಾಗ ಇದಾವುದ್ಯಾದನಿ! ಬೆಚ್ಚಿದನು ತೋಟಗಾರ. ಕಳ್ಳರೆಂದೇ ಶಂಕಿಸಿದನು. ಮಾತಾಡಲಿಲ್ಲ, ಹಾಗೆಯೇ ಒಂದು ಪೊದೆಯ ಮರೆಯಲ್ಲಿ ಅಡಗಿ ಕುಳಿತ !

ರಾಚರಾಯರಿಗೆ ಇನ್ನಿಲ್ಲದ ಸಿಟ್ಟು ಬಂದಿತು. ಅವರ ಕಣ್ಣು ಕೆಂಪಾದವು.

---

* ಬೊಪ್ಪಗೌಡನ ಪುರದ ಸಮೀಪದಲ್ಲೇ ಮುಟ್ಟೂರಿದೆ. ಆ ಊರಿನ ತೋಪಿನಲ್ಲಿ ಪ್ರತಿ ವರ್ಷವೂ ಯುಗಾದಿಯಂದು ಪೂರ್ತಿಗೊಳ್ಳುವ ಕಪ್ಪಡಿ ಜಾತ್ರೆಯಿಂದ ರಾಚಪ್ಪಾಜಿಯವರು ಹೊರಟು ದೊಡ್ಡಮ್ಮ ತಾಯಿಯನ್ನು ಕಲ್ಯಾಣವಾಗುವರು ಎನ್ನುವ ಪ್ರತೀತಿ. ಅದರಂತೆ ಸಂಪ್ರದಾಯಗಳನ್ನು ನಡೆಸಿದ್ದಾರೆ.

ನಿನ್ನ ಎಲೆ ಮುಂಡಿಗೆಯೆಲ್ಲ ಸುಳಿ ಬತ್ತಿ ಹೋಗಲಯ್ಯ
ಹಿಡಿದಿರುವ ಗುಂಬ ಎರಡು ದದ್ದೆ ಆಗಿ ಹೋಗಲಯ್ಯ
ಬಾವಿ ಗಂಗಮ್ಮ ತಾಯಿ ಜಲ ಬತ್ತಿ ಹೋಗಲಯ್ಯ
ಎತ್ತಿ ಶಾಪ ಹಾಕುತ್ತಾರೆ ಹೆತ್ತಯ್ಯ ರಾಚಪ್ಪನವರು !

ತೋಟಗಾರ ನೋಡುತ್ತಿರುವಂತೆಯೇ ಎಲೆಯ ಸುಳಿಗಳು ಒಣಗಿದವು. ನೀರು ಗಡಿಗೆಗಳು ಒಡೆದವು. ಬಾವಿಯ ಜಲವೆಲ್ಲ ಬತ್ತಿ ಬರಿದಾಯಿತು. ತೋಟಗಾರ ಓಡೋಡಿ ಬಂದು ಗುರುಪಾದವನ್ನು ಹಿಡಿದನು.

ರಾಚಪ್ಪಾಜಿಯವರು ಪ್ರಸನ್ನರಾದರು. ಅವರ 'ಕಪ್ಪ ಧೂಳ್ತ'ದಿಂದ ಮತ್ತೆ ಎಳೆಯ ಸುಳಿ ನಳನಳಿಸಿತು. ಬಾವಿಯ ಜಲ ತುಂಬಿ ತುಳುಕಿತು. ಒಡೆದ ಗುಂಬಗಳು ಕೂಡಿಕೊಂಡವು.

ಸುಳಿ ಸತ್ತೋಗಿರುವಂತಹ ತೋಟ
ಫಳ ಫಳನೆ ಚಿಗರಿ ಪಲ್ಲೈಸುತಿರುವುದಂತೆ !

ಆ ಸೊಂಪಾದ ತೋಟದಲ್ಲಿ, ಬಾವಿಯ ಕರೆಯಲ್ಲಿ ಎಳೆಬಾಳೆಯ ಸುಳಿಯೊಂದು. ಆ ಸುಳಿಯ ಮೇಲೆ ಸ್ವಾಮಿ ಹೋಗಿ ಮೂರ್ತ ಮಾಡಿದರು. ಒಂದು ಗಳಿಗೆಗೆ ಮುನ್ನೂರು ಮೂವತ್ತು ವರ್ಣವಾಗುತ್ತಿರುವರು. ತೋಟಗಾರನತ್ತ ಮತ್ತೆ ದನಿಯೆತ್ತಿ :

ಮೂಡಲ ರಾಜ್ಯದಿಂದ ಬಹಳ ಎಳವಾಗಿ ಬಂದಿರ್‍ತೀವಿ
ಮೂರು ಎಳನೀರ ಕೊಡಿರಯ್ಯ ತೋಟಗಾರ ಎಂದರಂತೆ !

—ಸಿದ್ದಯ್ಯಸ್ವಾಮಿ ಬನ್ನಿ

ತೋಟಗಾರ ಸ್ವಾಮಿಯ ಸನ್ನಿಧಿಗೆ ಬಂದ. ಮೈಸೂರ ದೊರೆಗಳ 'ಬಡಸ್ತಾನ'ವನ್ನು ಕುರಿತು ಅರಿಕೆಮಾಡಿಕೊಂಡ. ಮೈಸೂರ ದೇವರಾಜ ಒಡೆಯರಿಗೆ ಆಗ ಹೆಚ್ಚು ಬಡತನ. ಅವರು 'ಇಪ್ಪತ್ತು ಹುಟ್ಟಿ ಕುರುವೆನೆಲ್ಲ' ಲೆಕ್ಕ ಬರೆಯುತ್ತಿದ್ದವರು.

ನಾನು ಹ್ಯಾಗೆ ಕೊಡಬೇಕೊ ಧರ್ಮಗುರುವೆ ಎಂದನಂತೆ !

'ನಾನೇ ಕಿತ್ತುಕೊಳ್ಳುತ್ತೇನೆ' ಎಂದರು ಧರ್ಮಗುರು. ಮೂರು ತೆಂಗಿನ

ಮರವನ್ನು ಕೈ ಬೀಸಿ ಕರೆದರು, ಮೂರೂ ಮುಂದೆ ಬಾಗಿ ಸ್ವಾಮಿಯ ಪಾದಕ್ಕೆ ಗೊಂಚಲನ್ನು ಚಾಚಿದವು. ಎಳನೀರನ್ನು ಕುಡಿದು ತೃಪ್ತರಾಗಿ ತೇಗಿದರು ರಾಚರಾಯರು.

ಮೈಸೂರು ಅರಸರಿಗೆ ಗುರು ಬಂದ ಸುದ್ದಿಯನ್ನು ಮುಟ್ಟಿಸುವ ಹೊಣೆ ತೋಟಗಾರನಿಗಾಯಿತು. ಆದರೆ ಅವನು ಊರನ್ನು ಹೊಗುವಂತಿಲ್ಲ. ಸಾಲಗಾರರು ಸದಾ ಮನೆಯ ಬಳಿಯೇ ಅಲೆಯುವರು ! ಅವನಿಗಾಗಿ ಕಾದು ಕಾದು ಬೇಸತ್ತಿರುವರು !

ಗುರುಪಾದದಲ್ಲಿ ಕಣ್ಣೀರಿಟ್ಟನು ತೋಟಗಾರ. ರಾಚರಾಯರು ಕೆಳಗೆ ಬಾಗಿ ಒಂದು ಬೊಗಸೆ ಎರೆಯ ಮಣ್ಣನ್ನು ತೆಗೆದು ಅವನ ಮಡಿಲಲ್ಲಿ ಹಾಕಿದರು. ಬಿಚ್ಚಿ ನೋಡುವುದರಲ್ಲಿ ಎಲವೂ ಚಿನ್ನದ ನಾಣ್ಯ.

ಹಿಗ್ಗಿನಿಂದ ತೋಟಗಾರ ಗುರುವಿಗೆ ವಂದಿಸಿ ಮುಂದೆ ಹೊರಟ. ಮೊದಲು ರಾಜರಿಗೆ ಸುದ್ದಿ ಮುಟ್ಟಿಸುವುದನ್ನು ಮರೆತರೆ ಹಣವೆಲ್ಲ ಮತ್ತೆ ಮಣ್ಣಾಗುತ್ತದೆ. ಗುರವಿನ ಎಚ್ಚರಿಕೆ ಸ್ವಲ್ಪ ದೂರ ಮಾತ್ರ ಉಳಿದಿತ್ತು. ಇಂದೇ ಹೇಳುವುದೇನಿದೆ, ನಾಳೆ ಹೇಳಿದರಾಯಿತು, ಮೊದಲು ಮನೆ, ಮಡದಿ, ಮಕ್ಕಳು ! ಸಾಲಗಾರರ ಮೋರೆಯ ಮೇಲೆ ಹಣ ಎಸೆಯಬೇಕು ! ಠೀವಿಯಿಂದ ಮೈಸೂರ ಬೀದಿಯಲ್ಲಿ ಅಲೆಯಬೇಕು !

ತೋಟಗಾರನ ದಾರಿ ಬದಲಾಯಿತು. ಅರಮನೆಯ ದಿಕ್ಕಿನಿಂದ ತನ್ನ ಮನೆಯ ಕಡೆ ತಿರುಗಿದ. ಆದರೇನು, ಮನೆಯನ್ನು ಮುಟ್ಟುವುದರಲ್ಲಿ ಚಿನ್ನವೆಲ್ಲ ಮಣ್ಣಾಗಿತ್ತು. ಕೊಟ್ಟ ಮಾತಿಗೆ ಅವನು ತಪ್ಪಿ ನಡೆದಿದ್ದ.

ದೇವರಾಜ ಒಡೆಯರಿಗೆ ಸುದ್ದಿ ಮುಟ್ಟಿತು. ಪರಿವಾರ ಸಮೇತ ಕಾರಂಜಿಯ ತೋಟಕೆ ಬಂದರು. ಮನೆ ಮಂದಿಯೆಲ್ಲ ಗುರುಪಾದವನ್ನು ಮುಟ್ಟಿ ವಂದಿಸಿದರು. ಮೂರು ತಿಂಗಳ ಮಗುವಾಗಿ ಪಲ್ಲಕ್ಕಿಯ ಮೇಲೆ ಆಡುತ್ತಿದ್ದ ಗುರುವನ್ನು ಕಂಡು 'ನಿಜರೂಪ'ವನ್ನು ತೋರಲು ಬೇಡಿದರು ಅರಸರು. ಸ್ವಾಮಿ 'ಜ್ಯೋತಿ ಪ್ರಕಾಶ'ದಲ್ಲಿ ಕಾಣಿಸಿಕೊಂಡರು. ಪಟ್ಟಣ, ಆಸ್ಥಾನ, ಅರಮನೆ ಎಲ್ಲದರ ಕ್ಷೇಮವನ್ನೂ ಕೇಳಿದರು. ಅರಸರು ಗಂಭೀರವಾಗಿ ನುಡಿದರು. ಗುರುವು ತಿಳಿಯದಿರುವುದು ಏನಿದೆ !

"ಸ್ವಾಮಿ ತಮ್ಮ ಪಾದ ಬಲ್ಲುದಯ್ಯ"

ಮೈಸೂರ ಪ್ರಭುಗಳಿಗೆ ತುಂಬ ಬಡತನದ ದಿನಗಳವು. ಮೂವತ್ತು ಮೂರು ಹಳ್ಳಿಯ ಒಡೆತನದಲ್ಲೆ ತೃಪ್ತರಾಗಬೇಕಾಗಿದ್ದ ವೇಳೆಯಲ್ಲಿ* ಕಾರುಗ ಹಳ್ಳಿ ಬಹಳ ಸಿರಿ ಸಂಪತ್ತಿನಲ್ಲಿ ಓಲಾಡುತ್ತಿತ್ತು. ಮೂರು ಜನ ಸುಂದರ ಲಕ್ಷ್ಮಿಯರೆನ್ನುವ ಮಡದಿಯರೊಡನೆ ದರ್ಪದಿಂದ ಆಳಿದ್ದ ಹಂಪಣ್ಣ ನಾಯಕ, ಮೂವರಲ್ಲೂ ಮಕ್ಕಳಾಗದೆ ಮೈಸೂರರರಸ ಮಗಳು ದೊಡ್ಡಮ್ಮನನ್ನು ಬಯಸಿ ಮೇಲಿಂದ ಮೇಲೆ ಬೆದರಿಕೆಯನ್ನು ಹಾಕಿದ್ದ ಸಂಗತಿ ಗುರುಪಾದಕ್ಕೆ ಅರಿಕೆ ಯಾಯಿತು, ರಾಚಪ್ಪಯ್ಯನವರು ಎಚ್ಚರಿಸಿದರು ದೊರೆಗಳಿಗೆ :

"ಮೈಸೂರು ಹುಟ್ಟೋದಕ್ಕುಂಚೆ ಕಾರುಗಹಳ್ಳಿ ಹುಟ್ಟಿನೆ
ಕಾರುಗಹಳ್ಳಿಯವರು ಕಲ್ಕೆ ತುರಾಯದವರು
ಕಾರೆತಾಳದಲ್ಲಿ ಹಡೆದಿದ್ದ ಆನೆಯ ಕಡಿದವರು
ಹೊಡೆದನೆಂದರೆ ದಿರುಳಿ ಬಾಗಲ ಹಾಕಿಸುವವರು
ಕಾರಗ ಹಳ್ಳಿಯ ಮೇಲೆ ಹೆಡ್ಡ ಮುಡ್ಡಿಗೆ ಹೋಗಬೇಡ"

ಹಂಪಣ್ಣನಾಯಕನ ಸೊಕ್ಕನ್ನು ಮುರಿಯುವ ಪರಿಯನ್ನೂ ವಿವರಿಸಿ ದರು. ನಾಲ್ಕು ತೊಟ್ಟಿಯ ಮನೆಯನ್ನು ಕಟ್ಟಿಸಿ, ನಾಲ್ಕು ಸೇದುವ ಬಾವಿ ಗಳನ್ನೂ ತೋಡಿಸಲು ಸೂಚಿಸಿದರು. ಅಲ್ಲಲ್ಲಿ ಮದ್ದಿನ ಚೀಲಗಳು, ಕಾರುಗ ಹಳ್ಳಿಗೆ ಕರೆ ಹೋಗಬೇಕು. ಮಿತಪರಿವಾರದೊಡನೆ ನಿರಾಯುಧನಾಗಿ ಹಂಪಣ್ಣ ನಾಯಕ ಬಂದಾಗ ಹಣ್ಣನ್ನು ಕೊಡುವ ನೆಪದಲ್ಲಿ ಅವನ ಕೊಲೆಯಾಗಬೇಕು. ತೊಟ್ಟಿಯ ಮನೆಗೆ ಅವರನ್ನೆಲ್ಲ ಕೂಡಿ ಮದ್ದಿನ ಚೀಲವನ್ನು ಹಚ್ಚಿ ಸುಟ್ಟು, ಬೂದಿಯನ್ನು ಬಾವಿಗಳಿಗೆ ತುಂಬಿ ಚಪ್ಪಡಿ ಹಾಸಿ ವಜ್ರಗಾರೆ ಮಾಡಬೇಕು, ನೂರು ಸೂಲಂಗಿ ನಾಯಿಗಳನ್ನು ಬಿಟ್ಟುಕೊಂಡು ಯುದ್ಧಕ್ಕೆ ಬರುವ ಮೂರು ಜನ ಮಡದಿಯರನ್ನೂ —

* 'ಕಾರುಗ ಹಳ್ಳಿಯ ಕಾಳಗ'ದ ಕಥೆ ಇತ್ತೀಚೆಗೆ ಇದೇ ಸಂಗ್ರಾಹಕರಿಗೆ ದೊರೆತಿದೆ. ಇದೇ ಕಥೆಯ ಆ ವಿಸ್ತೃತರೂಪ ಐದು ವರ್ಷಗಳ ಶೋಧನೆಯ ನಂತರ ಮೈಸೂರಿನ ಮಟ್ಟೇಕೇರಿಯಲ್ಲಿದ್ದ ಹರಿಜನರ ನೀಲಗಾರ ರಾಚಪ್ಪನಿಂದ ದೊರೆತಿದೆ. ರಾಚಪ್ಪ ನೂರು ಹತ್ತು ವರ್ಷಗಳ ದೀರ್ಘ ಬದುಕನ್ನು ನಡೆಸಿ ಇತ್ತೀಚೆಗೆ ತೀರಿ ಕೊಂಡರು. ಅವರೊಬ್ಬರಲ್ಲಿ ಮಾತ್ರ ಆ ಕಥೆ ಉಳಿದಿದ್ದು ಅವರ ರುಗ್ಣಶಯ್ಯೆಯಲ್ಲಿ ಸಂಗ್ರಹಿತವಾಯಿತು.

'ಅವರ ಮುದುರು ಮುಂದಲೆ ಹಿಡಿಸಿ,
ಅವರ ಮೂರೆ ತುಕ್ಕುಡಕೆ ಕಡಿಸು'

ನಾಯಿಗಳಿಗೆ ನೂರು ಹಾಲು ಅನ್ನದ ಬುತ್ತಿಯನ್ನು ಉತ್ತ ಹೊಲದಲ್ಲಿ ಹರಡಿದರೆ ಶಾಂತವಾಗುತ್ತವೆ !

—ಗುರುವಿನ ಆಜ್ಞೆಯಾಯಿತು, ಹರಸಿ ಭಸಿತವನ್ನೂ ಇಟ್ಟರು. ಮೂರು ಕೋಟಿ ರಾಜ್ಯವಾಗುವ ದಾರಿಯನ್ನು ತೋರಿ, ಅರಮನೆಯಲ್ಲಿ ಉಣಬಯಸಿ ಬಂದರು.

ಗುರು ರಾಚಪ್ಪಾಜಿಯವರಿಗೆ ನಾಲ್ಕು ಎಡೆ ಸಿದ್ಧವಾಯಿತು, ರಾಣಿಯವರೇ ನಡುಕಟ್ಟು ಹಾಕಿ ಬಾಯಿಗೆ ಬಟ್ಟೆ ಕಟ್ಟಿ ನೂರೊಂದು ಬಗೆಯ ಪದಾರ್ಥದ ಎಡೆ ಮಾಡಿದರು. ಸಾಂಬ್ರಾಣಿಯನ್ನು ಬೆಳಗಿ ಎಲ್ಲರೂ ಹೊರಗೆ ಹೋದರು. 'ರಾಚರಾಯರು ನಾಲ್ಕು ಎಡೆಯನ್ನೂ ಅರಮನೆಯ ನಾಲ್ಕು ಮೂಲೆಗೆ ಎಸೆದರು. ನವರತ್ನಗಳ ರಾಶಿಯೇ ತುಂಬಿಹೋಯಿತು.'

ರಾಚಪ್ಪಾಜಿಯವರು ಕೋಟೆಯ ಬತೇರಿಯನ್ನು ಏರಿನಿಂತರು. ಸುತ್ತಲೂ ಒಮ್ಮೆ ಕಣ್ಣದಿಟ್ಟಿಯನ್ನು ಹರಡಿದರು.

ಗೀಜಗನ ಹಕ್ಕಿ ಹಂಗೆ ಗಿಜಗುಡಲಿ ಮೈಸೂರು
ತುಂಬೆ ಹೂವಿನ ಹಾಗೆ ತುಂಬಿಕೊಳಲಿ ಮೈಸೂರು
ಮೈಸೂರು ಏಳಿಗೆ ಆಗಲಿ
ಕಾರುಗಹಳ್ಳಿ ಹಾಳಾಗಲಿ
ಕಾರುಗಹಳ್ಳಿ ಹೆಣ್ಣಾಗಲಿ
ಮೈಸೂರು ಗಂಡಾಗಲಿ

ಕೈಯೆತ್ತಿ ಹರಸಿ, 'ಧೂಳ್ತವನ್ನು' ಎರೆಚಿದರು. ಮೈಸೂರಿಗೆ 'ಅಕ್ಷಯ' ವನ್ನು ಕೊಟ್ಟರು.

ಮೈಸೂರನ್ನು ಬಿಟ್ಟು ಮುಂದೆ ನಡೆದರು ರಾಚಪ್ಪಾಜಿ, ಮೈಸೂರ ಪ್ರಭುಗಳಿಗೆ ಕಂಡಾಯವನ್ನು ಕೊಟ್ಟುದಕ್ಕೆ ಸಾಕ್ಷಿಯಾಗಿ, ತಾವು ಹಲ್ಲು ತಿಕ್ಕದ ಕಡ್ಡಿಯನ್ನೇ ಮೈಸೂರ ನಡುಬೀದಿಯಲ್ಲಿ ನಟ್ಟರು. ಸಸಿ ಮರವಾಯಿತು. ಅಲ್ಲಿಯೇ ಸಸಿ ಮರದಯ್ಯನ ದೇವಾಲಯವೂ ಆಯಿತು.

ಮೈಸೂರನ್ನು ಬಿಟ್ಟ ರಾಚಪ್ಪಾಜಿಯವರು ಪಡುವಾರಹಳ್ಳಿಯ ಮೂಲಕ ಎಡತೊರೆಯ ದಿಕ್ಕಿನಲ್ಲಿ ನಡೆದರು. ಬೂದಿ ತಿಟ್ಟಿನಲ್ಲಿ ಒಂದು ರಾತ್ರಿ ತಂಗಿದ್ದರು. ಅಲ್ಲಿನ ಹುಪ್ಪಲಿಗಶೆಟ್ಟಿ ಕಾವೇರಿ ಚದುರ ಮಧ್ಯದಲ್ಲಿ ಬಂದು ಕಾಣುವಂತೆ ಕನಸಿನಲ್ಲಿ ನುಡಿದು ಮುಂದೆ ನಡೆದರು. ಕಾಟನಾಳು ಕೆರೆಯ ಏರಿಯ ಮೇಲೆ ಮೂರು ತೆಂಗು ತಲೆಬಾಗಿ ಎಳನೀರನ್ನು ನೀಡಿದವು. ಆ ಚೆಂದಗಾಲ ತೋಟದ ಗೌಡ ನಿಂಬೆಯ ಹಣ್ಣಿನೊಡನೆ ಗುರುಚರಣದಲ್ಲಿ ಎರಗಿ ಹರಕೆಯನ್ನು ಪಡೆದ.

ರಾಚಪ್ಪಾಜಿಯವರು ಹಳೆಯ ಕಪ್ಪಡಿಗೆ ಮುಂದೆ ಪಯಣ ಮಾಡಿದರು. ಆರು ದಿನ ತಂಗಿದ್ದ ಆ ಎಡೆಗೆ ತಿಪ್ಪೂರ ರಾಮ ಸಮುದ್ರದಿಂದ

ಕೋಳಿಯಸದ್ದು ಕತ್ತೆ ಸದ್ದು
ನಾಯಿಸದ್ದು ಒನಕೆ ಸದ್ದು
ಎಲ್ಲಾ ಕೇಳಿ ಬಿಡ್ತು !

ಪ್ರಶಾಂತವಾದ ದಿವ್ಯನೆಲೆಯೊಂದನ್ನರಸಿ ಬಂದರೆ ಇನ್ನಿಲ್ಲದ ಗೊಂದಲ ಅವರ ಅಂತರಂಗವನ್ನು ಕದಡಿತು ! ತಿಪ್ಪೂರ ರಾಮ ಸಮುದ್ರಕ್ಕೆ ಮಾರಿಯರನ್ನು ಕೂಡಿ ಹೊಸ ಕಪ್ಪಡಿಗೆ ಬಂದು ನಿಂತರು !

ರಾಚಪ್ಪಾಜಿಯವರು ಕಪ್ಪಡಿಯಲ್ಲಿ ಬಂದು ನೆಲಸಿದ ಸುದ್ದಿ ಕೈಲಾಸಕ್ಕೆ ಅರಿವಾಯಿತು. ಬಿರುದು ಬಾವಲಿಗಳು ಬಂದವು. ಎಡತೊರೆಯ ಹುಪ್ಪಲಿಗ ಶೆಟ್ಟಿ ಗುರುವಿನಡಿಗೆ ಬಂದು 'ಹನ್ನೊಂದಾಳುದ್ದ ಜಲಬಾವಿಯನ್ನು' ಸಿದ್ಧಗೊಳಿಸಿದನು. ಗುರು ಪವಡಿಸಲು ನಂದಾದೀವಿಗೆ ಗೂಡನ್ನು ಕೊರೆದು ಗುರುವಿನಡಿಗೆರಗಿದನು.

ನನ್ನ ಹಂಗು ಜಗತ್ತಿಗಿರಲಿ
ನರರ ಹಂಗು ನಮಗೆ ಬೇಡ

ಗುರು 'ಜಲಬಾವಿ'ಯಲ್ಲಿ ಪವಡಿಸಲು ಎದ್ದು ನಿಂತರು. ಹುಪ್ಪಲಿಗಶೆಟ್ಟಿ ತಲೆಬಾಗಿ, ಕೈಕಟ್ಟಿ ಗುರು ಚರಣವನ್ನೇ ನೋಡುತ್ತಿದ್ದ. ಬೇಡಿದ ವರವನ್ನು ಕೊಡಲೆಂದೇ ಅವನತ್ತ ತಿರುಗಿದರು. ಆದರೇನು, ಅವನು ಬಯಸಿದುದು, ಅವರ ನೆತ್ತಿಯ ರುಮಾಲು !

ಮಂದನಗೆ ಆಡಿತು ಗುರುವಿನ ತುಟಿಯ ಮೇಲೆ. ಉರಿಗದ್ದಿಗೆಯ ಮೇಲೆ

ಮರುದಿನ ಬಂದು ರುಮಾಲನ್ನು ಪಡೆಯಲು ಹೇಳಿ ತೆರಳಿದರು. ಹುಪ್ಪಲಿಗ ಶೆಟ್ಟಿ ಗುರು 'ಪವಡಿಸಿ'ದ ಮೇಲೆ ಗದ್ದುಗೆಯ ಬಳಿ ಬಾಗಿ ಅಲ್ಲಿದ್ದ ರುಮಾಲಿಗೆ ಕೈ ಹಚ್ಚಿದ, ಯಾವುದೋ ದಗೆ ಚಿಮ್ಮಿದಂತಾಗಿ ಕ್ಷಣಾರ್ಧದಲ್ಲಿ ಬೂದಿಯ ರಾಶಿಯಾಗಿ ಕರಗಿದ.

ಧರ್ಮಗುರು ರಾಚಪ್ಪಾಜಿಯುವರು :

ಆಕಾಶ ಹೊಂದಿಕೆಮಾಡಿ; ಭೂಮಿತೊಟ್ಟಿಲು ಮಾಡಿ
ಚಂದ್ರ ಸೂರ್ಯಾದಿಗಳ ತಾಳದೀವಿಗೆ ಮಾಡಿ
ನಕ್ಷತ್ರ ಪಂಪುಗಳ ಮಾಡಿ
ಗುಡುಗು ಮಿಂಚು ಶಂಖ ಜಾಗಟೆ ಮಾಡಿ

ಕಪ್ಪಡಿ ಕೈಲಾಸದಲ್ಲಿ ಮರತು ನಿದ್ರೆ ಮಾಡುತಾರೆ ನಮ್ಮ ಗುರುವು
ಕೈಲಾಸದ ಶರಣರು ಅವರ ಕಡೆಯಬಾಗಲ ಪಾರನಾದರು ಕಾಯುತಾರೆ
ಸಿದ್ಧಯ್ಯ ಸ್ವಾಮಿ ಬನ್ನಿ...............
ರಾಚಯ್ಯನವರ ವಚನ ಇಲ್ಲಿಗೆ ಮುದ್ರೆ ಶರಣು ಶರಣು !

ಮುಖ್ಯ ಕಥೆಗಾರ ತಂಬೂರಿಯುನ್ನು ಕಣ್ಣಿಗೆ ಒತ್ತಿ ಕೆಳಗಿಡುವಲ್ಲಿ ಹಿಮ್ಮೇಳದವರು ಮಂಗಳನವನ್ನು ಹಾಡುತ್ತಾರೆ.

ಇಂದು ರಾಚಪ್ಪಯ್ಯನವರು
ದಂಡೆತ್ತಿ ಹೋಯ್ತಾರೋ
ಗಿಂಡಿತುಂಬಿದರು ಹಡಪಕ್ಕೆ ಎಡತೊರೆಯ
ರಂಭೇರಾರತಿಯ ಬೆಳಗಿದರು
ನಾಳೆ ರಾಚಪ್ಪಯ್ಯನವರು
ಧಾಳಿ ಹೋಯ್ತಾರಂದು
ಸಾದು ತುಂಬವರೆ ಕಳಸಕೆ ರಾಮು ಸಮುದ್ರದ
ಬಾಲೆರಾರತಿಯ ಬೆಳಗಿದರು

ಮಂಟೇಸ್ವಾಮಿಯವರ ಸುದೀರ್ಘ ಕಥಾನಕದಲ್ಲಿ ಆರಂಭ ಹಾಗೂ ಅಂತ್ಯಗಳೆರಡರಲ್ಲೂ ರಾಚಪ್ಪಾಜಿಯವರ ಪುಣ್ಯಕಥೆ ನಮ್ಮನ್ನು ಪುಳಕ ಗೊಳಿಸುತ್ತದೆ.

ಸಿದ್ಧಪ್ಪಾಜಿಯವರು ಉಗ್ರಮೂರ್ತಿಯಾದರೆ, ಇವರು ಶಾಂತಮೂರ್ತಿ, ಸಂಯಮದ ಸಾಕಾರ ಮೂರ್ತಿ ಮಹಾಮಹಿಮಮ ಮಂಗಳ ಸ್ವರೂಪಿ.

ಕಪ್ಪಡಿ ಕೃಷ್ಣರಾಜನಗರದ ಸಮೀಪದಲ್ಲಿ ಕಾವೇರಿ ತೀರದ ಒಂದು ಪ್ರಶಾಂತ ಪುಣ್ಯಕ್ಷೇತ್ರ. ವರ್ಷಕ್ಕೊಮ್ಮೆ ಶಿವರಾತ್ರಿಯಿಂದ ಯುಗಾದಿಯವರೆಗೆ ಒಂದು ತಿಂಗಳ ಬಹು ದೊಡ್ಡಜಾತ್ರೆ ಇಲ್ಲಿ ನಡೆಯುತ್ತದೆ, ಬೊಪ್ಪಗೌಡನ ಪುರದಿಂದ, ಅಥವಾ ಮಳವಳ್ಳಿಯಿಂದ ಈ ಧರ್ಮಗುರುವಿನ ದಾರಿಯಲ್ಲಿ ನಡೆದು ಅರಸು ಮನೆತನದ ಸ್ವಾಮಿಗಳು ಬಿಜಮಾಡುತ್ತಾರೆ. ಎಷ್ಟೋ ಶತಮಾನಗಳ ಹಿಂದಿನ ಕಥೆ ಈ ಜೀವಂತ ಸಂಪ್ರದಾಯಗಳಲ್ಲಿ ಉಳಿದು ಬಂದಿದೆ.

—o—

# ತೋಳಲಿ ಒರಗೊ ಮಗನಿಲ್ಲ

ದೇವರ ಗುಡ್ಡರ ಕಥೆಗಳು ಒಂದು ಧರ್ಮಕ್ಕೆ, ಒಂದು ದೈವಕ್ಕೆ ಮೀಸಲಾಗಿಲ್ಲ. ಮಲೆಯ ಮಾದಯ್ಯನ ಮಹಿಮೆಗಳನ್ನು ಸಾರುತ್ತ ಭಕ್ತಿ ಪ್ರಸಾರವನ್ನು ಕೈಗೊಳ್ಳುವುದು ಅವರ ಪವಿತ್ರ ಕರ್ತವ್ಯ. ಆದರೆ ಕೆಲವು ಲೌಕಿಕ ಕಥೆಗಳನ್ನು ತಮ್ಮ ಆತ್ಮ ಸಂತೋಷಕ್ಕಾಗಿ ಕಲಿತಿರುತ್ತಾರೆ. ಅವರೇನು ಶಿವ ಕಥೆಗಳನ್ನೇ ಹಾಡಬೇಕಿಲ್ಲ. ರಾಮಾಯಣದ ಹಲವು ಪ್ರಸಂಗಗಳನ್ನೂ ಹಾಡಬಲ್ಲರು. ದೀನರ, ಆರ್ತರ ಉದ್ಧಾರಕ್ಕೆ ಶಿವ – ನಾರಾಯಣ ಇಬ್ಬರನ್ನೂ ಜೊತೆ ಜೊತೆಯಲ್ಲೇ ಕರೆತರಬಲ್ಲರು. ಪೌರಾಣಿಕ, ಐತಿಹಾಸಿಕ. ಲೌಕಿಕ ವಿಷಯಗಳು ಅವರ ಕಥೆಯ ವಸ್ತುವಾಗಬಹುದು. ಅಂಥ ಲೌಕಿಕ ಕಥೆಯೊಂದರ ಸಾಲಿನಲ್ಲಿ ಸಾಗಿದ್ದಾರೆ........ಇದು ರಾಯಬಂಜೆ ಹೊನ್ನಮ್ಮ ಕಥೆ....

ಸಮಗ್ರ ರಾತ್ರಿ ಜನರ ಆಸಕ್ತಿಯನ್ನು ಹಿಡಿದಿಡುವ ನಿಡಿದಾದ ಕೃತಿ : ಶೋಕ ಸ್ಥಾಯಿಯ ಹಿನ್ನೆಲೆಯಲ್ಲಿ ಕೇಳುವವರ ಕರುಳು ಮಿಡಿಯುವ ಕರುಣ ಕಥೆ....ಹೊನ್ನಮ್ಮನ ಕಥೆ....

ಆರು ಲೋಕವ ಆಳಿದರೇನು
ಬಂಜೆಯ ಬಾಳು ಬಾಳಲ್ಲ !
ಮೂರು ಲೋಕವ ಆಳಿದರೇನು
ಬಡುಡರ ಬಾಳು ಬಾಳಲ್ಲ !

ಊರುಊರಿಗೆಲ್ಲ ಮೇಲಾದ ಕೊಲ್ಲಂಪುರದ ಹೆಣ್ಣು ಮಗಳು ಅವಳು. ತಂದೆ ಸೋಮಯ್ಯನವರ ಕೊನೆಯ ಮಗಳು. ಆರು ಮಂದಿ ಅಕ್ಕಂದಿರು ಏಳು ಮಂದಿ ಅಣ್ಣಂದಿರ ಹಿಂದೆ ಹುಟ್ಟಿದವಳು. ಸ್ಥಿತಿವಂತ ಮುನಿಸುದೇವನಿಗೆ ಕೊಟ್ಟು ಲಗ್ನವಾಗಿತ್ತು. ಸಕಲ ಸಿರಿಸಂಪದ ಭೋಗ ಭಾಗ್ಯಗಳ ತೌರು ಅವಳ ಮನೆ....ಅವಳು ಪುಣ್ಯವಂತೆ....ಸತ್ಯ ಶರಣೆ ಆದರೇನು–

ಮುಕ್ಕಣ್ಣಯ್ಯನ ಬಳಿಯಲ್ಲಿ
ಅಷ್ಟ ಭಾಗ್ಯವ ತಂದವಳು

ಅಪ್ಪ ಭಾಗ್ಯವ ತಂದರೇನು
ಮಕ್ಕಳ ಭಾಗ್ಯವ ತರಲಿಲ್ಲ

ಎದೆಯ ಹಂಬಲ ಅವಳ ಬದುಕನ್ನು ಹಿಂಡಿದೆ, ಅಷ್ಟೈಶ್ವರ್ಯದ ಮಡಿಲಲ್ಲಿ. ಅಪಾರ ದುಃಖದಲ್ಲಿ ಮುಳುಗಿದ್ದಾಳೆ ! ಅವಳ ಸಂಪತ್ತಿಗಾದರೂ ಎಣೆಯುಂಟೆ ? ಚಿನ್ನದ ಏಳು ಅರಮನೆ. ಮುತ್ತಿನ ಮಂಚ ಐವತ್ತು, ಎಡದಲ್ಲಿ ಮುನ್ನೂರು ಕೋಟಿ ಭಾಗ್ಯ, ಬಲದಲ್ಲಿ ನಾನೂರು ಕೋಟಿ ಭಾಗ್ಯ ! ಅವಳ ಕೆಲದಲ್ಲಿ ಬಲದಲ್ಲಿ ಚಿನ್ನದ ತೂಗು ದೀವಿಗೆ....ಬ್ರಹ್ಮಯ್ಯ ಹಣೆಯಲ್ಲಿ ಏನು ಬರೆದನೊ. ತಾನೇನು ಕರ್ಮ ಮಾಡಿದಳೊ....ತಾನು ತಾಯಾಗಲಿಲ್ಲ.... ತಾಯಾಗಲಿಲ್ಲ !!

ಸಾಲು ಸೀರೆಯ ಉಟ್ಟರೆ ಏನು
ತೋಳಲಿ ಒರಗೋ ಮಗನಿಲ್ಲ
ಪಟ್ಟೆಯ ಸೀರೆಯ ಉಟ್ಟರೆ ಏನು
ಮೆಟ್ಟಿ ಮಲಗೋ ಮಗನಿಲ್ಲ !

ಓಹ್, ಅವಳ ನೋವು ಅಪಾರ. ಅವಳ ಸಂಕಟ ಅಸದಳ ! ಎಲ್ಲರು ಕೇಳುವುದು ಅದನ್ನೇ ಅದೊಂದನ್ನೇ.

ಮಕ್ಕಳು ಕೇಳೋರು ಬಲುಜನ
ಭಾಗ್ಯ ಕೇಳೋರ್‍ಯಾರಿಲ್ಲ

ಇರುವೆಗೆ ಮಕ್ಕಳನ್ನು ಶಿವ ಕೊಟ್ಟಿದ್ದಾನೆ, ಹುಲಿಗೂ ಕೊಟ್ಟಿದ್ದಾನೆ. ಈರೊಂಬತ್ತು ಕೋಟಿ ಜೀವರಾಶಿಯೂ ಮಕ್ಕಳು ಮರಿಯೊಡನೆ ನಲಿಯುತ್ತಿವೆ....ತಾನೊಬ್ಬಳೇ ಹತಭಾಗ್ಯಳೇ ! ತನ್ನ ಅಣ್ಣಂದಿರಿಗೆ ಮಕ್ಕಳಿವೆ. ಅಕ್ಕಂದಿರಿಗೆ, ಬಂಧುಬಳಗಕ್ಕೆಲ್ಲ, ಮಕ್ಕಳಿವೆ. ಲೋಕದಲ್ಲಿ ತಾನೊಬ್ಬಳೇ ಸಭಾಗ್ಯಳೇ ! ಅವಳು ಬಾಳಿ ಬದುಕುವ ಕಾಲದಲ್ಲಿ ಬಾಗಿಲಿಗೆ ಒಬ್ಬರೂ ಬರರು. 'ಸಂಗಡಗಾತಿಯರು' ಜೊತೆಯಲ್ಲಿ ನೀರಿಗೆ ಬರರು ! ನೆರೆಮನೆ 'ಸವತಿ'ಯರ ಮಾತನ್ನು ಕೇಳಲಾರಳು ! ಅಕ್ಕ ತಂಗಿಯರೊಬ್ಬರೂ ಅವಳೊಡನೆ ಮಾತಾಡರು, ಹಾದಿಯಲ್ಲಿ ಬೀದಿಯಲ್ಲಿ ಆಡುವ ಮಕ್ಕಳು ಅವಳ ಹತ್ತಿರ ಸುಳಿಯರು ! ಹೊನ್ನಮ್ಮನ ಕಣ್ಣೀರನ್ನು ಒರೆಸುವವರೇ ಇಲ್ಲವೇ....

ಎಲ್ಲರಿಗು ಮಕ್ಕಳು ಕೊಟ್ಟೆಲ್ಲೊ
ನಾನೇನು ಕರ್ಮವ ಮಾಡಿದ್ದೆ !
ನನಗೊಂದು ಕೊನೆಯ ಕೊಡಬಾರ್ದೆ !

ರಾಯ ಬಂಜೆ ಹೊನ್ನಮ್ಮ ಅತ್ತತ್ತು ಮಂಚದಲ್ಲಿ ಒರಗಿದಳು. ಬೆಳ್ಳಿಯ ತಟ್ಟೆಯಲ್ಲಿ ಬಿಳಿಯೆಲೆ ಇದೆ. ಸುರ ಹೊನ್ನೆ, ಸೇವಂತಿಗೆಯನ್ನೆ ತಲೆಗೆ ದಿಂಬು ಮಾಡಿದ್ದಾಳೆ. ಕರಿಹೊನ್ನೆ, ದುಂಡು ಮಲ್ಲಿಗೆಯನ್ನೇ ಕಾಲಿಗೆ ದಿಂಬು ಮಾಡಿದ್ದಾಳೆ. ತೂಗುದೀಪದ ಮಂದವಾದ ಬೆಳಕಲ್ಲಿ ಮಾಯದ ನಿದ್ದೆ ಅವಳಿಗೆ ಕವಿದಿದೆ. ಮಾಯದ ಕನಸೊಂದು ಹರಡಿದ ಮಲ್ಲಿಗೆಯಂತೆ ತೇಲಿ ಬಂದಿದೆ....

ಓಹ್ 'ಅವಳಿಗೊಬ್ಬ ಗೆಜ್ಜೆಯಕಾಲಿನ ಗಂಡು ಮಗು ! ಎಷ್ಟು ಮುದ್ದಾಗಿದ್ದಾನೆ. ತನ್ನ ನಗೆ ಬಗೆಯಿಂದ ತನ್ನ ಚಿತ್ತವನ್ನೆಂತು ಸೆಳಿದಿದ್ದಾನೆ !

ಹೊನ್ನಮ್ಮ ಉಕ್ಕಿದ ಒಲವಿನಲ್ಲಿ ಕಂದಮ್ಮನನ್ನು ಎತ್ತಿಕೊಂಡಳು. ಕಚ್ಚಿ ಕಚ್ಚಿ ಮುದ್ದಾಡಿದಳು. ಮಗ್ಗಲಲ್ಲಿ ಮಲಗಿಸಿ ಹಾಲು ಕುಡಿಸಿದಳು. ತೊಡೆಯ ಮೇಲೆ ಕೂರಿಸಿಕೊಂಡು ಜೋಗುಳ ಹಾಡಿದಳು....ಹಾಡುತ್ತಲೇ ಇದ್ದಳು....

ಆದರೆ....ಆ....ದ....ರೆ....ಕನಸು ಕರಗಿ ಹೋಗಿದೆ,....ತನ್ನ ಮುದ್ದು ಕಂದಯ್ಯ.... ಮಾಯವಾಗಿದ್ದಾನೆ.

ದಡಬಡನೆ ಮೇಲೆದ್ದಳು ಹೊನ್ನಮ್ಮ, ಎಡಬಲ ತಿರುಗಿ ನೋಡಿದಳು! ಕನಸು, ಅದೊಂದು ಬರಿಯ ಕನಸು !

ತೂಗು ದೀಪ ನಿಶ್ಚಲವಾಗಿ ಉರಿಯುತ್ತಿತ್ತು....

ಬಾಲನೆ ಇಲ್ಲದ ಧರಣಿ ನಾನು
ಬಾಲನ ಸಪುನ ಕಂಡೆನಲ್ಲ
ಮಕ್ಕಳೆ ಇಲ್ಲದ ಪಾಪಿ ನಾನು
ಮಕ್ಕಳ ಸಪುನ ಕಂಡೆನಲ್ಲ

ಹೊನ್ನಮ್ಮನ ಹೃದಯ ಸೀಳಿ ಬಂತು ; ಕಣ್ಣು ಹನಿಗೂಡಿದವು. ದುಗುಡದ ಭಾರದಲ್ಲಿ ಬೆಚ್ಚನೆ ಸುಯ್ದು ಕುಸಿದಿದ್ದಾಳೆ.

ನೀಲದ ಬಳೆಯ ಒಡೆದವಳೆ
ನಿಜಗೆಂಪಿ ಶೋಕವ ಮಾಡವಳೆ

ಮುತ್ತಿನ ಕಂಬವನ್ನು ಒರಗಿ ಮುತ್ತೈದೆ ಶೋಕ ಮಾಡಿದ್ದಾಳೆ ! ಕಲ್ಲು ಕರಗುವ ಹೊತ್ತು ನೀರ ನಿದ್ರೆಯ ಹೊತ್ತು, ಗಂಗಮ್ಮ ತಾಯಿಯೂ ಶಿವನೂ ನಿದ್ದೆ ಮಾಡುವ ಹೊತ್ತು. ಹಾಗಲಕಾಯಿ ಬೇವಿನಕಾಯಿ 'ಕಹಿ ಸಿಹಿ'ಯಾಗುವ ಹೊತ್ತು. ಸಮರಾತ್ರಿಯಲ್ಲಿ ಹೊನ್ನಮ್ಮ....

ಗಾಜಿನ ಕಂಬವ ಒರಗವಳೆ
ಬಾಲನಿಗೆ ಶೋಕವ ಮಾಡ್ಯವಳೆ !

'ಬಂಜೆಮ್ಮ'ನ ಶೋಕ ಕೀಳು ಲೋಕದಿಂದ ಮೇಲು ಲೋಕಕ್ಕೂ ಮುಟ್ಟಿತು. ಏನು ಕಾರಣವೋ ಭೂಲೋಕದಲ್ಲೊಬ್ಬಳು ಬಾಲೆ ಕಡು ಶೋಕ ಮಾಡಿದ್ದಾಳೆ ! 'ದೇವೇಂದ್ರರಾಯ', ಶಿವನಿಗೂ ನಾರಾಯಣನಿಗೂ ಓಡೋಡಿ ಸುದ್ದಿಯನ್ನು ಮುಟ್ಟಿಸಿದ. 'ಹೆಣ್ಣಿನ ಶೋಕ !' ಶಿವ-ನಾರಾಯಣರೂ ಭೂಲೋಕದ ಹಾದಿಯನ್ನು ಹಿಡಿದರು. ಬೆಳಗಾಗುವ ವೇಳೆಗೆ ಏಳೇಳು ಲೋಕವ ಸಂಚಾರ ಮಾಡಿ ಬಂಜೆಯ ಹಟ್ಟಿಗೆ ಬಂದರು. ಶಿವ ಒಂದು ವೇಷ, ಹರಿಯೊಂದು ವೇಹದಿಂದ ಅತ್ತ ಸುಳಿದರು.

ದಾನ ಧರ್ಮಕೆ ಬಂದೀವಿ
ನೀ ದಾನವ ನೀಡೆ ಕಂದಮ್ಮ

ಹೊತ್ತಾರೆಯಲ್ಲಿ 'ದಾನ'ದ ಮಾತು ಕೇಳಿ ಹೊನ್ನಮ್ಮ ಹಿಗ್ಗಿ ಹೊರಗೆ ಬಂದಳು. ಯಾವ ಸೀಮೆಯವರೋ ಜೋಗಯ್ಯ, ದಾಸಯ್ಯ ಇಬ್ಬರೂ ಭಿಕ್ಷೆಗೆ ಬಂದಿದ್ದಾರೆ, ಇಬ್ಬರಿಗೂ ಜೊತೆಯಲ್ಲೇ ಭಿಕ್ಷೆ ನೀಡಬೇಕು ! 'ಸ್ನಾನ ಮಡಿ ಮಾಡಿದಳು, ಮಿಂದು ಮಡಿಯುಟ್ಟಳು' ಚಿನ್ನದ ಬಟ್ಟಲೊಂದು ಬೆಳ್ಳಿಯ ಬಟ್ಟಲೊಂದು, ತೆಗೆದುಕೊಂಡಳು. ಹೊರಗೆ ಜೋಗಯ್ಯನ ಪಾದಕ್ಕೆ ಶರಣು ಮಾಡಿದಳು. ಚಿನ್ನದ ಬಟ್ಟಲ ಮುತ್ತು ರತ್ನಗಳನ್ನು ನೀಡಿದಳು. ದಾಸಯ್ಯನಿಗೆ ಬೆಳ್ಳಿಯ ಬಟ್ಟಲು ! ಪಾದಕ್ಕಾದರೂ ಶರಣು ಮಾಡಲಿಲ್ಲ ! ಹರನನ್ನೊಂದು ಕಣ್ಣಲ್ಲಿ, ಶಿವನನ್ನೊಂದು ಕಣ್ಣಲ್ಲಿ ಕಂಡಳೇ ! ಸಿಡಿಮಿಡಿಗೊಂಡ ನಾರಾಯಣ.

'ವಂಚನಕಾತಿ ಬಂಜಮ್ಮ
ಉರುಉರುಕಾತಿ ಬಂಜಮ್ಮ

ವ್ಯಂಗ್ಯ ನಗೆ ಹರಿದು ತುಟಿಯ ಮೇಲಾಡಿತು. ಬಂಜೆಯ ಕೈಯ ಭಿಕ್ಷೆ ಬೇಡವೆಂದು ಹರನ ಕೈಯನ್ನೂ ತಡೆದನು. ಮುತ್ತು ರತ್ನಗಳನ್ನು ಬಂಜೆಯ ಹಟ್ಟಿಯಲ್ಲೇ ಈಡಾಡಿ ಇಬ್ಬರೂ ಹೊರಟುಹೋದರು.

ಬಾಗಿಲಿಗೆ ಬಂದ ಪುಣ್ಯ ತನ್ನೊಂದು ಅವಿವೇಕದಿಂದ ಜಾರಿಹೋಯಿತು! ಶಿವನಾರಾಯಣರೇ ಬಂದಿದ್ದರೇನೋ, ಅಯ್ಯೊ, ತನ್ನ ಬಾಳು ದೈವಕ್ಕೂ ಬೇಡ ವಾಯಿತೇ, 'ದೈವಕ್ಕೂ ಬೇಡವಾಯಿತೇ! ಇನ್ನಾರನ್ನು ಕೇಳುವುದು, ಯಾರಲ್ಲಿ ಮರೆಹೋಗುವುದು !

ಗಳಗಳನೆ ಅತ್ತಳು ಹೊನ್ನಮ್ಮ ! ಬಿದ್ದು ಬಿದ್ದು ಹೊರಳಿದಳು !

ನಮ್ಮಪ್ಪನ ಮನೆಗೆ ಒಲಿದವನೇ
ಕಪಿನೀ ಪತಿಯೆ ನಂಜಯ್ಯ
ನಾ ತಪ್ಪದೆ ಜಾತ್ರೆಗೆ ಬರುತೀನಿ
ಮಕ್ಕಳ ಫಲವ ಕೊಡು ತಂದೆ !

ಇರುವವನು ಒಬ್ಬನೇ, ಅವನೊಬ್ಬನೇ-ಅವನನ್ನೇ ಆಶ್ರಯಿಸಬೇಕು !

ನಂಜಯ್ಯನಲ್ಲಿ ಮೊರೆಯಿಟ್ಟಳು ಹೊನ್ನಮ್ಮ.

ಮುಂದೆ ಹುಟ್ಟಿದ ಕಂದನ
ತೇರಿಗೆ ಆಹುತಿ ಕೊಡುತೀನಿ
ಅದರ ಹಿಂದೆ ಹುಟ್ಟಿದ ಕಂದನ
ಭಕ್ತನ ಕೂಡ ಬಿಡುತೀನಿ
ಗೊಂಬೆ ತೇರ ಗೆಯಿಸುವೆ
ಬಂಜೆಂಬ ಶಬುದ ಬಿಡಿಸಯ್ಯ

ಒಳ್ಳೆಯ ಮಕ್ಕಳನ್ನೇ ಅವಳು ಬೇಡಲಿಲ್ಲ. ಕುರುಡನಾಗಲಿ, ಕುಂಟ ನಾಗಲಿ, ಹೂತ್ತಾರೆ ಹುಟ್ಟಿದ ಮಗು ಸಂಜೆಗೆ ಸಾಯಲಿ ಆ ನೋವಿನಿಂದ ಪಾರಾದರೆ ಸಾಕು, ಆ ನಿಂದೆಯಿಂದ ದೂರವಾದರೆ ಸಾಕು.

ಹೆಡ್ಡನ ಹೆಳವನ ಕೊಟ್ಟಾರೆ
ಬುದ್ಧಿ ಹೇಳಿಕೊಂಡು ಸಾಕೇನು
ಕಾಣದ ಕುರುಡನ ಕೊಟ್ಟಾರೆ
ದೊಣ್ಣೆ ಕೊಟ್ಟುಗೊಂಡು ಸಾಕೇನು

ಯಾವ ಮಗುವಾದರೇನು. 'ಬಂಜೆ' ಎನ್ನುವ ನುಡಿ ತಪ್ಪಬೇಕು ತಾನು ನಂಜನಗೂಡಿಗೆ ಹೋಗಿ 'ದುಂಡುಳ್ಳು' ಸೇವೆಯಿಂದ ನಂಜಯ್ಯನನ್ನು ತಣಿಸ ಬೇಕು.

ಅಪಾರ ಕಾಣಿಕೆಯೊಡನೆ ತನ್ನಡೆಗೆ ಹೊರಟ ಬಂಜೆಯನ್ನು ನೆನೆದ ನಂಜಯ್ಯ ಬೆಚ್ಚಿದ. ತನ್ನ ಅಪಾರ ಪರಿಸೆ ಬರುತ್ತದೆ. ತನ್ನ ಎಡದಲ್ಲಿ ದೇವೀರಿ, ಬಲದಲ್ಲಿ ಪಾರ್ವತಿ....ಇಂಥ ನೆಲೆಗೆ ಅವಳು ಬರುವುದೇ....ಬಂಜೆ ಅಡಿಯಿಟ್ಟ ನೆಲೆಯಲ್ಲಿ ಎಲ್ಲರೂ ಬಂಜೆಯರಾಗಿಬಿಡುವರು ! ಅವಳಿಲ್ಲಿಗೆ ಬರದಂತೆ ನಡು ದಾರಿಯಲ್ಲೇ ತಡೆಯಬೇಕು....ತಡೆದುಬಿಡಬೇಕು....

ಹತ್ತುಸಾವಿರ ಹೊನ್ನ ಎತ್ತಿನ ಮೇಲೆ ಹೇರಿಸಿಕೊಂಡು ನಂಜನಗೂಡಿಗೆ ವೈಭವದಿಂದ ಹೊರಟ ಹೊನ್ನಮ್ಮನಿಗೆ, ದಾರಿ ನಡೆಯದೆ, ಸೋತು ಕುಳಿತ ಹೆಂಗಸೊಬ್ಬಳು ಕಾಣಿಸಿಕೊಂಡಳು. ನಂಜಯ್ಯನ ವರದಿಂದಲೇ ಪಡೆದ ಮಗುವೊಂದನ್ನು ಕಂಕುಳಲ್ಲಿ ಪಡೆದ ಅವಳು ತುಸು ದೂರ ಮಗುವನ್ನು ಎತ್ತಿ ಕೊಳ್ಳಲು ಹೊನ್ನಮ್ಮನನ್ನೇ ಕೇಳಿದಳು. ಮೈ ತುಂಬ ಕಜ್ಜಿ, ಮೈ ತುಂಬ ಕುರುವಾಗಿ ಕೀವು ರಕ್ತ ಒಸರುವ ಮಗುವನ್ನು ಕಂಡು ಹೇಸಿದಳು ಹೊನ್ನಮ್ಮ. ಸ್ವಾಮಿಯ ವರವನ್ನು ಪಡೆದು, ಬೇಕಾದ ಮಕ್ಕಳ ಫಲವನ್ನು ದೊರಕಿಸಿ ಕೊಳ್ಳಲು ಹೊರಟವಳು ಅವಳು, ಈ ಕೀವು ರಕ್ತದ ಮಗುವನ್ನು ಮುಟ್ಟದಾದಳು ! ಮಗು ಹೊನ್ನಮ್ಮನನ್ನು ಕಂಡು.

ಗರಗರನಾದ್ರೆ ಅಳುತದೆ
ನಮ್ಮ ಕಜ್ಜಿಪುಳ್ಳೆ ಕಂದಯ್ಯ

ಹೊನ್ನಮ್ಮ ಮರುಗಲಿಲ್ಲ, ಕರಗಿ ಕಂದನನ್ನು ಕೈಗೆತ್ತಿಕೊಳ್ಳಲಿಲ್ಲ.

ನಿನ್ನ ಕಜ್ಜಿ ಮೈ ಮುಟ್ಟಿದರೆ
ನನಗೂ ಕಜ್ಜಿ ಬರುತದೆ
ನಂಜನಗೂಡಿಗೆ ಹೋಗ್ತೀನಿ
ಒಳ್ಳೆ ಬಾಲನ ಕೇಳ್ತೀನಿ !

ಹೊನ್ನಮ್ಮನ ನಿಷ್ಠುರದ ನುಡಿಗೆ ಆ ಹೆಂಗಸು ನಕ್ಕಳು. ಮರುಕ್ಷಣದಲ್ಲಿ ಅಲ್ಲೆಲ್ಲೋ ಕಾಣೆಯಾದಳು !

ನಂಜಯ್ಯ ಇನ್ನು ನಿಜರೂಪವನ್ನೇ ತಾಳಬೇಕಾಯಿತು. ಕವಿದ ಪೊದೆಯೊಂದರ ಬಳಿ, ಏಳು ಹೆಡೆ ಸರ್ಪವನ್ನೊರಗಿ ನಡುದಾರಿಯಲ್ಲಿಯೇ ಬಂದು ಮಲಗಿದ್ದಾನೆ. ಗುಡುಗುಡನೆ ಓಡಿದ ಹೊನ್ನಮ್ಮ ನಂಜಯ್ಯನ ಪಾದವನ್ನು ಹಿಡಿದಳು.

ಭಾಗ್ಯವ ಕೊಟ್ಟ ಶಿವ ನೀನು
ಉಣ್ಣೊ-ಬಾಲನ ಕೊಡದೆ ಹೋದಲ್ಲೊ
ಮಕ್ಕಳ ಚಿಂತೆ ತಪ್ಪಿಸೊ
ನಮ್ಮಪ್ಪನ ಮನೆಯ ದೇವರೆ

ನಂಜಯ್ಯ ಒಲಿಯುಲಿಲ್ಲ; ಭಕ್ತಿಯನ್ನು ಕಂಡು ಅವನ ಮುಖ ಅರಳಲಿಲ್ಲ. ಅವಳ ದೈನ್ಯತೆಗೆ ತಾನೇಕೋ ಕರಗಲಿಲ್ಲ, ಮರುಗಲಿಲ್ಲ ; ಹಿಂದಿನ ಜನ್ಮದ ಕರ್ಮದ ಮಾಲೆಯನ್ನೇ ಅವಳ ಮುಂದೆ ಬಿಚ್ಚಿದ.

'ಸಂಗಡಗಿತ್ತಿಯರ' ಮಕ್ಕಳ ಮೊಂಡಗೈಯ್ಯಲ್ಲೆತ್ತಿ ಹೊಡೆದಿದ್ದಳು, ಹಸುಳೆಗೆ ಹಾಲೆರೆ ಎಂದರೆ ಕಳ್ಳಿಯ ಹಾಲ ನೀಡಿದ್ದಳು. ಶಿಶುವಿಗೆ ಬೆಣ್ಣೆ ನೀಡೆಂದರೆ ಸುಣ್ಣವನ್ನು ಬಾಯಿಗೆ ಹಾಕಿದ್ದಳು. ಊಟಕೆ ಕುಳಿತವರಿಗೆ ಮದ್ದು ಇಕ್ಕಿದ್ದಳು. ಮಾಡುವಂಥ ದಾನಕ್ಕೆ ಬೇಡವೆಂದು ತಡೆದಿದ್ದಳು. ತುಂಬಿದ ಬಾವಿ ಬಾಗಿ ನೋಡಿ ಬಾಯ ತಂಬುಲ ಉಗಿದಿದ್ದಳು....

ಇಂಥ ಕರ್ಮವ ಮಾಡಿದ ಚಾಂಡಾಳಿ
ಬಾಲನ ಭಾಗ್ಯವು ನಿನಗಿಲ್ಲ
ಅಲ್ಲಿ ತರದ ಭಾಗ್ಯವನು
ಇಲ್ಲೆಲ್ಲಿ ತರಲೆ ಹೆಣ್ಣುಮಗಳೆ
ಮಕ್ಕಳ ವರವು ನಿನಗಿಲ್ಲ
ಹಿಂದಕೆ ಹೋಗೆ ಹೊನ್ನಮ್ಮ !

ಹೊನ್ನಮ್ಮನ ಬಾಯಿ ಕಟ್ಟಿತು. ಕಣ್ಣು ಹನಿಗೂಡಿತು. ನೆಚ್ಚಿ ಬಂದ ನಂಜಯ್ಯನ ಕಲ್ಲು ಮನಸ್ಸು ಕರಗಲಿಲ್ಲ. ನಡು ದಾರಿಯಲ್ಲಿ ನುಡಿದು ಜಾರಿಕೊಂಡ.

ಬಿಡು ಬಿಡು ನೀನು ನಂಜಯ್ಯ
ಬಡಮಾತನ್ನೇ ಆಡಬೇಡ....

ಬಿಕ್ಕಿ ಬಿಕ್ಕಿ ಅತ್ತಳು. ಕುಳಿತು ಯೋಚಿಸಿದಳು. ಏನನ್ನೋ ನೆನೆದು ಮೇಲೆದ್ದಳು.

ಅಕ್ಕದಿರ ಮಕ್ಕಳ್ನ ನೋಡ್ತೀನಿ !
ನಾ ದುಃಖ ಕಳೆದು ಬರುತೀನಿ !

ಮಕ್ಕಳಿಗೆ ಬೇಕಾದ ಒಡವೆ ವಸ್ತ್ರಗಳನ್ನು ಕೊಂಡು ತಿಂಡಿ ತಿನಸುಗಳನ್ನು ಕೊಂಡಳು. ಅಕ್ಕಂದಿರ ಊರಿಗೆ ಬಂದು ಬೀದಿಯಲ್ಲಾಡುವ ಮಕ್ಕಳನ್ನು ಕರೆದು, ತಾ ತಂದ ವಸ್ತುಗಳಿಂದ ಅಲಂಕರಿಸಿ ತಿಂಡಿಯನ್ನಿತ್ತು ತೊಡೆಯ ಮೇಲಿಟ್ಟು ಜೋಗುಳ ಹಾಡಿದಳು ಪ್ರೀತಿಯಲ್ಲಿ. ಎಲ್ಲಿಯೋ ಬಂಜೆಯ ದನಿಯೆಂದು ಬೆಚ್ಚಿ ಅಲ್ಲಿಗೆ ಬಂದು ಅಕ್ಕಂದಿರು ಮಕ್ಕಳನ್ನು ಕಿತ್ತುಕೊಂಡರು. ಅವಳು ತಂದ ವಸ್ತುಗಳನ್ನು ಕಿತ್ತೆಸೆದರು.

ನೀ ಕೂತ ಜಾಗ ಬಂಜಾಯ್ತು
ನೀ ನಿಂತ ಜಾಗವು ಬಂಜಾಯ್ತು

ಹಂಗಿಸಿ ನುಡಿದರು. ಕವೆಗೋಲನ್ನು ತಂದು ಆಚೆಗೆ ನೂಕಿದರು.

ಶೋಕದಲ್ಲಿ ಬೆಂದ ಹೊನ್ನಮ್ಮ ತೌರನ್ನು ನೆನೆದಳು, ತಾಯಿ ತಂದೆಯರಿಗೆ ಹಂಬಲಿಸಿದಳು. ಅಪಾರ ಉಡುಗೊರೆಗಳ ರಾಶಿಯನ್ನೇ ಕೊಂಡು ತಾಯಿಯ ಮನೆಗೆ ಬಂದರೆ, ಏಳು ಮಂದಿ ಅತ್ತಿಗೆಯರ 'ಚಾಡಿಚಿದ್ರ'ಕ್ಕೆ ತೌರಬಾಗಿಲೂ ಹಾಕಿತು. ತಾಯ ಹೃದಯ ಕಲ್ಲಾಯಿತು. ಕೂಗಿ ಕರೆದಳು ಹೊನ್ನಮ್ಮ ! ಹಂಬಲಿಸಿ ಹಲುಬಿದಳು !

ಪಾದನಾದರು ತೋರು ತಾಯಿ
ಪಾದ ಪೂಜೆ ಮಾಡುತೀನಿ

ಬಂದ ಉತ್ತರವಾದರೂ ಏನು ! ಹೊನ್ನಮ್ಮನ ಎದೆಯೊಡೆದು ಛಿದ್ರವಾಗುವ ನುಡಿಯನ್ನು ಹೆತ್ತ ತಾಯಿಯೇ ಆಡಿದಳೇ !

ನೀ ಮಾರ್ಹೋದ ಹೆಣ್ಣು ಮನೆಗ್ಹೊರಗು
ನೀ ಕೊಟ್ಟ ಹೆಣ್ಣು ಕುಲಕ್ಹೊರಗು
ನನ್ನ ಭಾಗಕೆ ನೀ ಸತ್ತೆ
ನಿನ್ನ ಭಾಗಕೆ ನಾ ಸತ್ತೆ

ಲೋಕದ ತಾಯಿ ಗಂಗಮ್ಮನೊಬ್ಬಳೇ ಇನ್ನು ಹೊನ್ನಮ್ಮನ ಪಾಲಿಗೆ ಉಳಿದವಳು! ತುಂಬಿದ ಕೆರೆಯ ಏರಿಯ ಮೇಲೆ ಹೊನ್ನಮ್ಮ ಸಾಗಿ ಬರುವಾಗ 'ಗಂಗಮ್ಮನ' ಮಡಿಲನ್ನು ಕೋರಿ ಅಂಗಲಾಚಿದಳು. ನೀರಿಗೆ ಬಿದ್ದ ಅವಳನ್ನು ಒಮ್ಮೆ ಗಂಗಮ್ಮನೂ ಹೊರಗೆ ಹಾಕಿದಳು. ಮತ್ತೊಮ್ಮೆ ಕಲ್ಲನ್ನು ಕಟ್ಟಿ ಬೀಳುವಾಗ, ಕೆರೆಯ 'ಹನ್ನೆರಡಾಳುದ್ದ' ಜಲವೂ ಬತ್ತಿಹೋಯಿತು. ಹುತ್ತದ ಹಾವಾದರೂ ಅವಳನ್ನು ಕಚ್ಚಲಿಲ್ಲ. ಹುತ್ತಕ್ಕೆ ಕೈಹಾಕಿ ತನ್ನನ್ನು ಬಂಜೆ ಮುಟ್ಟಿದ ಪಾಪಕ್ಕೆ ಹಾವು ಶಿವ-ನಾರಾಯಣರನ್ನು ಕುರಿತು 'ತಬಸು' ಮಾಡಿ ಶುದ್ಧವಾಯಿತು ; ದೂರ ಬೇರೊಂದು ಹುತ್ತಕ್ಕೆ ಹರಿದು ಹೋಯಿತು. ಹಸಿದ ಹುಲಿಯೂ ಅವಳನ್ನು ಮುಟ್ಟಲಿಲ್ಲ.

ತನ್ನನ್ನು ಲೋಕವೇ ತಿರಸ್ಕರಿಸಿದೆ! ತನಗೆ ಎಲ್ಲಿಯೂ ಆದರವಿಲ್ಲ. ಗೌರವವಿಲ್ಲ! ನೋವಿನಲ್ಲಿ ಸಂಕಟದಲ್ಲಿ ಹೊನ್ನಮ್ಮ ಮನೆಗೆ ಮರಳಿದಳು. ಪತಿ ಮನಿಸು ದೇವನಿಗೆ ಮತ್ತೊಂದು ಲಗ್ನವಾಗಲು ಹೇಳಿದಳು. ಅವಳಲ್ಲಾದರೂ ಮಕ್ಕಳಾದರೆ ಕಣ್ಣಿಂದ ನೋಡಿ ತಣಿಯಲೆಳಸಿದಳು. ಒಪ್ಪದ ಪತಿಯ ಇಚ್ಛೆಯಂತೆ ದಾನ ಧರ್ಮ ಮಾಡಿದಳು. ಅವಳು ಹಾಕಿದ ಹುಲ್ಲನ್ನು ಗೋವು ಮೇಯಲಿಲ್ಲ. ಅವಳು ಕಟ್ಟಿದ ಕಟ್ಟೆಯಲ್ಲಿ ಪಶು ಪಕ್ಷಿ ನೀರು ಕುಡಿಯಲಿಲ್ಲ. ಅವಳು ಬೆಳೆದ ತೋಪಿಗೆ ದೇವಲೋಕದಿಂದ ಹಾರಿಬಂದ ಗಿಣಿಗಳು ಹಣ್ಣಿನ ಚೆಂದವನ್ನು ನೋಡಿದವು....ಆದರೆ ಹತ್ತಿರ ಸುಳಿಯಲಿಲ್ಲ.

ಹಣ್ಣು ಅನ್ನೊ ಚೆಂದಾಕೆ ನಾವು ತಿನ್ನಬಾರದು
ನಾವು ಬಂಜೇರು ಆಯ್ತೀವಿ ;
ನಮ್ಮ ಮಕ್ಕಳು ಬಂಜೆ ಆಯ್ತಾವೆ !
ನಮ್ಮ ಗೌರಮ್ಮ ಬಂಜೆ ಆಯ್ತಾಳೆ !

ಹೊನ್ನಮ್ಮ ಕಂಗೆಟ್ಟು ಕೋಡುಗಲ್ಲೊಂದನ್ನೇರಿದಳು. ಉಗ್ರ ತಪಸ್ಸನ್ನು ಮಾಡಲು ನಿರ್ಧರಿಸಿಕೊಂಡಳು.

ತಲೆಯ ಕೆಳಗೆ ಮಾಡಿದಳು
ಪಾದ ಮೇಲಕೆ ಮಾಡಿದಳು
ಮಕ್ಕಳ ವರಕೆ ಬಂಜಮ್ಮ

ಹರನೆ ನಿನಗೆ ತಬಸಯ್ಯ
ಹರಿಯೇ ನಿನಗೆ ತಬಸಯ್ಯ !

ಹೊನ್ನಮ್ಮನ ಬಳಿಗೆ ಶಿವಪಾರ್ವತಿಯರು ಹೂವಿನ ರಥದ ಮೇಲೆ ಕುಳಿತು ಬಂದರು. ಬಂಜೆಯ ದುಃಖವನ್ನರಿತು ಗೌರಿಯ ಹೆಂಗರುಳು ಮರುಗಿತು. 'ಮೂಗು ಬೆಕ್ಕ'ನ್ನು ಬಂಜೆಯ ಕೈಗೆ ನೀಡಿದಳು ಗೌರಿ.

ಮಕ್ಕಳ ಗ್ನಾನ ಆದಾಗ
ಬೆಕ್ಕನೆ ನೀನು ಮುದ್ದಾಡು
ಮಕ್ಕಳ ಸಂತಾನ ಆಗುತದೆ

ಗಿರಿಜೆ ನೀಡಿದ ಬೆಕ್ಕನ್ನು ಹೊನ್ನಮ್ಮ ಮುದ್ದಿನಿಂದ ಸಾಕಿದಳು. ಮಕ್ಕಳ ನೆನಪು ಆದಾಗ ತನ್ನ ಮುದ್ದು ಬೆಕ್ಕನ್ನು ಮುದ್ದಾಡಿ ಮೈಮರೆಯುತ್ತಿದ್ದಳು. ಗೌರಿಯ ನುಡಿ ಸುಳ್ಳಾಗಲಿಲ್ಲ. ಹೊನ್ನಮ್ಮ ಗಂಡು ಮಗುವೊಂದರ ತಾಯಾದಳು. ಅವಳ ಬಂಜೆತನ ಹರಿಯಿತು. ಅನ್ನದಾನ ಮಾಡಿದಳು. ಬಗೆಬಗೆಯ ಧರ್ಮ ಕಾರ್ಯಗಳನ್ನು ಮಾಡಿಸಿದಳು. ಸಡಗರಗೊಂಡಳು. ಸಂಭ್ರಮಗೊಂಡಳು.

ಶಿವ-ನಾರಾಯಣರಿಗೆ ಸಿಟ್ಟು ಬಂತು. ಗೌರಿಯ ವರದಿಂದ ಹೊನ್ನಮ್ಮ ಮಗುವನ್ನು ಪಡೆದಿದ್ದಾಳೆ. ತಾವು ಹೋಗಿ ವರವನ್ನು ಕೊಡಲಿಲ್ಲ....ತನ್ನ ಕಂದನನ್ನು ಅವಳೆಂತು ಉಳಿಸಿಕೊಳ್ಳುವಳು !

ಘಟಸರ್ಪವೊಂದು ಕೈಲಾಸದಿಂದ ಇಳಿದು ಬಂದಿತು. ಚಿನ್ನದ ಕೊಡವನ್ನು ಕೊಂಡು ನೀರಿಗೆ ಹೋದ ದಾರಿಗೆ ಹೊನ್ನಮ್ಮನ ಮುದ್ದಿನ ಬೆಕ್ಕು ಓಡೋಡಿ ಬಂದಿತು. ಅದರ ಮೈಯೆಲ್ಲ ರಕ್ತವಾಗಿದೆ. ಬಾಯೆಲ್ಲ ರಕ್ತವಾಗಿದೆ; ಮಗುವಿನ ಕಾವಲಿಗೆ ಬಿಟ್ಟು ಬಂದ ಬೆಕ್ಕು ಮಗುವನ್ನೇ ಕೊಂದಿತೆ ?

ಹೊನ್ನಮ್ಮ ಅಬ್ಬರಿಸಿ ಚಿನ್ನದ ಕೊಡವನ್ನು ಬೆಕ್ಕಿನ ಮೇಲೆ ಒಗೆದಳು. ಅವಳ ಪಾದದಲ್ಲಿ ಮರುಗಳಿಗೆಯೇ ಬೆಕ್ಕು ಪ್ರಾಣ ನೀಗಿತು. ಮನೆಗೆ ಬಂದ ಹೊನ್ನಮ್ಮ ತನ್ನ ಕಂದಯ್ಯ ತೊಟ್ಟಿಲಲ್ಲಿ ಕಿಲಕಿಲನೆ ಆಡುವುದನ್ನು ಕಂಡು ಬೆರೆಗಾದಳು; ತೊಟ್ಟಿಲ ಕೆಳಗೆ ತುಂಡಾಗಿ ಬಿದ್ದಿದ್ದ ಘಟಸರ್ಪವನ್ನು ನೋಡಿ ಹೌಹಾರಿದಳು! ಶಿವ ಕೊಟ್ಟ ಬೆಕ್ಕು ತನ್ನ ಮುದ್ದು ಕಂದನನ್ನು ಉಳಿಸಿದೆ... ಕೈಯಾರೆ

ಅದನ್ನು ಕೊಂದ ಪಾಪಿ ತಾನೇಕೆ ಇನ್ನು ಬದುಕಬೇಕು.....

ಮೂಗು ಬೆಕ್ಕನೆ ಕೊಂದ ಕರ್ಮ
ಮುಗಿಲು ಹೊಕ್ಕರು ಬಿಡದಲ್ಲೊ !

ಹೊನ್ನಮ್ಮ ಸತ್ತ ಬೆಕ್ಕನ್ನು ತಂದು ಎದೆಗಪ್ಪಿ ಅತ್ತಳು. ಗಂಧದ ಸೌದೆಯನ್ನು ತರಿಸಿ ಕೊಂಡ ಹಾಕಿಸಿದಳು. ಒಂದು ಕೈಯಲ್ಲಿ ತನ್ನ ಕಂದನನ್ನೂ ಇನ್ನೊಂದು ಕೈಯಲ್ಲಿ ಬೆಕ್ಕನ್ನು ಹಿಡಿದು ಕೊಂಡಪಾಯುವ ಅವಳ ಬಳಿಗೆ ಶಿವ, ನಾರಾಯಣ ಓಡೋಡಿ ಬಂದರು. ಬೆಕ್ಕು ಬದುಕಿತು. ಪತಿ ಸಹಿತ ತನ್ನ ಸತ್ಯದಿಂದ ಹೊನ್ನಮ್ಮ ರಥದಲ್ಲಿ ಹೂವಿನ ಕೈಲಾಸವನ್ನು ಸೇರಿದಳು.

ಊರು ಊರಿಗೆ ಯಾವುದು ಮೇಲು
ಕೊಲ್ಲಂಪುರವೇ ಮೇಲಯ್ಯಾ
ಎಲ್ಲಂಪುರಕೆ ಯಾವುದು ಮೇಲು
ಕೊಲ್ಲಂಪುರವೇ ಲೇಸಯ್ಯೊ

ಸತ್ಯವಂತೆ ಹೊನ್ನಮ್ಮನ ಕಥೆಯನ್ನು ಹಾಡಿ, ಗುಡ್ಡರು ನೆರೆದ ಮಂದಿಯನ್ನು ತಣಿಸಿದ್ದಾರೆ. ಮಂಗಳಾರತಿಗಾಗಿ ಅಂಗಳವೆಲ್ಲ ಎದ್ದು ನಿಂತಾಗ ಹಿಮ್ಮೇಳ ಮುಮ್ಮೇಳದವರೂ ಬೆರೆತು ಒಕ್ಕೊರಲಲ್ಲಿ ಹಾಡಿದ್ದಾರೆ !

——

# ಹ್ಯಾಗೆ ಕೊಂದಪ್ಪ ನನ್ನ ಮಡದೀಯ !

ರಘುರಾಮ-ರಾಮಚಂದುರು ಸ್ವಾಮಿ ರಘುರಾಮ !
ರಾಮ ಅಂದರೆ ಗತಿ ರಾಮ ಅಂದರೆ ಮತಿ
ರಾಮ ಅಂದರೆ ಕೋಟಿ ಕರ್ಮ ಕಳೆದೊ-ರಾಮಧ್ಯಾನ
ಸುವ್ವಿ ಅಂದರೆ ಪಾಪ ಪರಿಹಾರ
ರಘುರಾಮ ರಾಮಚಂದುರು ಸ್ವಾಮಿ
ರಘುರಾಮ....

ಆ ಮಂಗಳ ಮಹಿಮ ರಘುರಾಮನ ಕಥೆಯು ಜಾಡಿನಲ್ಲಿ ಸಾಗಿದಂತಿದೆ ಈ ಪುಣ್ಯಭಾಗಿಗಳು. ತಾಯಿ ಸೀತೆಯ ನೋವನ್ನು, ಅವಳ ಬದುಕಿಗೆ ಅಂಟಿ ಬಂದ ಚಿರಂತನ ದುಃಖವನ್ನು ನೆನೆದು ಮರುಗಿದ್ದಾರೆ. ಮರುಗಿ ಹಾಡಿದ್ದಾರೆ. ರಾವಣನ ಕಂಟಕ ಕಳೆದರೂ ಆ ಪರಮ ಪತಿವ್ರತೆಗೆ ಕಷ್ಟ ಹರಿಯಲಿಲ್ಲ. ವನ ವಾಸ ತಪ್ಪಲಿಲ್ಲ....ಬಾಳಿ ಬದುಕುವ ದಿನಗಳಲ್ಲಿ ಸಣ್ಣ ನಿಂದೆಯ ನುಡಿಗೆ ರಾಮ ಅಂಜಿದನೆ! ಅಗ್ನಿದಿವ್ಯೆಯಾಗಿ ಬಂದ ಅವಳನ್ನು ಮತ್ತೆ ಕಾಡಿಗೆ, ಮತ್ತೆ ದುಃಖದ ಮಡುವಿಗೆ....ತಳ್ಳಿದನೇ........ !

ಅದೇ ಕಥೆಯನ್ನು ಹಾಡಿದ್ದಾರೆ, ನಿಜ. ಆದರೆ ಮಾರ್ಗಕವಿಗಳು ಸವೆದ ಹಾದಿ ಇದಲ್ಲ. ತಮ್ಮದೇ ರೀತಿ, ತಮ್ಮದೇ ಆದ ವಿಶಿಷ್ಟ ಕಲ್ಪನೆ. ತಮ್ಮದೇ ಆದ ಕಥನ ಕೌಶಲ ಸನ್ನಿವೇಶಕ್ಕೆ ತಕ್ಕ, ಸಂದರ್ಭಕ್ಕೆ ತಕ್ಕ ಕೌತುಕದ ಮಾರ್ಪಾಡುಮೂಲಮಾತೃಕೆಯನ್ನು ಅನುಸರಿಸಲು ಇವರೇನು ಪ್ರೌಢಕವಿಗಳೇ! ಸೀತೆಗೆ ಆಶ್ರಯ ನೀಡಿ, ಅವಳನ್ನು ರಕ್ಷಿಸಿದ ವಾಲ್ಮೀಕಿಗಳೇ ಇಲ್ಲಿ ಅವಳ ತಂದೆ....ಸೀತೆ ರಾಮನ ಮಡದಿ ಎನ್ನುವುದಕ್ಕಿಂತ ಅವರ ಅಚ್ಚುಮೆಚ್ಚಿನ ಮಗಳು. ಪ್ರೀತಿಯ ಕಂದ !

ಅಂದು ರಾಮರ ದಂಡು ಬಂದು ಲಂಕೆಯ ಏರಿ
ಕೊಂದು ರಾವಣನ ಶಿರ ಹರಿದು

ಸೀತೆಯನ್ನು ತಂದುದಾಯಿತು. ಅಯೋಧ್ಯೆಗೆ ಬಂದ ರಾಮ ನೆಮ್ಮದಿಯ ನಿಟ್ಟುಸಿರನ್ನು ಬಿಡುವ ವೇಳೆಗೇ ರಜಕನ ಪ್ರಸಂಗ ಒದಗಿ ಬಂದಿತು. ನಿಂದೆ

ಯನ್ನು ಸಹಿಸದೆ ಸೀತೆಯನ್ನು ಕಾಡಿಗೆ ಕಳುಹಿಸಿ ಕೊಲ್ಲಿಸುವ ಮಾತನ್ನಾಡಿದಾಗ ಲಕ್ಷ್ಮಣನ ಎದೆ ನಡುಗಿತ್ತು. ಜಲಜಲನೆ ಬೆವತು, ಅವನು ಅಣ್ಣನನ್ನು ಸಮಾಧಾನಪಡಿಸಲು ಪ್ರಯತ್ನಿಸಿದ.

ಜನಕರಾಯನ ಮಗಳು ಜನನಿ ಭೂದೇವತೆಯು

ಅವಳ ಮೇಲೆ ಕಳಂಕವೇ ! ಅವಳನ್ನು ಕೊಲ್ಲಿಸುವುದೇ !

ರಾಮನ ನಿರ್ಧಾರ ಸಡಿಲಲಿಲ್ಲ. ಋಷ್ಯಾಶ್ರಮಗಳ ಸಂದರ್ಶನವೆಂದು ಸೀತೆ ಸಂಭ್ರಮದಿಂದಲೇ ಹೊರಟು ನಿಂತಳು.

ಬಾಳೆ ಪಟ್ಟೆನ ಬಣ್ಣ ಸೀಗಿ ಹೂವಿನ ರವಕೆ
ಆಗ ಧರಿಸಿದಳೆ ಜಾನಕದೇವಿ !

ಮೈದುನ ಲಕ್ಷ್ಮಣನೊಡನೆ ಹೋಗಿ ಬರುವಲ್ಲಿಯೂ ಅವಳಿಗೆ ಹರ್ಷವೇ. ಇನ್ನಾರು ತಿಂಗಳಲ್ಲಿ ತಾಯಿಯಾಗಲಿರುವ ತನ್ನ ಬಯಕೆಗಳನ್ನು ಅರಿತ ರಾಮನ ಸೂಕ್ಷ್ಮಜ್ಞತೆಗೆ ತಲೆದೂಗಿ ಹೊರಡುವ ಗಳಿಗೆಯಲ್ಲಿ ಪತಿಯನ್ನು ಕಾಣಲು ಬಂದರೆ ಆಕೆ ನಿರಾಶೆಯ ಕಂದಕದಲ್ಲಿ ಕುಸಿದಳು. ರಾಮನೇಕೋ ಮೌನಿಯಾಗಿದ್ದಾನೆ. ತನ್ನೊಡನೆ ನುಡಿಯಲು, ತನ್ನನ್ನು ಹರಸಿ ಬೀಳ್ಕೊಡಲು ಹಿಂದೆಗೆದಿದ್ದಾನೆ. ತನ್ನ ಮುಖವನ್ನೇ ತಿರುಗಿಸಿ ನಿಂತಿದ್ದಾನೆ.

ಕಂಬನಿದುಂಬಿದ ಕಣ್ಣಿನಲ್ಲಿ ಸೀತೆ ಪಯಣವನ್ನು ನಿಲ್ಲಿಸಲಿಲ್ಲ. ಮೈದುನನನ್ನು ಮುಂದೆ ನಡೆಯುವಂತೆ ಸೂಚಿಸಿದಳು. ಅವಳ ಪಾದಸೇವಕನಾಗಿ ಹಿಂದೆ ಹಿಂದೆ ಬರುವುದೇ ಲಕ್ಷ್ಮಣನ ಧರ್ಮ.

ಮುಂದುಗಡೆ ಸೀತಮ್ಮ ಹಿಂದುಗಡೆ ಲಕ್ಷ್ಮಣ
ಅಡವಿ ಅರಣ್ಯಕ್ಕೆ ಬರುತಾರೆ....

ಲಕ್ಷ್ಮಣನೂ ಏಕೋ ಅಣ್ಣನಂತೆಯೇ ನುಡಿಯನು. ಹರ್ಷದಿಂದ ಮಾತಾಡನು. ಸೀತೆಯ ಅಂತರಂಗ ನೂರು ಶಂಕೆಯ ತೌರಾಯಿತು. ನೂರು ಅಳುಕಿನ ಬೆಟ್ಟ ಆಯಿತು. ಕಾಡುಮೇಡುಗಳಲ್ಲಿ ನಡೆನಡೆದು ಅವಳ ಕೋಮಲ ಪಾದಗಳು ಸೋತವು. ಬಿಸಿಲೇರಿ ಬಿಸಿಲಿಳಿದರೂ ಅವರ ಪಯಣ ಕೊನೆಗೊಳ್ಳಲಿಲ್ಲ. ಸೀತೆ ಬಳಲಿದಳು. ಮುಂದೆ ನಡೆಯುವ ಚೈತನ್ಯವೆಲ್ಲಾ ಉಡುಗಿತು.

ಬೀಸಿದ ತೋಳು ಬೆಂಡಾಗಿ ಹೋಯಿತು
ಹಾಕಿದ ತಂಬುಲ ಹುಡಿಗೂಡಿ....

ಬಾಯಿ ಒಣಗಿದೆ. ದೇಹ ದಣಿದಿದೆ. ಇನ್ನೆಲ್ಲಿಗೆ ಮೈದುನ ಕರೆದೊಯ್ಯ ಬೇಕೊ! ಹದಿನಾರು ಯೋಜನ ನಡೆದರೂ ಮುಗಿಯದ ದಾರಿ! ಹಿಂದೆ ಬೆಟ್ಟ; ಮುಂದೆ ಬೆಟ್ಟ. ಸುತ್ತೆತ್ತಲೂ ಕವಿದ ಕಾಡು. ನಿಧಾನವಾಗಿ ಹೊನ್ನ ಬಣ್ಣಕ್ಕೆ ತಿರುಗುತ್ತಿರುವ ಬಿಸಿಲು. ಗಂಡುಭೇರುಂಡ ಪಕ್ಷಿಯೂ ಅಲ್ಲೆಲ್ಲೊ ಕೂಗುತ್ತಿದೆ.

ಸೀತೆ ಕ್ಷಣ ಅಂಜಿ ನಿಂತಳು. ಮೈದರಸನತ್ತ ತಿರುಗಿದಳು. ತೇಗದ ಮರ ವೊಂದನ್ನು ಒರಗಿ—

ನೀ ಏನು ಕಾರಣಕೆ ಕರೆತಂದೆ ?

–ಲಕ್ಷ್ಮಣನ ತುಟಿ ಅದುರಿತು. ನಿಜವನ್ನು ಹೇಳಲೇಬೇಕಾದ ಸಮಯ ಸಮೀಪಿಸಿತು.

ಅಲ್ಲದವರ ಮಾತ ಕೇಳಿ ನಿಲ್ಲದೆ ಕೋಪನ ತಾಳಿ
ಕೊಲ್ಲುಕಪ್ಪಣೆ ಕೊಟ್ಟು ಕಳುವವರೇ !

ಸೀತೆಯ ಸಂಶಯ ಸ್ಪಷ್ಟವಾಯಿತು ! ರಾಮನೊಡನೆ ಕೂಡಿ ಬಾಳುವ ಭಾಗ್ಯ ತನಗಿಲ್ಲದೆ ಬಿಕ್ಕಿಬಿಕ್ಕಿ ಅತ್ತಳು. 'ಗಂಡನಿಗೆ ಬೇಡದವಳು' ಭೂಮಂಡಲಕೆ ಹೊರೆಯಾಗಿ ಇನ್ನೇಕೆ ಉಳಿಯಬೇಕು.

ಕೊಲ್ಲಯ್ಯ ಪ್ರಾಣವ ಕತ್ತರಿಸೂ ಶಿರಗಳ
ರಾಮುಣಿಗೆ ಸುದ್ದಿ ಹೇಳಪ್ಪ !

ಸಾಯುವ ಮುನ್ನ ತಾನು ತಂದ ಬುತ್ತಿಯನ್ನು ಉಣ್ಣುವಂತೆ ಕೈ ಮುಗಿದು ಬೇಡಿದ ಲಕ್ಷ್ಮಣ. ಕಾಡನ್ನೆಲ್ಲ ಸುತ್ತಿ ಮುತ್ತುಗದ ಎಲೆಗಳನ್ನು ತಂದ. ನೀರಿಗಾಗಿ ಬಂಡೆಯನ್ನೇ ಬಾಣದಿಂದ ಸೀಳಿದ.

ಲಕ್ಷ್ಮಣ ಬುತ್ತಿಯನ್ನು ಒಲ್ಲದಾದ. ಸೀತೆ ತನ್ನ ಪತಿಗೊಂದು. ಗರ್ಭದ ಶಿಶುವಿಗೊಂದು, ತನಗೊಂದು ಎಡೆಯನ್ನು ಮಾಡಿ, ರಾಮನ ಪಾದಗಳನ್ನು ನೆನೆಯುತ್ತ ಹರಿವ ಕಣ್ಣೀರಿನಲ್ಲೇ ತನ್ನ ಪಾಲಿನ ಬುತ್ತಿಯನ್ನು ಸೇವಿಸಿ ಮೇಲೆ ದ್ದಳು. ಇನ್ನು ರಾಮನ ಇಚ್ಛೆ ನೆರವೇರಬೇಕು! ಅಪವಾದ ದೂರವಾಗಬೇಕು! ಲಕ್ಷ್ಮಣನನ್ನು ಕರೆದು ಬಂದ ಕಾರ್ಯವನ್ನು ಈಡೇರಿಸಿಕೊಂಡು ಮರಳುವಂತೆ

ಸೂಚಿಸಿದಳು. ಆದರೆ ಲಕ್ಷ್ಮಣ ತನಗಷ್ಟು 'ಬಾಳೊ ಬದುಕೋ' ಬುದ್ಧಿಯನ್ನು ಹೇಳುವಂತೆ ಅತ್ತಿಗೆಯನ್ನು ಬೇಡಿದ. ರಾಮನ ನೆರಳಾಗಿ ಸದಾ ರಾಮನ ಕ್ಷೇಮ ವನ್ನೇ ಚಿಂತಿಸುತ್ತಿರುವಂತೆ ಹರಸಿದ ಅತ್ತಿಗೆಯನ್ನು ಕೊಲ್ಲಲು ಲಕ್ಷ್ಮಣ ಒರೆ ಯಿಂದ ಕತ್ತಿಯನ್ನು ಎಳೆದು ಕಣ್ಣುಮುಚ್ಚಿದ. ಸೀತೆ ಹೊನ್ನೆಯ ಮರದಡಿ ಬಾಗಿ ನಿಂತಳು.

ಲಕ್ಷ್ಮಣನ ಎತ್ತಿದ ಕೈ ಕ್ಷಣ ನಿಂತಿತು. ಕಣ್ಣೆದುರು ಹಸುಳೆಯೊಂದು ಸುಳಿದು ಮಿಂಚಿನಂತೆ ನಗೆಯನ್ನು ಚೆಲ್ಲಿ ಕೈ ತಡೆದಂತಾಯಿತು ! ಸೀತಾದೇವಿ ತಾಯಿಯಾಗಲಿರುವಳೆ ! ತನ್ನ ಕತ್ತಿ ಸ್ತ್ರೀಹತ್ಯೆಯ ಜೊತೆಗೆ ಶಿಶುಹತ್ಯೆಯನ್ನೂ ಮಾಡುವುದೇ! ಇಬ್ಬರನ್ನು ಕೊಲ್ಲುವ ಹೊಣೆ ತನ್ನಗೇಕೆ ! ಸೀತೆಯನ್ನು ಕೊಲ್ಲು ವಂತೆಯೇ ಇಲ್ಲ....

ಸೀತೆಯ ಒತ್ತಾಯಕ್ಕೆ ಮಣಿಯಲಿಲ್ಲ ಮೈದುನ.

ಒಂದು ಬೆಟ್ಟವ ಹತ್ತಿ ಒಂದು ಬೆಟ್ಟವ ಇಳಿದು
ವಾಲ್ಮೀಕಿ ರಾಯನ ಪಟ್ಟನವ ತೋರುತಾನೆ

ಜಾನಕಿಯನ್ನು ಅಷ್ಟು ದೂರ ಕಳುಹಿಸಿ ಬಂದ ಲಕ್ಷ್ಮಣ, ಹೊನ್ನೆಯ ಮರದ ಬಳಿಗೆ ಬಂದ. ಮೊದಲೇ ಅತ್ತಿಗೆ ಬಿಚ್ಚಿಕೊಟ್ಟಿದ್ದ ಒಡವೆಯ ಗಂಟನ್ನು ತೆಗೆದು, ಹೊನ್ನೆಯನ್ನು ಕೇಳಿದ—

"ನನ್ನ ಅತ್ತಿಗೆ ಸೀತಮ್ಮ ಪತಿವ್ರತೆಯಾದರೆ
ಹಾಲು ಬರುವ ಹೊನ್ನೆ ಮರವೆ ರಕ್ತ ಬಾರೇ"

ಕಡಿದ ರೆಂಬೆ ಗಳಗಳನೆ ರಕ್ತವನ್ನೇ ಹರಿಸಿತು. ಸೀತಮ್ಮನ ಒಡವೆಗಳು ರಕ್ತಮಯವಾದವು. ಅಣ್ಣನ ಆಜ್ಞೆಯನ್ನು ನೆರವೇರಿಸಿದ ಲಕ್ಷ್ಮಣ ಅಯೋಧ್ಯೆಯ ಹಾದಿಯಲ್ಲಿ ಹಿಂದಿರುಗಿದ.

ಮೇಲೆ 'ಏಳುಸೆಲೆ' ಸಜ್ಜೆಯಲ್ಲಿ ರಾಮದೇವರು ಸೀತೆಯನ್ನು ನೆನೆದು ಹಂಬಲಿಸಿ ನಿಂತಾಗ ಲಕ್ಷ್ಮಣನೊಬ್ಬನೇ ಮರಳಿದ್ದಾನೆ ! ಆಭರಣ ರಕ್ತಮಯ ವಾಗಿದೆ. ಲಕ್ಷ್ಮಣ ಭಯ ವಿಹ್ವಲನಾಗಿದ್ದಾನೆ !

ಓಹ್, ಸೀತೆ ಬರಲಿಲ್ಲ ! ಬರಲಿಲ್ಲ !

—ನೆಲದಲ್ಲಿ ಕುಸಿದು ಬಿದ್ದನು ಶ್ರೀರಾಮ. ಹುಚ್ಚನಂತೆ ನುಡಿದನು. ಮುಖ ಮುಚ್ಚಿ ಅತ್ತನು !

ಚಿಕ್ಕಂದಿನಲ್ಲಿ ನಿನ್ನ ಹೊತ್ತು ಸಾಕಿದ ತಾಯಿ
ಹೆಂಗೆ ಕೊಂದಪ್ಪ ನನ್ನ ಮಡದೀಯ

ಅಣ್ಣಯ್ಯನ ನುಡಿಗೆ ಲಕ್ಷ್ಮಣ ಬೆಚ್ಚಿದ.

ಕೊಲ್ಲೇಳಿ ಅಣ್ಣಯ್ಯ ಬಾಣವ ಕಳಿವಿದೆ
ಕೊಂದು ಬಂದೆ ದೊಡ್ಡ ಅಡವ್ಯಿಲಿ

ತನ್ನ ಪಾಲಿನ ಹೊಣೆಯನ್ನು ಶ್ರದ್ಧೆಯಿಂದ ನಿರ್ವಹಿಸಿದ್ದಾನೆ ಅನುಜ ಲಕ್ಷ್ಮಣ. ಅಣ್ಣನ ದುಃಖಕ್ಕೆ ಉಳಿದುದೊಂದೇ ಹಾದಿ, ಒಂದೇ ಪರಿಹಾರ !

ದೇವಲೋಕಕೆ ಹೋಗಿ ದೇವಗನ್ನೇರ ತಂದು
ಕಲ್ಯಾಣ ನಾನು ಮಾಡುತೀನಿ

ಲಕ್ಷ್ಮಣನ ನುಡಿಗೆ ರಾಮನ ತುಟಿಯಂಚಿನಲ್ಲಿ ವ್ಯಂಗ್ಯನಗೆ ತೇಲಿತು. ತನ್ನ ಸೀತೆಗೆ ಇನ್ನಾವ ದೇವಕನ್ಯೆ ಸಾಟಿಯಾಗುವಳು !

ಕಂಚುವಾಳದ ಹೂವು ಕಡುಗೆಂಪು ಆದರೆ
ಅಂಚಿನಲ್ಲುಂಟು ಕಡುಕಪ್ಪ-ನನ ತಮ್ಮ
ಮಲ್ಲಿಗೆಯಿಂದ ಬರುವುದೆ ?

ಗಾರೆ ಮಂಚದ ಮೇಲೆ ಕುಳಿತ ರಾಮ, ಮುತ್ತಿನ ಕಮಂಡಲವನ್ನು ತರಿಸಿ ಮುಂದಿಟ್ಟು ಅತ್ತನು. ಅವನ ಕಣ್ಣೀರು ಮುತ್ತಿನ ಕಮಂಡಲವನ್ನು ತುಂಬಿ ಹರಿಯಿತು. ಬೇರೊಂದು ಹೊಳೆಯಾಗಿಯೇ ಮುಂದೆ ಸಾಗಿತು. ತನ್ನ ತಂದೆಯ ನೆಲೆಯನ್ನು ಮುಟ್ಟುವುದರಲ್ಲಿಯೇ ಅಡ್ಡ ಬಂದ ಹೊಸಹೊಳೆಗೆ ಸೀತೆ ಬೆರಗಾದಳು. ತೆವರೇರಿ ನಿಂತು ಅತ್ತಳು. ಇನ್ನೆಂತು ಮುಂದೆ ಸಾಗುವುದೆಂದು ಅತ್ತಳು.

ಸೀತೆಯನ್ನು ನೆನೆನೆನೆದು ರಾಮ ಕುಗ್ಗಿ ಕೃಶವಾದ. ಕೈಯ ಉಂಗುರವೂ ಜಾರಿ ಕೆಳಗೆ ಬಿದ್ದುದನ್ನು ಅವನರಿಯ. ಸೀತೆಯ ದಾರಿಗೆ ಅಡ್ಡ ಬಂದ ಹೊಳೆಯ ಪರಿ ಅರಿತ ಲಕ್ಷ್ಮಣ, ಹೊಟ್ಟೆದರ್ಭೆಹುಲ್ಲು, ಮರಿಜವಳಿ ಕಡ್ಡಿಗಳನ್ನು ತಂದು ಉಂಗುರದ ಮೇಲೆ ಮಂತ್ರಿಸಿ ಎರಡು ಮೀನುಗಳನ್ನು ಪಡೆದನು,ತಾಯಿ

ಸೀತೆಯನ್ನು ಆಚೆಯ ದಡಕ್ಕೆ ಮುಟ್ಟಿಸುವಂತೆ ಹೇಳಿದ ಗಳಿಗೆಯಲ್ಲಿಯೇ ಮಹಾ ಮತ್ಸ್ಯಗಳೆರಡೂ ಸೀತೆಯಲ್ಲಿಗೆ ತೆಪ್ಪಗಳಂತೆ ತೇಲಿ ತೇಲಿ ಬಂದವು.

ಯಾರಿಗೆ ಮಗಳಮ್ಮ ಯಾರಿಗೆ ಸೊಸೆಯಮ್ಮ
ಯಾವ ಹೆಚ್ಚಿನ ದೊರೆಯ ಮಡದೀಯ

ಹೊಳೆಯ ಅಂಚಿನಲ್ಲಿ ತೇಲಿ ಬಂದ ಮೀನುಗಳನ್ನು ಕಂಡು ಸೀತೆ ಕತ್ತೆತ್ತಿ ನೋಡಿದಳು. ತನ್ನತ್ತಲೇ ಬಾಯಿ ತೆರೆದು ನುಡಿಯುತ್ತಿವೆ.

ಅರಸಿಗೆ ಮಗಳಲ್ಲ-ದೊರೆಗೆ ನಾ ಮಡದ್ಯಲ್ಲ
ಪರನಾರಿ ಕಂದಗಳೆ ಪರದೇಶಿ

ಸೀತೆಯ ಮಾತಿಗೆ ಮೀನುಗಳು ಮರುಗಿ ಮರುನುಡಿದವು. ಹೊಳೆ ಯಾಚೆಗೆ ದಾಟಿಸಿದರೆ ಅವಳಲ್ಲಿ ಹುಟ್ಟುವ ಮಕ್ಕಳಿಗೆ ತಮ್ಮ ಹೆಸರನ್ನು ಇಡು ವಂತೆ ಕೇಳಿದವು. ಮೀನಿನ ಬೆನ್ನೇರಿ ಸೀತೆ ಆಚೆಯ ದಡವನ್ನು ಮುಟ್ಟಿದಳು. ತಂದೆಯ ಪಟ್ಟಣದ ಹಾದಿಯಲ್ಲಿ ಬಂದ ಆ ಪವಿತ್ರೆಗೆ–

ಕಡವೆ ಕಾಡಾನೆ ಕಾಡಬೆಕ್ಕು ಸಾರಗನ ಹಿಂದು
ಕರಮುಗಿದು ಹಿಂದಕ್ಕೆ ಹೋಯಿತವೆ

ವಾಲ್ಮೀಕಿಯ ಪಟ್ಟಣ ಸಮೀಪಿಸಿತು. ಸೀತೆಯನ್ನು ಅಯೋಧ್ಯೆಗೆ ಕಳು ಹಿದ ಮೇಲೆ ಇನ್ನಿಲ್ಲದ ಬಡತನ ಆ ಪಟ್ಟಣಕ್ಕೆ ಕವಿದಿತ್ತು. ಮರಗಿಡಗಳೆಲ್ಲ ಒಣಗಿಹೋಗಿದ್ದವು, ಕಲ್ಯಾಣ ಒಣಗಿತ್ತು....ಸೀತೆಯ ಪದಸ್ಪರ್ಶದಿಂದ ಆ ನೆಲ ಪುಳಕಗೊಂಡಿತು, ಮರಗಿಡ ಚಿಗಿತು ನಳನಳಿಸಿದುವು....ಕೆರೆ, ಕಲ್ಯಾಣಿ ತುಂಬಿ ತುಳುಕಿದವು. ಹಕ್ಕಿ ಪಕ್ಷಿಗಳು ಸಂಭ್ರಮಗೊಂಡು ಹಾರಾಡಿದವು. ಮರ ವೊಂದರ ಬುಡ ಒರಗಿ ಸೀತೆ ಕುಳಿತಳು.

ವಾಲ್ಮೀಕಿಯ ಗೌಡಿಯರು ಕೊಡಗಳನ್ನು ಇರುಕಿ ನೀರಿಗೆ ಬಂದರು. ಸೀತೆ ಯನ್ನು ಕಂಡು ಸೋಜಿಗಗೊಂಡರು. ವಾಲ್ಮೀಕಿರಾಯ ನಂಬಲಿಲ್ಲ ಆ ಮಾತನ್ನು. ತನ್ನ ಮಗಳು ಬರಬೇಕಾದರೆ ಹದಿನೆಂಟುಕೋಟಿ ರಾಮದಂಡು ಬರಬೇಕು. ಅಂದಣ, ಐಶ್ವರ್ಯ ಬರಬೇಕು. ಸೂಳೇರ ಮೇಳ, ಕನಕದಮ್ಮಟೆ, ಕೈತಾಳ ಎಲ್ಲವೂ ಬರಬೇಕು !

ಅಚ್ಚರಿಯಿಂದ ಬಂದ ವಾಲ್ಮೀಕಿರಾಯ ಸೊರಗಿ ಸೊಪ್ಪಾಗಿ ಕುಳಿತ ತನ್ನ ಮಗಳು ಜಾನಕಿಯನ್ನೇ ಕಂಡನು! 'ಮಗಳ ದಂಡೆಯಲ್ಲಿ' ಕುಳಿತು ಅವಳ ಪರಿಯನ್ನೆಲ್ಲಾ ಅರಿತು ಮರುಗಿದನು. ತಾಳ ಮೇಳ ಪಲ್ಲಕ್ಕಿಯೊಡನೆ ಮಗಳು ಸೀತಾದೇವಿಯನ್ನು ತನ್ನ ಅರಮನೆಗೆ ಕರೆತಂದನು.

ಮಗಳಿಗಾಗಿ ಬೇರೊಂದು ಅರಮನೆಯೇ ಸಿದ್ಧವಾಯಿತು. ಡಂಕಣಾಚಾರಿಯೇ ಬಂದು ಸುಂದರವಾಗಿ ಆ ಅರಮನೆಯನ್ನು ಕಟ್ಟಿದನು. ಒಂಭತ್ತು ತಿಂಗಳು ತುಂಬಿದವು. ತಂದೆಯ ಅರಮನೆಯಲ್ಲಿ ಸೀತೆಗೆ ಶುಕ್ರವಾರವೊಂದರಲ್ಲಿ ಸೂರ್ಯೋದಯ ವೇಳೆಗೆ, ಸೂರ್ಯನಂತೆಯೇ ಹೊಳೆಯುವ ಗಂಡುಮಗುವೊಂದು ಜನಿಸಿತು. ದಾನ ಧರ್ಮಗಳನ್ನು ಮಾಡಿ ವಾಲ್ಮೀಕಿರಾಯ ಮಗಳು ಜಾನಕಿಯ ಕಂದನನ್ನು ನೋಡಿ ಹಿಗ್ಗಿದನು.

ಮಗುವಿಗೆ ಮೂರು ದಿನ ತುಂಬಿತು. ಇನ್ನು ಸೀತೆ ಗಂಗೆಪೂಜೆಯನ್ನು ಮಾಡಿ ಬರಬೇಕು, ವೃದ್ಧ ತಂದೆ ವಾಲ್ಮೀಕಿಯನ್ನು ತೊಟ್ಟಿಲ ಬಳಿ ಬಿಟ್ಟು ನದಿಯ ಕಡೆಗೆ ಬಂದಳು. ಮರದಿಂದ ಮರಕ್ಕೆ ಹಾರುವ ಕೋತಿಗಳ ಹಿಂಡನ್ನು ನೋಡುತ್ತ ಸೀತೆ ತುಸು ಹೊತ್ತು ನಿಂತಳು. ಎಳೆಯ ಮರಿಯನ್ನು ಮಡಿಲಲ್ಲಿ ತಬ್ಬಿ ತಾಯಿ ಕೋತಿ ಆಡುವ ಬಗೆಗೆ ಬೆರಗಾಗಿ ನೋಡಿದಳು. ಸುತ್ತಲೂ ದಟ್ಟವಾಗಿ ಕವಿದು ಹಬ್ಬಿದ ಕಾಡು....ತನ್ನ ಕಂದ ತೊಟ್ಟಿಲಲ್ಲಿದೆ. ಕಣ್ಣು ಕಾಣದ 'ಅಜ್ಜಯ್ಯ' ತನ್ನ ತಂದೆ ವಾಲ್ಮೀಕಿರಾಯ! ಹುಲಿಯೋ....ನರಿಯೋ ಕಾಡಿನಿಂದ ಅತ್ತ ಸುಳಿದರೆ....?

ಸೀತೆ ದಢದಢನೆ ಓಡಿಬಂದಳು, ತನ್ನ ಕಂದನನ್ನು ನೆನೆದು. ತೊಟ್ಟಿಲ ಪಕ್ಕದಲ್ಲಿ ಅಜ್ಜ ವಾಲ್ಮೀಕಿರಾಯ ಸುಖನಿದ್ರೆಯಲ್ಲಿ ತೇಲಿದ್ದಾನೆ! ಹಸುಳೆ ತೊಟ್ಟಿಲಲ್ಲ ಕಿಲಕಿಲನೆ ನಕ್ಕು ಆಡಿದೆ. ತಂದೆಗೇಕೆ ಎಚ್ಚರಗೊಳಿಸಬೇಕು...

ಸೀತೆ ಮಗುವನ್ನು ಎತ್ತಿಕೊಂಡೇ ಗಂಗೆಪೂಜೆಗೆ ಹೊರಟಳು.

ವಾಲ್ಮೀಕಿರಾಯನಿಗೆ ಯಾವಾಗಲೋ ಎಚ್ಚರವಾಯಿತು, ನಿದ್ದೆಯ ಮಂಪರಿನಲ್ಲೇ ತೊಟ್ಟಿಲಿಗೆ ಕೈಹಾಕಿ ತಡಕಿ ಬೆಚ್ಚಿದ! ಮಗುವಿದ್ದಂತಿಲ್ಲ! ಹೆದರಿ ಹೌಹಾರಿ ಸುತ್ತಲೂ ನೋಡಿದ. ಯಾರ ಸುಳಿವೂ ಇಲ್ಲ. ಮಗುವಿನ ಸೊಲ್ಲಿಲ್ಲ. ಇನ್ನೇನು ಸೀತೆ ಬರುವ ವೇಳೆಯಾಯಿತು. ಕಂದನೆಲ್ಲಿ ಎಂದರೆ ಹೇಳುವುದಾದರೂ ಏನನ್ನು!

ವಾಲ್ಮೀಕಿರಾಯ ಹೊಟ್ಟೆ ದರ್ಭೆಯ ಹುಲ್ಲು ಮರಿಜವಳಿ ಕಡ್ಡಿಯನ್ನು ತಂದು ಮಾಯದಲಿ ಒಂದು ಮಗುವನ್ನು ಮಾಡಿ ತೊಟ್ಟಿಲಲ್ಲಿ ಮಲಗಿಸಿ ಎಚ್ಚರಿಕೆಯಿಂದ ಕಾದು ಕುಳಿತ.

ಸೀತೆ ಮನೆಗೆ ಮರಳಿದಳು ! ಮಗು ತಾಯ ತೋಳಿನಲ್ಲಿಯೇ ನಲಿದಿದೆ! ಮತ್ತೊಂದು ಶಿಶುವನ್ನು ತೊಟ್ಟಿಲಲ್ಲಿ ಕಂಡ ಸೀತೆ ಬೆರಗಿನಿಂದ ತಂದೆಯ ಮುಖವನ್ನು ನೋಡಿದಳು. ತೊಟ್ಟಿಲ ಶಿಶುವನ್ನು ತೂಗಿ ಜೋಗುಳ ಹಾಡುತ್ತಿದ್ದಾನೆ ವಾಲ್ಮೀಕಿರಾಯ.

ಸೋಲನ್ನು ಒಪ್ಪಿಕೊಳ್ಳಲಿಲ್ಲ ವಾಲ್ಮೀಕಿರಾಯ. ಆದರೂ ಸೀತೆಯ್ನು ಮಗುವೆಂದೇ ವಾದಿಸಿದ. ಅವಳಿಗೆ ಹುಟ್ಟಿದ ಎರಡು ಮಕ್ಕಳಲ್ಲಿ ಒಂದನ್ನು ತಾನು ಅವಿತಿಟ್ಟಿದ್ದೆನೆಂದು ನುಡಿದ. ಎರಡು ಹಸುಳೆಗಳನ್ನು ಹೋಲಿಸಿ ನೋಡುವಂತೆ ಹೇಳಿದ. ತಂದೆಯ ನುಡಿಗೆ ಕೈಯ ಶಿಶುವನ್ನು ತಂದು ಸೀತೆ ತೊಟ್ಟಿಲಲ್ಲಿ ಇರಿಸಿದಳು.

ಒಬ್ಬನ ನೋಡಿದರೆ ಪಟ್ಟದ ರಾಮಯ್ಯ
ಇನ್ನೊಬ್ಬನ ನೋಡಿದರೆ ಲಕ್ಷ್ಮಣದೇವ

ಎರಡು ಮಕ್ಕಳನ್ನು ಮುತ್ತಿನ ತೊಟ್ಟಿಲಲ್ಲಿಟ್ಟು ಸೀತೆ ಹೆಮ್ಮೆಯಿಂದ ತೂಗಿದಳು. ರಾಮಲಕ್ಷ್ಮಣರಂಥ ತನ್ನ ಪುತ್ರರಿಗೆ ಹಿಗ್ಗಿ ಮೈಮರೆತಳು.

ರಾಮಲಕ್ಷ್ಮಣರೆಂದೇ ಹೆಸರಿಡುವ ಇಚ್ಛೆ ವಾಲ್ಮೀಕಿರಾಯನಿಗೆ. ಆದರೆ ಸೀತೆ ಆ 'ಅವ್ವಲು ಮೀನು, ಕುಶಲ ಮೀನು'ಗಳಿಗೆ ಮಾತು ಕೊಟ್ಟಿದ್ದಳು. ತನ್ನ ಮಕ್ಕಳನ್ನು ಕುಶ ಲವರೆಂದೇ ಕರೆದಳು. ತಾಯಿಯ ಪೋಷಣೆಯಲ್ಲಿ ಮಕ್ಕಳು ಬೆಳೆದು ಹನ್ನೆರಡರ ಗಡಿಯನ್ನು ಮುಟ್ಟಿದರು. ಸಕಲ ವಿದ್ಯೆಗಳನ್ನು ವಾಲ್ಮೀಕಿರಾಯನಿಂದಲೇ ಕಲಿತರು.

* * * *

ಹನ್ನೆರಡು ವರ್ಷ ಕಳೆದರೂ ರಾಮನ ದುಃಖ ಆರಲಿಲ್ಲ. ಮಡದಿ ಸೀತೆಯನ್ನು ನೆನೆನೆನೆದು ಕೃಶನಾದವನು. 'ರಣಾಗ್ರವನ್ನಾದರೂ ಮಾಡಿ ಪ್ರಾಣಹತ್ಯೆ ಮಾಡಿಕೊಳ್ಳುವ, 'ನಿರ್ಧಾರಕ್ಕೆ ಬಂದು ಲಕ್ಷ್ಮಣನನ್ನು ಕರೆದು ಪಟ್ಟದ ತೇಜಿಯನ್ನು ಲೋಕದ ಮೇಲೆ ಬಿಡುವಂತೆ ಹೇಳಿದ.

ರಾಮನ ಕುದುರೆ ದೇವಲೋಕ, ಚಂದ್ರಲೋಕ, ಸೂರ್ಯಲೋಕ ಎಲ್ಲವನ್ನೂ ಸುತ್ತಿ ಬಂದಿತು. ಎಲ್ಲಿ ಯಾರೂ ಅದನ್ನು ತಡೆಯದೆ ಕಪ್ಪ ಕಾಣಿಕೆಗಳನ್ನು ಒಪ್ಪಿಸಿದರು. ಆದರೇ ಕಾಮಿನೀ ಪರ್ವತದ ಬಳಿ ಅದು ಬಂದಾಗ, ನೆರೆಯ ಬಾಳೆಯ ತೋಟದಲ್ಲಿದ್ದ ಕಿರಿಯ ಕುಶಲಯ್ಯ ಅದನ್ನು ತಡೆದ. ಅರೆಯಃ ಕಲ್ಲಿಗೆ ಬಾಳೆಯ ದಿಂಡಿನ ಗೂಟ ಮಾಡಿ, ಬಾಳೆಯ ನಾರಿನಲ್ಲಿ ಬಿಗಿದು ಕಟ್ಟಿದ.

ಮೂರು ತಿಂಗಳಾದರೂ ತೇಜಿ ಮರಳಲಿಲ್ಲ. ರಾಮನ ಆಜ್ಞೆಯಾಯಿತು. ಲಕ್ಷ್ಮಣ ಹದಿನೆಂಟು ಕೋಟಿ ದಂಡಿನೊಡನೆ ಬಂದು ಕಾಮಿನೀ ಪರ್ವತವನ್ನು ಸೇರಿದ.

ಬರುವಂಥ ದಂಡ ಕಂಡರು ಕುಶ ಲವರು
ತೊಡೆಯ ತಟ್ಟಿ ಕಾಕ ಹೊಡೆದರು

ಎದೆಯ ಬಿಲ್ಲನ್ನು ಎತ್ತಿದರು. ವೀರ ಮಂಡಿಯೂರಿ ಒಬ್ಬರನ್ನೊಬ್ಬರು ಹುರಿದುಂಬಿಸುತ್ತ ಬಾಣಗಳನ್ನೆಸೆದರು. ಅತ್ತ ಬೆಂಕಿಯ ಬಾಣ, ಇತ್ತ ನೀರ ಬಾಣ. ಇತ್ತ ಕತ್ತಲ ಬಾಣ, ಅತ್ತ ಸೂರ್ಯನ ಬಾಣ ಬಾಳೆಯ ತೋಟದ ಬಳಿಯಲ್ಲಿ ಘೋರ ಕಾಳಗವೇ ಜರುಗಿತು. ಕುಶಲವರು ಬಿಟ್ಟ ಯಾವ ಬಾಣವೂ ರಾಮದಂಡನ್ನು ಭೇದಿಸದೆ ಅವರ ಪಾದಕ್ಕೆ ಹೋಗಿ ನಮಿಸುವವು. ಆದರೆ ಅವರು ಬಿಟ್ಟ ಬಾಣಗಳು ಬಾಲರ ನೆತ್ತಿಯನ್ನು ಸವರಿಕೊಂಡು ಹೋಗುವವು. ಕೊನೆಗೆ ಬೇಸತ್ತ ಕುಶಲವರು ತಮ್ಮಯ್ಯ ವಾಲ್ಮೀಕಿರಾಯ ಕೊಟ್ಟ 'ಚಕ್ಕುರ' ಬಾಣವನ್ನು ತೆಗೆದು ಪ್ರಯೋಗಿಸಿದಾಗ—

ಗುಡುಗುಡುಗುಟ್ಟೀತು ಬಾಣ
ಸಿಡಿಲು ಆರ್ಭಟಿಸೀತು
ಕಾಮಿನಿ ಪರ್ವತವ ಸವರೀತು
ಚಕ್ಕುರ ಬಾಣ
ರಾಮರ ದಂಡು ಮಡದೀತು

ಸುದ್ದಿ ಅಯೋಧ್ಯೆಯನ್ನು ಮುಟ್ಟಿತು. ಸೈನ್ಯವೇ ಇಲ್ಲದ ರಾಮ ಅಳ್ಳಿಕುಂಚನ ದಂಡು, ಕೋತಿ ತಿಮ್ಮನ ದಂಡನ್ನೇ ಕೂಡಿಕೊಂಡು ಯುದ್ಧಕ್ಕೆ ಬರ

ಬೇಕಾಯಿತು. ಕುಶ ಲವರ ಚಕ್ರಬಾಣಕ್ಕೆ ಅಳಿಲ ದಂಡು, ಕೋತಿಯ ದಂಡು 'ರಾಮ ರಾಮ' ಎಂದು ಮಲಗಿತು, ಚಿಕ್ಕ ಕುಶಲಯ್ಯನ ಸೂರ್ಯ ಬಾಣಕ್ಕೆ ರಾಮನೂ ಧರೆಗೊರಗಿದನು.

ಕುಶ ಲವರು ರಾಮ ಲಕ್ಷ್ಮಣರ ಆಭರಣಗಳನ್ನು ಬಿಚ್ಚಿ ತಾವು ಧರಿಸಿದರು. ರಾಮನ ತೇಜಿ, ಲಕ್ಷ್ಮಣನ ತೇಜಿಯನ್ನೇರಿ ತಾಯಿಯ ಬಳಿಗೆ ಬಂದರು.

* * * *

ಮಗಳ 'ಮುತ್ತೈದೆತನ' ಉಳಿಯುವುದಕ್ಕಾಗಿ ವಾಲ್ಮೀಕಿರಾಯ ಮರಿ ಜವಳಿ ಕಡ್ಡಿಯಿಂದ ರಾಮಾದಿಗಳನ್ನು ಬದುಕಿಸಿದನು. ಹದಿನೆಂಟು ಕೋಟಿ ರಾಮ ಸೈನ್ಯ 'ರಾಮ ರಾಮ' ಎಂದು ಮೇಲೆದ್ದಿತ್ತು. ಮಕ್ಕಳು ಇಚ್ಛೆ ಯಂತೆ ವಾಲ್ಮೀಕಿರಾಯನ ಅರಮನೆಯಲ್ಲಿ ಮತ್ತೆ ಹನ್ನೆರಡು ದಿನಗಳವರೆಗೆ ಸೀತಾರಾಮ ಕಲ್ಯಾಣವಾಯಿತು, ಅಯೋಧ್ಯೆಗೆ ಮರಳಿದಾಗ ಮತ್ತೆ ಪಟ್ಟವೂ ಆಯಿತು.

ರಾಮರ ತೊಡೆ ಮೇಲೆ ಅವಲಯ್ಯ ಕೂತುಗಂಡ
ಅವರವ್ವ ಸೀತಮ್ಮನ ತೊಡೆ ಮೇಲೆ
ಚಿಕ್ಕವ ಕುಶಲಯ್ಯ ಕುಂತು ನಗುತಾನೆ

ಭರತ, ಶತ್ರುಘ್ನರು 'ಎಡಚೋರಿ, ಬಲಚೋರಿ' ನಿಂತರು. ಲಕ್ಷ್ಮಣನು ಅಣ್ಣನ 'ಬಲಚೋರಿ' ನಿಂತನು. ಅಂಜನೇಯನಾದರೋ ರಾಮನ ಪಾದದಲ್ಲಿಯೇ ಕುಳಿತ. ಆಗ ರಾಮರಿಗೆ 'ತಿರುಪಟ್ಟ'ವನ್ನು ಕಟ್ಟಿದರು.

ರಘುರಾಮ-ರಾಮಚಂದುರ ಸ್ವಾಮಿ ರಘುರಾಮ
ಮಂಗಳಂ ರಾಮನಿಗೆ ಮಂಗಳಂ ಲಕ್ಷ್ಮಣನಿಗೆ
ಮಂಗಳಂ ಶ್ರೀರಾಮ ಚಂದುರಗೆ
ಮಂಗಳಾರತಿ ಬೆಳಗಿ ಮಂಗಳಾರತಿ ಎತ್ತಿ
ರಾಮರ ಕಥೆ ಇಲ್ಲಿಗೆ ಮುದ್ರೆ
ಶರಣು ಶರಣು
ರಘುರಾಮ-ರಾಮಚಂದುರ ಸ್ವಾಮಿ
ರಘುರಾಮ !

"ಸ್ವಾಮಿ ಪರಮಾತ್ಮ ನಿನ್ನ ಪಾದ !" ಹಿರಿಯ ಗುಡ್ಡ ರಾಮಕಥೆಯನ್ನ ಮುಗಿಸಿ ಭಕ್ತಿತನ್ಮಯತೆಯ ನಿಟ್ಟುಸಿರನ್ನು ಬಿಟ್ಟು ಕಂಸಾಳೆಯನ್ನು ಕಣ್ಣೆ ಗೊತ್ತಿ ಕೆಳಗಿಟ್ಟಿದ್ದಾನೆ.

# ಪಿರಿಯಾಪಟ್ಟಣದ ಸೂರೆಗೆ ಹೊರಟರು

ಕೊಡಗು ಮಲೆಯಾಳ ರಾಜ್ಯಕೆ
ಗಡಿಯಾವುದೆಂದ್ರೆ
ಬೆಡಗಿನಂಥ ಪಿರಿಯ್ಯಾಪಟ್ಟಣ
ತಾನಿ ತಂದನ್ನ ತಾನನ
ತಂದೇನಾನ
ತಾನಿ ತಂದನ್ನ ತಾನನ

ಐತಿಹಾಸಿಕ ಕಥೆಯೊಂದರ ಹಾದಿಯಲ್ಲಿ ಸಾಗಿದ್ದಾರೆ ಗುಡ್ಡರು ; ದಮ್ಮಡಿ, ಕಿನ್ನರಿಗಳೊಡನೆ ಹಿಮ್ಮೇಳಕ್ಕೆ ಸೊಲ್ಲು ಕೊಟ್ಟು ಕಿರಿಯ ಗುಡ್ಡರು ಹಿರಿಯ ಗುಡ್ಡನ ನಿಡಿದಾದ ಕಥೆಯ ಬೆಡಗಿನಲ್ಲಿ ವೈವಿಧ್ಯವನ್ನು ತಂದಿದ್ದಾರೆ, ತಮ್ಮ ಸುಶ್ರಾವ್ಯ ಕಂಠದಿಂದ !

ಪಿರಿಯ ಪಟ್ಟಣದ ಲಾವಣಿ ಹೇಳ್ತೀನಿ
ಕೇಳಿ ಮೂಜಗವೆಲ್ಲ
ನನ್ನ ಹಸುಮಗು ದಳವಾಯಿ ಹೊರಟನು
ಕೇಳಿ ಮಾಸಭೆಯೆಲ್ಲ

ನಾಲ್ಕು ಶತಮಾನಗಳ ಹಿಂದಿನ ಘೋರ ದುರಂತವೊಂದನ್ನು, ರುದ್ರ ಭೀಕರ ಕಥೆಯೊಂದನ್ನು ಹಾಡಿ ಹಾಡಿ ಕಂಬನಿದುಂಬುವ ಗುಡ್ಡರ ನಾಲಗೆಯಲ್ಲಿ ಹೊಸ ಜೀವಭಾವ ಮೈತುಂಬಿ ನಿಲ್ಲುತ್ತದೆ. ಸುಪ್ರಸಿದ್ಧ ಪಿರಿಯ ಪಟ್ಟಣದ ಕಾಳಗ....ತನ್ನೊಂದು ದುಡುಕಿನಿಂದ, ತನ್ನೊಂದು ಅಟ್ಟಹಾಸದಿಂದ ತನ್ನೊಂದು ಅವಸರದ ನುಡಿಯಿಂದ ಏನೆಲ್ಲ ದುರಂತಕ್ಕೆ, ಏನೆಲ್ಲ ವಿನಾಶಕ್ಕೆ ದಾರಿ ಮಾಡಿದ ವೀರರಾಜ....ಆದರೂ....ಆದರೂ....ಅವನ ಶೌರ್ಯಕ್ಕೆ, ಅವನ ಆತ್ಮಾಭಿಮಾನಕ್ಕೆ, ಅವನ ಅತುಲ ಪ್ರೇಮಕ್ಕೆ ಇನ್ನಾವುದು ಎಣೆ ! ಪಿರಿಯ ಪಟ್ಟಣದ ರಣಕಲಿಗಳ, ವೀರರಮಣಿಯರ ರೋಮಾಂಚಕಾರಕ ಕಥೆ....

ಗಂಡುಸಾದರೆ ದಂಡೆತ್ತಿ ಬಾರಯ್ಯೊ
ದಳವಾಯಿಯವರೆ,
ಹೇಡಿಯಾದರೆ ಅರಮಲ್ಲಿರಿಯ್ಯೊ

ಪಿರಿಯ ಪಟ್ಟಣದಿಂದ ಬರಸಿಡಿಲಿನಂತೆ ಬಂದಿತು ಸ್ವಾಭಿಮಾನವನ್ನು ಕಲಕುವ ಭಯಂಕರ ಓಲೆ! ಮೈಸೂರ ದಳವಾಯಿಗಳು ಸಿಡಿದೆದ್ದರು ಕುಹಕದ ನುಡಿಗಳಿಗೆ !

ಹಾಗೆ ಇದ್ದರೆ ಒಪ್ಪುವುದಿಲ್ಲವಯ್ಯೊ
ದಳವಾಯಿಯವರೆ
ಬಣ್ಣ ಉಟ್ಟುಕೊಂಡು ಬಳೆಯ ತೊಟ್ಟುಕೊಂಡು
ದಳವಾಯಿಯವರೆ
ಹೆಣ್ಣಾಗಿ ನೀನು ಅರಮಲ್ಲಿರಿಯ್ಯೊ

ಪಿರಿಯ ಪಟ್ಟಣದ ಹೆಸರನ್ನು ಕೇಳಿದರೆ 'ದಿರುಳಿ ಮದರಂಗ'ವು ನಡುಗುತ್ತದೆ ! ಮೂರು ಮನೆಯ ಹಳ್ಳಿಯಾದರೂ ನಾಗರ ಹಾವಿನಂತೆ ಮೈಮುರಿಯುವ ನೆಲೆಯದು. ಮೂರು ವರ್ಷದ ಹುಡುಗರೂ ಬಿಲ್ಲು ಬಾಣಗಳನ್ನು ಹಿಡಿವ ಗಂಡು ಭೂಮಿ ! ಅದೇನು ದರ್ಪ, ಅದೇನು ಅಟ್ಟಹಾಸ !

ಕೇಡುಗಾಲಕೆ ಬುದ್ಧಿ ಕೂಡಿತು – ವೀರರಾಜ ದೊರೆಗೆ
ಮೈಸೂರ್ನೋರಿಗೆ ವಾಲೆ ಬರೆದರು

ತಾನಾಗಿಯೇ ಬಂದ ಕರೆ ! ಭಾವನ ಸೊಕ್ಕನ್ನು ಮುರಿದೇ ಬರಬೇಕು ! ಅವನ ಒಂದೊಂದು ಮಾತಿಗೂ ರಣದಲ್ಲಿಯೇ ಉತ್ತರ ನೀಡಬೇಕು ! ಪಿರಿಯ ಪಟ್ಟಣದ ಕೋಟೆಯನ್ನು ಈಡಾಡಿ ಬರಬೇಕು !

ದಳವಾಯಿಯವರೂ ಘೋರ ಪ್ರತಿಜ್ಞೆಯನ್ನೇ ಮಾಡಿದರು.

ಸತ್ತರೆ ನಾನು ಅಲ್ಲೆ ಸಾಯಬೇಕು
ಬಾಳೇ ಅರಸೆ
ಉಳಿದರೆ ಪಿರಿಯ ಪಟ್ಟಣ ತರಬೇಕು

'ತುಂಪ್ಪಳ ಮೀಸೆ ಕಪ್ಪುಟ್ಟ ಒರದ' ಇಪ್ಪತ್ನಾಲ್ಕರ ಹರೆಯದ ದಳ

ವಾಯಿಯವರು ಆಳುವ ಮಹಾಸ್ವಾಮಿ ಕಂಠೀರವ ನರಸರಾಜರ ಅಪ್ಪಣೆಯನ್ನು ಪಡೆದು, ತಾಯಿ ಚಾಮುಂಡಿಗೆ ಹರಕೆಯನ್ನು ಹೊತ್ತು, ಮಳವಳ್ಳಿ, ಕಾನಕಾನ ಹಳ್ಳಿ, ಚೆನ್ನಪಟ್ಟಣ ಮುಂತಾದ ಕಡೆಗಳಿಂದ ಬಂದ ಪಡೆಗಳನ್ನು ಕೂಡಿಕೊಂಡು ಪಿರಿಯ ಪಟ್ಟಣದ ಗಡಿಯನ್ನು ದಾಟಿದರು. ವೀರರಾಜನಿಗೆ ಮೈಸೂರ ಪಾಳೆಯದಿಂದ ಪತ್ರವೊಂದು ಸಾಗಿತು—

ನೀ ಅಂದ ಮಾತಿಗೆ ದಂಡೆತ್ತಿ ಬಂದೀವಿನಿ
ಮಾವಯ್ಯನವರೆ
ನಿನ್ನ ಕೋಟೆ ಸುಂಗಾರವಾಗಲಯ್ಯೊ
ಮಾವಯ್ಯನವರೆ
ಜಗಳ ಮಾಡಿದರೆ ಮಾಡಬಹುದಯ್ಯೊ
ಮಾವಯ್ಯನವರೆ
ಮಾಡದಿದ್ದರೆ ಹೊರಗೆ ಬಾರಯ್ಯೊ
ಮಾವಯ್ಯನವರೆ
ಹಂಗೆ ಬಂದರೆ ಕೇಳುವುದಿಲ್ಲವಯ್ಯೊ
ಮಾವಯ್ಯನವರೆ
ನೀ ಬಣ್ಣ ಉಟ್ಟುಕೊಂಡು ಬಳೆಯ
ತೊಟ್ಟುಕೊಂಡು....

ದಳವಾಯಿಯವರ ಸವಾಲಿಗೆ ಉತ್ತರ ಬಂದಿತು. ಹೋದ ಬಂಟನ ಬೆನ್ನಿಗೆ ಬರೆಗಳ ಮೂಲಕವೇ ವೀರರಾಜ ತನ್ನ ಮರುವೋಲೆಯನ್ನಟ್ಟಿದ.

ರಣತೂರ್ಯ ಮೊಳಗಿತು. ಚಂದ್ರಾಯುಧವನ್ನು ಹಿಡಿದು ತಾನೇ ನುಗ್ಗಲು ಬಂದ ದೊರೆಯನ್ನು ತಡೆದು ಸರದಾರ ಸಿದ್ದೋಜಿ ನಾಯಕ ಮೈಸೂರು ಪಡೆಯನ್ನು ಎದುರಿಸಲು ತಾನೇ ಸಿದ್ಧನಾದ. ಕೋಟೆಯ ನೆತ್ತಿಯಿಂದ ಸಿಡಿದು ಬಂದ ಉರಿಮುಸಣೆಯು ಫಿರಂಗಿ ಮೈಸೂರ 'ಠಾಣ್ಯ'ವನ್ನು ಕಲಕಿತು. ಇತ್ತಣಿಂದ ಚಾಮುಂಡಿಯ ಫಿರಂಗಿ ಮೊಳಗಿತು. ಅತ್ತಣಿಂದ ಆರ್ಭಟಿಸಿದ ಚೆನ್ನಿಗರಾಯನ ಫಿರಂಗಿಗೆ ಇತ್ತಣಿಂದ ನಂಜುಂಡನ ಫಿರಂಗಿ ಭೋರ್ಗರೆಯಿತು! ಅಲ್ಲಿನ ಕೋಡಿ ಮಲ್ಲನ ಫಿರಂಗಿಗೆ ಇಲ್ಲಿ ರಂಗನಾಥನ ಫಿರಂಗಿ ಉತ್ತರಿಸಿತು....ಆದರೇನು ಪಿರಿಯ

ಪಟ್ಟಣದ ಉರಿಮಸಣಮ್ಮ ಮೈಸೂರ ಗುಂಡಿಗೆದುರಾಗಿ ನಿಂತು ಎಲ್ಲವನ್ನೂ ಎಡಗೈ ಬಲಗೈಗಳಲ್ಲಿ ತಳ್ಳಿದಳು. ಕಾಲಿನಲ್ಲಿ ಹೊಸಗಿದಳು. ನಾಲಗೆಯಲ್ಲಿ ನೆಕ್ಕಿಕೊಂಡಳು. ಕೋಟೆ ಜಗ್ಗಲಿಲ್ಲ. ಪಿರಿಯ ಪಟ್ಟಣದ ರಕ್ತ ಹರಿಯಲಿಲ್ಲ. ಆದರಿಲ್ಲಿ ಮೈಸೂರಿನ ಸೈನ್ಯದಲ್ಲಿ–

ಒಂದೊಂದು ಗುಂಡು ಸಿಡಿದು ಬಂದರೆ
ಮೈಸೂರು ರಾಣ್ಯ
ಸಾಲು ಸಾಲಿಗೆ ಸಾವಿರ ಮಡಿಯೋದು

ಮುದ್ದಿನ ಕಾಳಗಕ್ಕೆ ಸಿದ್ದೋಜಿ ನಾಯಕ ನಿಲ್ಲಲಿಲ್ಲ. ತನ್ನ ಮೂರು ಸಾವಿರ 'ರಾಣ್ಯ'ದೊಡನೆ ಕತ್ತಿಯನ್ನು ಬೀಸಿ ಮೈಸೂರ ದಂಡಿನ ಮೇಲೆ ನುಗ್ಗಿ ಬಂದನು. ಅವನ ರೌದ್ರಾವೇಶಕ್ಕೆ ಮೈಸೂರು ಸೇನೆ ಚದುರಿತು. 'ಧರ್ಮ ಕಹಳೆ' ನುಡಿಯಿತು. 'ಇಂದಿನ ಯುದ್ಧ ನಾಳೆಗೆ' ಮುಂದುವರಿಯಿತು. ದಳವಾಯಿಯವರು ಮಡಿದ ಮುನ್ನೂರು ಸಾವಿರ ದಂಡಿಗೆ ಮರುಗಿ ಕುಳಿತರು!

ಮತ್ತಷ್ಟು ದಂಡಿಗಾಗಿ ಶ್ರೀರಂಗಪಟ್ಟಣಕ್ಕೆ ಹೋದ ವೋಲೆ ತಿರಸ್ಕೃತ ವಾಯಿತು. ದುಃಖ ಮಾಡುತ್ತ ಪಾಳೆಯದಲ್ಲಿ ದಳವಾಯಿಗಳು ಆ ರಾತ್ರಿ ಮಲಗಿದರು. ತಾಯಿ ಚಾಮುಂಡಿಯ ಕರುಣೆ ಒದಗಿ ಬಂದಿತು. ಕನಸಿನಲ್ಲಿ ಕಂಡ ದೇವಿ, ಉರಿ ಮಸಣಿಯನ್ನು ಬೇರ್ಪಡಿಸಿ ಕೈಸೆರೆ ಹಿಡಿದು. ಮೈಸೂರ ಸೈನ್ಯಕ್ಕೆ ತೆರವು ಮಾಡಿದ ಬಗೆಯನ್ನು ಬಣ್ಣಿಸಿದಳು. ವೀರರಾಜನಿಗೆ ಏಳು ದಿನದ ಮಾಯದ ನಿದ್ದೆಯನ್ನು ಕೊಟ್ಟಳು. ಪಿರಿಯ ಪಟ್ಟಣದ ಮೇಲೆ ಮಾಯದ ಮಬ್ಬು ಕವಿಯಿತು !

ನಾಲ್ಕು ಭಾಗವಾಗಿ ನಾಲ್ದೆಸೆಯಿಂದಲೇ ದಾಳಿ ಮಾಡಿದ ಮೈಸೂರ ಸೇನೆ ಹೊರ ಕೋಟೆಯನ್ನು ಭೇದಿಸಿತು ಪಿರಿಯ ಪಟ್ಟಣದ ಬೀದಿಬೀದಿಯಲ್ಲಿ ರಕ್ತ ಹೊಳೆಯಾಗಿ ಹರಿಯಿತು. ಸರದಾರರೆಲ್ಲ ಮಡಿದು ಮಲಗಿದರು. ಒಳಕೋಟೆಯ ಬುಡವನ್ನು ಮುಟ್ಟಿದರೂ ಎದುರು ನಿಂತು ಹೋರಾಡುವ ಕಲಿ ಇಲ್ಲವಾಯಿತು! ದಳವಾಯಿಯವರು ಧರ್ಮಕಹಳೆಯನ್ನು ನುಡಿಸಿ ಮುಂದಿನ ಲಗ್ಗೆಗೆ ವಿರಾಮ ವನ್ನು ಸಾರಿದರು. ಎತ್ತೆತ್ತಲೂ ಭೋರ್ಗರೆದ ಕಹಳೆಯ ಸದ್ದಿಗೆ ಅರಮನೆಯಲ್ಲಿ ಪಟ್ಟದ ಮಲ್ಲಮ್ಮ ಎಚ್ಚರಗೊಂಡಳು. ಏಳನೆಯ ಉಪ್ಪರಿಗೆಯನ್ನೇರಿ ತನ್ನ

ಪಟ್ಟಣವನ್ನೆಲ್ಲಾ ಒಮ್ಮೆ ನೋಡಿದಳು. ಕತ್ತಲು ಕವಿದಿದೆ ! ಮದ್ದಿನ ಹೊಗೆ ಮುಗಿಲನ್ನು ಮುಟ್ಟಿದೆ ! ಏನೋ ಕೋಲಾಹಲ ಎಲ್ಲೆಲ್ಲಿಯೂ ಕೇಳಿ ಬಂದಿದೆ!

ಪಟ್ಟದ ಮಲ್ಲಮ್ಮ ಕೋಟೆಯ ಹೊರ ಮೈಯನ್ನೊಮ್ಮೆ ಬಾಗಿ ನೋಡಿದಳು ! ಮತ್ತೆ ನೋಡಿದಳು ! ಪಗಡೆಯ ಕಾಯಿಯಂತೆ ಅಸಂಖ್ಯಾತ ತಲೆಗಳು ಸುಳಿಯುತ್ತಿವೆ... ಓಹ್, ತನ್ನ ಪಟ್ಟಣ ಸೂರೆಯಾಗಿದೆ. ದಳವಾಯಿ ದೊಡ್ಡಣ್ಣ ಕೋಟೆಯನ್ನ ಹಿಡಿದಿದ್ದಾನೆ !

ಧಡಧಡನೆ ಮೆಟ್ಟಲಿಳಿದು ಬಂದ ಪಟ್ಟದ ಮಲ್ಲಮ್ಮ ಪತಿಯ ಮೇಲೆ ಪನ್ನೀರು ಚೆಲ್ಲಿ ಮೇಲೇಳಿಸಿದಳು.

ಅರೆಗಣ್ಣು ಬಿಟ್ಟು ಮಡದಿ ನೋಡಿದ
ವೀರರಾಜದೊರೆ
ಕಡೆಗಣ್ಣಲಿ ಕಣ್ಣೀರ ಕೆಡವಿದ !

ಎದೆಗುಂದಲಿಲ್ಲ ವೀರರಾಜ. ಚಂದ್ರಾಯುಧವನ್ನು ಹಿಡಿದು ಹೊರಟವನು ಮತ್ತೆ ಮರಳಿ ಮೂರು ಮಂದಿ ರಾಣಿಯರೊಡನೆ ಮಗ ವೀರಣ್ಣನೊಡನೆ ಕುಳಿತು ಉಣ್ಣ ಬಯಸಿದ. ಆದರೇನು ! ಕೈಯ ತುತ್ತು ಬಾಯಿಗೆ ಬರಲಿಲ್ಲ. ಹಿಡಿದ ವೀಳ್ಯವೂ ಜಾರಿಬಿದ್ದಿತು. ಹಲವು ಅಪಶಕುನಗಳನ್ನು ಲೆಕ್ಕಿಸದೆ ರಣವನ್ನು ಹೊಕ್ಕನು. ಮಡಿದ ಸರದಾರರನ್ನು ಕಂಡನು. 'ಕೆಂಜರ ಗಣ್ಣನ್ನು ಕಿಡಿ ಕಿಡಿ ಕೆದರಿ' ನುಗ್ಗಿ ಬಂದನು !

ವೀರರಾಜನ ಕತ್ತಿಯ ಎದುರು ನಿಲ್ಲುವ ಧೀರರಿಲ್ಲದೆ ಮತ್ತೆ ಮೈಸೂರು ಸೈನ್ಯ ತತ್ತರಿಸಿತು. ಅವನ ರಣೋತ್ಸಾಹಕ್ಕೆ ಎಣೆ ಇಲ್ಲದಾಯಿತು !

ಮೂಡಲಾಗಿ ಗುಡುಗುತವನಲ್ಲೊ
ರಾಣ್ಯದೊಳಗೆ
ಬಡಗಲಾಗಿ ಮಿಂಚುತವನಲ್ಲೊ

'ಕಬ್ಬಿನಲ್ಲಿ ಮದ್ದಾನೆ ನುಗ್ಗಿದಂತಾಯಿತು.' ವೀರರಾಜ ಒಂದೇ ಗಳಿಗೆ ಯುದ್ಧ ಮಾಡಿದರೂ ಮುನ್ನೂರು ಸಾವಿರ ರಾಣ್ಯವನ್ನು ಕಡಿದನು. ಬೀಸಿದ ಕತ್ತಿ ಬಿರುಗಾಳಿಯಾಗಿ ಮೈಸೂರ ಕಲಿಗಳನ್ನು ತರಿದುರುಳಿಸುವಾಗ, ವೀರರಾಜ ತನ್ನ ರಾಣಿಯರನ್ನು ನೆನೆದನು. ತಾನು ಏಕಾಂಗಿಯಾಗಿ ಹೋರಾಡಿ ರಣದಲ್ಲಿ

ಮಡಿದರೆ, ಮೈಸೂರಿನವರು ಅರಮನೆಗೆ ನುಗ್ಗಿಬಂದರೆ ಮೂವರು ರಾಣಿಯರಿದ್ದಾರೆ. ತನ್ನ ಮುದ್ದಿನ ಮಡದಿಯರಿದ್ದಾರೆ !

ಚಿನ್ನ ಬೆಳ್ಳಿ ಎಂಬುವ ಆಸೆಗೆ
ಮೈಸೂರುವರು
ನನ್ನ ಕನ್ನೇರ ಮೈ ಕೈ ಮುಟ್ಟುವರು

ವೀರರಾಜನ ಹಿರಿದ ಕತ್ತಿ ಒರೆಯನ್ನು ಸೇರಿತು. ಅರಮನೆಯತ್ತ ರಾಜ ಹಿಂದಿರುಗುವಾಗ ವೀರ ಫಕೀರನೊಬ್ಬ ಎದುರಾಗಿ ಖಡ್ಗವನ್ನು ಕಸಿದುಕೊಂಡು ಮತ್ತೆ ಮೈಸೂರ ದಂಡಿನಲ್ಲಿ ಕೋಲಾಹಲ ಉಂಟುಮಾಡಿದನು. ಫಕೀರನ ಸಾಹಸವನ್ನು ನಿಂತುನೋಡಿದ ವೀರರಾಜ ಆ ಸಾಹಸಿಯ ಶೌರ್ಯಕ್ಕೆ ತಲೆ ದೂಗಿದ.

ಹಕ್ಕಿಯಂಗೆ ಹಾರಿ ಕಡಿದನು
ಮೈಸೂರವರ
ಕಪ್ಪೆಯಂಗೆ ಕುಪ್ಪಳಿಸಿ ಕಡಿದನು

ದಳವಾಯಿಯುವರೂ ಫಕೀರನ ಕಲಿತನಕ್ಕೆ ಮೆಚ್ಚಿ ಜೀವಸಹಿತ ಅವನನ್ನು ಸೆರೆ ಹಿಡಿಯುವಂತೆ ಸಾರಿದರು. ಆದರೂ ಅವನ ಉಪಟಳವನ್ನು ಸಹಿಸದ ಬಾಳೆ ಅರಸಿನವರು ಮರವನ್ನೇರಿ ಈಟಿಯನ್ನೆಸೆದು ಅವನನ್ನು ಕೊಲ್ಲಬೇಕಾಯಿತು.

ಮರಣಶಯ್ಯೆಯಲ್ಲಿ ಫಕೀರ ವೀರರಾಜ ದೊರೆಗೆ ಕೈಮುಗಿದು ತನ್ನ ಉಪ್ಪಿನ ಋಣ ತೀರಿತೆಂದು ನುಡಿದು ಕಣ್ಣು ಮುಚ್ಚಿದ. ಅಲ್ಪ ಕಾರಣಕ್ಕಾಗಿ ವೀರ ಫಕೀರನನ್ನು ದಂಡಿನಿಂದ ಹೊರಗೆ ಹಾಕಿದ್ದ ನೆನಪು ಮರಳಿತು ವೀರರಾಜನಿಗೆ, ಕಣ್ಣಂಚಿನಲ್ಲಿ ನೀರಾಡಿತು.

ಹತ್ತು ಸಾವಿರ ರಾಣ್ಯ ಸಾಕದೆ
ಸರದಾರನೆ
ಹತ್ತು ಮಂದಿ ಫಕೀರರ ಸಾಕಿದ್ರೆ
ಸರದಾರನೆ
ಉಳಿಸೋರಲ್ಲೊ ಪಿರಿಯ ಪಟ್ಟಣವ !

ಮತ್ತೆ ತುಸುಹೊತ್ತು ಹೋರಾಡಿ ಅರಮನೆಗೆ ಮರಳಿದ. ರಾಣಿಯರು ಓಡಿ ಬಂದು ಅವನ ಮೈಕೈ ರಕ್ತವನ್ನು ತೊಡೆದರು. ಬಾಳೆ ಸುಳಿಯ ನೀರನ್ನು ತಂದು ದೊರೆ ಎದೆಯ ಮೇಲೆ ಸುರಿದರು.

ನಿಂತಿರುವಂಥ ಮಡದೀರ ಕಂಡಸಲ್ಲ ಈರ ರಾಜದೊರೆ
ಕಡೆಗಣ್ಣಲ್ಲಿ ಕಣ್ಣೀರ ಕೆಡವಿದ

ಮಡದಿಯರೆಲ್ಲರೂ ತೌರಿಗೆ ಮರಳುವಂತೆ ಸೂಚಿಸಿದ. ಆದರೆ ಅದಕ್ಕಾರು ಸಿದ್ಧರಿದ್ದರು ?

ಬಾಳುಗೆಟ್ಟು ಬಾಗಿಲಿಗೆ ಹೋದರೆ
ಅತಿಗಮ್ಮನವರು
ಬಾಗಿಲ ಕಸವ ಗುಡಿಸು ಎಂಬರು

ಅಂಥ ಹಂಗಿನ ತೌರು ಅವರಿಗೆ ಬೇಡವಾಯಿತು. ತಮ್ಮನ್ನೂ ಕೊಂದು ರಣಕ್ಕೆ ಮರಳಬೇಕೆಂದು ಬೇಡಿಕೊಂಡರು. ತನ್ನ ಮುದ್ದಿನ ಮಡದಿಯರ ಪ್ರಾಣವನ್ನು ಕೊಲ್ಲಲಾರದಾದ ವೀರರಾಜ !

ನಿಮ್ಮ ಪ್ರಾಣವ ನಾನು ಕೊಲಲಾರೆ
ಎನ್ನ ಮಡದೀರ
ನನ್ನ ಪ್ರಾಣವ ನೀವೆ ಕೊಲಿರ್ಹೆಣ್ಣೆ !

ವೀರರಾಜನ ನಿರ್ಧಾರ ಸಡಿಲಲಿಲ್ಲ. ತಮ್ಮನ್ನು ಕೊಲ್ಲುವಂತೆ ಆಣೆಯಿಟ್ಟರೂ ಅವನು ಮಡದಿಯರ ಮೇಲೆ ಕತ್ತಿಯನ್ನು ಎತ್ತಲಿಲ್ಲ. ಕೊನೆಗೆ ಪಟ್ಟದ ಮಲ್ಲಮ್ಮ ಕೆಂಜರಗಣ್ಣ ಕಿಡಿಕಿಡಿ ಕೆದರಿ, ತನ್ನ ಸೊಂಟದ ಈಟಿಯನ್ನು ಎಳೆದು ರಾಯನತ್ತ ಎಸೆದಳು. ಈಟಿಯ ವರಸೆ ತಿಳಿದಿದ್ದ ವೀರರಾಜ ಫಕ್ಕನೆ ಕೆಳಕ್ಕೆ ನೆಗೆದು ತಪ್ಪಿಸಿಕೊಂಡ. ಇನ್ನು ಕೊಲ್ಲುವ ಛಲ ಅವನಲ್ಲಿ ಮೂಡಿತು.

ಹೆಂಗಸುಗುಂಟಿ ಇಷ್ಟು ವಾಂಛಾಲ ನನ್ನ ಮಡದಿ
ಮೊದಲ ಏಟಿಗೆ ನೀನೆ ಬಾರ್ಹೆಣ್ಣೆ

ನಗುನಗುತ್ತಲೇ ಪಟ್ಟದ ಮಲ್ಲಮ್ಮ ಕತ್ತಿಗೆ ಬಲಿಯಾದಳು.

ಮಲ್ಲಿಗೆ ಹೂವ ಚೆಲುರು ಕುಯ್ದವಂಗೆ
ಪಟ್ಟದರಾಣಿ
ಮಲಗಿದಳು ಧರಣಿಯ ಮೇಲಕೆ

ಐದು ವರ್ಷದ ಶಿಶು ಕಂದ ವೀರಣ್ಣನನ್ನು ಕಂಕುಳಲ್ಲಿ ಹೊತ್ತ ಕೆಂಪ ಗೌರಮ್ಮ ಮುಂದೆ ಬಂದಳು. ಕಂದನ ಮುಖವನ್ನು ನೋಡಿ ವೀರರಾಜನ ಕಣ್ಣು ಹನಿಗೂಡಿದವು.

ಕಂದ ನೀನು ಬದುಕೊ ಕಾಲಕೆ—ನಮ್ಮ ಪಟ್ಟಣ
ಸೇರಿಹೋಯ್ತುಲ್ಲೊ ಶ್ರೀರಂಗಪಟ್ಟಣಕೆ !

ದೊರೆಯ ಕೊರಳ ಸೆರೆ ಬಿಗಿದು ಬಂದವು. ಆದರೆ ತನ್ನ ಬಗೆ ಸಡಿಲ ಲಿಲ್ಲ. ಕೆಂಪಗೌರಮ್ಮನನ್ನು ಹತ್ತಿರಕ್ಕೆ ಕರೆದ ರಾಜ,

ಮುಂಚೆ ನಿನ್ನ ಕಂದನ ತಾರ್ದೆಣ್ಣೆ
ಕೆಂಪೇಗೌರಿ
ಮೇಲಕೆ ಎಸೆದು ಕತ್ತಿಯ ಒಡ್ಡುವೆ !

ತಾಯಿ ಕರುಳು ತನ್ನ ಕಣ್ಣೆದುರಿಗೇ ತನ್ನ ಕಂದನ ಕೊಲೆಗೆ ಒಪ್ಪಲಿಲ್ಲ. ತನ್ನನ್ನು ಮೊದಲು ಕೊಂದು ಅನಂತರ ಕಂದನನ್ನು ಕೊಲ್ಲಲು ಸೂಚಿಸಿದಳು. ತಾಯಿಯನ್ನು ಕೊಲ್ಲಲು ಎತ್ತಿದ ಕತ್ತಿಯನ್ನು ಕಂದ ವೀರಣ್ಣ ಬಂದು ತಡೆಯ ದಿರುವನೆ ! ತಂದೆಯ ತೊಡೆಯನ್ನು ತಬ್ಬದಿರುವನೇ !

ಓಡಿ ಬಂದು ತಂದೆಯ ತಬ್ಬಿದರೆ—ಎನ್ನ ಮಡದಿ
ಎತ್ತಿದ ಆಯುಧ ನಿಂತೇ ಹೋಯಿತವೆ !

ಕೆಂಪಗೌರಮ್ಮ ಕಂದನೊಡನೆ ನೆಲಮಾಳಿಗೆಯತ್ತ ಬಂದಳು. ಕಂದನನ್ನು ಕಲು ಮಾಳಿಗೆಗೆ ಕೂಡಿ ಬೀಗ ಹಾಕಿ ಬಂದು ಪತಿಯ ಕತ್ತಿಗೆ ತಲೆಯೊಡ್ಡಿದಳು. ಅವಳ ರುಂಡ ಮೂರು ಮಾರು ದೂರಕ್ಕೆ ಹಾರಿತು.

ಸಂಪಿಗೆ ಬುಡವ ತಂಪ್ಹೊತ್ತಲ್ಲಿ ಕುಯ್ದಂಗೆ
ಕೆಂಪಗೌರಮ್ಮ
ಮಲಗಿದಳು ಧರಣಿಯ ಮೇಲಕೆ

ಇಬ್ಬರನ್ನು ಕಡಿದ ವೀರರಾಜ ಮೂರನೆಯ ಚೆನ್ನಮಲ್ಲಮ್ಮನನ್ನು ಕರೆದ. ಹರಿದ ರಕ್ತ, ತರಿದ ರುಂಡಗಳನ್ನು ಕಂಡ ಚೆನ್ನಮಲ್ಲಮ್ಮ ನಡುಗಿ ಹೋದಳು.

ಹರಿದಿರುವಂಥ ರಕ್ತ ಕಂಡಳು ಚೆನ್ನಮಲ್ಲಮ್ಮ
ಮುಚ್ಚಿದ ಕಣ್ಣು ತೆರೆಯದೆ ಹೋದಳು !

ಎಳೆಹರೆಯದ ಕೋಮಲೆ ಚೆನ್ನಮಲ್ಲಮ್ಮ ನಡುಗುತ್ತಲೇ ವೀರರಾಜನ ಎದುರಿಗೆ ಬಂದಳು. ಕಣ್ಣು ಮುಚ್ಚಿಕೊಂಡೇ ದೊರೆಗೆ ಕೈಮುಗಿದಳು, ವೀರ ರಾಜನ ಎತ್ತಿದ ಕೈ ಅಲ್ಲೇ ನಿಂತಿತು. ಮುದ್ದು ಮಡದಿಯ ಮುಖವನ್ನೊಮ್ಮೆ ನೋಡಿದ ದೊರೆಯ ಹೃದಯ ಕರಗಿ ಹರಿಯಿತು. ಅವಳನ್ನು ಕೊಲ್ಲಲು ದೊರೆ ಹಿಂದೆಗೆದನು.

ದೊರೆಗಳ ಹೊಟ್ಟೇಲಿ ಹುಟ್ಟಿ ಬಂದರು
ಅವರಿಬ್ಬರೂವೆ
ಹೆದರದೆ ಬಂದು ಪ್ರಾಣ ಕೊಟ್ಟರಲ್ಲೆ !
ಹಳ್ಳಿಯ ಅರಸನ ಮಗಳಲ್ಲೆ ನೀನು
ಮೆಚ್ಚಿದ ಹೆಣ್ಣೆ
ಕತ್ತಿಯ ಜಳಪಕೆ ಅಂಜಿಕೊಂಡೆಯಲ್ಲೆ !
ಹೋಗೆ ನಿನ್ನ ತಂದೆಯ ಅರಮನೆಗೆ
ನನ್ನ ಮಡದಿ
ಸಾಕಿಕೊಳ್ಳೆ ಕಂದ ವೀರಣ್ಣನ !

ಚೆನ್ನಮಲ್ಲಮ್ಮ ಒಪ್ಪುವ ರಮಣಿಯಲ್ಲ. ತನ್ನ ಅಕ್ಕಂದಿರ ಹಾದಿಯನ್ನು ತಾನೂ ಬಯಸಿದಳು. ಪತಿಯ ಕೈಯ ಮರಣಕ್ಕೆ ಅವಳೂ ಹಂಬಲಿಸಿದಳು.

ನನ್ನ ಲಿಂಗ ಪ್ರಾಣ ಲಿಂಗನೊ ನನ್ನ ದೊರೆಯೆ
ನಿಮ್ಮ ಪಾದ ಹೊಂದೋದೆ ಲೇಸಯ್ಯೊ !

ಮಡದಿಯ ಛಲವನು ವೀರರಾಜ ಮೆಚ್ಚಿಕೊಂಡ. 'ಸತ್ಯವಂತೆ' ತನ್ನ ಮಡದಿಯನ್ನು ಎರಡು ತುಂಡಿಗೆ ಕಡಿದನು. ಕಡಿದ ದೊರೆಯೇನು ಬದುಕುವ ಹೇಡಿಯಲ್ಲ! ತನ್ನ ಮಡದಿಯರ ಹಿಂದೆಯೇ ತಾನೂ ಹೊರಡಲು ಅನುವಾದ. ಹೊರಕೋಟೆಯ ಲಗ್ಗೆಯನ್ನು ಮುಗಿಸಿದ ದಳವಾಯಿಯವರ ದಂಡು ಒಳ

ಕೋಟೆಗೆ ಲಗ್ಗೆ ಹತ್ತಿದೆ. ತಾನಿನ್ನೂ ಬದುಕಿರುವಾಗಲೇ ಒಳಗೆ ನುಗ್ಗಿ ಬರುತ್ತಿರುವ ಮೈಸೂರವರನ್ನು ನೋಡಿ ವೀರರಾಜ ಆರ್ಭಟಿಸಿ ಮತ್ತೆ ಕತ್ತಿಯನ್ನು ಬಲಗೈಯಲ್ಲಿ ಹಿಡಿದನು. ಮೈಸೂರವರ ಮೇಲೆ ಮತ್ತೆ ಆವೇಶದಿಂದ ನುಗ್ಗಿ ಬಂದನು. ಮಡದಿಯರನ್ನು ಕೊಂದ ಕೋಪ 'ರಾಣ್ಯ'ದ ಮೇಲೆ ತಿರುಗಿತು.

ಅಲ್ಲಿಗೆ ಹಾರುತ ಇಲ್ಲಿಗೆ ಮಿಂಚುತ
ಮೈಸೂರವರ
ಇಬ್ಬಿಬ್ಬರ ಒಟ್ಟಿಗೆ ಕಡಿದನು

ಕಾಲಿಗೆ ಬಿದ್ದವರನ್ನೂ, ಕೈಯೆತ್ತಿ ಮುಗಿದವರನ್ನೂ ವೀರರಾಜ ಬಿಡಲಿಲ್ಲ. ಹೋರಾಡುತ್ತ ಹೋರಾಡುತ್ತ ಹತ್ತುಸಾವಿರ 'ರಾಣ್ಯವ' ಮತ್ತೆ ಕಡಿದು ಸಾಗಿದನು. ಮೂರು ಬಾರಿ ರಣವನ್ನು ಹೊಕ್ಕು ಬಳಲಿದ್ದ ವೀರರಾಜನ ಮೊಣಕೈ ಸೋತಿತು. ಅವನ ರಭಸ ತಗ್ಗಿತು. ಅಲಂಬಾಡಿಯ ಬೇಡರ ಹುಡುಗರು ಸಮಯವನ್ನು ಸಾಧಿಸಿ ಮರವನ್ನೇರಿ, ತೂಗಿ ಈಟಿಯನ್ನೆಸೆದರು. ಬಹಳ ದೂರದಿಂದ 'ಬರಳಿ' ಬಂದ ಈಟಿ ವೀರರಾಜನ ಪಕ್ಕೆಗೆ ನಾಟಿತು. ಈಟಿಯನ್ನು ಹಿರಿದು ಅತ್ತ ಎಸೆದು ಕತ್ತೆತ್ತಿ ನೋಡಿದ ವೀರರಾಜ ಹಕ್ಕಿಯಂತೆ ಮೇಲೆ ಹಾರಿ, ಇರಿದ ಬಂಟನನ್ನು ಕಡಿದನು. ಅವನ ರಣೋತ್ಸಾಹ ತಗ್ಗಲಿಲ್ಲ.

ಹಗೆಯ ಏಟ ಮೈಮೇಲೆ ತಕ್ಕೊಂಡು ಈರರಾಜದೊರೆ
ಐದು ಸಾವಿರ ರಾಣ್ಯ ಕಡಿದನು.

ನೆತ್ತರು ಹರಿದ ಧೀರ ವೀರರಾಜನ ಒಡಲು ಕುಗ್ಗಿತು. ಕೈಯ ಆಯುಧ ಸಡಿಲಿದಂತೆ ಕಂಡಿತು. ಹಗೆಯ ಕೈಗೆ ಸಿಕ್ಕದೆ ಮೇಲೆ ಹಾರಿ ತನ್ನ ಕತ್ತಿಯಿಂದಲೇ ತನ್ನ ಅಂತ್ಯವನ್ನು ಕಂಡನು ವೀರರಾಜ. 'ಹೆಚ್ಚಿನ ಮಾವಯ್ಯ'ನ ಮರಣಕ್ಕೆ ಶೋಕತಪ್ತರಾದ ದಳವಾಯಿಯವರು ವೀರರಾಜನ ತಲೆಯನ್ನು ತೊಡೆಯ ಮೇಲಿಟ್ಟರು. ಅತ್ತ ದೊರೆಯ ಸೋದರ ಚೆಂದೆ ಅರಸು ನೇರವಾಗಿ ಸೈನ್ಯವನ್ನು ಭೇದಿಸಿಕೊಂಡು ಇತ್ತಲೇ ನುಗ್ಗಿ ಬಂದನು.

ನಾನು ದೊರೆಯು ನೀನು ದೊರೆ ಕಾಣೊ—ದಳವಾಯಿಯವರೇ
ಗಂಡಾದರೆ ಎನ್ನ ಎದುರಿಗೆ ಬಾರಯ್ಯ !

ರಣಕಲಿ ಚೆಂದೆ ಅರಸನ್ನು ಕಂಡು ದಳವಾಯಿಯ್ಯವರು ಚಂದ್ರಾಯುಧವನ್ನು ಎಳೆದುಕೊಂಡರು. ರೋಷ ಭೀಷಣನಾಗಿ ನಿಂತ ಚೆಂದೆ ಅರಸನ ಉಗ್ರರೂಪಿಗೆ ಅವರ ಎದೆಯೂ ಅಳುಕಿತು.

ಇಂಥ ರಣಧೀರರಿರುವ ಪಿರಿಯ ಪಟ್ಟಣಕೆ ಚಾಮುಂಡವ್ವ
ನಾ ಅರಿಯದ ಮಗ ದಂಡೆತ್ತಿ ಬಂದನಲ್ಲ
ಹರದಿ ನಿನ್ನ ದಯವೇ ಇರಲವ್ವ !

ಚಂದೆ ಅರಸಿನ ಕತ್ತಿ ಏಟುಗಳು ದಳವಾಯಿಯವರನ್ನು ಮುಟ್ಟದಂತೆಯೇ ತಾಯಿ ಚಾಮುಂಡಿ ರಕ್ಷೆಯಾಗಿ ನಿಂತಳು. ಸೆರೆಹಿಡಿಯಲು ಬಂದ ಅರಿಭಟರನ್ನು ತುಂಡರಿಸಿ ತನ್ನ ಕೈಸೋಲುವಂತೆ ಕಂಡಾಗ ಅಣ್ಣನ ದಾರಿಯನ್ನೇ ಹಿಡಿದು ಚಂದೆ ಅರಸು ಸಾಗಿದನು.

ಪಿರಿಯ ಪಟ್ಟಣ ಸೋತು ಶರಣಾಯಿತೆಂದು ನಿಟ್ಟುಸಿರು ಬಿಟ್ಟ ಮೈಸೂರ ದಂಡಿಗೆ ಎಳೆನಾಗರವೊಂದು ಅರಮನೆಯತ್ತಣಿಂದ ಸರಸರನೆ ಹರಿದು ಬಂದಿತು. ಕೈಯ್ಯ ಕತ್ತಿ ಗುರಾಣಿಯೊಡನೆ ಏಳು ವರ್ಷದ ಕಂದ ವೀರಣ್ಣ ಆರ್ಭಟಿಸುತ್ತ ನುಗ್ಗಿ ಬಂದನು.

ಹೊಂಚುತೆಪ್ಪಿತಲೊ ಮಿಂಚಿದ ಕಾರ್ಯಕೆ—ಮೈಸೂರವರೇ
ನನ್ನ ಕಾರ್ಯವ ಈಗ ನೋಡಿರಯ್ಯ.

ಕಲ್ಲು ಹೊಕ್ಕವರನ್ನು ಬಿಡಲಿಲ್ಲ. ಮರವೇರಿದವರನ್ನೂ ಬಿಡಲಿಲ್ಲ. ಕಂದ ವೀರಣ್ಣನ ಮೂರು ಗಳಿಗೆಯ ಯುದ್ಧದಲ್ಲಿ ಇಪ್ಪತ್ತು ಸಾವಿರ ರಾಣ್ಯ ಮಡಿದು ಮಲಗಿತು. ರಕ್ತ ಬಸಿದ ಹಸಿ ನೆಲದಲ್ಲಿ ಎಳೆಯ ಕಾಲು ಜಾರಿತು. ಕೆಳಗುರುಳಿದ ಬಾಲವೀರನನ್ನು ಬೆನ್ನಾಡಿ ಬಂದಿದ್ದ ಮೈಸೂರಿನ ಸರದಾರ ವಲ್ಲಿ ಸೈದುವ ಹೋಗಿ ತಬ್ಬಿದನು. ದಳವಾಯಿಯವರು ಪ್ರೀತಿ ಮಮತೆಯಿಂದ ಓಡೋಡಿ ಬಂದರು. ಕಂದ ವೀರಣ್ಣನನ್ನು ಎತ್ತಿ ಮುದ್ದಾಡಿ ತಲೆಯನ್ನು ನೇವರಿಸಿದರು. ತೊಡೆಯ ಮೇಲೆ ಕೂರಿಸಿಕೊಂಡು ಅವನ ಹರಿವ ಕಣ್ಣೀರನ್ನು ಒರೆಸಿದರು. ಅವನ ವೀರಾವೇಶಕ್ಕೆ ಮೆಚ್ಚಿ ಕೊಂಡಾಡಿದರು.

ಹೆದರಬೇಡ ಬೆದರ ಬೇಡಯ್ಯೊ—ನಮ್ಮ ಅಳಿಯ
ನಮ್ಮ ಕಂದು ನೀನು ಬದುಕಯ್ಯೊ !

ಕಂದ ವೀರಣ್ಣ ಮತ್ತೆ ಜಿಗಿದು ಮೇಲೆದ್ದ ! ಯಾರ ಋಣದಲ್ಲೇನು ತಾನು ಬದುಕಬೇಕು. ಅವರ ಆಶ್ರಯವನ್ನು ಕೋರಿ ಕೈಚಾಚಲು ಅವನೇನು ಹೇಡಿಯೇ !

'ಕೆಂಜರಗಣ್ಣನ್ನು ಕಿಡಿಕಿಡಿ' ಕೆದರಿ, ಚೋಟುದ್ದ ಕತ್ತಿಯೊಂದನ್ನು ತೆಗೆದು ಪಿರಿಯ ಪಟ್ಟಣದ ವೀರರ ಹಾದಿಯಲ್ಲಿ ತಾನೂ ನಡೆದುಬಿಟ್ಟ !

ಶೋಕತಪ್ತ ಹೃದಯದಲ್ಲಿ ದಳವಾಯಿಯವರು ಕುಸಿದು ಕುಳಿತರು. ಪಿರಿಯ ಪಟ್ಟಣವನ್ನು ಬಯಸಿ ಬಂದವರಲ್ಲ ಅವರು. ರಕ್ತದ ದಾಹ ಅವರಿಗೆ ಅಂಟಿ ಬಂದಿರಲಿಲ್ಲ. ಅವರ ಪಟ್ಟಣನನ್ನು ಅವರಿಗೇ ಉಳಿಸಿ ಹೋಗಬೇಕು. ರಾಣಿಯರಿಗಾದರೂ ಪಿರಿಯ ಪಟ್ಟಣದ ಪಟ್ಟವಾಗಬೇಕು !

—ಅರಮನೆಯ ಮೆಟ್ಟಲುಗಳನ್ನು ಏರಿ ಬಂದ ದಳವಾಯಿಯವರು ರಕ್ತದ ಮಡುವಿನಲಿದ್ದ ರಾಣಿಯರನ್ನು ಕಂಡರು. ಜಯದ ಸಿರಿಯಲ್ಲಿ ಬೀಗುವ ಭಾಗ್ಯವೇನೂ ಅಲ್ಲಿ ಉಳಿಯಲಿಲ್ಲ ! ತನ್ನ ಬಂಧು ಬಳಗವೆಲ್ಲಾ ಆತ್ಮಾರ್ಪಣೆಯ ಹಾದಿಯಲ್ಲಿ ಗೆದ್ದು ಸಾಗಿದ್ದಾರೆ ! ಸೋತವರು ತಾವೇ.... ಆ ವೀರರಲ್ಲ....ಆ ವೀರರಮಣಿಯರಲ್ಲ !!

ಕೊಡಗು ಮಲೆಯಾಳ ರಾಜ್ಯಕೆ ಗಡಿಯಾವುದೆಂದರೆ
ಬೆಡಗಿನಂಥ ಪಿರಿಯ ಪಟ್ಟಣ !
ಪಿರಿಯ ಪಟ್ಟಣದ ಈರಾಜು ದೊರೆಯ ಕಾಳಗ ಇಲ್ಲಿಗೆ
ಮುದ್ರೆ ಶರಣು ಶಂಣೆನ್ನಿ.

——

# ಚೆಲುವ ಚೆನ್ನಿಗರಾಮ

ಕನ್ನಡದ ಕುವರ, ಕುಮ್ಮಟದ ಕಿಡಿ, ರೂಪ.ಗುಣಸಂಪನ್ನ, ಕುಮಾರ ರಾಮ ತನ್ನ ಶೀಲ, ಚಾರಿತ್ರಗಳ ಜೊತೆಗೆ ಶೌರ್ಯ ಸಾಹಸಗಳ ಅಪೂರ್ವ ಕನ್ನಡ ವೀರನೆನಿಸಿದವನು. ತನ್ನ ಗುಣ ಶೀಲಗಳಿಂದಲೇ ಜನಮನದ ಆರಾಧ್ಯ ಮೂರ್ತಿಯಾಗಿ ಮೆರೆದ ಅವನ ಮಹಿಮೆಗೆ ಮಾರುಹೋಗಿ ನಂಜುಂಡ, ಪಾಂಚಾಳ ಗಂಗ, ಮಹಾಲಿಂಗಸ್ವಾಮಿ ಮುಂತಾದ ಪ್ರೌಢಕವಿಗಳು ಕಾವ್ಯ ಗಳನ್ನು ಬರೆದು ಅವನ ದಿವ್ಯವ್ಯಕ್ತಿತ್ವವನ್ನು ಕಡೆದರು. ಇವರಿಗೂ ಒಂದು ಸ್ಫೂರ್ತಿಯ ನೆಲೆಯಾಗಿ ತಮ್ಮ ನೆಚ್ಚಿನ 'ಚೆನ್ನಿಗರಾಮ'ನನ್ನು ಕುರಿತು ಜನಪದ ಕವಿಗಳು ಬಗೆಬಗೆಯಲ್ಲಿ ಹಾಡಿದ್ದಾರೆ.... ಓರುಗಲ್ಲು ಪಟ್ಟಣದ ವೀರಬಲ್ಲಾಳ ತೇಜಿಯನ್ನು ತಂದ ನೀಲಗಾರರ ಮೋಜಿನ ಕಥೆ 'ಚೆನ್ನಿಗರಾಮ' ; ಅವರ ನಾಲಗೆಯಲ್ಲಿ ತನ್ನದೇ ಆದ ವೈಖರಿಯಲ್ಲಿ ಅವತರಿಸಿದ್ದಾನೆ ಈ ಕಡುಗಲಿ....

ಸಕ್ಕರೆ ಸವಿದಂತೆ ಇನಿಯ ಮಾವಿನ ಹಣ್ಣು ತಂದನ್ನ ತಾನ
ಉಕ್ಕುವ ಹಾಲು ರಸಬಾಳೆ ಹಣ್ಣುಗಳ ತಂದನ್ನ ತಾನ
ಮಡದಿ ಹರಿಯಾಲಮ್ಮ ಬಯಸ್ಯಾಳೂ ತಂದನ್ನ ತಾನ

ಕಂಪಿಲರಾಯನ ಪಟ್ಟದರಸಿ ಹರಿಯಾಲಮ್ಮ ಕನಸಿನಲ್ಲಿ ಕಂಡ ಇನಿಯ ಮಾವಿನ ಹಣ್ಣನ್ನು ತಿನ್ನಬಯಸಿದಳು. ಎಪ್ಪತ್ತೇಳು ಕೋಟಿ ಮುತ್ತು ರತ್ನ ವಜ್ರ ವೈಢೂರ್ಯ ಅರಮನೆ ದಂಡು ದಾಳಿ ಸಿರಿಸಂಪತ್ತಿನಲ್ಲಿ 'ಓಲಾಡುವ' ಕಂಪಿಲರಾಯ ಮಕ್ಕಳಿಲ್ಲದ ತನಗೆ ಶಿವ ಕೊಟ್ಟ ವರವೆಂಬೇ ಬಗೆದ. ಆ ಹಣ್ಣನ್ನು ಅರಿಸಿ ತರಬೇಕು. ಮಡದಿ ಹರಿಯಾಲದೇವಿ ಕಾಲವಿಲ್ಲದ ಕಾಲದಲ್ಲಿ ಬಯಸ ಬಾರದ ಹಣ್ಣನ್ನು ಬಯಸಿದ್ದಾಳೆ. ತರದಿದ್ದರೆಂತು ?

ಬಾರಯ್ಯ ಮಂತ್ರಿಯೆ ಬಾರಯ್ಯ ಬೈಚುವ ತಂದನ್ನ ತಾನ
ಬಾರಯ್ಯ ಮಂತ್ರಿ ಮಾನ್ಯವರೆ ತಂದನ್ನ ತಾನ

'ಒಂದಲ್ಲ ಒಂದು' ದಿವಸ ಮಂತ್ರಿ ಮಾನ್ಯರೊಡನೆ, ಸಕಲ ಪರಿವಾರ ದೊಡನೆ ಊರ ಬೃಂದಾವನ 'ಮದುವನ'ಕ್ಕೆ ಬಂದನು. ಮಾವಿನ ಮರ

ವೊಂದರ ಅಡಿಯಲ್ಲಿ ಕುಳಿತ ಕಂಪಿಲ ಕತ್ತೆತ್ತಿ ನೋಡಿದ. ಒಂದು ಮರಕ್ಕೆ ಒಂದೇ ಹಣ್ಣು ಬೀಸುಗಾಳಿಯಲ್ಲಿ ಅತ್ತಿತ್ತ ತೊನೆದಿದೆ, ವೈಯ್ಯಾರದಲ್ಲಿ ತೂಗಿದೆ.

ಹಣ್ಣು ಕಿತ್ತು ಪಲ್ಲಕ್ಕಿಯಲ್ಲಿ ಅರಮನೆಗೆ ತಂದರು. ಹರಿಯಾಲಮ್ಮ ತಾನು ಜಲಕ ಮಾಡಿ, ಮಿಂದು ಮಡಿಯುಟ್ಟು ಹಣ್ಣನ್ನು ಸೇವಿಸಿದಳು. ಕೋಟೆಯ ಅಗಳಿನಲ್ಲಿ ಬಿದ್ದ ಸಿಪ್ಪೆ ಮಾದಿಗಿತ್ತಿ ಕಲ್ಯಾಣಮ್ಮನಿಗೆ ದೊರೆಯಿತು. ಕಣ್ಣಲ್ಲಿ ನೀರು ಸುರಿಸುತ್ತ ಗರಿಕೆ ಮೇಯುತ್ತಿದ್ದ, ಎಂದೂ ಮರಿಯನ್ನೇ ಹಾಕದ ಒಂದು 'ಸಡ್ಡು ಕುದುರೆ' ಓಟೆಗೆ ಬಾಯಿ ಹಾಕಿತು. 'ಮಹಾಂತ ಯೌವನ' ಬಂದ ಅದು ಓಡಿತು....ಓರುಗಲ್ಲು ಪಟ್ಟಣದವರೆಗೆ ಓಡಿತು !

ಹಣ್ಣಲ್ಲಿ ಹುಟ್ಟವನೆ ಚೆಲುವ ಚೆನ್ನಿಗರಾಮ ತಂದನ್ನ ತಾನ
ಸಿಪ್ಪೇಲಿ ಹುಟ್ಟಿದ ಮಾದಿಗರ ಹಂಪ ತಂದನ್ನ ತಾನ
ವಾಟೇಲಿ ಹುಟ್ಟಿತೊಂದು ತೇಜಿ ತಂದನ್ನ ತಾನ

'ಸಡ್ಡುಗುದುರೆ'ಯಲ್ಲಿ ಹುಟ್ಟಿದ ಮರಿ ಸೋಜಿಗದ ಸಿರಿಯಾಯಿತು. ಹುಟ್ಟಿದ ಮೂರೇದಿನಕ್ಕೆ ಮೂರು ಸಾವಿರ ರಾಣ್ಯವನ್ನು ತುಳಿದು ಕೊಂದಿತು. ಏಳು ದಿನಕ್ಕೆ ಎಪ್ಪತ್ತ ಏಳು ರಾಜರನ್ನು ಕೊಂದಿತು. ಯಾವ ರಾಯನೂ ಅದನ್ನು ಏರಲಿಲ್ಲ. ಅದರ ಹತ್ತಿರ ಸುಳಿದ ಕಲಿಯೂ ಇನ್ನೊಬ್ಬನಿಲ್ಲ. ಅದನ್ನು ಏರಿದ ಧೀರನನ್ನೇ ವರಿಸಬೇಕೆಂದು ಕಾದರು–ನಾಲ್ಕು ಮಂದಿ ರಾಜಕುಮಾರಿಯರು. ಅದನ್ನು ಏರುವವರು ಬರಲಿಲ್ಲ. ಅವರ 'ಮದುವೆ ಕಲ್ಯಾಣ'ವೂ ಆಗಲಿಲ್ಲ !

ಎಪ್ಪತ್ತೇಳು ರಾಯರನ್ನು ಕೊಂದ ಕುದುರೆಗೆ 'ಎಪ್ಪತ್ತೇಳು ರಾಯರ ವೀರ ಬಲ್ಲಾಳ' ಎಂದೇ ಕರೆದರು. ಕಬ್ಬಿಣದ ಬೋನಿನಲ್ಲಿ ಅದನ್ನು ಕೂಡಿದರು. ಕಬ್ಬಿಣದ ಸರಪಣಿಯಲ್ಲಿ ಕಟ್ಟಿದರು. ಬಿಡುಗಂಡಿಯಲ್ಲಿ ನೀರು ಹುರುಳಿಯನ್ನು ಹಾಕಿದರೆ, ಜವಳಿಯಿಂದ ಹುಲ್ಲನ್ನು ಕೊಡಬೇಕು. ಅದನ್ನು ಏರಿ ತಮ್ಮ ಶೌರ್ಯವನ್ನು ಮೆರೆಯ ಬಂದ ಅನೇಕ ರಾಜಕುಮಾರರು ಕೋಟೆಯಲ್ಲಿ ಮಣ್ಣಾಹರು. ಎಲ್ಲಿ ನೋಡಿದರೂ, ಯಾರ ಬಾಯಲ್ಲಿ ಕೇಳಿದರೂ ಈ ಕೌತುಕದ ಸೊಲ್ಲೇ. ಈ ವಿಚಿತ್ರದ ಚರ್ಚೆಯೇ ! ವೀರಬಲ್ಲಾಳ ತೇಜಿ—

ಎದ್ದರೆ ಆರಾಳುದ್ದ ತಂದನ್ನ ತಾನ
ತಾನು ಮಲಗಿದರೆ ಮೂರಾಳುದ್ದ ತಂದನ್ನ ತಾನ
ಮೂಗುಸುರೂಡರೆ ಮೂನ್ನೂರು ಗಾವುದ ತಂದನ್ನ ತಾನ

ಇತ್ತ ಚೆನ್ನಿಗರಾಮ ಎಲ್ಲರ ಕಣ್ಣ ಸಿರಿಯಾಗಿ ಕುಮ್ಮಟದಲ್ಲಿ ಬೆಳೆದಿದ್ದಾನೆ. ಮಗನ ಲಗ್ನವನ್ನು ಮಾಡಲೆಂದು ಬಯಸಿದ ಕಂಪಿಲ ನಾಲ್ಕು ಲೋಕದಲ್ಲಿಯೂ ಹುಡುಕಿ ತಡಕಿ ಬಂದರೂ ತಕ್ಕ ವಧು ದೊರೆಯದೆಂದೇ ಬಗೆದನು. ಆದರೆ ತಂಗಿ ಚೆನ್ನಾಜಮ್ಮನ ಮಗಳು ರತ್ನಾಜಿಯನ್ನು ತರುವ ಪ್ರಯತ್ನಕ್ಕೆ ಅಡ್ಡಿಯಾಗಿ ಹೊಸಮಲೆ ದುರ್ಗದಿಂದ ವೋಲೆಯ ಮೇಲೆ ವೋಲೆ ಬಂದಿತು. ‘ಪೆರ್ಬುಲಿ’ಗಳ ಹಾವಳಿಯನ್ನು ತಡೆಯಲು ಕಂಪಿಲನ ಸಕಲ ರಾಣ್ಯವೂ ಸನ್ನದ್ಧವಾಗಿ ಹೊರಟಿತು. ದಂಡಿಗೆ ಮಗ ಚೆನ್ನಿಗರಾಮನನ್ನೇ ದಳವಾಯಿ ಮಾಡುವ ತವಕದಲ್ಲಿ ಕೆಳೆಯರೊಡನೆ ‘ಇರುಳೆ–ಗೆಜ್ಜುಗ’ ಆಡುತ್ತಿದ್ದ ಮಗನನ್ನು ಕರೆಸಿದನು ಕಂಪಿಲ ರಾಯ. ‘ಅಂದಣ ಬೇಕೊ ತೇಜಿ ಬೇಕೊ ಆರಿಸಿಕೊ’ ಎಂದು ಮಗನಿಗೆ ಮೈಯುಬ್ಬಿ ನುಡಿದನು ಮಧುವನದ ಮುತ್ತಿನ ಬಿಡಾರದಲ್ಲಿ ಕುಳಿತು. ಕುಮ್ಮಟದ ದಂಡಿನ ಏಳು ಸಾವಿರ ಕುದುರೆಗಳನ್ನೆಲ್ಲ ಹುಡುಕಿ ತಡಕಿ ಬಂದರೂ ‘ಆಯವಾದ ಕುದುರೆ’ ಚೆನ್ನಿಗನಿಗೆ ದೊರೆಯಲಿಲ್ಲ. ಎಲ್ಲವೂ ಜೊಲ್ಲು ಸುರಿಸುತ್ತ, ಕಿವಿಯನ್ನು ಕೆಳಗೆ ಚಾಚಿ ನಿಂತವು ರಾಮಯ್ಯನನ್ನು ಕಂಡು.

“ಇಂಥ ಕುದುರೆಗಳನ್ನಿಟ್ಟು ರಾಜ್ಯವನ್ನೇಕೆ ಆಳಬೇಕು !”

ತಕ್ಕ ತೇಜಿಯೊಂದನ್ನು ಹುಡುಕಿ ಸೋತ ಚೆನ್ನಿಗರಾಮ ಬೇಸರದಲ್ಲಿ ಹಂಗಿಸಿದನು ತಂದೆಯನ್ನು. ನಲವತ್ತೆಂಟು ಮಂದಿ ಮಾಂಡಲಿಕರ ಎದುರು ಮಗನಾಡಿದ ಮಾತಿಗೆ ಕಂಪಿಲರಾಯ ಖಿನ್ನನಾದ. ಮುಖ ಕೆಂಪಡರಿ, ತುಟಿಯದುರಿ ನುಡಿದನು :

“ಓರುಗಲ್ಲು ಪಟ್ಟಣದ ವೀರಬಲ್ಲಾಳ ತೇಜಿ ಬೇಕೆ ? ಅದನ್ನು ಹತ್ತಿ ನಾನು ಕೊಡುತ್ತಿರುವ ಪೊಗದಿಯನ್ನು ತಪ್ಪಿಸುವ ಮಗ ಹುಟ್ಟಿದ್ದೀಯ !”

ಸಿಡಿಲಾಗಿ ಗುಡುಗಿದ ಕಂಪಿಲರಾಯ. ಅತ್ತ ತಿರುಗಿ ಹೊಸಮಲೆ ದುರ್ಗಕ್ಕೆ ದಂಡನ್ನು ನಡೆಸಿದ. ಮಗನ ಉತ್ತರಕ್ಕಾಗಿ ಮತ್ತೆ ಕಾಯಲಿಲ್ಲ.

ಚೆನ್ನಿಗರಾಮನ ಕಣ್ಣಲ್ಲಿ ನೀರಾಡಿತು. ಮನಸ್ಸು ಕದಡಿಹೋಯಿತು. ಸಕಲ ರಾಣ್ಯದ ನಡುವೆ ತನಗಾದ ಪರಾಭವಕ್ಕೆ ಕೊರಗಿದನು. ನಿಂತ

ನೆಲೆಯಲ್ಲಿಯೇ ಅಂತರಂಗ ಏನನ್ನೋ ಚಿಂತಿಸಿತು. ಓರುಗಲ್ಲಿಗೆ ಹೋಗಬೇಕು. ವೀರಬಲ್ಲಾಳ ತೇಜಿಯನ್ನು ತರಬೇಕು, ತರಲೇಬೇಕು !

ತಂದೆಯ ನುಡಿ ಹಿಂಡಿತು ಹೃದಯವನ್ನು. ಗುಡುಗುಡನೆ ಓಡಿ ಬಂದು ತಾಯಿಯ ಪಾದವನ್ನು ಹಿಡಿದನು. ಓರುಗಲ್ಲಿಗೆ ಹರಸಿ ಬೀಳ್ಕೊಡಲು ಬೇಡಿದನು.

ಮಗನ ಮುಖವ ನೋಡಿದಳು ಹರಿಯಾಲಮ್ಮ ತಂದನ್ನ ತಾನ
ಕಂದಿ ಹೋಯಿತು ಅವಳ ಕಲಿ ಮುಖ ತಂದನ್ನ ತಾನ

ಸುತ್ತೇಳು ದೇಶದ ರಾಯರು ಬಂದು ತೇಜಯನ್ನೇರದೆ ಮಡಿದಿದ್ದಾರೆ, ತನ್ನ ಹಸುಳೆಯನ್ನು ಆ ಸಾಹಸಕ್ಕೆ ತೊಡಗಿಸುವುದೇ ! ಬಂದ ಬಂದವರ ಗತಿ ಯೆಲ್ಲವನ್ನು ಬಣ್ಣಿಸಿ ಹೇಳಿದಳು ಗಲ್ಲವಿಡಿದು,

ಏರಬೇಕು ಎಂದ ರಾಣ್ಯಗಾರರು ತಂದನ್ನ ತಾನ
ಎಲ್ಲ ಕೋಟೆಯಲ್ಲಿ ಮಣ್ಣಾದರು ತಂದನ್ನ ತಾನ

ಕೋಟಿ ಬಂಟರು ಕಾಯುವ ಮನ್ನೆಯನ ಕೋಟೆಗೆ ಹೋಗಬೇಡವೆಂದು ಕಣ್ಣೀರಿಟ್ಟಳು ಹರಿಯಾಲಮ್ಮ. ಟಗರನ್ನು ಕಾದಿಸಲಿ, ಹುಂಜದ ಕಾಲಿಗೆ ಕತ್ತಿಯನ್ನು ಕಟ್ಟಲಿ, ಜಗಜಟ್ಟಿಗಳು ಸಾಧನೆಯನ್ನು ಬೇಕಾದರೂ ಮಾಡಲಿ.... ಹುಚ್ಚು ಸಾಹಸ ತರವಲ್ಲ ತನ್ನ ಕಂದನಿಗೆ !

ಓರುಗಲ್ಲಿಗೆ ಹೋಗಬೇಡವೆಂದು ನಿನ್ನ
ತಂದನ್ನ ತಾನ
ಬೇಡಿಕೊಂಬೆನೊ ಮಗನೆ ಕಂದ ರಾಮಣ್ಣ
ತಂದನ್ನ ತಾನ

ತಾಯಿಯ ಪಾದವನ್ನು ರಾಮು ಬಿಡಲಿಲ್ಲ. ಅವನ ಕಂಬನಿ ನಿಲ್ಲಲಿಲ್ಲ.

ತಕ್ಕೈಸಿ ನನ್ನ ಕಳುಹಿದರೆ ಕಳುಹಮ್ಮ
ತಂದನ್ನ ತಾನ
ಚಕ್ರವರ್ತನನಾಣೆ ನಾ ಕದ್ದು ಹೋಗದೆ ಬಿಡೆನು
ತಂದನ್ನ ತಾನ

ರಾಮನ ನಿರ್ಧಾರಕ್ಕೆ ಹರಿಯಾಲಮ್ಮ ಮೂರ್ಛೆ ಹೋದಳು. ಚೇತರಿಸಿ ಕೊಂಡು ಅತ್ತಳು. ರಾಮನ ನಿಲವು ಸಡಿಲಗೊಳ್ಳಲಿಲ್ಲ. ಅಣೆಯಿಟ್ಟಿದ್ದಾನೆ ಪತಿ ಕಂಪಿಲರಾಯನ ಮೇಲೆ !

ಚೆನ್ನಿಗರಾಮನ ಜೊತೆಯಲ್ಲೊಬ್ಬನನ್ನು ಕಳುಹಿಸಲು ಯೋಚಿಸಿದಳು ಹರಿಯಾಲಮ್ಮ. ಬಳಗವೆಲ್ಲ ದೊರೆಯ ಜೊತೆಯಲ್ಲಿ ಹೋಗಿದೆ. ಊರ ಕಲಿಗಳೆಲ್ಲ ಹೊಸ ಮಲೆದುರ್ಗಕ್ಕೆ ಹೋಗಿದ್ದಾರೆ. ಕೇರಿ ಕೇರಿ ಬೀದಿಗಳನ್ನೆಲ್ಲ ಶೋಧಿಸಿ ಬಂದ ಮೇಲೆ, ಮಾದಿಗರ ಕೇರಿಯ ಹಂಪಣ್ಣನಿಗೆ ಕರೆಯನ್ನು ನೀಡಿದಳು ಹರಿಯಾಲಮ್ಮ. 'ಕುಲುದ್ಯೋಗ'ದಲ್ಲಿ ತೊಡಗಿದ್ದ ಮಾದಿಗರ ಹಂಪ, ದೊರೆಗೆ ಏನಾಯಿತೊ ಎಂದು ತನ್ನ ಮನೆಗೂ ಹೋಗದೆ ಇತ್ತ ಓಡಿ ಬಂದನು. ಅವನ ಎದುರೂ ಕಣ್ಣೀರಿಟ್ಟಳು ಹರಿಯಾಲಮ್ಮ. ರಾಮನನ್ನು ತಡೆಯೆಂದು ಬೇಡಿದಳು. ಹಂಪ ಗಹಗಹಿಸಿ ನಕ್ಕನು ಹರಿಯಾಲಮ್ಮನ ನುಡಿಗೆ.

ನಿನ್ನ ಮಗನಾದ್ರೆ ನಿನ್ನೊಳಗೆ ಇರಿಸಿಕೊಳ್ಳವ್ವ
ತಂದನ್ನ ತಾನ
ನಾನ್ಹೋಗಿ ತರುತೀನಿ ತೇಜಿಯ
ತಂದನ್ನ ತಾನ

ದೇವಲೋಕದಲ್ಲಿರಲಿ, ಪಾತಾಳ ಲೋಕದಲ್ಲಿರಲಿ, ಎಲ್ಲಿದ್ದರೂ ಬಿಡದೆ ತರುವುದಾಗಿ ನುಡಿಯುವ ಹಂಪನ ಕೆಚ್ಚನ್ನು ಮೆಚ್ಚಿ ತಲೆದೂಗಿದ ಚೆನ್ನಿಗರಾಮ.

ಹೆಂಗಸರ ಮಾತ ಕೇಳಿ ಹೇಡಿಯಾಗಲು ಬೇಡ
ತಂದನ್ನ ತಾನ
ಎದ್ದು ದಯಮಾಡೊ ನನ್ನ ದೊರೆ ಚೆನ್ನಿಗರಾಯ
ತಂದನ್ನ ತಾನ

ಮಾದಿಗರ ಹಂಪನ ಒಂದೊಂದು ನುಡಿಯೂ ಚೆನ್ನಿಗರಾಮನಲ್ಲಿ ಹುರುಪನ್ನು ತುಂಬಿತು; ಉತ್ಸಾಹವನ್ನು ತುಂಬಿತು ! ತಾಯಿ ಹರಿಯಮ್ಮ ಹಿಗ್ಗಿದಳು. ತನ್ನ ಮಗನಿಗಿಂತ ಇಮ್ಮಡಿ ವೀರ ಇವನೆಂದು. ಇಬ್ಬರನ್ನೂ ಅಲಂಕರಿಸಿದಳು, ಇಬ್ಬರನ್ನೂ ಹರಸಿದಳು. ಇಬ್ಬರನ್ನೂ ತುಂಬಿದ ಕಂಬನಿಯು ಕಣ್ಣಲ್ಲಿ ಬೀಳ್ಕೊಡುವಾಗ ಹಂಪನಿಗೆ ಕೂಗಿ ಹೇಳಿದಳು ಹರಿಯಾಲ ದೇವಿ—

"ನನ್ನ ಮಗನಿಗೆ ಉಗುರ ಕಣ್ಣು ಮಣ್ಣು ಆಗದಂತೆ ನೋಡಿಕೊ !"

ಚೆನ್ನಿಗರಾಮ, ಮಾದಿಗರ ಹಂಪ ಓರುಗಲ್ಲಿನ ದಾರಿಯಲ್ಲಿ ಸಾಗಿ ಬಂದರು. ತಮ್ಮ ಹೆಸರನ್ನೂ ವೇಷವನ್ನೂ ಮರೆಸಿಕೊಂಡರು. ಒಬ್ಬ ಮಾತಾಡಿದಾಗ ಇನ್ನೊಬ್ಬ ಉತ್ತರಿಸದಂತೆಯೂ ನಿರ್ಧರಿಸಿದರು. ಓರುಗಲ್ಲಿನ ಕಡೆಯ ಬಾಗಿಲ ಬಂಟರು ತಡೆದರು ಆಗಂತುಕರಿಬ್ಬರನ್ನು.

ಸೀಮೆ ಯಾವುದಯ್ಯ ಭೂಮಿ ಯಾವುದಯ್ಯ
ತಂದನ್ನ ತಾನ
ನಿಮ್ಮ ಸೀಮೆ ಭೂಮಿ ಯಾವುದು ಹೇಳಿರಯ್ಯ
ತಂದನ್ನ ತಾನ

ಚೆನ್ನಿಗರಾಮ ಉತ್ತರಿಸಿದ—

ಡೀವಿ ದೇಶದಿಂದ ಡಿಬ್ಬಿಗೆ ಬಂದೆವು ನಾವು
ತಂದನ್ನ ತಾನ
ಒಂದು ಜಾವುಕಿಲ್ಲಿಗೆ ಬಂದೆವು ನಾವು
ತಂದನ್ನ ತಾನ

ಮಾದಿಗರ ಹಂಪ ಮುಂದೆ ಬಂದು ನುಡಿದ—

ನಾಡಿನ ಮೇಲೆ ಮಲೆತಿರುವ ತುರುಗವ
ತಂದನ್ನ ತಾನ
ಪಳಗಿಸಿ ಸಾಣೆ ಮಾಡುವವರು ನಾವು
ತಂದನ್ನ ತಾನ

ಬಂದವನೊಬ್ಬ ವೀರರಾಹುತ, ಇನ್ನೊಬ್ಬ ಅವನ ಬಂಟ. ಮೈಮೇಲೆ ರಾಜಯೋಗ್ಯವಾದ ಆಭರಣ. ಮುಖದಲ್ಲಿ ಅಪೂರ್ವ ತೇಜಸ್ಸು. ಅಸದಳ ಸೌಂದರ್ಯ. ಸುದ್ದಿಯನ್ನು ತಿಳಿದ ದೊರೆ ರಾಜಬೀದಿಯಲ್ಲಿ ಇಬ್ಬರನ್ನೂ ಕರೆ ತರಲು ಹೇಳಿದನು.

ಓರುಗಲ್ಲಿನ ಬೀದಿಯಲ್ಲಿ ಬರುವಾಗ ಚೆನ್ನಿಗರಾಮನ ರೂಪಿಗೆ ಮರುಳಾದರು ಉಪ್ಪರಿಗೆಯ ಮೇಲೆ ನೆರೆದ ನಾರಿಯರು ! ಅಳುವ ಕೂಸನ್ನು ತೊರೆದರು, ಮಾಡುವ ಕೆಲಸವನ್ನು ಮರೆತರು; ಅತ್ತೆಗೆ ಅಂಜಲಿಲ್ಲ, ಮಾವನಿಗೆ ಅಳುಕಲಿಲ್ಲ ! ಇಂದ್ರನೋ, ಚಂದ್ರನೋ, ನಳನೋ, ಕುಬೇರನೋ ಎಂದು

ಮೇಲೆ ಬೆರಳಿಟ್ಟರು. ಅಂಥ ಮದನನನ್ನು ವರಿಸುವ ಭಾಗ್ಯ ತಮ್ಮದಾಗಲಿಲ್ಲ ವೆಂದು ಮರುಗಿದರು, ಕೊರಗಿದರು !

ಓರುಗಲ್ಲಿನ ದೊರೆ ಚೆನ್ನಿಗರಾಮನ ಚೆಲುವನ್ನು ಮೆಚ್ಚಿ ತಲೆದೂಗಿದನು. ಕುಳಿತ ಪೀಠವನ್ನು ಬಿಟ್ಟು ಮೇಲೆದ್ದನು. ರಾಜಕುಮಾರಿ ಕಮಲಾಜಿ ಸುದ್ದಿ ಯನ್ನು ತಿಳಿದು ಹಿಗ್ಗಿದಳು. ಹರ್ಷಗೊಂಡಳು ! ಅರಮನೆಯ ಮುಂದೆ ಕತ್ತಿ, ಕಠಾರಿ, ಈಟಿಯ ಊಳಿಗದ ಏಳು ಕೋಟಿ ದಂಡು ನೆರೆಯಿತು. ಹಳ್ಳಿಪಳ್ಳಿ ಚಪ್ಪನ್ನೈವತ್ತಾರು ದೇಶದ ಜನ ಬಂದರು, ಸೋಜಿಗವನ್ನು ಕಾಣಲು ! ಕುದುರೆಯನ್ನು ಏರದಿದ್ದರೂ ಈ ಚೆಲುವನಿಗೆ ಮಗಳನ್ನು ಕೊಡಲು ದೊರೆ ತವಕಿಸಿದನು. ರಾಮ ಕೇಳಲಿಲ್ಲ—

ತರಿಸಯ್ಯ ತೇಜಿಯ ಬೆರಸಿ ಏರುವೆವು
ತಂದನ್ನ ತಾನ
ಅರಸ ನೋಡಯ್ಯ ನಮ್ಮ ಸಾಹಸವ
ತಂದನ್ನ ತಾನ

ವೀರ ರಾಹುತನ ಸಾಹಸದ ನುಡಿಗೆ ರಾಜ ತಲೆಬಾಗಿದ. ಹತ್ತು ಸಾವಿರ ರಾಣ್ಯ ತೇಜಿಯನ್ನು ತರಲು ಹೊರಟಿತು. ಕಬ್ಬಿಣದ ಬೋನನ್ನೇ ಅಲ್ಲಿಗೆ ಸಾಗಿಸಿಕೊಂಡು ಬಂದರು.

ಮಂದರ ಪರ್ವತದಂತೆ ಬೋನಿನಲ್ಲಿ ಕುದುರೆ ಅತ್ತಿತ್ತ ಅಲುಗಿತು. ಮೇಗಾಳಿಯಲ್ಲಿ ಚೆನ್ನಿಗರಾಮ, ಕಗ್ಗಾಳಿಯಲ್ಲಿ ತೇಜಿ. ಕೊನೆಗೂ ತನ್ನನ್ನು ಏರುವ ವೀರ ಬಂದನೆಂದು ಕೆನೆದು ಕುಪ್ಪಳಿಸಿತು. ಇದ್ದಕ್ಕಿದ್ದಂತೆಯೇ ಬೋನು ಪುಡಿಪುಡಿಯಾಯಿತು. ಚೆನ್ನಿಗರಾಮನ ವಾಸನೆಯನ್ನು ಹಿಡಿದು ಮತ್ತೆ ಮತ್ತೆ ಕೆನೆಯತೊಡಗಿತು. ಹಿಂದೆ ಬಂದವರನ್ನು ಒದೆಯುತ್ತ ಮುಂದೆ ಬಂದವರನ್ನು ಕಚ್ಚಿ ಎಸೆಯುತ್ತ ಚಲಿಸತೊಡಗಿದ ತೇಜಿಗೆ ದಂಡು ಚೆಲ್ಲಾಪಿಲ್ಲಿಯಾಯಿತು. ಜನ ಬೆದರಿ ಹೌಹಾರಿದರು. ಮಾದಿಗರ ಹಂಪ ನೋಡುತ್ತಲೇ ಇದ್ದ ! ತೋಳನ್ನು ಸರಿಪಡಿಸಿಕೊಂಡು ಒಂದು ಕ್ಷಣದಲ್ಲಿ ಅತ್ತ ಚಿಮ್ಮಿದ.

ಪುಣ್ಯವಂತ ತೇಜಿಯ ಕಂಡ ಮಾದಿಗರ ಹಂಪ
ತಂದನ್ನ ತಾನ

ಅವ ಹಾರಿ ಹಿಡಿದನು ಕುದುರೆಯ ಜಲ್ಪ
ತಂದನ್ನ ತಾನ

ಜನ ಉಘೇ ಎಂದರು. ಚಪ್ಪಾಳೆ ತಟ್ಟಿದರು. ಪಟ್ಟಣಕ್ಕೆ ಪಟ್ಟಣವೇ ಮೂಕವಟ್ಟಿತು.

ರಾಯನ ಅಪ್ಪಣೆಯನ್ನು ಪಡೆದು ಮುಂದೆ ಬಂದ ಚೆನ್ನಿಗರಾಮ. 'ಕಾಸೆ' ಯನ್ನು ಬಿಗಿದು ಕಟ್ಟಿ, 'ಕೊಂಡ'ನ್ನು ಕೈಯಲ್ಲಿ ಹಿಡಿದು ಠೀವಿಯಿಂದ ನಡೆದು ಬರುವ ರಾಮುನನ್ನು ನೋಡಿ ನೋಡಿ ಸೋತಳು ಉಪ್ಪರಿಗೆಯಲ್ಲಿ ಕಮಲಾಜಿ! ಆ ರೂಪಿಗೆ, ಆ ಯೌವನಕ್ಕೆ, ಆ ಸಾಹಸಕ್ಕೆ ಸೋತು ಹೋಯಿತು ಅವಳ ಹೃದಯ. ಆ ಚೆಲುವ ರಾವುತನನ್ನು ತಾನು ಕೈ ಹಿಡಿಯುವ ಭಾಗ್ಯ ಒದಗಿ ಬಂದರೇ........

ಅಪ್ಪ ತಿರುಪತಿ ವೆಂಕಟೇಶ್ವರ ತಂದನ್ನ ತಾನ
ಒಪ್ಪತ್ತಿನ ವ್ರತವ ಇರುತೀನಿ
ತಂದನ್ನ ತಾನ

ಹರಕೆಯನ್ನು ಹೊರುತ್ತಲೇ ಕಮಲಾಜಿ ಕುಸಿದು ಬಿದ್ದಳು ಧರಣಿ ಮೇಲೆ !

ಚೆನ್ನಿಗರಾಮು ತೇಜಿಯ ಬಳಿಗೈದಿದನು ! ಹರಿಯು ತನಗೆ ಸಹಾಯಕನಾಗಲಿ, ಹರನು ತನಗೆ ನೆರವಾಗಲಿ—ಎಂದವನೆ ಹಾರಿ ಅದನ್ನೇರಿ ಶೋಭಿಸಿದನು.

ಚೆನ್ನಿಗರಾಮಯ್ಯ ತೇಜಿಯನ್ನೇರಲು
ತಂದನ್ನ ತಾನ
ಹಾರಿತು ತಾನು ಗಗನ ಮುಂಡಲಕ್ಕೆ
ತಂದನ್ನ ತಾನ

ಹಾರುವ ತೇಜಿಯನ್ನು ಕಂಡನು ಮಾದಿಗರ ಹಂಪ. ಹಕ್ಕಿಯಂತೆ ಹಾರಿ ಅದರ ಕೊರಳನ್ನು ತಬ್ಬಿದನು. ಆಚೆ, ಮೋಡಗಳಾಚೆಗೆ ಹಾರಿ ಮರೆಯಾಯಿತು ತೇಜಿ, ಚೆನ್ನಿಗರಾಮು ಮಾದಿಗರ ಹಂಪನನ್ನ ಹೊತ್ತು. ಜನ ಕತ್ತೆತ್ತಿ ನೋಡಿದರು ಈ ಅಚ್ಚರಿಯನ್ನು, ಗಗನದಲ್ಲಿ ತೇಜಿ ಕಾಣಲಿಲ್ಲ. ಆ ಮೂವರ ಸ್ವೇದಜಲ ಮಾತ್ರ ಹನಿಯಿತು.

ರಾಮಯ್ಯ ತೇಜಿಯನ್ನೇರಿದನು. ಗಗನ ಮಂಡಲಕ್ಕೆ ಹಾರಿ ಇಳಿದನು. ಆದರೆ ಚಾಡಿಕೋರರು ದೊರೆಯ ಬಳಿ ಸುಳಿದರು. ಅದು ರಾಹುತನ ಸಾಹಸ ವಲ್ಲ, ಬಂಟನ ಕೈವಾಡ. ಬಂಟನನ್ನು ದೂರ ಬಿಟ್ಟು ರಾಹುತನೊಬ್ಬನೇ ತೇಜಿ ಯನ್ನೇರಲಿ !

—ಪಿಸುಣರ ಮಾತಿಗೆ ರಾಜನೂ ಒಪ್ಪಿದಂತೆ ಕಂಡಿತು. ನಸುನಕ್ಕ ಚೆನ್ನಿಗರಾಮ, ತಾನೊಬ್ಬನೇ ಕುದುರೆಯನ್ನೇರಿ ಸೂರ್ಯ ಮಂಡಲ ಚಂದ್ರ ಮಂಡಲಗಳನ್ನು ಹೊಕ್ಕು ಬಂದನು. ಗಡಗಡನೆ ನಡುಗುತ್ತ ತೇಜಿ ಮತ್ತೆ ನೆಲಕ್ಕಿಳಿಯಿತು.

ಓರುಗಲ್ಲಿನ ದೊರೆ ವೀರ ರಾವುತನನ್ನು ತಬ್ಬಿ ಮೈದಡವಿದನು. ಆವನಿಗೆ ಅರ್ಧ ರಾಜ್ಯ, ಮುತ್ತು ರತ್ನಗಳನ್ನು ಕೊಡಲು ಮುಂದೆ ಬಂದನು. ಮೇಲಾಗಿ ತನ್ನ ಮುದ್ದು ಕುವರಿ ಕಮಲಾಜಿಯನ್ನೇ ಕೊಟ್ಟು ಹಿಗ್ಗುವ ಭಾಗ್ಯಕ್ಕಾಗಿ ರಾವುತನನ್ನು ಬೇಡಿದನು—

ಚೆಲುವ ರಾವುತ ಕೇಳೋ ಒಲವಿನ ರಾವುತ
ತಂದನ್ನ ತಾನ
ನನ್ನ ಕನ್ನೆಯ ಮದುವೆಯ ಮಾಡುತೀನಿ
ತಂದನ್ನ ತಾನ

ತಂದೆ ತಾಯಿಯನ್ನು ಕಾಣದೆ, ಬಂಧು ಬಳಗವನ್ನು ಕಾಣದೆ ಮನೆದೇವರು 'ಮದನರಾಮ'ನನ್ನು ಕಾಣದೆ ಲಗ್ನವಾಗುವುದೇ ! ಒಪ್ಪದ ರಾಮನ ಬಳಿಗೆ ಒಯ್ಯಾರದ ಕಮಲಾಜಿ ತಾನೇ ಬಂದಳು. ಕಂಬನಿಯನ್ನು ಮಿಡಿದು ಕೇಳಿದಳು—

ಮದುವೆಯಾಗೆಂದರೆ ಒಲ್ಲೆನೆನ್ನುವರೆ
ತಂದನ್ನ ತಾನ
ಚೆದುರ ನಿನಗಿದು ತರವೆ ಹೇಳಯ್ಯ
ತಂದನ್ನ ತಾನ

ಕಮಲಾಜಿಯ ನುಡಿಗೂ ಚೆನ್ನಿಗರಾಮ ಸೋಲಲಿಲ್ಲ. ಹಂಪನನ್ನು ಕೂಡಿ ತೇಜಿಯ ಬಳಿಗೆ ಬಂದು ಮತ್ತೆ ಏರಿದನು. ತೇಜಿ ಗಗನಕ್ಕೇರಿತು ಮತ್ತೆ. ಕುಮ್ಮಟದ ಕಡೆ ತಿರುಗಿದ ಅದನ್ನು ಓಂಬಾಲಿಸಿ ನೆಲದ ಮೇಲೆ ಸಾಗಿತು ಅರಿ ರಾಯರ, ರಣಧೀರಪತಿಗಳ ದಂಡು. ಕಮಲಾಜಿ ಮುಗಿಲಿಗೆ ಹಾರಿ ಮರೆ

ಯಾಗುವ ತೇಜಿಯನ್ನು ನೋಡುತ್ತಲೇ ಇದ್ದಳು. ನಿರಾಶೆಯ ನೆರಳು ಕವಿದ ಅವಳು ಉದ್ಗರಿಸಿದಳು—

ಆಸೆ ಬಿದ್ದ ಹೆಣ್ಣಿಗೆ ಮೋಸ ಮಾಡಿ ಹೋದ
ತಂದನ್ನ ತಾನ
ತೇಜಿಯಿಂದೀಗಲೆ ಬಿದ್ದು ಸಾಯಲಿ ಅವನು
ತಂದನ್ನ ತಾನ

ಮೋಘ ಮಂಡಲದಲ್ಲಿ ಕುಮ್ಮಟ ದುರ್ಗದ ಕಡೆ ರಭಸವಾಗಿ ಸಾಗಿದ ತೇಜಿಯ ಬೆನ್ನಿನಲ್ಲಿ, ಇದ್ದಕ್ಕಿಂತೆಯೇ ರಾಮು ಬೆಚ್ಚಿದ. ಚರ್ಮದ ಕಟ್ಟು ಹರಿದು ಕೈಗೆ ಬಂದಿತು. ಬಿಗಿ ಸಡಿಲಿತು. ಇನ್ನೇನು ತಾನು ಕುಸಿದು ಬೀಳುವ ಪರಿಯಲ್ಲಿ ಕೆಳ ಹೊಟ್ಟೆಯ ಹಂಪನನ್ನು ಕೂಗಿದ ಚೆನ್ನಿಗ—

ಕಡಿವಾಣ ಕಿತ್ತು ಕೈಗೆ ಬಂದಿತು ಈಗ
ತಂದನ್ನ ತಾನ
ಕೆಟ್ಟೆನಲ್ಲೊ ಹಂಪ ನಾನೀಗ ತಂದನ್ನ ತಾನ

ತಾಯಿ ಹರಿಯಾಲಮ್ಮ ಹಂಪನ ಮಡಿಲಿಗೆ ತನ್ನ ಕಂದಯ್ಯನನ್ನು ಹಾಕಿ ಕಳುಹಿದ್ದವಳು. ರಾಮನ ಹರಣವನ್ನು ಕಾಯುವ ಹೊಣೆಯಲ್ಲಿ ಹಂಪ ಧೈರ್ಯದ ನುಡಿಯಾಡಿದನು. ಒಂದು ಕೈಯಲ್ಲಿ ಕುದುರೆಯ ಕತ್ತನ್ನು ತಬ್ಬಿ ಒಂದು ಕೈಯಲ್ಲಿ 'ರಂಪ'ವನ್ನು ತೆಗೆದನು.

ಒಂದು ಕೈಯಲ್ಲಿ ರಂಪ ತೆಗೆದನು ಮಾದಿಗರ್ಹಂಪ
ತಂದನ್ನ ತಾನ
ಸಂದಿಸಿ ಕೂದನು ತನ್ನ ಒಳದೊಡೆಯ
ತಂದನ್ನ ತಾನ

ತನ್ನ ಒಳದೊಡೆಯ ಚರ್ಮದಲ್ಲಿಯೇ ಕಟ್ಟನ್ನು ಬಿಗಿದನು. ಕಡಿವಾಣವನ್ನು ಸರಿಪಡಿಸಿದನು. ರಕ್ತ ಹರಿಯಿತು ಧಾರೆಧಾರೆಯಾಗಿ ! ತನ್ನ ಪಟ್ಟೆವಸ್ತ್ರವನ್ನೇ ಹರಿದು ಚೆನ್ನಿಗರಾಮ ಸುತ್ತಿದನು. ರಕ್ತ ನಿಂತಿತು. ಕಂಪಿಲನ ರಾಜ್ಯದ

ಎಲ್ಲೆಯಲ್ಲಿ ಅರಿರಾಯರ ದಂಡು ನಿಂತಿತು. ರಾಮ ತಾನಾಗಿಯೇ ಕೆಳಗಿಳಿದನು. ಸುತ್ತಲೂ ಕವಿದ ರಾಣ್ಯಕ್ಕೆ ತಾನಾರೆಂಬುದನ್ನು ಹೇಳುವ ಗಳಿಗೆ ಬಂದಿತು.

ಸೃಷ್ಟಿಯ ಒಳಗೆ ಜಟ್ಟಿಂಗಿ ದೇವರಪುತ್ರ
ತಂದನ್ನ ತಾನ
ಆ ದಿಟ್ಟ ಕಂಪಿಲ ನನ್ನ ತಂದೆ
ತಂದನ್ನ ತಾನ
ಮಲೆಯ ಕುಮ್ಮಟಕೆ ದೊರೆಯಾಗಿ ಇರುವಂತ
ತಂದನ್ನ ತಾನ
ಚೆನ್ನಿಗರಾಮ ನಾನಲ್ಲವೆ ತಂದನ್ನ ತಾನ

ತನ್ನ ಜೊತೆಯಲ್ಲಿ ಬಂದ ಬಂಟನಾದರೋ—

ಛಲದಂಕಮಲ್ಲ ಮಲೆತ ವೈರಿಯ ಗಂಡ
ತಂದನ್ನ ತಾನ
ಛಲವುಳ್ಳ ಮಾದಿಗರ್ಹಂಪ ತಂದನ್ನ ತಾನ
ಮದುವೆಗೆ ನಾನು ಬಂದವನಲ್ಲ ತಂದನ್ನ ತಾನ
ಈ ನಿನ್ನ ತೇಜಿಗೆ ಬಂದವನಯ್ಯ ತಂದನ್ನ ತಾನ

ಚೆನ್ನಿಗರಾಮನ ಹೆಸರನ್ನು ಕೇಳಿಯೇ ಅರಿರಾಯರ ದಂಡು ಬೆದರಿ ಹಿಂದೆ ಸರಿಯಿತು. ವೀರ ಬಲ್ಲಾಳ ತೇಜಿಯೊಡನೆ, ಮಾದಿಗರ ಹಂಪನೊಡನೆ ಅರಮನೆಯ ಮುಂದೆ ಇಳಿದ, ಚೆನ್ನಿಗರಾಮ ಗಾಜಿನ ಕಂಬಕ್ಕೆ ತೇಜಿಯನ್ನು ತಂದುಕಟ್ಟಿದನು.

—o—

# ಭಾವ ಮಲ್ಲಯ್ಯನ್ನ ಕರೆತರುವೆ

ಮುಗ್ಧಭಕ್ತಿಯ ಮೆಟ್ಟಿಲುಗಳನ್ನೇರಿ ಕೈಲಾಸದ ಸ್ವಾಮಿಯನ್ನು ನರ ಲೋಕಕ್ಕೆ ಕರೆತಂದ ಸಾಹಸಿ ಮೈದಾಳು ರಾಮನ ಕಥೆ. ಶಿವಶರಣರ ಕಥೆ ಗಳನ್ನು ಹಾಡುವುದರಲ್ಲಿ ನಿಷ್ಣಾತರಾದ ನೀಲಗಾರರು ಈ ಪುಣ್ಯಕಥೆಗಳನ್ನೆಲ್ಲ 'ವಚನ'ಗಳೆಂದೇ ಕರೆದು, ಹಾಡುವುದರಿಂದ ತಾವೂ ವಚನಕಾರರಾಗಿದ್ದಾರೆ. ಮಲ್ಲಯ್ಯನಿಗಾಗಿ ಹಂಬಲಿಸುವ ಸಿದ್ಧರಾಮನನ್ನು, ಸೋಮಯ್ಯನಿಗಾಗಿ ಹಂಬಲಿಸುವ ಆದಯ್ಯನನ್ನು ನೆನಪಿಗೆ ತರುವ ಜನಪದ ಕಥೆ....ಇದರ ಕರ್ತೃ ಮಹಾಕವಿ ರಾಘವಾಂಕನಲ್ಲ....ಯಾರೋ ಅನಾಮಧೇಯ ಅಜ್ಞಾತ ಜನಪದ ಕವಿ....ಜನಪದ ಸಾಹಿತ್ಯದ ಸತ್ವವನ್ನು ರಾಘವಾಂಕ ಹೇಗೆ ಹೀರಿ ಬೆಳೆದಿದ್ದಾನೆ ಎನ್ನುವದಕ್ಕೊಂದು ಜ್ವಲಂತ ನಿದರ್ಶನ ಮೈದಾಳು ರಾಮಯ್ಯನ ಕಥೆ—

ತಾಯಿ ತಂದೆಯ ಪಾದವನ್ನು, ಹೊತ್ತಿರುವ ಭುವನಮ್ಮನ ಶ್ರೀಪಾದ ವನ್ನು, ಗುರುವಿನ ಪಾದವನ್ನು 'ಕುಂತಿರುವಂತ' 'ಸಭೆ ಜನರ' ಪಾದಗಳನ್ನು ನೆನೆದು, ಕಥೆಗೆ ತೊಡಗಿದ್ದಾನೆ ನೀಲಗಾರ....ಹಿಮ್ಮೇಳದವರು ಏಕತಾರಿ ದಮ್ಮಡಿ ಗಳೊಡನೆ ದನಿ ಕೊಟ್ಟಿದ್ದಾರೆ........

ಸುವ್ವ ಬಾ ಸುವ್ವಿ ಸುವ್ವ ಬಾ
ಸುವ್ವ ಬಾ ಚೆನ್ನಬಸವಯ್ಯ
ಭೀಮಾವತಿಯೆಂಬ ಪಟ್ಟಣದೊಳಗೊಬ್ಬ
ಬ್ರಾಹ್ಮಣ ಕುಲದ ಶಿವಭಕ್ತ-ಸೋಮಯ್ಯನ
ಪ್ರಿಯನ ಸತಿಯು ಮಾದೇವಿ

ಮಕ್ಕಳಿಲ್ಲದ ಆ ಶಿವಶರಣರಿಗೆ ಶಿವ ಕೊಟ್ಟ ಮಗು 'ಮೈದಾಳುರಾಮ.' ಶಿವಕೊಟ್ಟ ಹೆಸರು 'ಮೈದಾಳು ರಾಮ'. ಮಕ್ಕಳಿಲ್ಲದ ಬದುಕು ಬೇಸರಾಗಿ, ವಿಷದ ಗಂಜಿಯನ್ನು ಸೇವಿಸಿ ಮರಣವನ್ನು ಬಯಸಿದ್ದ ಭಕ್ತರ ಬಾಗಿಲಿಗೆ ಜಂಗಮನಾಗಿ ಗಿರಿಯ ಮಲ್ಲಯ್ಯನೇ ಬಂದಿದ್ದ. ವಿಷದ ಗಂಜಿಯನ್ನೇ ಕುಡಿದು 'ಮೈದಾಳುರಾಮ'ನನ್ನು ಕರುಣಿಸಿ ಹೋಗಿದ್ದ. ಆದರೆ....ಆದರೆ....ಮಗು

ಹುಟ್ಟಿದ ಮೂರು ವರ್ಷದಲ್ಲಿ ತಂದೆ ಸೋಮಯ್ಯನ ಮರಣ. ಸಿರಿಸಂಪತ್ತೆಲ್ಲ ಕರಗಿ ಬರುವ ಘೋರ ಬಡತನ....ಆ ದುರ್ದಿನವೂ ಬಂದಿತ್ತು. ಸರ್ಪದಷ್ಟ ನಾಗಿ ಸೋಮಯ್ಯ ಪಾದವನ್ನು ಸೇರಿದ ಮೇಲೆ, ಬಡತನ ಕವಿಯಿತು. ಆದರೂ ಓದುಮಠದಿಂದ ಮಗನನ್ನು ಕರೆತರಲಿಲ್ಲ ಮಹದೇವಿ. ತಾಮ್ರದ ತಂಬಿಗೆಯಲ್ಲಿ ನವಧಾನ್ಯ ಭಿಕ್ಷೆ ಮಾಡಿ ಲಕ್ಕಿಯ ಸೊಪ್ಪಿನ ನೆರಿಕೆ, ಮುತ್ತುಗದ ಹಾಳೆಯ ಕದದ ಬಡ ಗುಡಿಸಿಲಲ್ಲಿ ಮಗನ ಹಿತವನ್ನೇ ಎಳಸಿ ಬದುಕಿದಳು ಶಿವಶರಣೆ.

ಮಠದಲ್ಲಿ ಮೈದಾಳು ರಾಮು ಒಂದು ಹೇಳಿದರೆ ಹತ್ತು ಕಲಿತ. ಗುರು ವಿನ ಅನುಜ್ಞೆಯಂತೆ ಜೊತೆಯ ಹುಡುಗರ ಕಿವಿಗಳನ್ನೂ ಹಿಂಡಿ ಅಸೂಯೆಗೆ ಪಾತ್ರನಾದ. 'ಆರು ಶಾಸ್ತ್ರ, ಹದಿನೆಂಟು ಪುರಾಣ, ನಾಕು ವೇದ' ಎಲ್ಲ ವನ್ನೂ ಆರು ವರ್ಷಕ್ಕೆ ಮುಗಿಸಿದ ಮೇಧಾವಿಯಾದ.

ದೀವಳಿಗೆಯ ಹಬ್ಬ ಬಂದಿತು ಆಗೊಮ್ಮೆ. ಜೊತೆಯ ಹುಡುಗರು ಹಬ್ಬಕ್ಕೆ ಬರುವ ಅಕ್ಕ ಭಾವಯ್ಯರನ್ನು ನೆನೆದು ಹಿಗ್ಗಿದರು. ಉಲ್ಲಾಸದಿಂದ ಕುಣಿದರು. ಎಳೆಯ ರಾಮಯ್ಯ ತಾನೂ ಉತ್ಸಾಹಗೊಂಡ. ಆದರೆ ಸಂಗಡಿ ಗರು ಮನ ನೋಯುವ ಮಾತಾಡಿದರು, "ತಬ್ಬಲಿ ಮಗ, ಅಕ್ಕಭಾವ ಇಲ್ಲ ದವನು" ಎಂದೆಲ್ಲ ಜರಿದು ಸೇಡನ್ನು ತೀರಿಸಿಕೊಂಡರು. ರಾಮಯ್ಯನ ಕೊರಳು ಬಿಗಿದುಬಂತು. ಕಣ್ಣಲ್ಲಿ ನೀರಾಡಿತು. ಉದ್ವೇಗದಿಂದ ಗುರುವಿನ ಪಾದದಲ್ಲಿ ಉಸುರಿದ—

ನನಗುಂಟು ಭಾವಯ್ಯ ನನಗುಂಟು ಅಕ್ಕಯ್ಯ
ನನಗುಂಟು ಸರ್ವ ಬಳಗವು

ಹುಡುಗರೆಲ್ಲ ಗೊಳ್ಳೆಂದು ನಕ್ಕರು. ಗುರುವನ್ನೂ ಲೆಕ್ಕಿಸದೆ ಕೂಗಿದರು :

ಒಡಹುಟ್ಟು ಇಲ್ಲದ ತಬ್ಬಲಿ ಮಗ ನೀನು
ಅಕ್ಕ ಭಾವಾಜಿ ನಿನಗಿಲ್ಲ !

ಮೈದಾಳು ರಾಮಯ್ಯನ ತುಟಿ ಬತ್ತಿತ್ತು. ಮುಖ ಕಂದಿತು. ದೀನಭಾವ ದಲ್ಲಿ ಗುರುವಿನ ಮುಖ ನೋಡಿದ. ತಿವಿಯುವ ಮಾತುಗಳನ್ನು ಕೇಳಲಾರದೆ,

ಮಕ್ಕಳ ಮಾತನ್ನು ಕೇಳಿದ ರಾಮಯ್ಯ
ದುಃಖ ಮಾಡುತ ಒರಗಿದ ಸುವ್ವಾ ಬಾ ಚೆನ್ನಬಸವಯ್ಯ

ಮಗುವಿನ ಸಂಕಟವನ್ನು ಅರಿತ ಗುರು ಹುಡುಗರನ್ನು ಗದ್ದರಿಸಿದರು. ಮೆಲ್ಲಗೆ ಮೈದಡವಿ ಮೈದುನ ರಾಮನನ್ನು ಕೇಳಿದರು–

"ಅಕ್ಕನ ಹೆಸರೇನು, ಭಾವಾಜಿ ಹೆಸರೇನು, ನಿಮ್ಮ ಅಕ್ಕ ಭಾವಾಜಿ ಪುರವೆಲ್ಲಿ ?"

ರಾಮಯ್ಯನ ಬಾಯಿ ಕಟ್ಟಿತು. ಅಕ್ಕಯ್ಯ ಭಾವಾಜಿ ಇರುವುದಾದರು ಎಲ್ಲಿ, ಅವರ ಹೆಸರಾದರೂ ಏನು ? ತಾನೊಮ್ಮೆಯೂ ನೋಡಲಿಲ್ಲ. ತಾಯಿಯೂ ನುಡಿಯಲಿಲ್ಲ. ಕೇಳಿಯೇ ತಿಳಿಯಬೇಕು. ತಾಯಿಯನ್ನೇ ಆಶ್ರಯಿಸಬೇಕು.

ಹರಿವ ಕಣ್ಣೀರಿನಲ್ಲಿ, ಬಾಡಿದ ಮುಖದಲ್ಲಿ, ಅಕ್ಕ, ಭಾವಯ್ಯರನ್ನು ಕಾಣದ ಎಳೆಯ ರಾಮ ಬಿಕ್ಕುತ್ತಲೇ ತಾಯ ಬಳಿಗೆ ಬಂದ. ಮಾದೇವಿ ಬೆಚ್ಚಿದಳು ಮಗನ ಕಡುದುಃಖಕ್ಕೆ. ಮುಂಡಾಡಿ ಕಂಬನಿಯನ್ನು ತೀಡಿ ಕೇಳಿದಳು:

ಯಾರಯ್ಯ ಬೈದವರು ಯಾರಯ್ಯ ಹೊಡೆದವರು
ಲೋಲರಾಮಯ್ಯ ಉಸುರಯ್ಯ

ರಾಮಯ್ಯ ತೊದಲುತ್ತಲೇ ತಾಯ ಮಡಿಲಲ್ಲಿ ಮುಖ ಚಾಚಿ ಹೇಳಿದ-

ಅಕ್ಕನಿಲ್ಲ ಎಂದು ಆಡಿದರು ಮಠದಲ್ಲಿ
ಹೆತ್ತಮ್ಮ ಹೇಳು ನಿಜವನ್ನು
ಭಾವನಿಲ್ಲವೆಂದು ಬಳಗೆಲ್ಲ ಜರಿದರು
ಭಾವ ಸೋದರವು ನನಗುಂಟೆ !

ತಾಯಿ ಮಹಾದೇವಿ ಕಣ್ಣೀರು ಮಿಡಿದು ಮಗನನ್ನು ತಬ್ಬಿದಳು. ಅರಿಯದ ಮಗನಿಗೆ ಯಾರು ಅರುಹಿದರೆಂದು ದುಃಖಿಸಿದಳು. ತನ್ನ ಕಂದನಿಗೆ ಅಕ್ಕ-ಭಾವ ಇಲ್ಲವೆಂದು ನಿಜದ ಸಂಗತಿಯನ್ನೇ ಬಣ್ಣಿಸಿದಳು. ರಾಮಯ್ಯ ನಿರಾಶೆಯ ನಿಟ್ಟುಸಿರನ್ನು ಬಿಟ್ಟ, ನೋವಿನ ಭಾರದಲ್ಲಿ ಕುಸಿದ—

ಕಡೆಯನ್ನೆ ಹೊಲದಲ್ಲಿ ಬಸವಣ್ಣ ಮೇಯಲು
ಹೊಡೆಯೆಂದ ಶಾಪ ತಗುಲೀತೋ (ದ) ಕಾರಣದಿಂದ
ಹೊಂದಿಗುಟ್ಟಿದ ಅಕ್ಕ ಮೊದಲಿಲ್ಲ.

ಒಡಹುಟ್ಟು ಇಲ್ಲದ ಮೇಲೆ ಬದುಕಿಯಾದರೂ ಏನು ಫಲ ! ತಾನಿನ್ನು ಸಾಯುವುದೇ ಲೇಸು !

ತಾಯಿಯ ಪಾದಕ್ಕೆ ಶರಣು ಮಾಡಿದ ರಾಮಯ್ಯ ಸೊಂಟದ ಚಂದ್ರಾಯುಧವನ್ನು ಎಳೆದು ತಾಯಿಯ ಎದೆ ನಡುಗುವ ನುಡಿಯಾಡಿದ–

"ಬಿಡುವೆನು ನನ್ನ ಹರಣವ !"

ಮೂಕಳಾದಳು ಮಹಾದೇವಿ ಮಗನ ಮಾತಿಗೆ ! ಗಕ್ಕನೆ ಮೇಲೆದ್ದು ಮಗನ ಕೈ ಹಿಡಿದು ತಡೆದಳು. ನಂದಿಹೋಗುವ ಬಾಳಿನ ಬೆಳಕಿಗೆ ಬೆದರಿ ಹೌಹಾರಿದಳು. ನಡುಗುವ ತುಟಿಯಲ್ಲೇ ಮೂಡಿದ ನುಡಿಯೊಂದನ್ನು ಉಸಿರಿದಳು....ಮಗ ಉಳಿದರೆ ಸಾಕು....ಉಳಿದರೆ ಸಾಕು....

ಅಕ್ಕನು ಇದ್ದಾರೆ ಭಾವನು ಇದ್ದಾರೆ
ಮಿಕ್ಕ ಬಳಗವು ಇದ್ದಾರೆ-ಕಂದಯ್ಯ
ಕತ್ತಿಯ ಬಿಟ್ಟು ಮಾತಾಡು
....ಸುವ್ವಾ ಬಾ ಚೆನ್ನಬಸವಯ್ಯ

ಕತ್ತಿಯ ಕೈ ಸಡಿಲಿತು. ಪೈದಾಳು ರಾಮನ ಕಣ್ಣು ಅರಳಿತು. ದೂರ ಬಹುದೂರವಂತೆ ಭಾವಾಜಿ ಇರುವುದು ! ಹುಲಿ, ಕರಡಿ ಮದ್ದಾನೆಗಳ ದಟ್ಟಡವಿಯನ್ನು ದಾಟಿ ಹೋಗಬೇಕಂತೆ. ಆದರೇನು 'ಅಕ್ಕ ಶ್ರಿಗೌರಿ' ಯ ಹೆಸರನ್ನು ತಿಳಿದ. ಭಾವಾಜಿಯ ಹೆಸರನ್ನೂ ತಾಯಿ ಹೇಳಿದ್ದಾಳೆ–

ಅಲ್ಲಿಗಿಲ್ಲಿಗೆ ವಾಸ ಕಲ್ಯಾಣಕೆ ಬಸವೇಶ
ಮಲ್ಲಯ್ಯ ಇರುವುದು ಕೈಲಾಸ ಕಂದಯ್ಯ
ಸಿರಿಶೈಲಗಿರಿಯೊಂದು ನೆಲೆಯಯ್ಯ
ಸುವ್ವಾ ಬಾ ಚೆನ್ನಬಸವಯ್ಯ–

ಅಕ್ಕ–ಭಾವನನ್ನು ಕರೆತರುವ ತವಕ ತುಳುಕಿತು ರಾಮಯ್ಯನಲ್ಲಿ. ತಾಯಿಯನ್ನು ಕಾಡಿಬೇಡಿ ಹೊರಟು ನಿಂತನು.

ಹಾಲು ಅನ್ನದ ಬುತ್ತಿ ಬೇಗನೆ ಕಟ್ಟಮ್ಮ
ಭಾವ ಮಲ್ಲಯ್ಯನ್ನ ಕರೆತರುವೆ

ಬಡವರಿಹರು. ಬಲ್ಲಿದರು ಭಾವಯ್ಯ. ಲೆಕ್ಕಿಸೊಪ್ಪಿನ ಮನೆಗೆ ಮಲ್ಲಯ್ಯ ಬರಬಲ್ಲನೆ...,ಹಸುಳೆ ರಾಮಯ್ಯ ಕರೆತರುವನೇ....ಶ್ರೀ ಗೌರಿ ಬಂದರೆ ಲಕ್ಷದ

ಮೇಲೆ ತೊಂಬತ್ತಾರು ಕೋಟಿ ಶರಣರು ಬರುತ್ತಾರೆ, ಅರವತ್ಮೂರು ಪುರಾತನರು ಬರುತ್ತಾರೆ, ನೂರೊಂದು ಮಂದಿ ಮುತ್ತೈದೆಯರು ಬರುತ್ತಾರೆ.

ಏನುಂಟು ನಮ್ಮ ಮಠದಲ್ಲಿ ?

ರಾಮಯ್ಯನ ಕಣ್ಣಿಗೆ ಎಲ್ಲವೂ ಉಂಟು. ಸಕಲ ಸಿರಿಸಂಪತ್ತಿನ ನಡುವೆ ತಾನಿರುವೆನೆಂದೇ ಭಾವಿಸಿದ ಅಕ್ಕ-ಭಾವ ಬರುವಾಗ ಎಲ್ಲ ಸಿದ್ಧತೆಯೂ ಆಗಬೇಕು. ತಾಯಿಗೆ ಹೇಳಿ ಹೊರಟನು.

ಲಕ್ಷ ಗಾಡಿಯ ಸಣ್ಣಕ್ಕಿ ತರಿಸಮ್ಮ
ಕಜ್ಜಾಯ ಸುಟ್ಟು ಮಡಗಮ್ಮ.

ಬುತ್ತಿಯನ್ನು ಬೆನ್ನಿಗೆ ಬಿಗಿದು ಹೊರಟು ನಿಂತಾಗ, ತುಂಬಿದ ಕಂಬನಿಯಲ್ಲಿಯೇ ಬೀಳ್ಕೊಟ್ಟಳು ಎಳೆಯನನ್ನು. ಅಕ್ಕನನ್ನು ಕಂಡು ಭಾವನೊಡನೆ ನಲಿದು ಬುತ್ತಿಯುಣ್ಣುವ ಹಂಬಲದ ರಾಮಯ್ಯ ಪುಟ್ಟಹೆಜ್ಜೆಯಲ್ಲಿ ಕಾನನವನ್ನು ಹೊಕ್ಕನು.ಕೈಲಾಸದಲ್ಲಿ ನಾಲಿಗೆ ಇಲ್ಲದ ಗಂಟೆ ಢಣರೆಂದವು, ಸಾಹಸಿಯ ಯಾತ್ರೆಯನ್ನು ಸೂಚಿಸಿ. ತಿಟ್ಟನ್ನು ಹತ್ತಿ ತಿಟ್ಟನ್ನು ಇಳಿದು ಕಾಡು, ಕಮರಿಗಳನ್ನು ಹಾದು ನಡೆದನು.

ಕಲ್ಲತ್ತಿ ಕಲ್ಲನೆ ಇಳಿದನು ರಾಮಯ್ಯ
ಗೌರಿ ಶಂಕರನ ಹೊಗಳುತ-ರಾಮಯ್ಯ
ಮುಂದಲ ಗಿರಿಯ ಕಣಿವೇಲಿ

ಹಗಲೇ ರಾತ್ರಿಯಾಯಿತು. ರಾತ್ರಿಯೇ ಹಗಲಾಯಿತು. ಅಲೆನಲಿದು ಕಾಲು ಸೋತಿತು.

ಅಲ್ಲವರೆ ಅಕ್ಕಯ್ಯ ಇಲ್ಲವರೆ ಭಾವಯ್ಯ
ಮಲ್ಲಯ್ಯ ಇರುವ ಸುರಗಿರಿಯ-ಸುತ್ತಿದರೆ
ಅಕ್ಕ ಭಾವಾಜಿ ಸುಳಿವಿಲ್ಲ.

ಶ್ರೀಶೈಲಪರ್ವತದ ತಪ್ಪಲಲ್ಲಿ ಏಕಾಂಗಿ ಬಾಲಕ ದನಿಯೆತ್ತಿ ಕೂಗಿ ಕರೆದನು. ನಿಂತು ಕೂಗಿದನು, ನಿಟ್ಟಿಸಿ ಕೂಗಿದನು, ಕಂಗೆಟ್ಟು ಕೂಗಿದನು. ಓಗೊಡುವರ ದನಿಯಿಲ್ಲ.

ಅಕ್ಕಯ್ಯ ಏನುತಾಗಿ ಅರಳಿದ್ದು ಕೂಗುತಾನೆ
ಆ ಬೆಟ್ಟ ತಲ್ಲಣಿಸಿ ಮೊಳಗೀತು

ಎಲ್ಲಿಯೂ ಅಕ್ಕಯ್ಯನಿಲ್ಲ. ಭಾವಯ್ಯನ ಸುಳಿವಿಲ್ಲ. ಮನೆಗೆ ಮರಳುವ ಬಗೆ ಇನ್ನಿಲ್ಲ. ಕರೆಯಲು ಬಂದ ತಾನು ಮರಳುವುದಾದರೂ ಎಂತು ! ಗಿರಿಯಲ್ಲಿ ಪ್ರಾಣವನ್ನಾದರೂ ನೀಗಬೇಕು !

ಎಳೆಯ ರಾಮಯ್ಯ ನಿಂತು ಯೋಚಿಸುವಲ್ಲಿ ಗಿರಿಯ ಮಲ್ಲಯ್ಯ ಜಂಗಮನಾಗಿ ಅತ್ತ ಸುಳಿದನು. ಹುಲಿ ಕರಡಿ ಸಂಚರಿಸುವ ಹಳುವದಲ್ಲಿ ಕಿರಿಯನೇಕೆ ಬಂದ. ಬೆನ್ನಿನಲ್ಲಿ ಬುತ್ತಿಯನ್ನು ಕಟ್ಟಿದ್ದಾನೆ, ಯಾರನ್ನೋ ನಿರುಕಿಸಿ ಬೇಸತ್ತಿದ್ದಾನೆ ! ಹತ್ತಿರ ಸರಿದ ಜಂಗಮ ಕೇಳಿದನು ರಾಮನನ್ನು–

ಪರ್ವತಕೆ ಬಂದ ಬಗೆಯೇನು ?

ರಾಮನ ದೃಷ್ಟಿಯೆತ್ತಲೋ, ಅವನ ಕಾತರವೆತ್ತಲೋ !ಜಂಗಮನೊಡನೆ ನಿಂತು ಮಾತಾಡಲು ವೇಳೆಯೆಲ್ಲಿ ! ಆದರೂ ತಡೆದು ಯಾರೆನ್ನುವ ಜಂಗಮನಿಗೆ ಉತ್ತರಿಸದಾದೀತೆ !

ಯಾರು ಎಂದರೆ ನಾನು ಏನು ಹೇಳಲಿ ಜಂಗಮರೆ,
ನಾನೊಬ್ಬ ಕಾಡು ಪರದೇಶಿ

ಹುಡುಗನ ನುಡಿಗೆ ಜಂಗಮರು ಬೆರಗಾದರು. ಮತ್ತೆ ಪ್ರಶ್ನಿಸಿದರು, ಕಾಡಿನಲ್ಲಿ ಅವನು ಬಂದ ತೆರವೇನೆಂದು.

ನಾನು ಬಂದ ತೆರವ ಹೇಳುತ್ತೀನಿ ಜಂಗಮರೆ
ನೀವು ಬಂದ ತೆರವ ಹೇಳಿರಯ್ಯ !

ಜಂಗಮಯ್ಯ ತಲೆದೂಗಿದನು. ತಾನೊಬ್ಬ ಪೂಜಾರಿ, ದಕ್ಷಿಣ ಕಾಶಿಯ ಲಿಂಗವನ್ನು ಪೂಜಿಕೊಂಡಿರುವವನು. ಏಳುವರ್ಷದ ಬಾಲನಾಗಿದ್ದಾಗಲೇ ಪಾರ್ವತಿಯ ದರ್ಶನಕ್ಕೆ ಹೊರಟವನು ; ವರ್ಷಗಳು ಉರುಳಿದವು. ಈಗ ಕಣ್ಣು ಕಾಣದು. ಕಿವಿ ಕೇಳದು. ಪಾರ್ವತಿಯನ್ನು ಕಾಣದೆ ಬೇಸತ್ತು ಹಿಂದಿರುಗುತ್ತಿರುವವ ತಾನು !

ರಾಮಯ್ಯ ಕಳವಳಗೊಳ್ಳಲಿಲ್ಲ, ಅವನ ನುಡಿಗೆ. ಅಕ್ಕ ಪಾರ್ವತಿಯನ್ನು ಕಾಣದೆ ಮರಳನವನು, ಮರಣಕ್ಕೆ ಅಂಜನು.

ಜಂಗಮಯ್ಯ ನಕ್ಕನು ರಾಮಯ್ಯನ ಮಾತಿಗೆ, ರೇಗಿ ನುಡಿದನು–

ನರರ ಮನೆಯ ಪರಸಕ್ಕೆ ಸಿರಿಗೌರಿ ಬರುವಳೆ
ಹೋಗಲ ರಾಮ ಹಿಂದಕ್ಕೆ

ರಾಮಯ್ಯನೂ ಜಗ್ಗಲಿಲ್ಲ. ಸಿಡಿದು ಗುಡುಗಿದನು–

ಹೆತ್ತವ್ವ ನನಗೆ ಸುಳ್ಳು ಮಾತ ಹೇಳಿದಳೆ
ಹೋಗಯ್ಯ ಪೇತ ಜಂಗಮನೆ ।

ಗಂಗೆಗೆ ಸೂತಕವಿಲ್ಲ. ಲಿಂಗಕ್ಕೆ ಕಟ್ಟಿಲ್ಲ, ಜಂಗಮರ ಮಾತಿಗೆ ನೆಲೆಯುಂಟೆ ! ಅವರದು ಕೊಟ್ಟರೆ ಶಾಪ, ಇಟ್ಟರೆ ವರ ! ನಿಮ್ಮ ಮಾತು ನೆಲೆಯಿಲ್ಲವೆಂದನು ಬಾಲರಾಮು !

ಚಿಕ್ಕ ಹುಡುಗನ ಮಾತ ಕೇಳಿದನು
ಜಗದೀಶ ಹರಸು ಮಲ್ಲಯ್ಯ ನಗುತಾನೆ !

ಹಸಿದು ಬಂದ ತನಗೆ ಬುತ್ತಿಯನ್ನಾದರೂ ಬಿಚ್ಚಿಕೊಡು ಎಂದನು ಜಂಗಮಯ್ಯ. ಅಕ್ಕ–ಭಾವನಿಗೆ ಮೀಸಲಾದ ಬುತ್ತಿಯನ್ನು ಅವನೆಂತು ಬಿಚ್ಚುವನು ? ಬೆನ್ನನ್ನು ಕೆರೆಯಲು ಕೇಳಿದನು ಜಂಗಮಯ್ಯ ; ಮೈ ಮುಟ್ಟಿ ಕರೆಯುವಾಗ ಇನ್ನಿಲ್ಲದ ನೋವು ಚಿಮ್ಮಿತು ರಾಮಯ್ಯನ ಅಂಗಾಂಗದಲ್ಲಿ. ಬಳಲಿ ಬೆಂಡಾಗಿ ಚಳಿಯ ಕೊಳದಲ್ಲಿ ನೀರು ಕುಡಿಯಲು ಇಳಿದರೆ, ಮೇಲೇರಿ ಬರುವುದರಲ್ಲಿ ಜಂಗಮನೆತ್ತಲೋ ಮಾಯವಾಗಿದ್ದಾನೆ !

ಸೋಜಿಗದ ಹೆಜ್ಜೆಯನ್ನಿಡುತ್ತ ರಾಮಯ್ಯ ನಡೆದನು ಮುಂದೆ ಮುಂದೆ. ಅಡವಿಯ ಸೊಪ್ಪನ್ನು ತಿಂದು, ಮಡುವಿನ ನೀರನ್ನು ಕುಡಿದು ಹೊರಟ ಆವನು ದೀನನಾಗಿ ಹಲುಬಿದನು.

ಒಡಹುಟ್ಟಿದೊಬ್ಬ ತಮ್ಮನಾಗಿ ಬರುತೀನಿ
ಭಾವನಾದರೆ ಬಂದು ಮುಕ ತೋರೋ ।

ದೀನನಾಗಿ, ಆರ್ತನಾಗಿ, ಅಸಹಾಯಕನಾಗಿ ಕೂಗುತ್ತಲೇ ಮುಂದೆ ಸಾಗಿದ ಮೈದುನನಿಗೆ ಮಲ್ಲಯ್ಯ ದನಿತೋರಲಿಲ್ಲ. ಅಕ್ಕ ಗೌರಾಯಿಯ ಮನಸ್ಸು ಕರಗಲಿಲ್ಲ. ಮುಂದೆ ಮುಂದೆ ಬರುತ್ತಲೇ ಇರುವ ರಾಮಯ್ಯನತ್ತ ಮದ್ದಾನೆಯ

ಹಿಂಡೊಂದನ್ನು ಅಟ್ಟಿದನು ಮಲ್ಲಯ್ಯ. ಸೊಂಡಿಲನ್ನು ತೂಗುತ್ತ ಬಾಗುತ್ತ ಬರುವ ಆನೆಯ ಹಿಂಡನ್ನು ತಡೆದು ಕೇಳಿದ–

ಮೂಗು ದಪ್ಪದವನೆ, ಮೊರದಗಲ ಕಿವಿಯವನೆ
ಕಾಡು ಮುರುಗ್ಯಕೆಲ್ಲ ದೊರೆರಾಯ – ಗಜರಾಜ
ನಮ್ಮ ಭಾವ ಮಲ್ಲಯ್ನ ಮಠವೆಲ್ಲಿ !

ಜಗದೊಡೆಯ ಮಲ್ಲಯ್ಯನನ್ನು ಅರಸಿ ಹೊರಟ ಬಾಲಕ ! ಶಿವನ ಹೆಸರನ್ನು ಕೇಳಿಯೇ ಎಳೆಯನ ಪಾದಕ್ಕೆ ಶರಣು ಬಂದಿತು ಕರಿವಿಂಡು. ಬೆನ್ನ ಮೇಲೇರಿಸಿ ಒಂದು ಯೋಜನ ಮುಂದೆ ಬಿಟ್ಟುವು ಶಿವಶರಣ ಗಜಗಳು.

ಹೆಬ್ಬುಲಿಯೊಂದು ಎತ್ತಣಿಂದಲೋ ಚಿಮ್ಮಿಬಂದಿತು ಬಾಲರಾಮಯ್ಯನ ಎದುರಿಗೆ–

ಕಣ್ಣುದಪ್ಪಿನವನೆ ಬಣ್ಣದ ಹುಲಿಯಣ್ಣ
ಭಾವ ಮಲ್ಲಯ್ನ ಮಠವೆಲ್ಲಿ !

ಹುಲಿ ಬಾಗಿ ಶರಣೆಂದಿತು ಮಲ್ಲಯ್ಯನ ಹೆಸರನ್ನು ಕೇಳಿ. ಮತ್ತೊಂದು ಯೋಜನ ಅವನನ್ನು ಬೆನ್ನ ಮೇಲೆ ಹೊತ್ತು ತಂದಿತು.

ಆಲದ ಗುಂಪೊಂದನ್ನು ಹಾಯುವಾಗ, ಮೇಲಿದ್ದ ಕಪಿಯೊಂದು ಹಣ್ಣನ್ನು ಎಸೆಯಿತು ರಾಮಯ್ಯನ ಮುಂದೆ. ಕತ್ತೆತ್ತಿ ನೋಡಿದ ರಾಮಯ್ಯ ವಿನಮ್ರನಾಗಿ ಕೇಳಿದ–

ಕೆಂಬಣ್ಣದಣ್ಣನೆ ಹೊಳೆವ ಕಂಗಳ ಜಾಣ
ಕೊಂಬೆ ರೆಂಬೆಯ ಹಣ್ಣ ಕುಯ್ಯುವವನೆ-ಕಪಿರಾಜ
ಭಾವ ಮಲ್ಲಯ್ಯ ಮಠವೆಲ್ಲಿ ?

ಕಪಿ ಬಂದು ಅವನ ಪಾದವನ್ನು ಮುಟ್ಟಿ ಮುಂದೆ ಸಾಗಿತು.

ಆಕಾಶದಲ್ಲಿ ಗರುಡಾಳ ಪಕ್ಷಿ ಹಾರಿದ ನೆರಳು ಚಲಿಸಿತು ಭೂಮಿಯ ಮೇಲೆ, ಕೂಗಿದ ದನಿ ಕೇಳಿತು. ಕತ್ತೆತ್ತಿ ರಾಮಯ್ಯ ಕೇಳಿದ–

ಸಕಲಾತಿ ಮೈಯವನೆ ಮೊಕರಂಬೆ ಬಾಯವನೆ
ಆದಿ ಶಕುನಕೆ ರಾಯ-ಗರುಡಾಳ
ನಮ ಗಂಗೆ ಪಾರ್ವತಿಯ ಮಠವೆಲ್ಲಿ ?

ಹನ್ನೆರಡು ಸಾವಿರ ಗಿಣಿಹಿಂಡು ಹಾರಿಬಂದವು-

ಪಚ್ಚೆಯ ಮೈಯವನೆ ಹವಳದ ಬಾಯವನೆ
ಮಕ್ಕಳಿಲ್ಲದವನಿಗೆ ಅತಿಮುದ್ದೆ—ಗಿಣಿರಾಮ
ನಮ್ಮ ಅಕ್ಕ ಗೌರಮ್ಮ ಇರುವ ಮಠವೆಲ್ಲಿ ?

ಕಾಡುಕೋಳಿಯ ಹಿಂಡು, ನವಿಲ ದಂಡು, ಹಂಸ ಪಕ್ಷಿಯ ಕೂಟ, ಹುಲ್ಲೆಯ ಓಡಾಟ, ಹೆಬ್ಬಾವ ನೋಟದತ್ತಲೂ, ದನಿಯನ್ನು ಚೆಲ್ಲಿ ಕೇಳುತ್ತ ನಡೆದನು.

ಭಾವ ಮಲ್ಲಯ್ನ ಮಠವೆಲ್ಲಿ ?
ಭಾವ ಮಲ್ಲಯ್ನ ಮಠವೆಲ್ಲಿ ?

ಕರಡಿಯೊಂದು ಅತ್ತ ಬಂದಾಗ ಕೇಳಿದನು—

ಉದ್ದನೆಯ ಮುಖದವನೆ ಕಪ್ಪಿನ ಮೈನವನೆ
ಈ ಭೂಮಿಗೇಳು ದಿನಕೆ ಹಿರಿಯವನೆ-ಜಾಂಬವರೆ
ನಮ್ಮಕ್ಕ ಪಾರ್ವತಿಯ ಮಠವೆಲ್ಲಿ ?

ಯಾರೂ ಉತ್ತರಿಸಲಿಲ್ಲ. ಮೈದಾಳು ರಾಮನ ಪಾದಕ್ಕೆ ವಂದಿಸುತ್ತ ಕಾಡಿನಲ್ಲಿ ಕರಗುವ ಮೃಗಗಳಿಗೆ ಅಂಜದೆ ರಾಮ ಸಾಗಿದ್ದಾನೆ. ಗುಂಡನ್ನು ಹತ್ತಿದನು, ಗುಂಡನ್ನು ಇಳಿದನು. ಇದ್ದಕ್ಕಿದ್ದಂತೆಯೇ ಏನೋ ಬೆಳದಿಂಗಳು ಚೆಲ್ಲಿದಂತಾಗಿ ರಾಮಯ್ಯ ನಿಂತನು.

ಕಲ್ಲೆಲ್ಲ ಲಿಂಗ ಹುಲ್ಲು ರಾಜುಣವೆಲ್ಲ
ಗುಳ್ಳದ ಸುಂಡೆ ಪವಳ ಮುತ್ತು

ಎಲ್ಲೆಲ್ಲಿಯೂ ಲಿಂಗಗಳೇ ಕಂಡವು ರಾಮಯ್ಯನಿಗೆ. ತುಳಿದು ಬರಲಾರ ನೆಂದು ಶಿವ ಬಗೆದನು. ಅಕ್ಕಯ್ಯನನ್ನು ಕೂಗುತ್ತ ಭಾವಾಜಿಯನ್ನು ನೆನೆಯುತ್ತ ರಾಮಯ್ಯ ಲಿಂಗದ ಗಡಣವನ್ನೇರಿ ನಡೆದನು. ಕಾಲಲ್ಲಿ ರಕ್ತ ಸೋರಿತು. ಮಂಡಿಯಲ್ಲಿ ತೆವಳಿದನು. ಮಂಡಿಯಲ್ಲಿ ಗಾಯವಾಯಿತು. ಮೊಳಕೈಯಲ್ಲಿ

ತೆವಳಿದನು. ಸೋತು ಸೊರಗಿನು. ಎದೆಯಲ್ಲೇ ಮಕ್ಕಳಂತೆ ತೆವಳಿದನು, ತನುವಿನ ರಕ್ತ ಸೋರಿ ಕಲ್ಲೆಲ್ಲ ಕಾವಿಯಾಯಿತು, ಎತ್ತರದ ಬಂಡೆಯೊಂದರಿಂದ 'ಅಕ್ಕ-ಭಾವ'ನನ್ನು ಕರೆಯುತ್ತಲೇ ಕೆಳಗುರುಳಿದನು ರಾಮಯ್ಯ ಮೂರ್ಛೆಗೆ ಸಂದು. ಬೆನ್ನ ಹಿಂದೆಯೇ ಬಂದಿದ್ದ ಶಿವ ತೊಟ್ಟಿಲಾಗಿ ಆತುಕೊಂಡನು ನೆಚ್ಚಿನ ಶರಣನನ್ನು; ಕಣ್ಣು ತೆರೆಯುವುದರಲ್ಲಿ ರಾಮಯ್ಯ ಕೈಲಾಸದ ಬಾಗಿಲಲ್ಲಿದ್ದನು.

ಅಕ್ಕರೆಯ ಭಾವ ಮೈದ ಚಿಕ್ಕವನೆ ರಾಮಯ್ಯ
ನಮ್ಮತ್ಯಮ್ಮ ಚೆಂದಾಗಿ ಇರುವಳೆ ?

ಶಿವ ಕುಶಲವನ್ನು ಕೇಳಿದನು. ಅಕ್ಕ ಪಾರ್ವತಿಯೂ ಬಂದಳು. ಕೈಲಾಸದಿಂದ ನರಲೋಕಕ್ಕೆ ದಾರಿಯನ್ನು ಗೇದರು. ಮುತ್ತಿನ ಮಳೆಯಾಯಿತು. ಭೀಮಾವತಿಗೆ ಶಿವನ ಪರಿವಾರ ನಡೆಯಿತು. ಮೂರು ದಿನ ಅಕ್ಕ-ಭಾವನ ಜೊತೆ ಹಬ್ಬವನ್ನು ಆಚರಿಸಿದ ಮೈದಾಳು ರಾಮಯ್ಯ, ತಾಯಿ ಮಹಾದೇವಿಯೊಡನೆ ಕೈಲಾಸಕ್ಕೆ ಹೋದನು. ಹರ-ಪಾರ್ವತಿಯರನ್ನು ಗೆದ್ದು ಬಂದ ಪುಣ್ಯಪುರುಷ ಮೈದಾಳು ರಾಮಯ್ಯನ "ಗುರುವಚನ ಇಲ್ಲಿಗೆ ಮುದ್ರೆ-ಶರಣು ಶರಣು."

———

# ಮಲ್ಲಿಗೆ ಹೂವ ತರುವೆ

ತಮ್ಮ ದೈವ, ತಮ್ಮ ಧರ್ಮವನ್ನು ಕುರಿತು ಹಾಡುವಾಗ ನೀಲಗಾರನಿಗೆ ದೇಗುಲದಲ್ಲಿದ್ದಷ್ಟೇ ಭಯ, ಭಕ್ತಿ, ಮಡಿವಂತಿಕೆ. ಧಾರ್ಮಿಕ ಕಥೆಯ ಚೌಕಟ್ಟಿನಿಂದ ಲೌಕಿಕ ಕಥೆಯ ಸ್ವಚ್ಛಂದ ಬಯಲಿಗೆ ಚಿಮ್ಮುತ್ತಿದ್ದಂತೆಯೆ ಅವನು ಸರ್ವ ಸ್ವತಂತ್ರ, ತನ್ನ ಕಥನಕಲೆಯ ಕೌಶಲವನ್ನು ಮೆರೆಯುವಲ್ಲಿ ಗಗನಗಾಮಿ ಗರುಡನಾಗುತ್ತಾನೆ. ಆಕರ್ಷಕವಾದ, ಸುಂದರವಾದ, ಜನರಂಜನೀಯವಾದ ಕಥೆ ಅವನ ತಂಬೂರಿಯನ್ನೇರಿ ನಲಿಯುತ್ತವೆ........ಅಂಥ ಕೆಲವು ಸುಪ್ರಸಿದ್ಧ ಕಥೆಗಳತ್ತ ನಮ್ಮ ದೃಷ್ಟಿಯನ್ನು ಸೆಳೆದಿದ್ದಾನೆ.

ತಂದನ್ನ ತಾನ ರಂಗೋರಾಮು-ತಂದನ್ನ
ಜಾರುಗಲ್ಲ ಹತ್ತಿ ಬರಲಾರೆ ರಂಗಯ್ಯ
ಕೈಕಟ್ಟು ನನ್ನ ಕರಕಯ್ಯ
ತಂದನ್ನ ತಾನ ರಂಗೋರಾಮು ತಂದನ್ನ
ಕೈಕೊಟ್ಟು ನನ್ನ ಕರಕಂಡ್ರೆ ನಾರಾಯಣ
ನಾಳೆ ಪೂಜೆಗೆ ಬರುತೀನಿ....ತಂದನ್ನ....

ಇದು ಬಿಳಿಗಿರಿ ರಂಗಯ್ಯನ ಅಪೂರ್ವ ಪ್ರಣಯ ಕಥೆ. ಮೈಸೂರು ಜಿಲ್ಲೆಯ ಮೂಡಣಗಿರಿ ಗಡಣದ ಉತ್ತುಂಗ ಶಿಖರದಲ್ಲಿ ಮನೆ ಮಾಡಿ ಸೋಲಿಗರ ಹೆಣ್ಣಿಗೆ ಮನಸೋತ ರಸಿಕರಂಗನ ಸೊಗಸಿನ ಕಥೆ....

ಎಡದಲ್ಲಿ ತೊಳಸಮ್ಮ ಬಲದಲ್ಲಿ ಲಕ್ಷ್ಮಿದೇವಿ
ನಟ್ಟನಡುವೆ ನಾರಾಯಣ ಕೂತುಗಂಡು
ಮಡದೀರಿಗಿ ಬುದ್ಧಿ ಹೇಳುತಾನೆ

ಇಬ್ಬರು ಮಡದಿಯರು, ತೊಳಸಮ್ಮ,ಲಕ್ಷ್ಮೀದೇವಿಯರು. ನಾರಾಯಣ ಏನನ್ನು ನೆನೆದನೊ ಮನದಲ್ಲಿ, ಎದ್ದು ಕುಳಿತು ಮಡದಿಯರನ್ನು ನುಡಿಸಿಹ, ಎತ್ತಲೊ ಹೊರಟು ನಿಂತ!

ಇನ್ನು ಹೂವಿಗೆ ನಾನು ಹೋಗುತೀನಿ
ಕೈಯಾರ ಈಳ್ಯ ಕೊಡ್ಯುರೆ-ಮಡದೀರ
ಮಲ್ಲಿಗೆ ಹೂವ ತರುವೇನು !

ಜಾಣ ಬಿಳಿಗಿರಿ ರಂಗಯ್ಯ ಚಾತುರ್ಯದ ಮಾತನಾಡಿ, ಜಾಣೆ ನಲ್ಲೆಯರಿಗೆ ಬುದ್ಧಿ ಹೇಳಿದನು. ಶಂಖು ಜಾಗಟೆಯನ್ನು ಕೊಂಡನು. ಬಿಳಿಯ ರುಮಾಲು ಸುತ್ತಿದನು. ನಾಮದ ಪೆಟ್ಟಿಗೆಯನ್ನು ತೆಗೆದುಕೊಂಡು ಮನೆಯನ್ನು ಬಿಟ್ಟುವನು—

ಅಲ್ಲಾಣೆ ಇಲ್ಲಾಣೆ ಕಲ್ಯಾಣೆ ಕೊಳದಾಣೆ
ದೊಡ್ಡ ಸಂಪುಗೆ ವನಕಾಗಿ-ನಾರಾಯಣ
ತಾನ ಜಪ್ಯವ ಮಾಡುತಾರೆ

ಸ್ನಾನ ಜಪವಾಯಿತು. 'ನಾಮದ ಸೇವೆ'ಯನ್ನೂ ಮಾಡಿಕೊಂಡ. ಸಂದು ಸಂದಿಗೆ ಸಹಸ್ರನಾಮ, ಹೊಟ್ಟೆಯ ಮೇಲೊಂದು ಬಟ್ಟನಾಮ, ಹಣೆಯ ಮೇಲೊಂದು ಸೆಳೆ ನಾಮಗಳನ್ನು ಧರಿಸಿ ಮುಂದೆ ಹೊರಟ ಅವನ ಸುಳಿವನ್ನರಿತಳು ಹೇಗೋ ಸೂಳೆ ರಂಗಿ, ಸ್ವಾಮಿಯ ಸೆರಗನ್ನು ಹಿಡಿದು ನಿಲ್ಲಿಸಿದಳು.

ಸೆರಗ ಬಿಡ್ಲೆಣ್ಣೆ ಸ್ವಾಮಂತಿಗೆ ತಿರುಗೋಳೆ
ಹಚ್ಚ ಮಲ್ಲಿಗೆ ಮುಡಿಯೋಳೆ

ರಂಗಯ್ಯ ಅಂಜಿದ. ಸುತ್ತಲೂ ಕಣ್ಣು ಹರಿಸಿದ. ಕವಿದ ಕಾಡಿನ ನಡುವೆ, ಹಬ್ಬಿದ ಶೃಂಗಗಳ ನಡುವೆ ಸೂಳೆ ರಂಗಿ ಸೆರಗನ್ನು ಬಿಡಲಿಲ್ಲ. 'ಸೆರಗ ಬಿಟ್ಟರೆ ಸರಿಯ ನಾರಿಯರು' ತನ್ನನ್ನು ಹೇಡಿಯೆನ್ನರೇ !

ಸೂಳೆ ರಂಗಿಯ ಮನೆಯ ಜೆಂಡೆ ಮಂಚದ ಮೇಲೆ ಹೋಗಿ ಸ್ವಾಮಿ ಒರಗಿದ.

ಅಯ್ಯ-ಹೂವಿನ ಗ್ಯಾವ ಮರೆತನಲ್ಲೊ
ಮಡದೀರ ಗ್ಯಾನವ ಮರೆತನಲ್ಲೊ
ಅಯ್ಯ-ಸೂಳೆಯ ಗ್ಯಾನವೆ ಬಲುಗ್ಯಾನ

ಒಂಬತ್ತು ದಿನದಲ್ಲಿ ಬರುತ್ತೇನೆಂದವನು ದಿನಗಳು ಜಾರಿದರೂ ಒಮ್ಮೆ ನೆನೆದು ಹೊರಟು ನಿಂತ. ಸೂಳೆ ರಂಗಿ ಬಿಡಲಿಲ್ಲ. ಒಂಬತ್ತು ದಿನಕ್ಕೆ ಒಂಬತ್ತು

ಸಾವಿರ ಹಣವನ್ನೇ ಕಟ್ಟಿ ತೆರಳಲು ಹೇಳಿದಳು. ಅವನ ಬಿಳಿಯ ರುಮಾಲು, ಶಂಖ, ಜಾಗಟೆ ಎಲ್ಲವನ್ನೂ ಕಸಿದುಕೊಂಡಳು. ರಂಗಯ್ಯ, ಕೈಕಟ್ಟಿ ರಾಗಿಯ ಕಲ್ಲಮೂಲೆಯಲ್ಲಿ ಕುಳಿತ, ಮುಂದೇನೂ ಮಾಡಲೂ ತೋಚದೆ.

ಒಂಬತ್ತು ದಿನ ತುಂಬಿತು. ಹೂವಿಗೆ ಹೋದ ಸ್ವಾಮಿ ಬರಲಿಲ್ಲ. ಇಬ್ಬರು ಮಡದಿಯರೂ ಕಡೆಯ ಬಾಗಿಲ ಹನುಮಯ್ಯನನ್ನು ಅಟ್ಟಿದರು, ಹುಡುಕಿಬರಲು. ಸೂಳೆರಂಗಿಯ ಮನೆಯಲ್ಲಿ ಸ್ವಾಮಿ ಸೆರೆಯಾದುದನ್ನು ಕೇಳಿ ಹನುಮಯ್ಯ ಕೊರಗುತ್ತಲೇ ಮರಳಿದ. ಲಕ್ಷ್ಮೀದೇವಿ, ತೊಳಸಮ್ಮ ಕೊಟ್ಟ ಒಂಬತ್ತು ಸಾವಿರ ಹಣವನ್ನು ಎಣಿಸಿ ದಣಿಯನ್ನು ಬಿಡಿಸಿಕೊಂಡು ಮೇಲುಗಿರಿಯನ್ನು ಏರಿ ಅರಮನೆಗೆ ಕರೆತಂದು ಒಪ್ಪಿಸಿದ.

ಮಡದಿಯರು ಯಾವ ಮಾತನ್ನೂ ಆಡಲಿಲ್ಲ. ಹೂ ಕೂದು ಸೋತ ಪತಿಗೆ ಕೊಪ್ಪರಿಗೆಯಲ್ಲಿ ಬಿಸಿನೀರು ಅಣಿಯಾಯಿತು. ಅತ್ತ ಲಕ್ಷ್ಮೀದೇವಿ, ಇತ್ತ ತೊಳಸಮ್ಮ ಇಬ್ಬರೂ ನಿಂತು ಕುದಿವ ನೀರನ್ನೇ ಹಾಕಿ ರಂಗಯ್ಯನನ್ನು ಕುಣಿಸಿದರು. ತಲೆಯ ಸಿಕ್ಕನ್ನು ಹೊಡೆಯಲು ಒಂದು ಹೊರೆ ಕಾಡ ಬಿದಿರ ಕಡ್ಡಿಯನ್ನು ತರಿಸಿದರು. ನೆತ್ತಿಯ ಮೇಲೆ ಕೋಲೆಲ್ಲ ಮುರಿಯುವಂತೆ ಚಚ್ಚಿ ಬುದ್ಧಿ ಹೇಳಿದರು.

ರಂಗಯ್ಯನಿಗೆ ಅರೆಗಳಿಗೆ ಉಸಿರೇ ನಿಂತಿತು. ಜೀವವೇ ಹಾರಿ, ಹೊಟ್ಟೆ ಊದಿ ಕಣ್ಣಿಗೆ ಕಟ್ಟಿರುವೆ ಮುತ್ತಿ ಸತ್ತುಬಿದ್ದನು. ಮಡದಿಯರು ಗೋಳಿಟ್ಟರು. ತಾವಾಗಿಯೇ ಪತಿಯನ್ನು ಕೊಂದೆವೇ ಎಂದು ಕಣ್ಣೀರು ಮಿಡಿದರು. ಸುದ್ದಿ ನಂಜನಗೂಡಿನ ನಂಜಯ್ಯನಿಗೆ, ಚುಂಚನಗಿರಿಯ ಭೈರವನಿಗೆ, ಮೇಲುಕೋಟೆ ಚೆಲುವರಾಯನಿಗೆ, ಮಲೆಯ ಮಾದಯ್ಯನಿಗೆ ಮುಟ್ಟಿ ಅವರೆಲ್ಲ ಓಡೋಡಿ ಬಂದರು. ರಂಗಯ್ಯ ಮಡಿದ ಮೇಲೆ ಅವನ ಗೊಂಬೆ ತೇರಾದರೂ ಏಕೆ! ಮಡದಿಯರು ಅದನ್ನೇ ಕಡಿಸಿ ಕೊಂಡ ಹಾಕಿಸಿದರು. ಎಲ್ಲರೂ ಕಣ್ಣೀರನ್ನು ಹರಿಸುತ್ತ ರಂಗಯ್ಯನನ್ನು ಕೊಂಡದ ಮೇಲೆ ಮಲಗಿಸಿ, ಬಾಳೆ ಎಲೆಯಿಂದ ಮುಚ್ಚಿದರು ; ಬೆಂಕಿ ಹೊತ್ತಿತು ಬುಗ ಬುಗನೆ.

ರಂಗಯ್ಯ ಹೌಹಾರಿದ. ಛಂಗನೆ ಕೆಳಗೆ ಹಾರಿ ಕಮರಿಯ ಕಡೆ ಓಡ ತೊಡಗಿದ. ಮಡದಿಯರು ಬಿಡಲಿಲ್ಲ. ಹನುಮಯ್ಯನನ್ನು ಕರೆದು ಕೂಗಿಕೊಂಡರು-

ಕಳ್ಳರಂಗಯ್ಯ ಕದ್ದೋಡುತಾನೆ
ಹಿಡಕಂಡು ಬಾರಯ್ಯ ಹನುಮಂತ !

'ದೇವಮಾನ್ಯ'ರೆಲ್ಲ ಸೇರಿ 'ನ್ಯಾಯ' ಮಾಡಿ, ರಂಗಯ್ಯನಿಂದ ತಪ್ಪು ಕಾಣಿಕೆಯನ್ನು ಕೊಡಿಸಿ 'ರಾಜಿ' ಮಾಡಿ ಮರಳಿದರು. ರಂಗಯ್ಯ ಒಬ್ಬಟ್ಟು ಕಜ್ಜಾಯ ಮಾಡಿಸಿ ನೋವನ್ನು ಮರೆತ.

* * * *

ಮಡದಿಯರ ಮುನಿಸು ಕರಗಿತು. ಸರಸ ಸಂತೋಷದಲ್ಲಿ ಮೈಮರೆತ ರಂಗಯ್ಯ. ಊಟಮಾಡಿ, ವೀಳ್ಯಮೆದ್ದು, ಮಲ್ಲಿಗೆ ಹೂವಿನ ಹಾಸಿಗೆಯಲ್ಲಿ ಇಬ್ಬರ ನಡುವೆ ಪವಡಿಸಿದ. ಹೊತ್ತಲ್ಲದ ಹೊತ್ತಿನಲ್ಲಿ ಮತ್ತೆ ಎಚ್ಚರವಾಯಿತು ರಂಗಯ್ಯನಿಗೆ. ಎದ್ದು ಕುಳಿತ. ಉರಿವ ದೀಪದ ಮಂದ ಬೆಳಕಲ್ಲಿ ಅತ್ತ ತೊಳಸಮ್ಮ ಇತ್ತ ಲಕ್ಷ್ಮೀದೇವಿ! ಮುಟ್ಟಿ ನೋಡಿದ! ಗಾಢ ನಿದ್ದೆ ಕವಿದಿದೆ. ಮತ್ತೊಮ್ಮೆ ಪರಿಕಿಸಿದ ; ಮೈಮರೆತು ಮಲಗಿದ್ದಾರೆ ! ಆದರೂ ಎದ್ದು ಹಿಂಬಾಲಿಸಿದರೆ ! ಹನುಮಯ್ಯನೊಡನೆ ಹಿಡಿತರಿಸಿದರೇ !

ಸದ್ದಿಲ್ಲದಂತೆ ಬಾಗಿಲು ತೆರೆಯಿತು. ಕಗ್ಗಲಿಯ ತುಂಡೊಂದು ರಂಗಯ್ಯನ ನೆಲೆಯಲ್ಲಿ ಒರಗಿತು. ಅದಕ್ಕೂ ಬಿಳಿಯ ನಾಮ ವಲ್ಲಿಯ ಹೊದಿಕೆ. ಮಡದಿಯರ ಮಮತೆಯ ಹಸ್ತ ಅದರ ಮೈಮೇಲೆ !

ಶಂಖ ಜಾಗಟೆಗಳನ್ನು ಕೈಗೆತ್ತಿಕೊಂಡ ರಂಗಯ್ಯ ಒಮ್ಮೆ ನಿಂತು ಹುಂದನಗೆ ಬೀರಿ ಮುಂದೆ ನಡೆದ. ಕಡೆಯ ಬಾಗಿಲಲ್ಲಿ ಎಚ್ಚರದ ಅಡಿಗಳನ್ನು ಗುರುತಿಸಿ ಹನುಮಯ್ಯ ಹೂಂಕರಿಸಿ ಮೇಲೆದ್ದ. ಆದರೂ ಹಬ್ಬದೂಟವುಂಡು ಹೊಟ್ಟೆ ಉಬ್ಬರಿಸಿ ಹೊರಳಾಡುತ್ತಿರುವ ಅಕ್ಕಂದಿರಿಗೆ 'ಕೊಮ್ಮ ಬೇರು' ತರಲು ಹೊರಟ ವೈದ್ಯನಲ್ಲವೇ !

—ಹನುಮಯ್ಯ ಸಮ್ಮತಿಸಿ ಮತ್ತೆ ಕಾವಲು ನಿಂತ. ಕತ್ತಲಲ್ಲಿ ರಂಗಯ್ಯ ಎತ್ತ ಕರಗಿದನೋ ಶಂಕಿಸಲಿಲ್ಲ ಹನುಮಯ್ಯನ ಕಣ್ಣು. ಕತ್ತಲು ಹರಿದು ಬೆಳಗಾಯಿತು.

ಕಾಂಡಪ್ಪನ ಕೆರೆಗೆ ಬಂದ ರಂಗಯ್ಯ ಶಂಖದ ಕಲ್ಲೇರಿ ಕುಳಿತು ಏನನ್ನೋ ಮೆಲುಕು ಹಾಕಿದ. ಸಂಜನಗೂಡು ನಂಜಯ್ಯನಿಗೆ 'ದುಂಡುಳ್ಳುಸೇವೆ,' ಮೇಲು ಕೋಟೆಯ ಚೆನ್ನಿಗ ಚೆಲುವನಿಗೆ 'ಒಮ್ಮುಗ್ಗುಲು ಸೇವೆ', ತಿರುಪತಿ ತಿಮ್ಮಪ್ಪನಿಗೆ 'ಕೂತ್ಕೊಂಡು ಸೇವೆ' ಮಾಡಲು ಹರಕೆ ಹೊತ್ತ ! ಕಾಣಿಕೆ ಕಟ್ಟಿದ !

ಚಿಕ್ಕವಳು ಕುಸುಮಾಲೆ ತಾವರೆಯ ಗೆಣಸಿಗೆ ಬರಬಾರದೆ ? ಹತ್ತು

ಹಲವು ದೈವಗಳಿಗೆ ಹರಕೆ ಹೊತ್ತಾಗಲೇ ಸೋಲಿಗ ಬೊಮ್ಮೇಗೌಡನ ಮಗಳು ಕುಸುಮಾಲೆ ಆರು ಮಂದಿ ಅಕ್ಕಂದಿರ ಜೊತೆಯಲ್ಲಿ ತಾನು ಹೊರಟು ನಿಂತಳು, ತಾವರೆಯ ಗೆಣಸಿಗೆ ! ಯಾರು ಬೇಡವೆಂದರೂ ಕೇಳದೆ ಹೊರಟು ಬಂದಳು ಕುಸುಮಾಲೆ ಅಕ್ಕಂದಿರ ನಡುವೆ !

ಮನಸಿಗೊಪ್ಪಾದೋಳು ಚಿಕ್ಕೆಣ್ಣು ಬರುತಾಳೆ
ಸಿಕ್ಕ್ಯಾಳೊ ಕಾಣೆ ಸಿಗಳೊ ಕಾಣೆ

ರಂಗಯ್ಯನ ನೋಟ ಗುರುತಿಸಿತು ಬರುವ ಕುಸುಮಾಲೆಯನ್ನು.

ಹಿಂದೆ ಬರುವಳು ಬೇಡ ಮುಂದೆ ಬರುವಳು ಬೇಡ
ನಡುವೆ ಬರುವೋಳ ತರದಿದ್ದ ಮೇಲೆ–
ನಾ ರಂಗನಾದುದಕೆ ಫಲವೇನು ?

ಏಳು ಮಂದಿ ಅಕ್ಕ ತಂಗಿಯರೂ ಬೆಚ್ಚಿದರು ! ಎಲ್ಲಿಂದಲೋ ಯಾವುದೋ ದನಿ ಕೇಳಿ ಬರುತ್ತಿದೆ !

ಏನೋ ಅಕ್ಕ ಗಾಳಿಯೊ ಗ್ರಾಚಾರವೊ
ನಮ್ಮ ಮೇಲೆ ಕವಿಕಟ್ಟಿ ಪದಹೇಳ್ತದೆ

ಅವರಾದರೂ ಏನು ಅಂಜುವವರೇ ! ತಾವೂ ಒಂದು ಪದಕಟ್ಟಿ ಹಾಡಿದರು :

ತಿರುಗಿ ನೋಡಣ್ಣ ಸ್ವಾಲಿಗರ್ಹೆಣ್ಣ
ಅವಳ ತುರುಬಿನ ಬಣ್ಣ ನೋಡಣ್ಣ
ಕೊರಮಂಜ ಗೂಡು ಕೊರದಂಗೆ

ಹಾಡಿಕೊಂಡೇ ತಾವರೆಯ ಕಟ್ಟೆಗೆ ಬಂದರು. ಆರು ಜನ ಅಕ್ಕಂದಿರು ದಂಟನ್ನು ಬೇಗ ಬೇಗ ಕಿತ್ತು ಹೊರೆ ಕಟ್ಟಿದರು. ಕುಸುಮಾಲೆಯ ಕಣ್ಣಿಗೆ ಒಂದು ಗಂಟೂ ಕಾಣದಾಯಿತು. ಸಂಜೆಯಾಗುತ್ತ ಬಂತು. ಅಕ್ಕಂದಿರು ತಂಗಿಯನ್ನು ಹಂಗಿಸಿ ಹೊರಟೇ ಹೋದರು. ಬರುವ ದಾರಿಯಲ್ಲಿ 'ವೀಳ್ಯ' ಕೊಡದಿದ್ದ ಕುಸುಮಾಲೆಯನ್ನು ತೊರೆದು ಕಣ್ಮರೆಯಾದರು. ಆರೊಂದಡವಿ, ಜೇನು, ಕಲ್ಲುಮಲೆ, ದನಕಾಯುವ ಹುಡುಗರಿಲ್ಲ. ಕುರಿಯುವರಿಲ್ಲ. ಗೆಣಸಾದರೂ ಬೇಗ ದೊರೆಯುತ್ತಿಲ್ಲ.

ಸುತ್ತಿ ಸೋತ ಕುಸುಮಾಲೆಗೆ ಅಲ್ಲೊಂದು ಕಡೆ ಗೆಣಸಿನ ರಾಶಿ ರಾಶಿಯೇ ದೊರೆಯಿತು ; ಎಲ್ಲವನ್ನೂ ಕಿತ್ತು ದೊಡ್ಡ ಹೊರೆಯನ್ನು ಕಟ್ಟಿದಳು ಹಿಗ್ಗಿನಿಂದ. ಪೋಡಿಗೆ ಹೋಗಿಬಿಡಲೆಂದು ಹೊರೆಯನ್ನೊಮ್ಮೆ ಅಲುಗಿಸಿದಳು. ಮೇಲೇಳಲಿಲ್ಲ. ಆ ಕಾಡಿನಲ್ಲಿ, ಆ ನಿರ್ಜನ ನೀರವ ಪ್ರದೇಶದಲ್ಲಿ ಇನ್ನು ಹೊರಿಸುವವರಾದರೂ ಯಾರು ?

ಏಕೋ ಏರಿಯತ್ತ ದೃಷ್ಟಿಯನ್ನು ಹರಿಸಿದಳು. ಮುದುಕ ದಾಸಯ್ಯನೊಬ್ಬ ಮೆಲ್ಲಗೆ ಸಾಗಿದ್ದಾನೆ. ಮುಂದಿನ ಹಲ್ಲೆರಡೂ ಉದುರಿವೆ. ನೆತ್ತಿಯ ಮೇಲೆ ನರೆಕೂದಲು ಇಣಿಕಿವೆ. ಮೂರು ನಾಮ ಹಾಕಿ, ದೊಣ್ಣೆಯೊಂದನ್ನು ಊರಿ ಊರಿ ನಡೆದಿದ್ದಾನೆ.

ಕೆಮ್ಮುತಾನೆ ಕ್ಯಾಕರುಸುತಾನೆ
ನರಳುತಾನೆ ನೆಸುಗುತಾನೆ
ಕಡದು ಹೊಯ್ತಾನೆ ಮೂಡುಮೊಕನಾಗಿ

ಕುಸುಮಾಲೆ ಹರಕೆ ಹೊತ್ತಿದ್ದಳು ಅಪ್ಪನ ಮನೆಯ ಮನೆದೇವರು ಬಿಳಿಗಿರಿ ರಂಗಯ್ಯನಿಗೆ ; ಹರಿಸೇವೆ ಗುರುಸೇವೆ ಮಾಡಿಸುವೆನೆಂದಳು ಹೊರಿಸುವವರು ಸಿಕ್ಕರೆ. ದಾಸಯ್ಯನೊಬ್ಬ ಆಗಲೇ ಕಾಣಿಸಿಕೊಂಡಿದ್ದಾನೆ.

ಏರಿಯ ಮೇಲೆ ಓಡೋಡಿ ಬಂದಳು ದಾಸಯ್ಯನನ್ನು ಕೂಗುತ್ತ ; ಅವನ ಸೆರಗು ಹಿಡಿದು ನಿಲ್ಲಿಸಿದಳು.

“ನಾ ಹೊಳೆಯಿಂದಾಚೆ ಎಳಂದೂರಿನವನು, ಏಲಕ್ಕಿ ಮಲೆಗೆ ಹೋಯ್ತೀನಿ ಕಾಣ್ದೆಣ್ಣೆ, ಮೂಗಳ ಜೇನುತುಪ್ಪ, ನಾಗಳ ಸೀಗೆಕಾಯಿ, ಮೂಗಳ ಅವರೇಕಾಳು ತತ್ತೀನಿ ಅಂತ ಮನೆಮಡದೀಗೆ ಹೇಳೀನಿ.”

–ದಾಸಯ್ಯ ಕೆಮ್ಮುತ್ತಲೇ ಹೇಳಿ ಹೆಜ್ಜೆಯಿಟ್ಟ.

“ಯಾಲಕ್ಕಿ ಮಲೆಗೆ ಏಳೇಳು ಗಿರಿಯ ಕಡದುಹೋಗಬೇಕು, ನಿಂತ ಜಾಗದಲ್ಲಿ ನಾ ಕೊಡುತೀನಿ....ಗೆಣಸಿನ ಹೊರೆಯ ಹೊರಿಸು ಬಾ....”

ಕುಸುಮಾಲೆ ಬೇಡಿದಳು, ದಾಸಯ್ಯನ ಮುಷ್ಟಿ ಸಡಿಲಲಿಲ್ಲ.

“ಉಟ್ಟಿರೋ ಸೀರೆ ಬಿಟ್ಟು ತೊಟ್ಟಿರೋ ಕುಬುಸ ಬಿಟ್ಟು ಮಿಕ್ಕ ಒಡವೇ ಕಳದು ಕೊಡುತೀನಿ” “ಕಳ್ಳರು ಕಂಡರೆ ಏನು ಗತಿ, ನನ್ನ ಪ್ರಾಣ ಹೋದರೆ ಕೊಡಬಲ್ಯ ?”

ದಾಸಯ್ಯನಿಗೆ ಕರುಣೆ ಬರಲಿಲ್ಲ. ಹೊರೆ ಹೊರಿಸುವವರೆಗೆ ಮಡದಿಯಾಗಿರಲು ಒಪ್ಪಿದಳು. ಕೈಹಿಡಿದು ದಾಸಯ್ಯನನ್ನು ನಡೆಸಿಕೊಂಡು ಹೋದಳು.

ಅತ್ತ ದಾಸಯ್ಯ ಇತ್ತ ಕುಸುಮಾಲೆ ನಿಂತು ಹೊರೆ ಎತ್ತಿದರು. ಹೊರೆ ಎದೆಯವರೆಗೆ ಏರಿ ಹಾಗೆಯೇ ನಿಂತಿತು ! ದಾಸಯ್ಯನ ಕೈ ಭುಜದ ಮೇಲಾಡಿತು ! ಕುಸುಮಾಲೆ ಸಿಡಿಮಿಡಿಗೊಂಡಳು. ಕೈಕಿತ್ತು ಕೊಸರಿದಳು ! ಸಿಡುಕಿನಲ್ಲಿ ಅತ್ತ ತಳ್ಳಿದಳು !

ದಾಸಯ್ಯ ತತ್ತರಿಸಿ ಕೆಳಗೆ ಬಿದ್ದ,

ಗುಮ್ಮಗುಮನೆ ಕೆಮ್ಮುತಾನೆ ದಾಸಯ್ಯ
ತಾರಾಡಿ ಕೆಳಗಿ ಬೀಳುತ್ತಾನೆ

ಕುಸುಮಾಲೆ ಮೇಲೆತ್ತಿ ಓಲೈಸಿದಳು. ಸೆರಗಿನಲ್ಲಿ ಗಾಳಿ ಬೀಸಿದಳು. ಮತ್ತೆ ಬೇಡಿದಳು ಮನ ಕರಗುವಂತೆ

ಎತ್ತಿದ ಹೊರೆಯ ನಾರಾಯಣಸ್ವಾಮಿ
ನೆತ್ತಿಯ ಮೇಲಿನ್ನು ಮಡಗಿದ

ಹೊರೆಯನ್ನು ಹೊತ್ತ ಕುಸುಮಾಲೆ ಪೋಡಿನ ದಾರಿ ಹಿಡಿಯುವ ಮುನ್ನ ದಾಸಯ್ಯನಿಗೆ ಹೇಳಿದಳು, ಮುಂದಿನ ಶನಿವಾರದ ಹರಿಸೇವೆಗೆ ಬರುವಂತೆ.

ಎಡಚೋರಿ ಅಕ್ಕನ ಪೋಡು ಬಲಚೋರಿ
ಅಕ್ಕನ ಪೋಡು
ನಟ್ಟ ನಡುವೇಲಿ ನನ ಪೋಡು
ಮನೆಯ ಬಾಗಿಲಿಗೆರಡು ಬಾಳೆಯಗೊನೆಯುಂಟು
ಕಟ್ಟಿದ ಸರಳೆಮ್ಮೆ ಕರವುಂಟು !

ದಾಸಯ್ಯ ಹಿಂದೆ ಉಳಿದ. ಕುಸುಮಾಲೆ ಗಿಡಗಳ ಸಾಲಿನಲ್ಲಿ ಕರಗಿದಳು.

ದಾಸಯ್ಯ ಮುಗಿಲತ್ತ ತಲೆಯೆತ್ತಿ ನೋಡಿ ದೇವೇಂದ್ರರಾಯನಿಗೆ ಹರಕೆ ಹೊತ್ತ. ಕಾಳಿ, ಕಂಕಾಳಿ, ಯಮದೂತಿ ಮಳೆಯೇ ಸುರಿಯತೊಡಗಿತು. ಕೊರೆವ ಗಾಳಿ ತೀಡಿತು. ಮಳೆಯಲ್ಲಿ ತೊಯ್ದು ಚಳಿಯಲ್ಲಿ ನಡುಗುತ್ತ ಕುಸುಮಾಲೆ ದಾರಿ ಸಾಗಲಾರದೆ ಸೋತಳು. ಕತ್ತಲು ಕವಿಯಿತು. ಹಾದಿ ಬದಿಯ ಮಂಟಪವೊಂದರಲ್ಲಿ ಯಾರೋ ಬೆಂಕಿ ಕಾಯಿಸುತ್ತಿದ್ದಾರೆ. ಮಳೆ ನಿಂತ ಮೇಲಾದರೂ ಮುಂದೆ ಹೋದರಾಯಿತು, ಬೆಂಕಿಯಲ್ಲಿ ಚಳಿಯಾದರೂ ಕರಗೀತು !

ಕುಸುಮಾಲೆ ಹತ್ತಿರ ಬಂದು ನೋಡಿ ಬೆಚ್ಚಿದಳು. ಅವನೊಬ್ಬ ಫಕೀರ, ಇವಳನ್ನು ಕಂಡೊಡನೆಯೇ ಕಟುನುಡಿಗಳನ್ನಾಡುತ್ತ ಮೇಲೆ ಬೀಳಲು ಬರುತ್ತಿದ್ದಾನೆ ! ದೂರ ಹೋಗಲು ಭೋರ್ಗರೆಯುವ ಮಳೆ, ತುಂಬಿ ಹರಿಯುವ ಹಳ್ಳ !

ಎದೆಗುಂದಲಿಲ್ಲ ಕುಸುಮಾಲೆ. ಫಕೀರನ ಮೇಲೆ ಕಲ್ಲೊಂದನ್ನು ಮಂತ್ರಿಸಿ ಎಸೆದಳು. ಫಕೀರ ತತ್ತರಿಸಿ ಹಿಂದೆ ಸರಿದ, ಕ್ಷಣಾರ್ಧದಲ್ಲಿ ಅವನ ಮೈಯೆಲ್ಲ ಊದಿ ಹೋಯಿತು. ಪ್ರಾಣವೇ ಹಾರಿ ಹೋದಂತಾಗಿ ಗಗನದತ್ತ ದೃಷ್ಟಿಯನ್ನು ಚೆಲ್ಲಿದನು ಫಕೀರ.

ಮಳೆ ನಿಂತಿತು. ಗರುಡಾಳ ಪಕ್ಷಿ ಆತುರಾತುರವಾಗಿ ಹಾರಿ ಬಂದಿತು. ನಂದಗೋಕುಲಕ್ಕೆ ಹೋಗಿ ಆದಿನಾರಾಯಣ ಸ್ವಾಮಿಯ ಬಳಿ ತುಲಸಿಯ ಮಾಲೆಯನ್ನು ಕಲ್ಯಾಣಿಯ ತೀರ್ಥವನ್ನು ತಂದು ಫಕೀರನ ತೊಡೆಯ ಮೇಲೆಯೇ ಕುಳಿತಾಗ ಬೆಚ್ಚಿದಳು ಬದಲಾಗುತ್ತಿರುವ ದಿವ್ಯರೂಪವನ್ನು ಕಂಡು!

"ಶಂಖಚಕ್ರ ಝೇಂಕಾರವಾಗಿ ಏಳುಕೋಟಿ ಸೂರ್ಯ ಪ್ರಕಾಶವಾಗಿ ಉರಿಯುತ್ತ ನಿಂತ ಸ್ವಾಮಿ !"

ಸ್ವಾಮಿಯ ಪಾದದಲ್ಲೆರಗಿದಳು ಕುಸುಮಾಲೆ. ಮೇಲುಗಿರಿಯಲ್ಲಿ ಅವರಿಬ್ಬರಿಗೂ ಕಲ್ಯಾಣವಾಗುವಾಗ 'ದೇವ ಮಾನ್ಯವರು' ಹೂವಿನ ಮಳೆ ಸುರಿಸಿದರು. ತೊಳಸಮ್ಮ, ಲಕ್ಷ್ಮೀದೇವಿಯರಿಗೆ 'ಕೂತು ಪಟ್ಟ'ವಾದರೆ ಕುಸುಮಾಲೆ ಮೆರೆಯುವ ಪಟ್ಟವನ್ನು ಪಡೆದು ಸ್ವಾಮಿಯ ಜೊತೆಯಲ್ಲಿ ತೇರಿನ ಮೇಲೆ 'ದಾಯ ಪಗಡೆ' ಆಡಿದಳು.

—o—

## ಗೋಳೆಂದು ದುಃಖ ಮಾಡುತಾಳಲ್ಲೋ

ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ವಸ್ತುವೈವಿಧ್ಯದಲ್ಲಿ ನೀಲಗಾರರ ಕಥೆಗಳು ಬಹುಮುಖತೆಯನ್ನು ಸ್ಥಾಪಿಸಿಕೊಳ್ಳುತ್ತವೆ. ಕಲ್ಪನಾ ರಮ್ಯತೆಯಿಂದ ಕೂಡಿದ ಕೆಲವು ಲೌಕಿಕ ಕಥೆಗಳ ಸಾಲಿನಲ್ಲಿ 'ನೀಲವೇಣಿ'ಯ ಕಥೆ ಒಂದು ವಿಶಿಷ್ಟ ಮಾದರಿ. ಲೌಕಿಕದ ನೆಲಗಟ್ಟಿನಲ್ಲಿ ಬೇರುಬಿಟ್ಟು ಅದ್ಭುತ ಕಲ್ಪನಾಲೋಕದಲ್ಲಿ ಹೂಬಿಟ್ಟು ಕಂಗೊಳಿಸುವ ಈ ಕಥೆಯ ವಸ್ತು ಹೊಸದು, ನಡೆದ ಮಾರ್ಗ ಹೊಸದು....ಸಾಮಾನ್ಯ ಬಿಡಿಗತೆ ನೀಲಗಾರರ ನಾಲಗೆಯನ್ನೇರಿ ಸಂಸ್ಥಾಪಗೊಂಡಾಗ ಅದೊಂದು ಸುಂದರ ಕಾವ್ಯ, ಸರ್ವಾಂಗ ಪರಿಪುಷ್ಟ ಸುಂದರ ಕಲಾಕೃತಿ ।

ಶಂಕರ ಶಂಕರಿ ಮಾದೇವ-ಲಿಂಗಮಯ್ಯ ಶಂಕರಾ........

ಕಾನಕಾನಹಳ್ಳಿಯ ಸುತ್ತಿನ ಒಂದು ಪ್ರಸಿದ್ಧ ಕಥೆ....

ಅಯ್ಯ ಕಮಲಾವತಿ ಪಟ್ಟಣವೆಂಬುದು
ಕಂಪಿಲ ಎಂಬ ದೊರೆಯು ಆಳುತಾನೆ
ಮಡದಿ ಹೆಸರು ಹರಿಯಾಲ ದೇವಮ್ಮ
ಮಗನ ಹೆಸರು ಸೀತಾಳರಾಮಯ್ಯ

ಕಮಲಾವತಿಯ ಕಂಪಿಲನ ಮಡದಿಯೇ ಹರಿಯಾಲ ದೇವಿ. ಮಗ ಸೀತಾಳ ರಾಮನಿಗೆ ಒಡಹುಟ್ಟನ್ನು ಬಯಸಿ ಪಾರ್ವತಿಯನ್ನು ಕುರಿತು ಘೋರ ತಪವನ್ನೇ ಕೈಗೊಂಡಿದ್ದಳು ಅವಳು. ಹೆಣ್ಣುಮಗಳ ವರವನ್ನೇ ಬೇಡಿದ್ದಳು, ಭಕ್ತಿಗೆ ಪ್ರಸನ್ನಳಾದ ಲೋಕಮಾತೆ ಎಚ್ಚರಿಸಿದಳು—

ಹೆಣ್ಣು ಮಕ್ಕಳ ವರವ ಕೊಟ್ಟರೆ
ಮುಂಡೆಯ ಕಟ್ಟಿದರೆ ತಂದೆಗೆ ಮರಣವು
ಸೀರೆ ಉಟ್ಟರೆ ತಾಯಿಗೆ ಮರಣವು
ಹೆಣ್ಣು ಬೇಕೋ ಗಂಡು ಬೇಕಮ್ಮ !

ಆದರೂ ಹರಿಯಾಲದೇವಿ ಹೆಣ್ಣು ಮಗಳ ವರವನ್ನೇ ಬಯಸಿದ್ದಳು. ಹುಟ್ಟಿದ ಮಗಳನ್ನು ನೀಲವೇಣಿಯೆಂದು ಕರೆದರು. ಅಣ್ಣ ಸೀತಾಳರಾಮ ನೊಡನೆ ಮುದ್ದು ತಂಗಿ ನೀಲವೇಣಿ ಆಡಿ ಬೆಳೆದಳು. ಓದುವ ಮಠಕ್ಕೂ ಹೋಗಿ ಬಂದಳು. ಹನ್ನೆರಡು ವರ್ಷದ ಸುಂದರ ಕನ್ಯೆಯಾದರೂ ಹನ್ನೆರಡು ಮಾರುದ್ದ ಮಂಡೆಯನ್ನು ಭೂಮಿಯ ಮೇಲೆ ಎಳೆದು ನಡೆದಳು, ಬಾಚಿ ಕಟ್ಟ ಲಿಲ್ಲ. ಸೀರೆಯನ್ನೂ ಉಡಲಿಲ್ಲ. ಅವಳ ಚೆಲುವಿಗೆ ಮರುಳಾಗದವರಿಲ್ಲ. ಆವಳ ಜಾಣತನಕ್ಕೆ ಬೆರಗಾಗದವರಿಲ್ಲ. ಓದಿಸುವ ಓಜಯ್ಯನೇ ಕೆಲವೊಮ್ಮೆ ಅವಳ ಸೊಬಗನ್ನು ಕಣ್ಣಲ್ಲಿ ತುಂಬಿಕೊಂಡು ಪರಿತಪಿಸಿದ್ದ. ಇತ್ತ ಸೀತಾಳ ರಾಮನಿಗೆ ಪದ್ಮಾವತಿಯೊಡನೆ ಲಗ್ನವಾಯಿತು. ಅರಮನೆಯಲ್ಲಿ ತಾಯಿ ಹರಿಯಾಲಮ್ಮ ಮಗಳ ಪರಿಗೆ ನಿಟ್ಟುಸಿರು ಬಿಟ್ಟಂತೆಯೇ ಅತ್ತ ಕೈಲಾಸದಲ್ಲಿ ಪಾರ್ವತಿಯ ದೃಷ್ಟಿಯೂ ನೀಲವೇಣಿಯತ್ತ ಹರಿಯಿತು। ತನ್ನ ವರದಲ್ಲಿ ಹುಟ್ಟಿದ ಕಂದನನ್ನು ಕಣ್ಣೆತ್ತಿ ನೋಡಿದ ದೇವಿ ಮರಗಿದಳು ಮನದಲ್ಲಿ। ನೀಲವೇಣಿಯ ಮಂಡೆ ಭೂಮಿಯ ಮೇಲೆ ಎಳೆಯುತ್ತಿದೆ. ನರರ ಪಾದ ಧೂಳು ಮಂಡೆಗೆ ತಗಲುವುದೇ ।

ಹೂವಾಡಗಿತ್ತಿಯ ಯಾಸವ ತಾಳಿದಳು ಪಾರ್ವತಿಯಾದರೆ
ಹೂವಿನ ಕುಕ್ಕೆ ಕೈಯಲಿ ಹಿಡಿದಳು !

ಕೈಲಾಸವನ್ನು ಬಿಟ್ಟು ಕಮಲಾವತಿಗೆ ಬಂದ ಹೂವಾಡಗಿತ್ತಿ 'ಹೂವು–ಹೂವು' ಎಂದು ಸಾರಿದಳು. ಓದುವ ಮಠದಿಂದ ಮರಳುತ್ತಿದ್ದ ನೀಲ ವೇಣಿಯ ಎದುರಾಗಿಯೇ ನಡೆದಳು. ಹೂವಿನ ಆಸೆಗೆ ಮನಸೋತ ನೀಲ ವೇಣಿ ನಿಂತಳು ಕಾತರದ ಕಣ್ಣಿನಲ್ಲಿ. ಹೂವನ್ನು ಕೇಳಲೆಂದೇ ಅವಳು ಬಾಯಿ ತೆರೆವರೆ, ಮಂಡೆಯ ಮೇಲೆ, ಸೀರೆಯ ಮೇಲೆ 'ಧ್ಯಾನ' ಮಾಡಲೆಂದೇ ಹೂವಾಡಿಗಿತ್ತಿ ಹಂಗಿಸಿದಳು–

"ಏನಮ್ಮ ನನ್ನಂಥ ಸ್ತ್ರೀ ಜನ್ಮ। ಪಾರ್ವತಿ ವರದಿಂದ ಹುಟ್ಟಿದ ಮಗಳು ಎಂದು ಭೂಲೋಕವೆಲ್ಲ ಕೊಂಡಾಡುತ್ತಿದೆ. ಹನ್ನೆರಡು ಮಾರುದ್ದ ಮಂಡೆ ಧರಣಿ ಮೇಲೆ ಎಳೆಯುವುದೆ। ಮಾನದ ಪರಿವೆಯಿಲ್ಲ....ಒಂದು ಸೀರೆಗೆ ಗತಿಯಿಲ್ಲವೆ।"

ನೀಲವೇಣಿ ಬೆಚ್ಚಿದಳು ಹೂವಾಡಗಿತ್ತಿಯ ಮಾತಿಗೆ। ತನ್ನ ಸ್ಥಿತಿಗೆ ನಾಚಿ ಕಣ್ಣೀರಿಟ್ಟಳು.

ಹೂವಾಡಗಿತ್ತಿಯ ಮಾತ ಕೇಳಿದಳು ನೀಲವೇಣಿ
ಗೋಳಿಂದು ದುಃಖ ಮಾಡುತಾಳಲ್ಲೊ
ಶಂಕರ ಶಂಕರಿ ಮಾದೇವ... ಲಿಂಗಮಯ್ಯ ಶಂಕರಾ....

ಅರಮನೆಗೆ ಓಡಿ ಬಂದಳು. ಅಂಜುತ್ತ ಅಳುಕುತ್ತ, ಅತ್ತಿಗೆಯ ಪಾದವನ್ನು ಬೇಡಿದಳು. ತಾಯಿಯ ಮಡಿಲನ್ನು ತಬ್ಬಿ ಅತ್ತಳು. ಸೀರೆಯುಡಿಸದೆ ಇದ್ದರೆ, ಮಂಡೆ ಬಾಚದಿದ್ದರೆ ಅರಮನೆಯ ಮುಂದೆ ಪ್ರಾಣ ಕಳೆದುಕೊಳ್ಳುವುದಾಗಿ ಗೋಳಿಟ್ಟಳು, ಹನ್ನೆರಡು ವರ್ಷದ ಮಗಳು ನೀಲವೇಣಿ ಓದುವ ಮಠವನ್ನು ಬಿಟ್ಟು ಅರಮನೆಯಲ್ಲಿರಲಾರಳು. 'ಸಂಗಡಗಾತಿ'ಯರೊಡನೆ ಓದಿ ಬರುವುದೇ ಅವಳ ಬಯಕೆ. ಸೀರೆಯುಡದ, ಮಂಡೆ ಬಾಚದ ಮಗಳನ್ನು ಬೀದಿಯಲ್ಲಿ ಕಳುಹಿಸುವುದೇ ?

'ಬ್ರಹ್ಮನ ಬರಹ'ಕ್ಕೆ ತಲೆಬಾಗಿದಳು ಹರಿಯಾಲಮ್ಮ. ಅತ್ತೆಯ ಬಯಕೆಯಂತೆ ಪದ್ಮಾವತಿ ಕೆಂಡಸಂಪಿಗೆಯ ಎಣ್ಣೆಯಲ್ಲಿ ಮಡಿಯನ್ನು ಬಾಚಿ ಕಟ್ಟಿದಳು. ಸೀರೆ ಉಡಿಸಿ ಅಲಂಕರಿಸಿದಳು. ತಲೆಗೆ ಜಾಜಿಯ ಹೂ ತಂದು ಮುಡಿಸಿದಳು.

ಮಗಳನ್ನು ಕಣ್ತುಂಬ ನೋಡುತ್ತ ನೋಡುತ್ತಲೇ ಮೂರ್ಛೆ ಹೋದಳು ಹರಿಯಾಲದೇವಿ. ಕತ್ತಲು ಕವಿಯಿತು. ನೆಲ ಕಂಪಿಸಿತು. ಭೀಕರ ಬಿರುಗಾಳಿಯೆದ್ದು ಎಲ್ಲರ ಎದೆಯೂ ನಡುಗಿದವು.

ದಂಡಿಗೆ ಹೋದ ಗಂಡನಾದರೆ ಅಲ್ಲೇ
-ಮಡಿದ್ಹೋದ
ಅವರ ತಾಯಿಗೆ ಮಿತ್ತೆ ಆದರು ಒದಗಿ
ಬಂತಲ್ಲ !
ಶಂಕರ ಶಂಕರಿ ಮಾದೇವಾ........

ದಂಡಿಗೆ ಹೋದ ಕಂಪಿಲರಾಯ ಮರಳಲಿಲ್ಲ. ತಾಯಿ ಹರಿಯಾಲ ದೇವಿಯೂ ಕೊನೆಯುಸಿರೆಳೆದಳು. ಪಾರ್ವತಿಯ ನುಡಿ ನಿಜವಾಯಿತು. ನೀಲವೇಣಿ, ಸೀತಾಳರಾಮ ತಬ್ಬಲಿಗಳಾದರು !

ಓದುವ ಮಠವನ್ನು ಬಿಡಲಿಲ್ಲ ನೀಲವೇಣಿ. ತಾಯಿಯಿಲ್ಲದ, ತಂದೆ ಯಿಲ್ಲದ ತಂಗಿ 'ಸಂಗಡಗಾತಿರ' ಜತೆ ಆಡಿ ಬಳಲಿ, ಆ ನೋವನ್ನೆಲ್ಲ ನುಂಗಿ ಕೊಳ್ಳಲೆಂದೇ ಸೀತಾಳರಾಮ ಬಯಸಿದನು. ತಂಗಿಯನ್ನು ಮಠಕ್ಕೆ ಕಳುಹಿಸಿ ದನು, ಅವಳ ಕೋರಿಕೆಯಿಂದಲೇ !

ಮಂಡೆಯನ್ನು ಕಟ್ಟಿ, ಸೀರೆಯನ್ನುಟ್ಟು ಓದುವ ಮಠಕ್ಕೆ ಬರುವಾಗ, ಅದೊಂದು ನಟ್ಟನಡು ಮಧ್ಯಾಹ್ನ, ಸುಟ್ಟ ಶುಕ್ರವಾರ–

ನೀಲವೇಣಿ ಮೈಯನೆರೆದವಳೇ ।
ಶಂಕರ ಶಂಕರಿ ಮಾದೇವಾ........

ಶರಣು ಮಾಡಿ ಮನೆಗೆ ಹೊರಟ ನೀಲವೇಣಿಯ ಮುಖದಲ್ಲಿ ಏನನ್ನೋ ಗುರುತಿಸಿದ ಓಜಯ್ಯ 'ತಬ್ಬಲಿ ಮಗಳಿಗೆ ಬುದ್ಧಿ ವಿವೇಕ ಹೇಳುವ' ನೆಪದಲ್ಲಿ ಹಿಂದೆ ಕರೆದನು ಅಷ್ಟು ದೂರ ಸಾಗಿದ್ದ ಅವಳನ್ನು. ಗುರುವಿನ ಪರಿ ಬದ ಲಾಗಿದೆ, ನಡೆ ಬದಲಾಗಿದೆ! ನುಡಿ ಕಂಪಿಸಿದೆ !

ಅಂಜುತ್ತಂಜುತ್ತಲೇ ಅತ್ತ ಸರಿದಾಗ,
ಬಾಕು ಬಾಕಲ ಹೊಚ್ಚಿ ಬಂದನಲ್ಲೊ
ನೀಲವೇಣಿಯ ಮುಂಗೈಯ ಹಿಡಿದನೊ

ಓದಿಸಿದ ಗುರು ಕೈಬಿಡದೆ ಮಂಚಕ್ಕೆ ಕರೆದಿದ್ದಾನೆ ! ಬೆಚ್ಚಿದ ನೀಲ ವೇಣಿ 'ಧರಣಿಯ ಮೇಲೆ ಬಿದ್ದು ಹೊರಳಿದಳು !' ಗುರುವಿನ ಪಾದವಿಡಿದು ಬೇಡಿದಳು–

ಗುರುವು ನೀನು ಶಿಶುವು ನಾನಯ್ಯೊ
ಗುರುವು ಇಂಥ ಮಾತನಾಡಬಹುದೆ ?

ಓಜಯ್ಯನ ಕಿವಿ ಕಿವುಡಾಗಿತ್ತು ಆ ನುಡಿಗೆ–

ಗುರುವು ಗಿರುವು ಎನ್ನಬೇಡ್ಹೆಣ್ಣೆ
ಗುರುತಿಟ್ಟು ನಿನ್ನ ಇಲ್ಲಿಗೆ ಕರೆದಿವಿನಿ !
ನನ್ನ ಮಂಚಕೆ ಈಗ ಬಾರ್‍ಹೆಣ್ಣೆ

ಗುರುವಿನ ಮುಷ್ಟಿ ಸಡಿಲಲಿಲ್ಲ. ಕಣ್ಣೀರನ್ನು ಮಿಡಿಯುತ್ತ 'ಪರ ಶಿವನ ಮಡದಿ'ಯನ್ನೇ ಬೇಡಿದಳು. ಗುರುವಿಗೆ ಸೆರಗನ್ನು ಹಾಸಿದರೆ ಲೋಕ ಉಳಿಯದು, ಬಿತ್ತಿದ ಬೆಳೆ ಬೆಳೆಯದು. ದೇವ ಮಾನ್ಯರಿಗೆಲ್ಲ ಹೂನೀರು ತಪ್ಪಿ

ಹೋಗುತ್ತದೆ ! ಶಿವ ಶಿವ ಎನ್ನುವವರಿಗೆ ಶಿವಧ್ಯಾನ ಮರೆತು ಹೋಗುತ್ತದೆ. ಕೊಳದಲ್ಲಿ ಹುಟ್ಟುವ ಕೆಂದಾವರೆ ತಲೆಕೆಳಗಾಗುತ್ತದೆ.

"ಮಿಂದು ಮಡಿಯುಟ್ಟು ಅರಮನೆಯಲ್ಲಿ ಚಂದ್ರಶಾಲೆಯಲ್ಲಿರುತ್ತೀನಿ ; ಹನ್ನೆರಡು ಗಂಟೆ ರಾತ್ರಿಗೆ ಬಂದುದಹುದಾದರೆ ನಿಮ್ಮ ಸಂತೋಷವನ್ನು ನೆರವೇರಿಸುತ್ತೇನೆ...."

ನೀಲವೇಣಿಯ ನುಡಿಗೆ ಗುರುವಿನ ಬಿಗಿ ಸಡಿಲಿತು.

ಆಸೆಯಿಂದ ಮುಂಗೈ ಹಿಡಿದಿದ್ದೆ
ಮೋಸ ಮಾಡಿದರೆ ದೋಷ ಬರುತದೆ.

ಗುರುವಿನ ಎಚ್ಚರಿಕೆಯನ್ನು ಹೊತ್ತು ಸಾಗಿದರೂ ನೀಲವೇಣಿ ಚಂದ್ರಶಾಲೆಯ ಕದವನ್ನು ತೆರೆಯಲಿಲ್ಲ. ನೀಲವೇಣಿಯನ್ನು ಕೂಗುತ್ತ ರಾತ್ರಿಯೆಲ್ಲಾ ಬಾಗಿಲನ್ನು ತಟ್ಟಿ ಸೋತ ಓಜಯ್ಯ ಸಿಟ್ಟಿನಿಂದಲೇ, ಸೇಡಿನಿಂದಲೇ ಮನೆಗೆ ಮರಳಿದನು. ಮುಂಗೋಳಿ ಕೂಗಿ, ಮೂಡು ಕೆಂಪೇರುವ ವೇಳೆಗೆ, ಆಡಿದ ನುಡಿಗೆ ತಪ್ಪಿದ್ದಳು ನೀಲವೇಣಿ.

ಕಮಲಾವತಿಯಲ್ಲಿ 'ಪಂಚಾಂಗ ಶಾಸ್ತ್ರ' ಹೇಳುವವನು ತಾನೊಬ್ಬನೇ : ಸೀತಾಳರಾಮ ತಂಗಿ ಮೈನೆರೆದ ನಕ್ಷತ್ರ ಫಲವನ್ನರಿಯಲು ತನ್ನ ಬಳಿಗೇ ಬಂದಾಗ, ಗುಣಿಸಿ ನೋಡಿದ್ದನು ಓಜಯ್ಯ. ಅವಳ ಬದುಕು ಬಂಗಾರ ! ನಕ್ಷತ್ರ ಫಲಗಳನ್ನು ನೋಡಿ ತುಟಿ ಕಚ್ಚಿದನು ಬೆರಗಾಗಿ !

ಒಂದು ಕೋಟಿ ದಂಡಿದ್ರೆ ಏಳು ಕೋಟಿ
ಆಗತಕ್ಕ ನಕ್ಷತ್ರ
ಒಂದು ಕೋಟಿ ದ್ರವ್ಯವಿದ್ದರೆ ಹನ್ನೆರಡು
ಕೋಟಿ ಆಗತಕ್ಕ ಫಲ !

ಪುಟಗಳನ್ನು ತಿರುವಿ ನಿಟ್ಟುಸಿರು ಬಿಟ್ಟನು ಓಜಯ್ಯ. ಹುಬ್ಬುಗಂಟಿಕ್ಕಿ ನಿಷ್ಠುರದ ದನಿಯಲ್ಲಿ ಅಂಜದೆ ನುಡಿದನು, ಪಂಚಾಂಗದ ಫಲಗಳನ್ನು ಮರೆಮಾಚಿ-

ದಂಡುದಾಳಿಯೆ ಮಡಿದು ಹೋಯ್ತದೆ
ಮಂದಿ ಮಾರ್ಬಲ ಮಡಿದುಹೋಯ್ತುದೆ!

ರಾಜ್ಯಕೋಶಗಳನ್ನು ಕಳೆದುಕೊಂಡು ತಿರಿದುಣ್ಣುವ ಪರಿ ಅಣ್ಣನದಾಗುತ್ತದೆ! ಕೋಟಿ ದ್ರವ್ಯವನ್ನು ಚೆಲ್ಲಿದರೂ ಪರಿಹಾರವಿಲ್ಲ. ಅಮಾವಾಸ್ಯೆಯ ರಾತ್ರಿಯಲ್ಲಿ ಮಲಗಿದ ಮಂಚ ಸಹಿತ ಅಗ್ನಿಮೂಲೆಯ ಅರಣ್ಯಕ್ಕೆ ಕೊಂಡು ಹೋಗಿ ಬಿಟ್ಟರೆ ರಾಜ್ಯ ಉಳಿದೀತು ! ಒಂದು ದಿನವಾದರೂ ಹೊರಗಿದ್ದು ದೋಷವನ್ನು ಕಳೆದುಕೊಳ್ಳಬೇಕು !

ಕಾಡಿನಲ್ಲಾದರೂ ಸೇಡನ್ನು ತೀರಿಸಿಕೊಳ್ಳಲು ಹವಣಿಸಿದನು ಓಜಯ್ಯ. ನಡುರಾತ್ರಿಯ ಕತ್ತಲಲ್ಲಿ ನಾಲ್ಕು ಮಂದಿ ಕಟುಕರು ನೀಲವೇಣಿಯನ್ನು ಮಂಚ ಸಹಿತ ಹೊತ್ತು ತಂದರು. ಕೆಂದಾವರೆ ಕೊಳದ ಹೊನ್ನರಳಿ ಮರದ ಕೆಳಗೆ ಬುಡದಲ್ಲಿ ಮಂಚವನ್ನಿಳುಹಿ ಮರಳಿದರು. ಬೆಳಕು ಹರಿದು ಹೂ ಬಿಸಿಲು ಮೈಮೇಲೆ ಆಡಿದಾಗ ನೀಲವೇಣಿ ಅಡವಿಯ ಪಾಲಾದ ತನ್ನ ಪರಿಯನ್ನು ಅರಿತಳು. ಏಕಾಂಗಿಯಾಗಿ ಕಣ್ಣೀರಿಡುವ ಅವಳಿಗೆ ಕಾಡಿನ ಆನೆ, ಹುಲಿ, ಕರಡಿ, ಸಿಂಹಗಳೇ ರಕ್ಷೆಯಾದವು. ಬಿಸಿಲು ಬೀಳದಂತೆ ಏಳು ಹೆಡೆಯ ಸರ್ಪ ಹೆಡೆ ಬಿಚ್ಚಿ ನಿಂತಿತು.

ಕೆಂದಾವರೆಯ ಕೊಳದಲ್ಲಿ ಮಿಂದುಬಂದಳು ನೀಲವೇಣಿ. ಹೊನ್ನರಳಿಯ ಮರದಲ್ಲಿ ಒಂದು ಮೊಗ್ಗು ಬಿಟ್ಟು ಅವಳಿಗೆ ಉಣ್ಣುವ ಅನ್ನವಾಯಿತು. ಅವಳ ನುಡಿಗೆ ತಲೆಬಾಗಿ ಹೊನ್ನರಳಿ ಮರ ಎರಡು ಭಾಗವಾಗಿ ತನ್ನ ಗರ್ಭದಲ್ಲಿ ಅವಳನ್ನು ಬಚ್ಚಿಟ್ಟು ಬಾಗಿಲನ್ನು ಮುಚ್ಚಿತು. ಹಗಲಿನಲ್ಲಿ ಹೊನ್ನರಳಿಯ ಒಡಲು. ಇರುಳಿನಲ್ಲಿ ಹೊರ ಲೋಕದ ಬದುಕು. ನೀಲವೇಣಿ ನಿಸರ್ಗದ ಶಿಶುವಾದಳು.

ರೊಟ್ಟಿ ಬುತ್ತಿಯನ್ನು ಕಟ್ಟಿ ಬೆಟ್ಟವೇರಿ, ಬೆಟ್ಟವಿಳಿದು ಹುಡುಕಿ ಸೋತ ಓಜಯ್ಯನ ಕಣ್ಣಿಗೆ ನೀಲವೇಣಿ ಎಲ್ಲೂ ಕಾಣಲಿಲ್ಲ. ಅಲೆದಲೆದು ದಾರಿ ತಪ್ಪಿ ದೇಶಭ್ರಷ್ಟನಾಗಿ ಎತ್ತಲೋ ಮರೆಯಾಗಿ ಹೋದನು.

* * * *

ಬಂಕಾಪುರಿ ಪಟ್ಟಣದ ನೀಲಶಂಕರ ರಾಜ 'ದಂಡು ದಾಳಿ'ಯೊಡನೆ ಬೇಟೆಗೆ ಬಂದಿದ್ದನು. ಕಾಡಿನಲ್ಲಿ ನೀರಿಲ್ಲದೆ ನೆರಳಿಲ್ಲದೆ ದಂಡೆಲ್ಲ ಬಳಲಿ ದಿಕ್ಕು ದಿಕ್ಕಿಗೆ ಚದುರಿತು. ಅವನ ಬಳಿಯ ಜೂಲುನಾಯಿ ನೀರಿನ ವಾಸನೆಯನ್ನರಿತು, ರಾಜನ ಕೈಯಿಂದ ಕಳಚಿಕೊಂಡಿತು. ಕೆಂದಾವರೆಯ ಕೊಳಕ್ಕೆ ಬಂದು, ನೀರು ಕುಡಿದು, ಕೊಳದಲ್ಲಿ ಈಜಿ ರಾಜನ ಬಳಿಗೆ ಮರಳಿದಾಗ ಹರ್ಷದಿಂದ ಮೈದಡವಿದನು ನೀಲಶಂಕರ ರಾಜ. ದಂಡೆಲ್ಲವೂ ನೀರನ್ನು ಹುಡುಕಲು ಸೋತಾಗ

ತನ್ನ ಪ್ರೀತಿಯ ಜೂಲುನಾಯಿ ಹುಡುಕಿದೆ ! ಮಮತೆಯಿಂದ ಮೈಸವರುವಾಗ ಮಾರುದ್ದ ತಲೆಗೂದಲೊಂದು ಹೊಳೆಯುತ್ತ ಅವನ ಕೈಗೆ ಸುತ್ತಿಕೊಂಡಿತು. ಕೌತುಕದ ಕಣ್ಣಿನಲ್ಲಿ ಆ 'ಮಂಡೆಯರಾಣಿ'ಯನ್ನು ಕಾಣಲೆಂದೇ ಅವನು ಮೇಲೆದ್ದನು. ಜೂಲುನಾಯಿ ದಾರಿ ತೋರಿತು. ಹೊನ್ನರಳಿಯ ಮರದ ಬುಡದಲ್ಲಿ ಪಟ್ಟೆಮಂಚವನು ಕಂಡ ರಾಜ ಅತ್ತ ಬಂದು ಕುಳಿತನು. ತುಸು ಹೊತ್ತಿನಲ್ಲಿಯೇ ನಿದ್ರಿಸಿದನು.

'ಮಧ್ಯ ರಾತ್ರಿ'ಗೆ ಸರಿಯಾಗಿ ಹೊನ್ನರಳಿ ಮರ ಬಾಯಿ ತೆರೆಯಿತು. ಹೊರಗೆ ಬಂದ ನೀಲವೇಣಿ ತನ್ನ ಮಂಚದ ಮೇಲೊಬ್ಬ ಸುಂದರನನ್ನು ಕಂಡು ಬೆರಗಾದಳು. ಕೆಂದಾವರೆಯ ಕೊಳದಲ್ಲಿ ಮಿಂದು ಬಂದಾಗ ಹೊನ್ನರಳಿಯ ಮರದಲ್ಲಿ ಎರಡೂ ಮೊಗ್ಗುಗಳು ಕಳಕಳಿಸುವದನ್ನು ಕಂಡಳು. ಎರಡು ಎಡೆಗಳಲ್ಲಿ ತಾನೊಂದನ್ನು ಸೇವಿಸಿ, ಒಂದನ್ನು ಮಂಚದ ಬಳಿ ಇರಿಸಿ ಬೆಳಗಾಗುವುದರಲ್ಲಿ ಹೊನ್ನರಳಿಯ ಮರವನ್ನು ಸೇರಿಕೊಂಡಳು !

ಬೆಳಗಾಯಿತು ; ಎಚ್ಚರಗೊಂಡನು ನೀಲಶಂಕರ ರಾಜ. ಪಟ್ಟೆಮಂಚದ ಮೇಲೆ ಬಳಿಯಲ್ಲಿಯೇ ತನಗಾಗಿ ಎಡೆಯೊಂದು ಕಾದಿದೆ ! "ದೇವಗನ್ನೆಯೋ, ದಿಬ್ಬಗನ್ನೆಯೋ, ತಾವರೆಗನ್ನೆಯೋ, ಗರುಡ ಗಂಧರ್ವ ಲೋಕದಲ್ಲಿ ನಾಟ್ಯ ಮಾಡುವಂಥ ಸ್ತ್ರೀಯೋ ಕಾಣೆನಲ್ಲ !" ಕೌತುಕದಿಂದ ಕಾದು ಕುಳಿತನು ಮತ್ತೆ ಮರು ರಾತ್ರಿ.

ಕಿರುಬೆರಳಿನ ಉಗುರನ್ನು ಕಡಿದು, ಅದಕ್ಕೆ ನಿಂಬೆಯ ಬಣ್ಣನ್ನು ಸಿಕ್ಕಿಸಿ, ಎಚ್ಚರ ಇದ್ದರೂ, ನಿದ್ರಿಸುತ್ತಿರುವಂತಿದ್ದ ನೀಲಶಂಕರರಾಜನನ್ನು ಮತ್ತೆ ಕಂಡಳು ನೀಲವೇಣಿ. ಕೆಂದಾವರೆಯ ಕೊಳದಿಂದ ಮಿಂದೆದ್ದು ಬರುವಲ್ಲಿ ಮಂಚದ ಮೇಲೆ ಎದ್ದುಕುಳಿತ ರಾಜ ಮುಗುಳ್ನಗೆಯಿಂದ ಸ್ವಾಗತಿಸಿದನು. ಲಗ್ನವಿಲ್ಲದ ರಾಜನನ್ನು ವರಿಸಲು ನೀಲವೇಣಿ ಸಮ್ಮತಿಸಿದಳು. 'ಮಂಡೆ ರಾಣಿ' ಯೊಡನೆ ವಿಜೃಂಭಣೆಯಿಂದ ನೀಲಶಂಕರರಾಜನ ವಿವಾಹ ಬಂಕಾಪುರಿಯಲ್ಲಿ ನೆರವೇರಿತು.

ನೀಲಶಂಕರರಾಜನ ಮಂತ್ರಿಗೊಬ್ಬ ಮಗ ದುಷ್ಟಬುದ್ಧಿ. ಮಂಡೇರಾಣಿಯ ರೂಪಕ್ಕೆ ಮರುಳಾಗಿ ಹೊಂಚು ಹಾಕಿದ್ದನು, ಒಂದಲ್ಲ ಒಂದು ದಿನ ಅವಳನ್ನು ಸಂಧಿಸಲು. 'ಚಮಾಲತೋಟಕ್ಕೆ' ಮಡದಿನೀಲವೇಣಿಯೊಡನೆ, 'ದಂಡುದಾಳಿ' ಯೊಡನೆ ಹೊರಟ ರಾಜ, ವಿಹಾರಕ್ಕಾಗಿ. ತಂದೆಗೆ ಬದಲಾಗಿ ದುಷ್ಟಬುದ್ಧಿಯೇ

ಸೇವೆಗೆ ಸಿದ್ಧನಾಗಿ ಹೊರಟ. ಚಂದ್ರಾಯುಧವನ್ನು ತರಲಾಗಿ ನಡುದಾರಿಯಿಂದ ನೀಲಶಂಕರರಾಜ ಹಿಂದಿರುಗಿದಾಗ ದುಷ್ಟಬುದ್ಧಿ ಬೇರೊಂದು ದಿಕ್ಕಿನಲ್ಲಿ ದಂಡನ್ನು ತಿರುಗಿಸಿದ. ಕತ್ತಲಾಯಿತು, ಅಲ್ಲೆಲ್ಲೋ ವನಪ್ರಾಂತದಲ್ಲಿ ಬೀಡು ಬಿಟ್ಟರು. ತುಂಬು ಗರ್ಭಿಣಿ ನೀಲವೇಣಿಯ ರಕ್ಷಣೆಗೆ ತಾನೇ ನಿಂತನು ದುಷ್ಟಬುದ್ಧಿ !

ನಡುರಾತ್ರಿಯಲ್ಲಿ ಮುಂಗೈ ಹಿಡಿದ ದುಷ್ಟಬುದ್ಧಿಯನ್ನು ಕಂಡು ಹೌಹಾರಿ ಮೇಲೆದ್ದಳು ನೀಲವೇಣಿ. ಅಲ್ಲಿಯೇ ಹಡೆದ ಮಗುವನ್ನು ತೊರೆದು ಮಿಂದು ಬರುವ ನೆವವೊಡ್ಡಿ ಆಚೆಗೆ ಸರಿದ ಅವಳ ಸೆರಗನ್ನು ಹಿಡಿದು ಕಾದು ಕುಳಿತ ದುಷ್ಟ ಬುದ್ಧಿ. ಮಂಡೆ ರಾಣಿ ಬರಲಿಲ್ಲ. ರಭಸವಾಗಿ ಎಳೆದಾಗ ಕಟ್ಟಿ ಹೋಗಿದ್ದ ಮೆಳೆಯೇ ಕಿತ್ತು ಬಂದಿತು, ಸೀರೆಯೊಡನೆ. ಕವಿದ ಕತ್ತಲಲ್ಲಿ ಎಲ್ಲಿಯೋ ಕರಗಿ ಹೋಗಿದ್ದಾಳೆ. ಮಗುವನ್ನೇ ಕೈಗೆತ್ತಿಕೊಂಡು 'ಚಂದ್ರಾಯುಧ'ದಿಂದ ಕಡಿದು ಚೂರುಗಳನ್ನು ದಂಡಿನ ಮೇಲೆಸೆದು ಅಬ್ಬರಿಸಿದನು ಭಯಗೊಂಡವನಾಗಿ. ದಂಡೆಲ್ಲ ನಡುಗಿ ಮೇಲೆದ್ದಾಗ ನಡುಗುತ್ತಲೇ ಸಾರಿದನು ದುಷ್ಟಬುದ್ಧಿ.

"ದೊರೆಯಾದರೊ ಮಂಡೆರಾಣಿಯನ್ನು ತಂದಿದ್ದನು. ತಾನ್ಹೆತ್ತ ಮಗುವನ್ನು ತಾನೆ ತಿಂದು ತೇಗಿ ವಿಕಾರ ರೂಪ ತಾಳಿ ನಿಂತಿದ್ದಳು ಅವಳು. ಮಂಡೆ ರಾಣಿಯಲ್ಲ ರಾಕ್ಷಸಿ....ರಾಕ್ಷಸಿ...."

'ದಂಡು ದಾಳಿ ಮಂದಿ ಮಾರ್ಬಲ' ಎಲ್ಲ ಬೆದರಿ ಓಡಿತು ಆ ನೆಲೆಯಿಂದ. ನೀಲಶಂಕರ ರಾಜ ನೀಲವೇಣಿಯ ಪರಿಯನ್ನರಿತಾಗ ನಿಟ್ಟುಸಿರುಬಿಟ್ಟನು–

ರಾಕ್ಷಸಿಯಲ್ಲ, ಪಾರ್ವತಿಯ ವರದಿಂದ ಹುಟ್ಟಿದ ಹೆಣ್ಣು ಮಗಳು. ನೀರಿನಲ್ಲಿ ನಿಂತು ಭಾಷೆ ಮಾಡಿದ್ದಾಳೆ !

"ರಾಣಿಯನ್ನರಸುತ್ತ ಹಂಬಲಿಸುತ್ತ ಸಾಗಿದನು ತೋಚಿದ ದಾರಿಯಲ್ಲಿ."

ಬಲ್ಲಾಳ ಪಟ್ಟಣದ ಮಾರೇಗೌಡ ನೀಲವೇಣಿಗೆ ಆಶ್ರಯ ನೀಡಿದ್ದ. ಮುಂಜಾವದಲ್ಲಿ ಮೆಳೆಯ ಮರೆಯಲ್ಲಿ ಮುದ್ದು ಕುವರಿಯನ್ನು ಕಂಡು, ಮಕ್ಕಳಿಲ್ಲದ ತಾನು ತನ್ನ ಮಗಳೆಂದೇ ಅವಳನ್ನು ಭಾವಿಸಿದ; ಆದರೇನು, ಅವನ ಮನೆಗೊಮ್ಮೆ ನುಗ್ಗಿದ ನಾಲ್ಕು ಮಂದಿ ಕಳ್ಳರು ಮಂಚದ ಮೇಲೆ ಮಲಗಿದ್ದ ನೀಲವೇಣಿಯನ್ನು ಮುತ್ತಿನಗೊಂಬೆಯೆಂದೇ ಬಗೆದು, ಮಂಚ ಸಹಿತ ಅವಳನ್ನು ಕಾಡಿಗೆ ಸಾಗಿಸಿದರು. ಅಲ್ಲೊಂದು ಗವಿಯಲ್ಲಿ ಮಂಚವನ್ನು ಇಳಿಸಿದಾಗ,

ನೀಲವೇಣಿ ಎಚ್ಚರಗೊಂಡಳಲ್ಲ !
ಕಣ್ಣ ಬಿಟ್ಟು ಕಳ್ಳರ ಕಂಡಳಲ್ಲ
ಅಯ್ಯೊ ಗೋಳೆಂದು ದುಕ್ಕ ಮಾಡುತ್ತ್ಯಳಲ್ಲ.

ನೀಲವೇಣಿ ಗೊಂಬೆಯಲ್ಲ, ಹೆಣ್ಣೆಂದು ತಿಳಿದ ಕಳ್ಳರು ಕಾದಾಡಿದರು, ಅವಳನ್ನು ಹೆಂಡತಿಯಾಗಿ ಪಡೆಯಲು. ಮೊದಲು 'ತಾಲಿ'ಯನ್ನು ತಂದವನೇ ತನ್ನ ಪತಿ ಎಂದ ನೀಲವೇಣಿಯ ಮಾತಿಗೆ ಒಪ್ಪಿದ ಕಳ್ಳರು ಬಲ್ಲಾಳಪಟ್ಟಣಕ್ಕೆ ಓಡಿದರು, ಮತ್ತೆ ಮರಳುವಾಗ ದಾರಿಯಲ್ಲೊಬ್ಬ 'ಸರದಾರ' ತೇಜಿಯನ್ನೇರಿ ತಮ್ಮತ್ತಲೇ ಬರುವುದನ್ನು ಕಂಡು ಹೆದರಿ ಓಡಿದರು. ಗುಹೆಗೆ ಬಂದಾಗ ನೀಲವೇಣಿ ಅಲ್ಲಿರಲಿಲ್ಲ. 'ಬಟ್ಟೆ ಬರೆ, ಕಟ್ಟಿದ್ದ ತೇಜಿ' ಯಾವುದೂ ಇರಲಿಲ್ಲ.

ಭೀಮಾವತಿ ಪಟ್ಟಣಕ್ಕೆ ಪುರುಷ ವೇಷದಲ್ಲೇ ಬಂದ ನೀಲವೇಣಿಯ ಕೊರಳಿಗೆ ಪಟ್ಟದಾನೆ ಮಾಲೆಯನ್ನು ಹಾಕಿತು. ಭೀಮರಾಜನ ಮಗಳು ಮಾಣಿಕದೇವಿಯನ್ನು ವರಿಸಿ, ರಾಜ್ಯಸೂತ್ರವನ್ನು ಹಿಡಿಯಲು ತನ್ನ ವ್ರತ ಮುಗಿಯುವವರೆಗೆ ಅವಧಿಯನ್ನು ಕೇಳಿದಳು. ಅನ್ನಸತ್ರವೊಂದರಲ್ಲಿ ತನ್ನ 'ನಿಜರೂಪ'ದ ಚಿತ್ರಪಟವೊಂದನ್ನು ಬರೆಸಿ, ಕಾವಲು ಹಾಕಿದಳು. ಅದನ್ನು ಕಂಡು ಕಣ್ಣೀರಿಟ್ಟವರನ್ನು ತನ್ನೆಡೆಗೆ ಕರೆತರಲು ಹೇಳಿದಳು.

ಕಾಡನ್ನೆಲ್ಲ ಸುತ್ತಿ, ಊರೂರುಗಳನ್ನು ಅಲೆದು ಓಜಯ್ಯ ಅನ್ನಸತ್ರಕ್ಕೆ ಬಂದನು. ಕೆಲವೇ ದಿನದಲ್ಲಿ ದುಷ್ಟಬುದ್ಧಿಯೂ ಚಿತ್ರಪಟದ ಮುಂದೆ ನಿಂತು ಕಿಡಿ ಕಾರಿದನು. ಮರುದಿನವೇ ನಾಲ್ಕು ಮಂದಿ ಕಳ್ಳರೂ ನೀಲವೇಣಿಯ ಚಿತ್ರ ವನ್ನು ನೋಡಿ ಕೋಪದಿಂದ ಆರ್ಭಟಿಸಿದರು. ಎಲ್ಲರನ್ನೂ ಬಂಧಿಸಿ ಸೆರೆಮನೆಗೆ ಕೂಡಿದರು ಕಾವಲಿನ ಭಟರು !

'ನೀಲವೇಣಿ'ಯನ್ನು ಮರುದಿನ ಮನೆಗೆ ಕರೆದೊಯ್ಯಲು ಸೀತಾಳರಾವ ಪದ್ಮಾವತಿ ಇಬ್ಬರೂ ಬಂದಿದ್ದರು ಕಾಡಿಗೆ. ಎಲ್ಲಿಯೂ ಅವಳ ಸುಳಿವನ್ನೇ ಅರಿಯದೆ ರಾಜ್ಯಕೋಶವನ್ನು ತೊರೆದು ಅರಸುತ್ತಾ ಭೀಮಾವತಿಗೆ ಬಂದು ಚಿತ್ರಪಟವನ್ನೊಮ್ಮೆ ಕಂಡು ಕಣ್ಣೀರಿಟ್ಟರು. ರಾಣಿಯನ್ನು ಹುಡುಕುತ್ತಾ ಬಳಲಿ ಬಂದ ನೀಲಶಂಕರರಾಜ ಚಿತ್ರಪಟವನ್ನು ತಬ್ಬಿ ಗೋಳಿಟ್ಟನು. ಮಗಳನ್ನು ಹುಡುಕುತ್ತ ಬಂದ ಮಾರೇಗೌಡ ಚಿತ್ರಪಟವನ್ನು ಕಂಡು ಕಂಬನಿ ಮಿಡಿಯುತ ಮೇಲೇಳಲಿಲ್ಲ.

ಪುರುಷ ರೂಪವನ್ನು ತೊರೆದ ನೀಲವೇಣಿ ಅನ್ನಸತ್ರಕ್ಕೆ ತಾನೆ ನಡೆದು ಬಂದಳು. ಅಣ್ಣ ಸೀತಾಳರಾಮನಿಗೆ, ಅತ್ತಿಗೆ ಪದ್ಮಾವತಿಗೆ, ಪತಿ ನೀಲ ಶಂಕರ ರಾಜನಿಗೆ, ರಕ್ಷಿಸಿದ ತಂದೆ ಮಾರೇಗೌಡನಿಗೆ ಅಡಿಮುಟ್ಟಿ ವಂದಿಸಿದಳು. ಮಾಣಿಕ ದೇವಿಯನ್ನು ನೀಲಶಂಕರರಾಜನೇ ಲಗ್ನವಾದನು.

ನೀಲವೇಣಿಯ ಕಷ್ಟಗಳೆಲ್ಲ ಪರಿಹಾರ ಆದವು. ಅವಳನ್ನು ಕಾಡಿದ ದುಷ್ಟರೆಲ್ಲ ಶೂಲವನ್ನೇರಿದರು. ನೀಲಶಂಕರರಾಜರ ನೆರವಿನಿಂದ ಸೀತಾಳ ರಾಮ ಕಳೆದುಕೊಂಡಿದ್ದ ರಾಜ್ಯವನ್ನು ಮತ್ತೆ ಪಡೆದನು.

ಕಷ್ಟದಿನಗಳ ಕಳೆದು
ಸುಖದಿ ಬಾಳುತಿರುವರು ವಿಧಿಯೇ....
ಶಂಕರ ಶಂಕರಿ ಮಾದೇವ....ಲಿಂಗವಾಯ್ಯ



# ಆ ಹೆಣ್ಣ ನಾನು ತರುತೀನಿ

'ಜುಂಜಪ್ಪನ ಕಾಣಿಕೇ....ಜುಂಜಪ್ಪನ ಕಾಣಿಕೇ....'

ಊರೂರು ಮೇಲೆ ಸಾರುತ್ತ ಬರುತ್ತಾರೆ ಗೊಲ್ಲರ ಜುಂಜಪ್ಪನ ಭಕ್ತರು. ಮನೆಮನೆಯ ಬಾಗಿಲಿಗೆ ಅವರು ಬರುವವರಲ್ಲ ; ಭಿಕ್ಷೆಗೆ ಬಂದವರೂ ಅಲ್ಲ, ಎಣ್ಣೆಯ ಗಡಿಗೆಯ ಹರಕೆಯ ಹಣವನ್ನು ಅರ್ಪಿಸಲಾಗಿ ನಾವೇ ಹತ್ತಿರಕ್ಕೆ ಕರೆಯಬೇಕು! ಜುಂಜಪ್ಪನ ಗಣೆಯನ್ನು ಹೆಗಲಲ್ಲಿ ಹೊತ್ತ ಅವರೇ ಕಾಣಿಕೆಯವರು.

"ಸ್ವಾಮಿ ಜುಂಜಪ್ಪ–ಹರಿಯೊ ಹಾವಿನ ಗಂಡ
ಉರಿಯೊ ಕಿಚ್ಚಿನ ಗಂಡ"

–ಹರಸುತ್ತಾರೆ. ಕುಲಸ್ವಾಮಿ ಜುಂಜಪ್ಪನನ್ನುನೆನೆದು, ಅನನ್ಯಭಕ್ತಿಯಿಂದ ಕಣ್ಮುಚ್ಚಿ ಮೊರೆಯಿಡುತ್ತಾರೆ.

'ಅವರ ಹೊಲದಲ್ಲಿ ಮನೆಯಲ್ಲಿ ಮಕ್ಕಳಲ್ಲಿ ಮರಿಯಲ್ಲಿ ಹೋದ್ತಾವು, ಬಂದ್ತಾವು, ಕುರೀನಲ್ಲಿ, ದನೀನಲ್ಲಿ, ಹಾವು, ಚೇಳು ಹುಳಹುಪ್ಪಟೆಯಾಗಿ ಏನಾರ ಕಂಡೀಯಪ್ಪಾ....ನಿನ್ನ ಕಾಣಿಕೆ ಆಗ್ತ್ಯಾದಪ್ಪಾ....ಕಾಪಾಡಪ್ಪಾ....ಕಾಪಾಡೂ....'

–ಮತ್ತೆ ಮುಂದೆ ಸಾಗುತ್ತಾರೆ.

ಕಾಣಿಕೆಯವರನ್ನು ತಡೆದು ಕೇಳಿ. ತನ್ನದು ಹಾಗಲವಾಡಿ ಎಂದೇ ಅವರ ಉತ್ತರ. ತುಮಕೂರು ಜಿಲ್ಲೆಯ ಯಾವುದೋ ಹಟ್ಟಿ ಅವನದಾಗಿರಬಹುದು. ಆದರೆ ಜುಂಜಪ್ಪನ ನೆಲೆ ಹಾಗಲವಾಡಿಯ ಹೆಸರನ್ನು ಹೇಳಿದಾಗಲೇ ತನಗೆ, ತನ್ನ ಗಣೆಗೆ, ತನ್ನ ಹರಕೆಗೆ ಬೆಲೆ ಎಂಬುದನ್ನು ಅವನೂ ಬಲ್ಲ. ಜುಂಜಪ್ಪನ ಹೆಸರಿನಲ್ಲಿ ಹೊಟ್ಟೆ ಹೊರೆಯುವವರು ಹಲವು ಮಂದಿ. ಆದರೂ ಅವರಲ್ಲಿ ಕೆಲವರು ಜುಂಜಪ್ಪನನ್ನು ಬಲ್ಲರು ಕೆಲವರು ಆ ಮಹಾಮಹಿಮನ ಕಥೆಯನ್ನೂ ಹಾಡಬಹುದು! ಆದರೆ, ಅವರನ್ನು ಒಲಿಸಿಕೊಂಡು ಹೇಳಿಸಿ, ಕೇಳುವ ಜಾಣ್ಮೆ ಮಾತ್ರ ನಮ್ಮದಾಗಬೇಕು.

ಚಿಕ್ಕನಾಯ್ಕನಹಳ್ಳಿಯ ಆಚೆಯ ಬಡಗಣ ಗಿರಿಶ್ರೇಣಿಯ ಮಡಿಲಲ್ಲಿ ಪುರಾತನ ನೆಲೆ ಹಾಗಲವಾಡಿ, ಅಲ್ಲಿಂದ ಪಡುವಣ ಕಣಿವೆಯಲ್ಲಿ ಒಂದೂವರೆ ಮೈಲಿ ಕವಿದ ತೋಟಗಳ ನಡುವೆ ಸಾಗಿದರೆ ಜುಂಜಪ್ಪನ ಹಟ್ಟಿ! ಏಳುಗುಬ್ಬಗಳ ನಡುವೆ

ಜುಂಜಪ್ಪನ ಗುಬ್ಬ ಎದ್ದು ತೋರುತ್ತದೆ.

ದೀವಳಿಗೆಯ ಒಂದು ತಿಂಗಳ ಜಾತ್ರೆಗೆ ಬಂದವರು ಬಲ್ಲರು 'ಜುಂಜಪ್ಪನ ದೀಪ ಏರುವ ಮಹಿಮೆ'ಯನ್ನು. ನಿಸರ್ಗದ ಬೆನ್ನಿನಲ್ಲೇ ಹಬ್ಬಿರುವ ಸುರಮ್ಯ ಕಥೆ ಜುಂಜಪ್ಪನದು ಎರಡು ಮೂರು ರಾತ್ರಿಯ ಸುವಿಸ್ತಾರ ಕಥಾನಕ.... ಎಷ್ಟೋ ವರ್ಷಗಳ ಹಿಂದೆ ಸಂದು ಹೋದ ಜುಂಜಪ್ಪನ ಮಹಿಮಾವಿಶೇಷ ವನ್ನು ಕಣ್ಣೆದುರಿಗೆ ಕಡೆಯುವ ಪವಾಡ....ವಿಶಿಷ್ಟವಾದ, ಗಣೆಯ ಮಂಜುಳ ನಿನಾದದ ಹಿಮ್ಮೇಳದಲ್ಲಿ ಅಪೂರ್ವವಾದ ಧಾಟಿಯಲ್ಲಿ ಹಾಡುವ ಆ ಕಥೆಯನ್ನು ಕೇಳುವುದೊಂದು ಮಹಾ ಸೌಭಾಗ್ಯ....

'ಜುಂಜಯ್ಯ ಬಾರೊ ಜುಂಬಪ್ಪ ದೊರೆ ಬಾರೊ
ತಾಯಿ ಚಿನ್ನವ್ವೆ ಮಗ ಬಾರೋ'

ಜುಂಜಪ್ಪನೇ ಬಂದು ಮೈದುಂಬಬೇಕು ಕಥೆಗಾರನಿಗೆ....

ತಾಯಿ ಚಿನ್ನವ್ವೆಯ ಮಗ ಮುದ್ದು ಜುಂಜಪ್ಪ. ತಂದೆ ಕೆಂಪನಮಲ್ಲೇ ಗೌಡ. ಜುಂಜಪ್ಪನ ಮುತ್ತಾತ ಪೂಜಾರಿ ಕೆಂಡಪ್ಪ, ಅವನ ಮಗನೇ ಕೆಂಗುರಿ ಮಲ್ಲೇಗೌಡ. 'ತಾಳು ಗತೆ' ಮುಂದಿನ ಸುದೀರ್ಘ ಕತೆಯ ಅಡಿಗಲ್ಲು.

ಹಟ್ಟಿಯ ಹುಡುಗರೊಡನೆ ಸೀಮೆಯ ಮೇಲೆಲ್ಲ ದನಕಾಯುತ್ತ, ಅಡ್ಡೆ ಯಲ್ಲಿ ಹಾಲನ್ನು ಹೊತ್ತು ಬರುವ ಗೊಲ್ಲರ ಚೆಲುವ ಕೆಂಗುರಿ ಮಲ್ಲೇ ಗೌಡನನ್ನು ತಡೆದಿದ್ದಳು ಬೇಡರ ಹುಡುಗಿ. ತನಗೊಬ್ಬ ಯೋಗ್ಯ ವರನನ್ನು ಕಾಣದೆ ದೇಶವನ್ನೆಲ್ಲ ಸುತ್ತಿದ್ದ ಅವಳು ಕಾಡಿದಳು ತನ್ನನ್ನು ವರಿಸೆಂದು. ಮುನಿದ ಗೌಡ ಸೊಂಟದ ಚಿನ್ನದ ಬಾರುಕೋಲಿಂದ ಹೊಡೆದಟ್ಟಿದ, ಮುಂದಲೆ ಹಿಡಿದು, ಮಡಿ ಬಟ್ಟೆಯ ಹಾಲು ಅಡ್ಡೆಯ ಗೊಲ್ಲಕುಲದ ತನ್ನನ್ನು ತಡೆಯುವುದೇ ಆ ಬೇಡತಿ ?

ಆದರೇನು ಸುದ್ದಿ ಹಟ್ಟಿಯನ್ನು ಮುಟ್ಟಿತು. ಗೊಲ್ಲಗೌಡಗಳೆಲ್ಲ ಮುನಿ ದೆದ್ದರು. ಹದಿನಾರರ ಹರೆಯದ ಮಗನಿಗೊಂದು ಹೆಣ್ಣು ನೋಡದೆ ಮೈ ಮರೆ ತಿದ್ದಾನೆ ಪೂಜಾರಿ ಕೆಂಡಪ್ಪ ! ಮುಂದಾದ ಅನರ್ಥವೋ ಇನ್ನಾವ ಅನಿಷ್ಟವೊ....ಗೊಲ್ಲಕುಲಕ್ಕೆ ಕೆಟ್ಟ ಹೆಸರು.

ಹಿರೇಹಟ್ಟಿಯ ಗಾರೆಚಾವಡಿಯಲ್ಲಿ ಕುಳಿತು ಆಲೋಚಿಸಿದರು ಅರವತ್ತು ಮನೆಯ ಅಣ್ಣ–ತಮ್ಮಂದಿರು ಕೆಂಡಪ್ಪನನ್ನು ಹುಡುಕಿಕೊಂಡೇ ಹೋದರು.

ಚಿತ್ರ ದೇವರ ಪೂಜೆಯನ್ನು ಮುಗಿಸಿ ಎದುರಿಗೇ ಬಂದ ಕೆಂಡಪ್ಪ ಬೆದರಿದ ಕುಲದವರ ಮಾತಿಗೆ....

"ನೀನು ಲಗ್ನ ಮಾಡುವೆಯೋ, ಇಲ್ಲವೇ ನಾವೇ ಮಾಡಬೇಕೋ !"

ಸೋಮವಾರ ಮಧ್ಯಾಹ್ನ ಹನ್ನೆರಡು ಗಂಟೆಗೆ, ಕರಗ ಹೊತ್ತು ವೀಳ್ಯದ ಶಾಸ್ತ್ರಕ್ಕೆ, ಕಳ್ಳೇರ ಹಟ್ಟಿಗೆ ಹೊರಡಿಸಲು ನಿರ್ಧರಿಸಿದ ಪೂಜಾರಿ ಕೆಂಡಪ್ಪ. ಕುಲದವರು ಹರ್ಷಗೊಂಡರು !

ಹೆಣ್ಣಿಗೆ ಪಯಣ ಮಾಡುವಾಗ ಕಂಬದ ಗೌಳಿಯೇಕೋ ನುಡಿದವು. ಜನ ನಿಂತರೂ ಕೆಂಡಪ್ಪ ನಿಲ್ಲಲಿಲ್ಲ. ಮುಂದೆ ಏಳು ಕಟ್ಟಿನ ಸೌದೆಯ ಹೊರೆ ಎದುರಾಯಿತು, ದಾರಿ ನಡೆದಂತೆ ಒಂಟಿ ಹರವಿಯ ಹೆಣ್ಣು ಎದುರಿಗೇ ಬಂದಳು. ಒಂಟಿ ಹುಲ್ಲೇಕರು ಚಿಮ್ಮಿ ಬಂದಿತು. ಲೆಕ್ಕಿಸಲಿಲ್ಲ ಕೆಂಡಪ್ಪ ಯಾವುದನ್ನೂ. ಸಾಗಿಯೇ ಸಾಗಿದನು.

'ಆಗ ನೋಡಯ್ಯೋ........
ಕಾರೆ ಗಿಡದಲ್ಲಿರುವ ಕಾಳನಾಗ ಸರ್ಪ
ಹಕ್ಕಿ ಗಿಡದಲ್ಲಿರುವ ಎಳ ನಾಗಸರ್ಪ
ಹುತ್ತದೊಳಗಿರುವ ಸತ್ಯವುಳ್ಳ ಸರ್ಪ

ಜೊತೆಗೂಡಿ, ಎದುರಾಗಿ ಮೂರು ಹೆಡೆ ಬಿಚ್ಚಿ ನಿಂತವು. ಕುಲದವರು ಬೆದರಿ ಹೌಹಾರಿದರು. ಮನೆದೇವರೇ ಎದುರಾಗಿದ್ದಾನೆ ಆ ರೂಪಿನಲ್ಲಿ ! ಕೆಂಡಪ್ಪ ಜಗ್ಗದೇ ಸಾಗಿದಾಗ ಚಿತ್ತರಸ್ವಾಮಿ ಪಟ್ಟದ ಕುದುರೆಯೇರಿ ತಾನೇ ಬಂದನು ಪೂಜಾರಿ ಕೆಂಡಪ್ಪನಿಗೆ ಅಭಿಮುಖವಾಗಿ !

ಕೊಟ್ಟ ಮಾತಿಗೆ ತಪ್ಪಲು ಒಪ್ಪಲಿಲ್ಲ ಕೆಂಡಪ್ಪನ ಮನ ! ತಾನಾದರೂ ಸಾಯಲಿ ತನ್ನ ಮಗನಾದರೂ ಸಾಯಲಿ ಆ ಹೆಣ್ಣನ್ನು ತರುವ ಛಲ ಅವನ ದಾಯಿತು ! ಮನೆಸ್ವಾಮಿ ಎಚ್ಚರಿಸಿದನು.

"ಅಯ್ಯ ಭಾಗ್ಯದ ಮನೆಗೆ ಬಲಗಾಲ ಮುಂದಾಗಿ ಬಂದ ಗಳಿಗೇಲಿ ಎಲ್ಲ ಸಣ್ಣ ಮರಳಾಗಿ ಹೋಗುತದೇ ! ಹನ್ನೆರಡು ಹೊನ್ನ ಕಣಜವೂ ಮಣ್ಣಾಗಿ ಹೋಗುತ್ತದೆ. ದೊಡ್ಡ ಬರವೇ ಬರುತದೆ. "ಆ ಹೆಣ್ಣ ನೀನು ತರಬೇಡ ।"

ಕೆಂಡಪ್ಪ ತಲೆಯೊಗೆದನು—

"ನಾನಾರ ಸಾಯಲಿ ನನ್ನ ಮಗನಾರ ಸಾಯಲಿ
ಆ ಹೆಣ್ಣ ನಾನು ತರುತೀನಿ"

ಚಿತ್ತರ ದೇವರು ಪಕ್ಕಕ್ಕೆ ಸರಿದು ಕರಗಿದನು. ಹೆಣ್ಣು ಗೊತ್ತಾಯಿತು ಕೆಂಗುರಿ ಮಲ್ಲೇಗೌಡನಿಗೆ. ಹೆಣ್ಣಿನ ಮನೆಯಿಂದ ಗಂಡಿನ ಮನೆಗೆ ಹಸಿರ ಚಪ್ಪರ ! ಚಪ್ಪರಕ್ಕೆಲ್ಲ ಮುತ್ತು, ವಜ್ರ, ಆರು ಸಾವಿರ ಜನ ಧಾರೆ ಹೊಯ್ದು, ಇನ್ನಾರು ಸಾವಿರ ಅಣಿಯಾಗುತ್ತಿದೆ ! ಅಣಿಯಾ....ಗು....ತ್ತಿದೆ....ವಿಚಿತ್ರ ಶಬ್ದ ; ಚೀರಾಟ. ಬೆದರಿ ಬೆಪ್ಪಾಗಿ ಸೊಪ್ಪಾಗಿ ನೋಡಿದರು ಜನ ತಮ್ಮ ಕಣ್ಣೆದುರೇ ! 'ಚಿಟ್ಟಳ್ಳು' ಸಿಡಿದಂತೆ ಸಿಡಿದು ಸಾವಿರ ಹೋಳಾಯಿತು ಪೂಜಾರಿ ಕೆಂಡಪ್ಪನ ತಲೆ !

ಆಗ ಶ್ರೀ ಹರಿಯೇ ನಾರಾಯಣ—
ಅಯ್ಯ ಚಪ್ಪರವ ಕಿತ್ತು ಚೊಟ್ಟವನೆ ಕಟ್ಟಿದರು !
ಅಯ್ಯ ಮೂಡಲ ದಿಕ್ಕಿಗ್ಹೋಗಿ ಕಿಚ್ಚನೆ ಕಾಣಿಸಿದರು !
ಅಯ್ಯ ಶಿವಗೋಳ ಮಾಡುತಾರೆ ಚಿಂತೆ ಮಾಡುತಾರೇ !

ಅಜ್ಜೀರ ಕಂಬವ್ವನ ಜೊತೆ ಲಗ್ನವಾಯಿತು ಮಲ್ಲೇಗೌಡನಿಗೆ! ಕಿರಗಂಚಿ, ಮರಿಗಂಚಿಯ ವೇಳೆಗೆ ಮನೆಸ್ವಾಮಿ ಚಿತ್ತಯ್ಯ ಮತ್ತೆ ಕಾಣಿಸಿಕೊಂಡ. ಯಾರನ್ನೂ ಕರೆಯಲಿಲ್ಲ. ಕಳಿಸಲಿಲ್ಲ. ಕಳಿಸಿದರೆ ಎಲ್ಲರಿಗೂ ಪೂಜಾರಿಯ ಕತೆಯೇ.. .....

ಜನ ಸರಿದರು. ಬಿಕೋ ಎಂದಿತು ಮದುವೆಯ ಮನೆ. ಅಜ್ಜೀರ ಕಂಬವ್ವ ಒಳಗೆ ಕಡೆಕಂಬವನ್ನು ತಬ್ಬಿದಳು. ಹೊರಗೆ ಕೆಂಗುರಿ ಮಲ್ಲೇಗೌಡ ಕುಳಿತಲ್ಲಿಯೇ ಕುಳಿತನು. ಗೌರಸಂದ್ರದ ಅಕ್ಕಮಾರಿ ಬಂದು ಆರು ಸಾವಿರ ಕೇರಿ, ಆರು ಸಾವಿರ ಬೀದಿಯನ್ನು ಕೈಗೆ 'ಹಗ್ರ' ಹಾಕಿ ತಿರುಗಿ ಮನೆಯ ಮುಂದೆ ಸುಳಿದು ತಿಂಡಿಯನು ಬೇಡಿದಳು. ಯಾರೂ ಕೊಡದೆ, ಮದುವೆಯ ಮನೆಯತ್ತ ಕಳುಹಿದರು. ಬಂದು ಕೂಗಿದಳು. ಹನ್ನೆರಡು ದಿನದಿಂದ ಅಲುಗದಿದ್ದ ಅವರನ್ನು ಅಕ್ಕಮಾರಿ–

"ಬಾರವ್ವ ಅಜ್ಜೀರ ಕಂಬವ್ವ, ಯಾಕೆ ಯೋಚನೆ, ಸಣ್ಣಕ್ಕಿಯವೆ, ತೊಗರಿ ಬೇಳೆಯವೆ. ಆ ಬಾನಿನ ಮೂಲೆಗೆ ಕೈ ಹಾಕು."

ಅಕ್ಕಿ ಬೇಳೆ ದೊರೆತವು. ಚಿನ್ನದ ಗಿಂಡಿ, ರನ್ನದ ಗಿಂಡಿಯಲ್ಲಿ ಪನ್ನೀರು ತಂದು 'ಹಾಲು ಪಂಚಾಮೃತ' ಮಾಡಿದಳು. ಅಕ್ಕಮಾರಿಯನ್ನು ಊಟಕ್ಕೆ

ಕರೆದಳು. ಅವಳಿರಲಿಲ್ಲ. ಹೊರಗೆ ಊರೆಲ್ಲ ಅರಸಿದರು. ಸಿಗಲಿಲ್ಲ ಎಲ್ಲೂ, ಯಾವ ಕೇರಿಯಲ್ಲೂ–ಹದಿನಾರು ಕಣಜ ಹೊನ್ನು, ಸಣ್ಣ ಮರಳಾಗಿ ಹೋಯಿತು. 'ಅರಿವೆ ಹೂವಿನ ಬರ, ತುಂಬೇಹೂವಿನ ಬರ'ವೇ ಬಂದಿತು. ಜೋಳಿಗೆಯನ್ನು ಕೊಂಡು ಊರೂರಿಗೆ ಭಿಕ್ಷೆಗೆ ಹೊರಟನು ಕೆಂಗುರಿ ಮಲ್ಲೇಗೌಡ. ಮರುಗಿ ಮೊರ ತುಂಬಿ ಭಿಕ್ಷೆ ನೀಡಿದರು. 'ಒಪ್ಪೊತ್ತಿನ ಅಂಬಲಿಗೆ' ಅದೂ ನಿಲ್ಲದಾಯಿತು.

ಬದುಕು ದುರ್ಭರವಾಯಿತು. ಬರಬಾರದ 'ವನವಾಸವೇ' ಬಂದಿತು. ಈ ನಡುವೆ ನಾಳೆ ಮಂಗಳವಾರ ಊರಿನಲ್ಲಿ ಮಾರಿಯ ಹಬ್ಬ. ಕುಲವಾಡಿ ಮನೆ ಮನೆಗೂ ಸಾರಿಕೊಂಡು ಬಂದನು. ಕೆಂಗುರಿ ಮಲ್ಲೇಗೌಡನ ಮನೆಗೆ ಸಾರಲಿಲ್ಲ. ಸಿರಿವಂತರಾಗಿ ಬಡವರಾದವರು. ಎಲ್ಲಿಯಾದರೂ ಉಂಡು ಕೊಂಡಾರು !

ತನ್ನ ಮನೆಗೆ ಸಾರದೇ ಹೋದ ಕುಲವಾಡಿ ! ಅಣ್ಣ ತಮ್ಮಂದಿರ ನಡುವೆ ತಾನೊಬ್ಬ ಗಣನೆಗೆ ಬಾರದ ಜೀವಿ. ನಿರರ್ಥಕವಾದ ಈ ಬದುಕಾದರೂ ಏಕೆ ! ಇಂಥ ಅಪಮಾನವನ್ನು ಸಹಿಸಿಯೂ ಬದುಕುವುದೇ !

–ಕೆಂಗುರಿ ಮಲ್ಲೇಗೌಡ ಮರುಗಿದನು ಮನದಲ್ಲಿ. ಕಾವೇರಿ ಹೊಳೆಯನ್ನು ಹಾರಿಕೊಳ್ಳಲು ಹೊರಟು ನಿಂತನು. ಮಡದಿ ಅಜ್ಜೀರ ಕಂಬಿ ಎಲ್ಲಿಯಾದರೂ ಕೂಲಿ ಮಾಡಿ ಜೀವಿಸಿಯಾಳು !

ಕಣ್ಣಲ್ಲಿ ನೀರು ತುಂಬಿಕೊಂಡಳು, 'ನವಮಾಸ ಒಂಭತ್ತು ತಿಂಗಳು' ತುಂಬಿದ್ದ ಕಂಬಿ.

"ಕೂಡಿದ ಪತಿಯ ಬಿಟ್ಟು ನಾ ಹೆಂಗೆ ಇರಲಯ್ಯ.
ನಾ ಬರುತೀನಿ"–ಅಂದಳು.

ಚಿತ್ತರ ದೇವರ ಪೂಜೆಗೆ ಅರವತ್ತು ಮನೆಯವರನ್ನೂ ನೇಮಿಸಿ ಮಡದಿಯೊಡನೆ ಹೊರಟನು ಮಲ್ಲೇಗೌಡ, ನೂರೆಂಟು ಬಿರುದು ಪಿಳ್ಳಂಗೋವಿಗಳೊಡನೆ ಕಲ್ಲು ನೀರು ಕರಗುವ ವೇಳೆಯಲ್ಲಿ ! ಕಬಿನಿ ಕಾವೇರಿಯುವರ ದಿಕ್ಕಿನಲ್ಲಿ ಹೊರಟ ಅವರನ್ನು ಕಾಡಿನ ಹುಲಿ ಕರಡಿಯೆಲ್ಲ ಬಂದು ತಡೆದುವು. "ಹೊಟ್ಟೆಯಲ್ಲಿ ಕೆಂಪನ ಮಲ್ಲೇಗೌಡ ಹುಟ್ಟುತ್ತಾನೆ; ಹುಟ್ಟಿದ ಗಳಿಗೆಯಲ್ಲಿ ಬಡತನವೆಲ್ಲ ಹರಿಯುತ್ತದೆ....ಹೋಗಬೇಡ....ಹೋಗಬೇಡ" ಎಂದು 'ಈರೆಂಬತ್ತು ಕೋಟಿ' ಮೃಗಜಾತಿಯೂ ಮೊರೆಯಿಟ್ಟವು. ಕರಿಕಂಬಳಿ ಹಾಸಿ ನೆರೆಹೊರೆಯವರು ಹಿಂದಕ್ಕೆ ಕರೆದೊಯ್ದರು. ಆದರೂ ಕಣ್ತಪ್ಪಿಸಿ ಹೊರಟುಬಿಟ್ಟನು !

ನಡೆದು ನಡೆದು 'ಕಿಕ್ಕಾರಣ್ಯಕ್ಕೆ' ಬರುವ ವೇಳೆಗೆ ಅಜ್ಜೀರ ಕಂಬವ್ವನಿಗೆ ಹೆರಿಗೆಯ ನೋವು ಕಾಣಿಸಿ ಮೆಳೆಯೊಂದರ ಮರೆಯಲ್ಲಿ ದುಃಖ ಮಾಡುತ್ತ ಕುಳಿತಳು. ಮಲ್ಲೇಗೌಡನ ಮನ ಕರಗಲಿಲ್ಲ.

"ಹುಟ್ಟಿದ ಕಂದನ ತಟ್ಟನೆ ಕತ್ತ ಮುರಿದು
ನೀ ಬಾರೆ ಈಗ ಸತಿಯೋಳೇ....

ಪತಿ ನಿಂತು ಯೋಚಿಸುವಲ್ಲಿಯೇ....

ಅಂಗನೆ ಅಳುವಾಗ ಅಂಗನೆ ಬೀಳುವಾಗ
ಕೆಂಪನೆ ಮಲ್ಲೇಗೌಡ ಜನಿಸಿದ !

'ಪಾಪಿಗೇಡಿ ಮುಂಡೇಯ ಹೊಟ್ಟೇಲಿ' ಹುಟ್ಟಿದ ಮಗು ಸೂರ್ಯ ಹೊಳೆದಂತೆ ಹೊಳೆಯುವುದನ್ನು ನೋಡಿ ಗೋಳಿಟ್ಟಳು ಕಂಬವ್ವ. ಪತಿ ನಿಲ್ಲ ಲಿಲ್ಲ. ಮತ್ತೆ ಮತ್ತೆ ಕರೆದ ಪತಿಯತ್ತ ತಾನೂ ನಡೆದಳು ದೃಢಮನಸ್ಸಿನಲ್ಲಿ, ಮುತ್ತಿನ ಮುಂಜೆರಗನ್ನೇ ಹರಿದು, ಜೋಳಿಗೆ ಮಾಡಿ. ದಾಳದಲ್ಲಿ ಹೆಬ್ಬಾಲದ ಮರದ ಬಿಳಲಿಗೆ ಬಿಗಿದು ಕಪಿನಿ ಕಾವೇರಿಯ ದಿಕ್ಕಿನಲ್ಲೆಲ್ಲೋ ಇಬ್ಬರೂ ಕರಗಿ ಹೋದರು.

ಅಳುವ ಕಂದನ ದನಿ ಅಲೆಯಲೆಯಾಗಿ ಹರಡಿತು ಅರಣ್ಯದಲ್ಲಿ. ಏಳು ಹೆಡೆಯ ಸರ್ಪ ಹರಿದು ಬಂದು ಹೆಡೆ ಬಿಚ್ಚಿ ಕಂದಯ್ಯನಿಗೆ ನೆರಳಾಯಿತು. ಆಲದ ರೆಂಬೆಯಲ್ಲಿ ಗೂಡು ಕಟ್ಟಿ ಜೇನು ತೊಟ್ಟಿಕ್ಕಿತು, ಮಗುವಿನ ಬಾಯಲ್ಲಿ. ಗರುಡಾಳ ಪಕ್ಷಿ ಹಾರಿಬಂದು, ಕಂದಣ್ಣ ಅತ್ತಾಗ ಜೇನು ಹುಟ್ಟನ್ನು ಕುಕ್ಕಿ ಹನಿಸಿತು.

ಆಲೇಗೌಡರ ಆಡು ಕಾಯುವ ಒಡ್ಡರ ಹುಡುಗ ಆಡು ಕಾಯಲು ಆ ಕಾಡಿನಲ್ಲೇ ಸುತ್ತುವಾಗ ಕಂಡನು ಕೌತುಕದ ನೋಟವೊಂದ ! ಈದ ಆಡು ನಿತ್ಯವೂ ಕೆಚ್ಚಲ ಹಾಲನ್ನೆಲ್ಲ ಮಗುವಿಗೆ ಕರೆದು ಮನೆಗೆ ಬರುತ್ತಿತ್ತು. ಹಾಲಿಲ್ಲದೆ ಮರಿಗಳು ಸತ್ತವು. ಹಗ್ಗದೊಡನೆ ಆಡು ಆಲದ ಮರದತ್ತಲೆ ಎಳೆತಂದು ಮಗುವಿಗೆ ಹಾಲುಣಿಸಿದಾಗ, ಆಲೇಗೌಡನಿಗೂ ಸುದ್ದಿ ಮುಟ್ಟಿ ಓಡಿಬಂದನು. ಏಳು ಹೆಡೆಯ ಸರ್ಪ ಪಕ್ಕಕ್ಕೆ ಸರಿಯಿತು. ಕೆಂಗುರಿ ಮಲ್ಲೇಗೌಡನ ಮಗ ನೆಂದು ಅರಿದು ಕೊಂಡೊಯ್ದು ಮಮತೆಯಿಂದ ಸಾಕಿದನು. ಏಳುವರ್ಷಗಳಲ್ಲಿ

ಆಲೇಗೌಡನ ಗೊಂತೆಲ್ಲ ಚಿನ್ನವಾದವು. ಏಳು ಗೂಡಿನ ದನಗಳನ್ನು ಹೊಡೆದು ಕೊಟ್ಟು ಕಳುಹಿಸಿದನು ಕೆಂಪನ ಮಲ್ಲೇಗೌಡನಿಗೆ.

ಮಾಗಡಿ ಕಾವಲ ಮಧ್ಯಾಹ್ನದ ಹೊತ್ತಿಗೆ ಮೇಯಿಸಿ
ಸಂಗಾವರದ ಕಾವಲ ಸಂದೀಕೆ ಮೇಯಿಸಿ
ಜೇನುಕಲ್ಲು ದುರ್ಗದ ನಿಟ್ಟು ಕಟ್ಟಿ ಮೇಯಿಸಿ
ದೊಡ್ಡ ಮದಗದೇರಿಯ ಮೇಲೆ ಗೂಡ ತಿರುವ್ಯಾನೋ

ಏಳು ಗೂಡಿನ ದನವನ್ನೂ ಕಾಯುತ್ತ ಕೆಂಪಿನಮಲ್ಲೇಗೌಡ 'ಬಗ್ಗಿದ್ಧಿಪ್ಪೆ'ಯ ನೆರಳಲ್ಲಿ ಕುಳಿತಾಗ, 'ಸೀರ‍್ಯವದ' ರಂಗಣ್ಣ ಏಳು ಕೋಣನ ಮೇಲೆ ಹಣವನ್ನು ಹೇರಿಕೊಂಡು ಹೋರಿಯನ್ನು ಕೊಳ್ಳಲು ಬಂದನು. ಹಣದ ರಾಶಿಯನ್ನೇ ಸುರಿದು ಹೋರಿಯನ್ನು ಎಂಗಡಿಸಿಕೊಂಡನು. ಕಣದಗಲ ರಾಶಿಯಾಗಿ ಬಿದ್ದ ಹಣವನ್ನು ನೋಡಿ ಕೆಂಪನಮಲ್ಲೇಗೌಡ

ಅಕ್ಕಮಾರಿ ಚಿಕ್ಕಮಾರಿ ಗಂಗೇ ಗೌರಿ ಎಂಬೋ
ಹಸುಗಳ ತಾನು ಕರೆದಾನೆ
ಸಣ್ಣಮಲ್ಲಿಗೆ, ದುಂಡುಮಲ್ಲಿಗೆ, ದೊಡ್ಡಿ, ಗಾಳಿ
ಎಂಬ ಏಳ್ಗುಸುವ ಕರೆದಾನೇ

ಎಲ್ಲ ಹಸುಗಳನ್ನೂ ಬಳಿಗೆ ಕರೆದನು. ಕೊಂಬನ್ನು ಕೊರೆದು ಹಣವನ್ನು ತುಂಬಿದರೆ, ಇನ್ನೂ ಉಳಿಯಿತು. ಊರಿಗೆ ಮರಳಿದನು.

ಆಲೇಗೌಡ ಹಿಗ್ಗಿದನು. ತನಗೆ ಬಂದ ಭಾಗ್ಯಕ್ಕೆ ಮಡದಿ ದೊಡ್ಡಮ್ಮನಿಗೆ ಬಿಳಿಸೀರೆ ಉಡಿಸಿಕೊಂಡು, ಕಂಚಿನ ಕಡಗ ಕೈಗೆ ಹಾಕಿ, ತಾನು ದಟ್ಟಿ ಸುತ್ತಿ ಎಲೆಯಡಿಕೆ ಚೀಲದೊಡನೆ ಹೊರಟನು ಕಂಬೇರ ಹಟ್ಟಿಗೆ, ಕೆಂಪನ ಮಲ್ಲೇಗೌಡನಿಗೆ ಹೆಣ್ಣು ಕೇಳಲಾಗಿ. ಕಂಬೇರ ಹಟ್ಟಿಯ ಚೆನ್ನಪ್ಪನಿಗೆ ಏಳು ಮಂದಿ ಗಂಡು ಮಕ್ಕಳು. ಕೊನೆಯವಳು ಚಿನ್ನವ್ವ. ಯಾವ ಗಂಡನ್ನೂ ಒಪ್ಪದ ಮಗಳು, ಆಲೇಗೌಡನ ಮನೆಯ ದನ ಕಾಯುವ ಹುಡುಗನನ್ನು ಒಪ್ಪಿದಳು. ಚಿನ್ನಪ್ಪ ಕೆಂಪಿನ ಮಲ್ಲೇಗೌಡನಿಗೆ ಮಗಳನ್ನು ನೀಡಿದನು. ಮನೆಗೆ ಭಾಗ್ಯವನ್ನು ತಂದ ಮಲ್ಲೇಗೌಡನಿಗೆ ಏಳು ಗೂಡಿನ ದನಗಳನ್ನೂ ನೀಡಿ ರಾಯ ಕಳ್ಳೇರಹಳ್ಳಿಯಲ್ಲಿ ಅರಮನೆಯನ್ನೂ ಕಟ್ಟಿಕೊಟ್ಟನು ಆಲೇಗೌಡ.

ಕಂಬೇರ ಚಿನ್ನಮ್ಮನನ್ನು ರಾಯ ಕಳ್ಳೇರಹಳ್ಳಿಗೆ ಕರೆತಂದುದಾಯಿತು. ಹನ್ನೆರಡು ಅಂಕಣದ ಮನೆಯಲ್ಲಿ ಅಡಿಗೆಯ ಸಾಲು ಹಿಂದಣ ಬಾನದ ಸಾಲಿನಲ್ಲಿ ಉಳಿದಳು ಚಿನ್ನಮ್ಮ. ಮದುವೆಯಾಗಿ ಮೂರು ದಿನವಿಲ್ಲ. ಕೆಂಪನ ಮಲ್ಲೇಗೌಡ ಏಳುಗೂಡಿನ ಗೋವುಗಳ ಕಡೆ ಕಣ್ಣನ್ನು ಹೊರಳಿಸಿ ಹೊರಟು ನಿಂತನು ಮದಗದ ಗಿರಿಗೆ. ಹನ್ನೆರಡು ವರ್ಷದ ಬಾಲೆ ಚಿನ್ನಮ್ಮನನ್ನು ಬಿಟ್ಟು ಹನ್ನೆರಡು ವರ್ಷ ಮರಳದ ಕಾರ್ಯಕ್ಕೆ ತೆರಳಿಲಿರುವ ಪತಿಯನ್ನು ನುಡಿಸಲೂ ಅಂಜಿದಳು ಹೊಸ ನಲ್ಲೆ.

ಕೆಂಪನ ಮಲ್ಲೇಗೌಡ ನಿಲ್ಲುವಂತಿರಲಿಲ್ಲ. ಹುಲ್ಲಿಲ್ಲದೆ, ನೀರಿಲ್ಲದೆ ಬಸವಳಿದ ಗೋವುಗಳನ್ನು ಮರೆಯುವಂತಿಲ್ಲ ಅವನು. ಮಡದಿಯನ್ನು ಕರೆದು ಬುದ್ಧಿ ಹೇಳಿದನು—

**ಅರಮನೆ ಜೋಪಾನ ಗುರುಮನೆ ಜೋಪಾನ**
**ದೇವಾರಮನೆ ಜೋಪಾನ**

ಎಚ್ಚರಿಸಿದನು. ಹರೆಯದ ಹೆಣ್ಣು ಚಿನ್ನಮ್ಮ ತಾನು ಮರಳಿದಾಗಲೂ ಏಳುಮಲ್ಲಿಗೆ ತೂಕವಿರಬೇಕು ಅವಳು. ಬಂದಾಗ ಅವಳ ಸತ್ಯವನ್ನು ಕಾಣ ಬೇಕು !

ಹನ್ನೆರಡು ಅಂಕಣದ ಅರಮನೆಯ ಬಾಗಿಲಿಗೆ ಶಾಪ ಹಾಕಿದನು ಕೆಂಪನ ಮಲ್ಲೇಗೌಡ. ಯಾರು ಬಂದರೂ ಅದು ತೆರೆಯದಿರಲೆಂದು ಬಯಸಿ ಮುಂದೆ ಹೊರಟನು. ಕೇಕೆ ಹಾಕಿ ಗೋವುಗಳನ್ನು ಕರೆದನು.

**ಅಕ್ಕಮಾರಿ ಚಿಕ್ಕಮಾರಿ ಚತುರಂಬೆ ದೊಡ್ಡಿ ಗಾಳಿ**
**ಏಳಿರಮ್ಮ ಬಡಗಲ ರಾಜ್ಯಕೇ....**

ಹಿಂಡು ಹಿಂಡು ಗೋವುಗಳು, ಸಾಗಿದವು. ಬಯಲ ತುಳಿದು, ಬೆಟ್ಟ ವೇರಿ, ಕಾವಲನ್ನು ಕಂಡು, ಏಳುಗೂಡಿನ ಮುಂದಲ ದನ ಮದಗದ ಕಣಿವೆ ಯಲ್ಲಿದ್ದರೆ, ಹಿಂದಲ ದನವಿನ್ನೂ ರಾಯ ಕಳ್ಳೇರ ಹಳ್ಳಿಯಲ್ಲೇ ಇದ್ದವು. ಕ್ರಮ ಕ್ರಮವಾಗಿ ಕರಗಿ ಮರೆಯಾಯಿತು ಕೆಂಪನ ಮಲ್ಲೇಗೌಡನ ಗೋವಿನ ಹಿಂಡು.

ಅರಮನೆಯಲ್ಲಿ ಚಿನ್ನಮ್ಮ ಒಬ್ಬಳೇ ಉಳಿದಳು. ಮದುವೆಯಾದ ಮೂರು ದಿನಕೇ ತನಗೊದಗಿದ ನೋವಿಗೆ ನಲುಗಿದಳು. ನಗುನಗುತ್ತಲೇ ಒಂದು

ವರ್ಷ ಕಳೆದಳು, ಎರಡು ವರ್ಷಗಳು ಜಾರಿದವು. ಆಡುತ್ತ ಹಾಡುತ್ತಲೇ ಸಾಗಿದ ದಿನಗಳ ಎಣಿಕೆಯಲ್ಲಿ ನಿಟ್ಟುಸಿರು ಚಿಮ್ಮಿ ಬರುತ್ತಿತ್ತು.

ಅನ್ನದ ಮದದಲ್ಲಿ ಕನ್ನಾದ ಮದದಲ್ಲಿ
ಯೌವನ ಬಾಧೆ ಮದದಲ್ಲಿ-ಮನೆಸ್ವಾಮಿ
ಇನ್ನೇನು ಗತಿಯ ಮಾಡಲೋೀ........

ತನಗೆ ಅರಿವಿಲ್ಲದಂತೆಯೇ, ಏನೋ ತಳಮಳ, ಯಾವುದೋ ಕಾತರ.

ಯೌವನ ಬಾಧೆಯ ತಾಳಲಾರೆ ಮನೆಸ್ವಾಮಿ
ಇನ್ನೇನು ಗತಿಯ ಮಾಡಲೋೀ........

ಅವಳ ಅಂತರಂಗದ ಕೂಗು ಶಿವನನ್ನೂ ತಾಕದಿರಲಿಲ್ಲ. ಹೆಣ್ಣೊಂದು, ಗಂಡೊಂದನ್ನು ನಿರ್ಮಿಸಿದ ಶಿವನನ್ನು ದೂರಿದಾಗ ಆಗಲೇ ಐದು ಆರು ವರ್ಷಗಳು ಸಂದುಹೋಗಿವೆ. ಹತ್ತು ಹನ್ನೊಂದು ವರ್ಷಗಳೂ ಎಟುಕಿಸಿಕೊಂಡಿವೆ. ಸ್ವಾಮಿಯ ನಿಂದೆ ನಿಲ್ಲಲಿಲ್ಲ. ಗಂಡು ಹೆಣ್ಣನ್ನು ಅಗಲಿಸಿ ನಿಷ್ಕರುಣಿಗಳಾದರು ಅವರು. ಲೋಕದ ಜನರನ್ನು ತಾವು ಬಾಳಿದಂತೆ ಕಾಣಲಿಲ್ಲ ! ತಮ್ಮಂತೆ ಎಣಿಸಲಿಲ್ಲ.

ಚಿನ್ನಮ್ಮನ ನಿಟ್ಟುಸಿರು ಕೈಲಾಸದ ಬಾಗಿಲನ್ನು ತಟ್ಟಿರಬೇಕು. ಶಿವ ಪಾರ್ವತಿಯರು ರಾಯ ಕಳ್ಳೇರಹಳ್ಳಿಗೆ ಬಂದರು. ಮಾಯದ ಬಾಗಿಲು ತೆರೆದು ಕೊಂಡವು. ಹನ್ನೆರಡು ಅಂಕಣದ ಅರಮನೆ ಒಳಗೆ ಅಡಿಗೆಯ ಬಾನದ ಸಾಲಿನಲ್ಲಿ ಚಿನ್ನಮ್ಮ—

ದುಃಖವ ಮಾಡುತ ಲೆಕ್ಕವ ತೂಗುತ
ಹನ್ನೊಂದು ವರ್ಷವ ಕಳೆದವಳೇ........

ಶಿವಪಾರ್ವತಿ ಚಿನ್ನಮ್ಮನ ಲಕ್ಷ್ಯವನ್ನು ಸೆಳೆದರು—

ದುಃಖವು ಬೇಡಮ್ಮ ಲೆಕ್ಕವು ಬೇಡಮ್ಮ
ಬಂದಿರುವ ಬಾದಿ ಹೇಳಮ್ಮ

ಚಿನ್ನಮ್ಮ ಮೇಲೆದ್ದಳು. ಕಂಬನಿಯನ್ನು ಒರೆಸಿ, ಕಾಲಿಗೆರಗಿ ಹೃದಯದ ನೋವನ್ನು ಶಿವಪಾರ್ವತಿಯರ ಪಾದದಲ್ಲಿ ಬಿತ್ತಿದಳು.

ಅನ್ನದ ಬಾದಿಲ್ಲ ಅನ್ಯಾಯದ ಬಾದಿಲ್ಲ
ಯೌವನದ ಬಾದಿ ತಾಳಲಾರೇೀ........

ಶಿವಕರುಣೆ ಹರಿಯಿತು ಅವಳ ಮೇಲೆ. ಮೂರು ಹೂವನ್ನು ನೀಡಿ ಸೇವಿಸಲು ಹೇಳಿದ ಶಿವ 'ಯೌವ್ವನ ಬಾಧೆ' ಹರಿಯುವ ಬಗೆಯನ್ನು ಸೂಚಿಸಿ ಹೋದನು.

ಚಿನ್ನಮ್ಮ ಹೂವನ್ನು ಸೇವಿಸಿ ನೋವನ್ನು ಮರೆತಳು. ದಿನಗಳುರುಳಿದವು ಮೂರು ತಿಂಗಳು ಜಾರಿ. ಆರು ತಿಂಗಳ ಆಚೆಗೂ ಕಾಲಿಟ್ಟಳು. ತಿಂಗಳು ತಿಂಗಳುಗಳು ದಾಟಿದಂತೆ ಏನೋ ಆತಂಕ, ಏನೋ ಕಳವಳ. ತಾನೇನಾಗಿದ್ದೇನೆ ? ಮದಗದ ಗುಡ್ಡಕ್ಕೆ ಹೋದ ಪತಿ ಮರಳಿಲ್ಲ. ಬಾನದ ಸಾಲನ್ನು ಬಿಟ್ಟು ತಾನು ಹೊರಗೆ ಹೋದವಳಲ್ಲ, ತನಗೊದಗಿದ 'ಮಾಯದ ಗರ್ಭಕ್ಕೆ' ಬೆಚ್ಚಿದಳು, ಬೆದರಿದಳು.

ದಯ್ಯವೊ ನಾ ಕಾಣೆ ಪೀಡೆಯೋ ನಾ ಕಾಣೆ
ಇನ್ನೇನು ಗತಿಯ ಮಾಡಲೀೀ........

ಪತಿ ಬರುವುದು ಹತ್ತಿರವೇ ಆಗಿದೆ. ಬಂದಾಗ ಹೇಳುವ ಉತ್ತರವಾದರೂ ಏನು ? ಶಿವನನ್ನು ನೆನೆದಳು. ಶಿವಧ್ಯಾನ ಮಾಡಿದಳು. 'ನವಮಾಸ ತಿಂಗಳು' ತುಂಬಿಯೇ ಹೋದವು. ಭೂಮಿಯ ಮೇಲೆ ನಿಲ್ಲಲು ಎಡೆಯಿಲ್ಲ. ನಡೆದರೆ ನೆಲವೇ ಅದುರಿದಂತಾಗುವುದು. ತನ್ನ ಮೈಯಲ್ಲಿ ಏನಿದೆಯೋ, ಎಂತಿದೆಯೋ, ಇನ್ನೇನು ಗತಿಯೆಂದು ಹೌಹಾರುವ ತಾಯಿಯನ್ನು ಕಂಡು ನಕ್ಕರು ಮಕ್ಕಳು ತಾಯಗರ್ಭದಲ್ಲಿ ! ಮಾರಣ್ಣ, ಮೈಲಣ್ಣ ಅಣ್ಣ ಜುಂಜಪ್ಪನೊಡನೆ ಮಾತಾಡಿದರು—

ಇದು ಏನೊ ಹಿರಿಯಣ್ಣ ಇಂಥ ಮಾತಾಡುತಾಳೆ
ನಮ್ಮಯ ಮರ್ಮ ತಿಳಿಯದೇ ! ನೀನೀಗ
ಧೈರ್ಯವಹೇಳೋ ಹಿರಿಯಣ್ಣ
ನಂಬುಗೆ ಹೇಳೊ ಹಡೆದಮ್ಮಗೆ ನೀನೀಗ
ಮೂರುಜನರ ಗುರುತ ಹೇಳಯ್ಯ
ನಮ್ಮ ಗುರುತ ಹೇಳಯ್ಯ ನಮ್ಮ ಮರ್ಮ ಹೇಳಯ್ಯ
ತಂಗಿ ಮಾರಕ್ಕನ ಮರ್ಮ ಹೇಳಯ್ಯ

ತಂದೆ ಬರುವುದು ಮೂರು ತಿಂಗಳು ಉಳಿದಿದೆ. ಆಗಲೇ 'ನವಮಾಸ ಒಂಬತ್ತು ತಿಂಗಳು' ತಂಬಿ ಹೋಗಿವೆ. ಅವರು 'ನರಕಲಿಗೆ' ಬರುವ ದಿನ ಹತ್ತಿರವೇ ಬಂದು ಹೋಗಿದೆ. ತಂದೆ ಇಲ್ಲದೆ 'ನರಕಲಿಗೆ' ಬಂದರೆ ಲೋಕ ಒಪ್ಪುವುದಿಲ್ಲ. ತಂದೆ ಬರುವವರೆಗೆ ತಾಯ ಗರ್ಭದಲ್ಲಿಯೇ ಉಳಿಯುವು ದೊಳಿತು. ತಾವು ಹುಟ್ಟಿದ ಮೇಲೆ ತಂಗಿ ಮಾರಕ್ಕ ಹುಟ್ಟುವಳು. ಮೂರು ಗಂಡಿನ ಹಿಂದೆ ಹುಟ್ಟಿದ ಹೆಣ್ಣಾಗುವಳು. ತಂದೆಗೆ ಮರಣ, ತಾಯಿಗೆ ಮರಣ. ಹುಟ್ಟಿದ ಗಳಿಗೆಯಲ್ಲೇ 'ಚೆಂಡು ಮುರಿಯುವಂತೆ' ತಾಯಿಗೆ ತಿಳಿಸಬೇಕು.

ಹುಟ್ಟಿದ ಮನೆಗೆ ಕಂಟಕ ಅಂತ್ತ್ಹೇಳಿ
ನಿಜವಾಗಿ ಹೇಳೊ ಹಿರಿಯಣ್ಣಾ‌ೇೇ

ಮಾರಣ್ಣ ಮೈಲಣ್ಣ ಹಿರಿಯಣ್ಣ ಜುಂಜಪ್ಪನನ್ನು ಬೇಡಿದರು. ಜುಂಜಪ್ಪ ತಾಯಿಯ ಕಳವಳವನ್ನರಿತನು ಗರ್ಭದಲ್ಲಿಯೇ ದನಿಯೆತ್ತಿ ಧೈರ್ಯ ಹೇಳಿದನು!

ಆವಾಗ ನೋಡಯ್ಯ ಮನೆ ಸ್ವಾಮಿ ಜುಂಜಪ್ಪ
ಸಿಡಿಮಿಡಿದು ಮಾತನಾಡುತಾನೆ !

ಶಿವನ ವರದಲ್ಲಿ ಹುಟ್ಟಿದ ತಾವು ತಾಯ 'ಉದರ ಪೋಷಣೆ'ಯಲ್ಲೇ ಬೆಳೆದವರು, ದೆವ್ವವಲ್ಲ, ಪೀಡೆಯಲ್ಲ. ತಾಯ ಗರ್ಭದಲ್ಲೇ ಇರುವ ಮಕ್ಕಳು ತಾವು !

ಹೆದರಬೇಡ ನನ ತಾಯಿ ಬೆದರಬೇಡ ನನ ತಾಯಿ
ದೆವ್ವವೂ ಅಲ್ಲ ಪೀಡಲ್ಲ-ಕಾಣಮ್ಮ
ನಿನ ಜನ್ಮದಲ್ಲಿ ನಾವು ಇರುತೀವಿ-ಕಾಣಮ್ಮ
ತಂದೀಗೆ ಬುದ್ಧಿ ಹೇಳುತೀವಿ.

ಗರ್ಭದಲ್ಲಿ ಮಾತಾಡುವ ಮಕ್ಕಳ ದನಿಯನ್ನು ಕೇಳಿ ಚಿನ್ನಮ್ಮ 'ಶಿವಶಿವ' ಎಂದು ಬೆಚ್ಚಿದಳು. ಮೂರು ತಿಂಗಳು ಜಾರಿ, ಕೆಂಪನಮಲ್ಲಯ್ಯ ಏಳುಗೂಡಿನ ದನಗಳನ್ನೂ ಹೊಡೆದುಕೊಂಡು 'ಅಜ್ಜಗುಜ್ಜ'ನಾಗಿ ಮರಳಿದ. ದನಗಳನ್ನು ಗೂಡಿಗೆ ಕೂಡಿ, ಅರಮನೆಯ ಮುಂದೆ ಬಂದು ನೋಡಿದರೆ ಅಲ್ಲೇನೋ ಹೊಸ ಹೆಜ್ಜೆಯ ಗುರುತು. ಬಾಗಿಲನು ತೆರೆದು ಬಾನದ ಸಾಲಿಗೆ ಬಂದು ಮಡದಿಯನ್ನು ನೋಡಿ ಬೆಚ್ಚಿದನು. ಶಂಕಿಸಿ ಕೇಳಿದನು–

ನಾರಿ ನಿನ ಮರ್ಮ ಸಿಕ್ಕಲಿಲ್ಲ ನನೀಗೆ
ನಿನ್ನ ಮಾಯವ ತಿಳಿದೇಳೇ....

ಮನೆಸ್ವಾಮಿ ಜುಂಜಪ್ಪ ಕೇಳಿಸಿಕೊಂಡನು ತಂದೆಯಾಡಿದ ನುಡಿಯನ್ನು. ಗರ್ಭದಿಂದಲೇ ಉತ್ತರಿಸಿದನು :

ಬೆಚ್ಚ ಬೇಡ ನನ ತಂದೆ ಬೆದರಬೇಡ ನನ ತಂದೆ
ಆಡಬೇಡ ಅನ್ಯಾಯದ ನುಡಿಗಳ ನನ ತಂದೆ
ನಾವು ನಿನ್ನ ಮಕ್ಕಳಾಗಿರುತೀವಿ

ಶಿವನ ವರದಲ್ಲಿ ಹುಟ್ಟಿದವರು. 'ನರಕಲಿಗೆ' ಬರಲು ತಂದೆ 'ಮಾರ್ಗ ಕೊಡಬೇಕಾಗಿದೆ.' ಅವನಿಲ್ಲದೆ ಹುಟ್ಟಿದ್ದರೆ ತನ್ನ ಮಕ್ಕಳೆಂದು ಅವನೆಲ್ಲಿ ಪರಿಗಣಿಸುತ್ತಿದ್ದ ! ತಾಯ ಗರ್ಭದಲ್ಲಿ ಒಂದು ವರ್ಷ ಕಳೆದು ಹೊರಬರಲು ಹವಣಿಸಿರುವ ಮಕ್ಕಳವರು. ತಾವೆಲ್ಲ ಹೊರಬಂದ ಮೇಲೆ ಬರುವ ತಂಗಿ ಮಾರಕ್ಕ ಮಾತ್ರ ಕುಲಕ್ಕೆ ಕಂಟಕಪ್ರಾಯಳು! ಜುಂಜಪ್ಪ ತಂದೆಗೆ ಎಚ್ಚರಿಸಿದನು-

ಹುಟ್ಟುತಿದ್ಹಂಗೆ ಚೆಂಡ ಮುರಿದ್ಹಾಕೋeee....

ಇನ್ನು 'ನರಕಲಿಗೆ' ಅವತರಿಸಲಿರುವ ಅವರು ಲೋಕದ ಮಾರ್ಗದಲ್ಲಿ ಬರುವಂತಿಲ್ಲ. ಬಂದರೆ, ಅಡ್ಡ ನಿಂತಿದ್ದಾಳೆ ತಂಗಿ ಮಾರಕ್ಕ ! ಅವಳೇ ಮೊದಲು ಜನಿಸಿ ಹಿರಿಯಳಾಗುತ್ತಾಳೆ! ಬೇರೆ ಬೇರೆ ದಾರಿಗಳನ್ನೇ ಕೋರಿದನು ಜುಂಜಪ್ಪ! ತಾಯಿ ಚೆನ್ನಮ್ಮ ತಂದೆ ಕೆಂಪನ ಮಲ್ಲೇಗೌಡ ನಿರುತ್ತರರಾದರು. ಇನ್ನಾವ ಮಾರ್ಗವೂ ಅವರಿಗೆ ತೋಚಲಿಲ್ಲ.

ಮಕ್ಕಳು ತಮ್ಮ ತಮ್ಮ ದಾರಿಯನ್ನು ಕಂಡುಕೊಂಡರು. ಹಿರಿಯಣ್ಣ ಜುಂಜಪ್ಪ ತಾಯ ಬೆನ್ನಿನಲ್ಲಿ ಹುಟ್ಟಿದನು. ಮಾರಣ್ಣ ಮೈಲಣ್ಣ ಕರ್ಣದಲ್ಲಿ ಜನಿಸಿದರು. ಲೋಕದ ದಾರಿಯಲ್ಲಿ ಹುಟ್ಟಿದ ತಂಗಿ ಮಾರಕ್ಕನನ್ನು ಕಂಡು ಮತ್ತೊಮ್ಮೆ ಎಚ್ಚರಿಸಿದನು ಜುಂಜಪ್ಪ—

ಹಡದ ಮಗಳೆಂದು ಮರಮದೆ ಸಾಕಬೇಡ
ನಿನ್ನಾಣೆ ತಾಯೆ ಶಿವನಾಣೆ-ನನ ತಾಯೆ
ಸೂರ್ಯ ಚಂದ್ರರಾಣೆ ಚೆಂಡ ಮುರಿದ್ಹಾಕು ।

ಚಿನ್ನಮ್ಮ ಹಡೆದ ಮಗಳೆಂದು ಮುಚ್ಚಿ ಮುಚ್ಚಿ ಮಾರಕ್ಕನನ್ನು ಸಾಕಿದಳು.

ಮನೆಸ್ವಾಮಿ ಜುಂಜಪ್ಪ ಬೇಸತ್ತನು ತಾಯ ವರ್ತನೆಗೆ ! ಮಾರಣ್ಣ, ಮೈಲಣ್ಣ ರನ್ನು ಕರೆದು ಏನನ್ನೋ ಹೇಳಿದನು. ಮೂರು ತಿಂಗಳು ಕಂಟಕ ಕಳೆಯುವ ವರೆಗೆ ತಂದೆ ಮಗಳ ಮುಖವನ್ನು ನೋಡಬಾರದು. ನೋಡಿದರೆ ತಲೆ ಸಿಡಿದು ಮರಣವನ್ನಪ್ಪುವನು. ತಾವೆಲ್ಲ ತಬ್ಬಲಿಗಳಾಗುವರು !

ಮೂವರು ಮಕ್ಕಳೂ ಮೂವತ್ತು ಮಾರುದ್ದ ಕಬ್ಬಿಣದ ಸರಪಣಿಯನ್ನು ತಂದರು. ಮಗಳ ಮುಖವನ್ನು ನೋಡದಂತೆ ತಂದೆಯನ್ನು ಗಾಜಿನ ಕಂಬಕ್ಕೆ ಬಿಗಿದು ಕಟ್ಟಿದರು. ಮಗುವಿನ ದನಿಯೂ ಕೇಳದ ದೂರದಲ್ಲಿ ತಂದೆಯನ್ನು ಬೇರ್ಪಡಿಸಿ ತಾವೆ ಕಾವಲು ನಿಂತರು. ತಂದೆಗೆ ಧೈರ್ಯ ಹೇಳಿ, ಕಾರಣವನ್ನು ತಿಳಿಸಿ ಹಿರಿಯಣ್ಣ ಜುಂಜಪ್ಪ ಸೋದರರೊಡನೆ ಎಚ್ಚರದಿಂದಲೇ ಕಾದನು ತಂದೆ ಯನ್ನು.

ಒಂದೂವರೆ ತಿಂಗಳು ಜಾರಿತು. ಕೆಂಪನಮಲ್ಲೇಗೌಡನನ್ನು ಮಕ್ಕಳು ಹಗಲಿರುಳು ಕಾಯುವಲ್ಲಿ ಮನೆಸ್ವಾಮಿ ಜುಂಜಪ್ಪನಿಗೆ 'ಅರೆಗಣ್ಣು ನಿದ್ದರೆ' ಬಂದುಬಿಟ್ಟಿತು. ತನ್ನ ನಿದ್ದೆ ಪೂರ್ಣಗೊಳ್ಳುವವರೆಗೆ ಎಚ್ಚರದಿಂದಿರುವಂತೆ ಮಾರಣ್ಣ, ಮೈಲಣ್ಣರಿಗೆ ತಿಳಿಸಿ, ಸ್ವಾಮಿ ಪವಡಿಸಿದನು ಗಾಜಿನ ಕಂಬದ ಬಳಿ ಯಲ್ಲೆ ! ಎರಡೂವರೆ ತಿಂಗಳು ಕಾದರು ಮಾರಣ್ಣ. ಮೈಲಣ್ಣ ! ಅವರಿಗೋ 'ಕಾಲು ಗಣ್ಣು ನಿದ್ರೆ !' ಹತ್ತಿತು. ಅಣ್ಣನ ಬಳಿಯಲ್ಲೇ ಕಣ್ಮುಚ್ಚಿ ಮಲಗಿದರು!

ಮೂವತ್ತು ಮಾರಿನ ಸರಪಳಿ ನೋಡಮ್ಮ
ಕಳಚಿ ಕಳಚ್ಯಕೊಂಡೆ ಬೀಳೋದು
ಕಳಚಿ ಕಳಚ್ಯಕೊಂಡೆ ಬೀಳುವ ಹೊತ್ತಿನಲಿ
ಕೆಂಪಿನಮಲ್ಲಯ್ಯ ಹೊರಟಾನು !

ಊರ ಮುಂದಣ ಮಾರಿಯ ಪೂಜೆಗೆ ಕೆಂಪನಮಲ್ಲೇಗೌಡ ಹೊರಟನು. ಪೂಜೆ ಮುಗಿಸಿ ಮೇಲೇಳುವ ವೇಳೆಗೆ ಅವನ ತಲೆಸಿಡಿದು ಸಾವಿರ ಹೋಳಾ ಯಿತು. ಊರ ಮುಂದೆ ತಂದೆ ಮಡಿದ ಸುದ್ದಿ ಮೈಮರೆತು ಮಲಗಿದ ಮಕ್ಕಳಿಗೆ ತಿಳಿಯಲಿಲ್ಲ !

ಮೂರು ತಿಂಗಳು ಅಲ್ಲಿಗೆ ತುಂಬಿತು ಆಗ
ಎದ್ದನಲ್ಲೊ ಸ್ವಾಮಿ ಜುಂಜಪ್ಪ !

ಎದ್ದು ಸುತ್ತಲೂ ನೋಡಿದನು ! ತಂದೆಯಿರಲಿಲ್ಲ. ಮಾರಣ್ಣ ಮೈಲಣ್ಣ ಮಲಗಿದ್ದಾರೆ, ಏಳಿಸಿ ಕೇಳಿದರೆ ಅಸಹಾಯಕರಾಗಿ ಮೌನವಾಂತಿದ್ದಾರೆ. ತಂದೆಯ ಸ್ಥಿತಿ ಏನಾಯಿತೆಂದು ಸ್ವಾಮಿ ಅರಿತನು.

ಹಾಳಾದ ಮಾರ್ಹುಟ್ಟಿ ಮನೆ ಹಾಳಮಾಡಿದಳು
ಇನ್ನೇನು ಗತಿಯ ಮಾಡಲಿ !

ಜುಂಜಪ್ಪ ತಮ್ಮಂದಿರೊಡನೆ ಊರ ಮುಂದಕ್ಕೆ ಬಂದನು. ಊರ ಮಾರಿಯ ಕೆಲಸದಲ್ಲಿ ತಂದೆ ತಲೆ ಸಿಡಿದು ಒರಗಿದ್ದಾನೆ. ಮುನಿದೆದ್ದ ಜುಂಜಪ್ಪ ಕರಿಯ ಕಲ್ಲೊಂದನ್ನು ಎತ್ತಿ ಮಾರಿಯ ನೆತ್ತಿಯ ಮೇಲೆ ಹಾಕಿದನು. ಮಾರಿಯೂ ಸಿಡಿದು ಸಾವಿರ ಊರಿಗೆ ಹಂಚಿಹೋದಳು.

—೦—

# ಕಾಕ್ಹಾಕಿ ದನವ ಕರೆದಾನು

ಗಂಗೆಯ ದಡದಲ್ಲಿ ಗಂಧದ ಮರನ್ಹುಟ್ಟಿ
ತಂದೆಯ ಹೊಟ್ಟೇಲಿ ಮಗನ್ಹುಟ್ಟಿ-ಜುಂಜಪ್ಪ
ಎಪ್ಪತ್ತು ರಾಜ್ಯಕ್ಕೆ ಹೆಸರಾದ

ಜುಂಜಪ್ಪನ ಜನನದಷ್ಟೇ ಕೌತುಕಕಾರಿಯಾದುದು ಅವನ ಮುಂದಿನ ಜೀವನ. ಬಾಲ್ಯದಲ್ಲಿಯೇ ಅವನು ಮೆರೆಯುವ ಮಹಿಮೆ, ಬೀರುವ ಪ್ರಭಾವ, ತೋರುವ ಚಿತ್ತಸ್ಥೈರ್ಯಗಳು ಅವನೊಬ್ಬ ದೈವಸಂಭೂತ ಎಂಬುದನ್ನು ದೃಢ ಪಡಿಸುತ್ತವೆ. ಅವನ ನಿರ್ಮಲ ಚರಿತ, ಗಿರಿಕಂದರಗಳಲ್ಲಿ ಆರ್ಭಟಿಸಿ ಹರಿವ ಹುಚ್ಚುಹೊಳೆಯಲ್ಲ. ಸ್ವಚ್ಛವೂ, ಸುಮಧುರವೂ ಆದ ಕುಲುಕುಲು ನಗೆಯ ಮೃದು ತರಂಗಿಣಿ. ಬಯಲ ವಿಸ್ತಾರದಲ್ಲಿ ಹಬ್ಬಿ ಹರಿಯುತ್ತದೆ. ಗಿರಿ ವನ ಗಳನ್ನು ಸುತ್ತಿ ಸರಿಯುತ್ತದೆ. ಆದರೆ ಆ ನಡಗೆ, ಆ ಬೆಡಗು, ಆ ಹಾಡಿನ ಧಾಟಿ ಅದಕ್ಕೇ ವಿಶಿಷ್ಟವಾದುದು. ಕನ್ನಡ ಜನಪದ ಸಾಹಿತ್ಯದಲ್ಲಿ ಜುಂಜಪ್ಪನ ಕಥೆ ಅದ್ಭುತವೂ ರಮ್ಯವೂ ಆದ ವಿರಳ ಸೃಷ್ಟಿ.

ಶರಣೆಂಬೆ ಶಿವನಿಗೆ, ಶರಣೆಂಬೆ ಗುರುವಿಗೇ
ಶರಣೆಂಬೆ ಎಳು ಕೋಟಿ ಲಿಂಗ್ಯಕೋ

ಭಯಭಕ್ತಿಯಿಂದ, ಶ್ರದ್ಧೆ, ಆಸಕ್ತಿಗಳಿಂದ ತನ್ನದೇ ಆದ ಮಂಜುಳ ವಾಣಿಯಲ್ಲಿ ಕಥಾವಿಸ್ತಾರದತ್ತ ತಿರುಗಿದ್ದಾನೆ ಕಥೆಗಾರ.

ಮಾಯದ ಮಕ್ಕಳಿಗೆ ನ್ಯಾಯವ ಹೇಳದೆ
ಮೌನದಲಿ ಪ್ರಾಣ ತೊರೆದ್ಯನೂ....

ತಂದೆಯ ಮರಣ ಜುಂಜಪ್ಪನ ಮನವನ್ನು ಕಲಕಿತು. ಕಿರಿಯರಾದ ಮಾರಣ್ಣ, ಮೈಲಣ್ಣ, ಇನ್ನೂ 'ಹಾಲು ಕಂದ, ನೀರು ಕಂದ,' ಅವರನ್ನು ಕೂಡಿ ಬಾಳಬೇಕು, ಕಷ್ಟ ಸುಖಗಳಲ್ಲಿ ಸಹಭಾಗಿಯಾಗಬೇಕು. ಕುಲಧರ್ಮವೇನೆಂಬು ದನ್ನು ತಂದೆ ತಿಳಿಸಲಿಲ್ಲ. ತಮ್ಮ ಪಾಲಿನ ಹೊಣೆಯೇನು ಎಂಬುದನ್ನು ಅರುಹ ಲಿಲ್ಲ. ಮುಂದಿನ ಬಾಳು ಬದುಕಿನ ಬಗೆಗೆ ಮೂರು ಮಾತಾಡಿದರೆ ಸಾಕೆನಿಸಿ, ಜುಂಜಪ್ಪ ಯೋಚಿಸಿದನು. ತಂದೆಯ ಕಾಯವನ್ನು ಎಚ್ಚರದಿಂದ ಕಾಯಲು

ಮಾರಣ್ಣ, ಮೈಲಣ್ಣರನ್ನು ಬಿಟ್ಟು ತಾನು ಯಮಧರ್ಮನ ಪಟ್ಟಣಕ್ಕೆ ಹೊರಟನು ತಂದೆಯನ್ನು ಪಡೆದು ಬರಲು.

ನರಲೋಕದಿಂದ ಬಂದ ಪೋರನ ಮೇಲೆ ಯಮಧರ್ಮನ ಏಳು ಸುತ್ತಿನ ಕೋಟೆಯನ್ನು ಕಾಯುವ ಕಾಪಿನವರ ಬಾಣ ಗುರಿ ತಿಳಿಯದಾಯಿತು. ಯಮಧರ್ಮನ ಕರೆಯನ್ನು ಮನ್ನಿಸಿ ಜುಂಜಪ್ಪನೂ ಆ ಪಟ್ಟಣ್ಣವನ್ನು ಹೊಗಲಿಲ್ಲ. ಸೂತಕ ಕಳೆದುಕೊಳ್ಳದೆ ತಾನು ಹೊರಗೇ ನಿಂತಾಗ ಯಮಧರ್ಮ ತಾನಾಗಿಯೇ ನಡೆದು ಬಂದನು, ಅವನೇನು ಸಾಮಾನ್ಯ ಬಾಲಕನಲ್ಲವೆಂದು ಬಗೆದು. ಜುಂಜಪ್ಪ ಕೇಳಿದನು ವಿನಯಶೀಲನಾಗಿ–

ಕೆಂಪನ ಮಲ್ಲೇಗೌಡ ನಿನ್ನ ಪುರಕೆ ಬಂದ್ಯನು
ಕಳಿಸಿಕೊಡಬೇಕು ನನ ಕೂಡ !

ವಟುವಿನ ಮಾತಿಗೆ ಯಮಧರ್ಮ ನಸುನಕ್ಕನು. ಅವನ ಧೈರ್ಯಕ್ಕೆ ಮೆಚ್ಚಿದನು.

ಬರೆದಿದ್ದ ಬರವಣಿಗೆ ಹರಿದುಹೋದ ಮೇಲೆ
ಅರಗಳಿಗೆಯಾದರಿರುವುದೇ ?

ಕೆಂಪನ ಮಲ್ಲೇಗೌಡನಿಗೆ ಭೂಮಿಯ ಋಣವೆಲ್ಲ ಹರಿಧಿದೆ. ಅವನನ್ನು ಮತ್ತೆ ಪಡೆಯಲು ಆಗದೆಂದೇ ಯಮಧರ್ಮ ನುಡಿದಾಗ, ಮೂರು ಗಳಿಗೆಯ ಜೀವದಾನವನ್ನು ಕೇಳಿದನು ಜುಂಜಪ್ಪ. ಆದರೂ ತಂದೆಯೆಂಬ ಪ್ರೇಮಕ್ಕೆ ಅನ್ನವನ್ನು ಕೊಡಕೂಡದು, ಹಾಲು ನೀರು ಕೊಡಕೂಡದು. ಮೂರು ನುಡಿಗಳನ್ನು ಹೇಳಿ ಮರುಗಳಿಗೆಯೇ ಮರಳಬೇಕು–ಕೆಂಪನ ಮಲ್ಲೇಗೌಡ.

ಹಾಸು ಮಂಡೆಯನ್ನು ತೂಗುತ್ತ ಯಮಧರ್ಮನ ಪಟ್ಟಣದಿಂದ ಜುಂಜಪ್ಪ ನಡೆದು ಬರುವಾಗ, ಇತ್ತ ಶಿವ ಶಿವ ಎಂದು ಎದ್ದು ಕುಳಿತನು ಕೆಂಪನ ಮಲ್ಲೇಗೌಡ.

ಯಾಕಿರಪ್ಪ ಮಕ್ಕಳೆ ಎಚ್ಚರ ಮಾಡಿದಿರಿ
ಅಪ್ಪಣೆ ಏನು ಕೇಳಿರಯ್ಯ ?

ಜುಂಜಪ್ಪ ಮೂರು ನುಡಿಗಳನ್ನು ಕೇಳಿದನು. ಮುಂದಿನ ಬಾಳು ಬದುಕನ್ನು ಕೇಳಿದನು, ಕುಲಧರ್ಮವನ್ನು ತಿಳಿಸು ಎಂದನು. ಹಿರಿಯರ ಕಾಲದ ಏಳು

ಗೂಡಿನ ದನಗಳು ; ರಾಯಕಳ್ಳೇರ ಹಳ್ಳಿಯ ಅರಮನೆ, ಎಲ್ಲವನ್ನೂ ತಾಯಿ ಕಂಬೇರ ಚಿನ್ನಮ್ಮನಿಂದ ತಿಳಿಯಿರೆಂದನು ಮಕ್ಕಳಿಗೆ. ತಾತ, ಮುತ್ತಾತ ಉಂಗುರಿ ಮಲ್ಲೇಗೌಡ, ಕೆಂಗುರಿ ಮಲ್ಲೇಗೌಡ ಕಾಲವಾಗಿ ಮೂವತ್ತು ವರ್ಷಗಳು ಸಂದಿವೆ.

ಅವರ ಸಮಾಧಿಗೆ ಹೋಗಿರಪ್ಪ ಮಕ್ಕಳಿ
ಅಲ್ಲೋಗಿ ನಿಜವ ತಿಳಿರಯ್ಯೋ

–ಕೆಂಪನ ಮಲ್ಲೇಗೌಡ ಮುಂದಿನ ದಾರಿಯನ್ನು ತೋರಿದನು. ತನ್ನ ನಿಜವನ್ನು ತಿಳಿಸಿ ಮತ್ತೆ ಕಣ್ಣು ಮುಚ್ಚಿದನು.

ಕಂಬೇರ ಚಿನ್ನಮ್ಮನಿಗೆ ಏಳು ಮಂದಿ ಅಣ್ಣಂದಿರು. ಕಣ್ಣುಮುಚ್ಚುವ ಮುನ್ನ ಕೆಂಪನ ಮಲ್ಲೇಗೌಡ ಎಚ್ಚರಿಸಿದ ಮಕ್ಕಳನ್ನು, ಸೋದರ ಮಾವದಿರ ಹೆಸರನ್ನು ಹೇಳಿ—

ಅನ್ನವ ಇಕ್ಕೋರು ಅನ್ಯಾಯ ಮಾಡೋರು
ಹಾಲಿನಲಿ ಇಸವನೆ ಬೆರಸೋರು
ಅನ್ನದಲಿ ಇಸವನೆ ಬೆರಸೋರು !

ಚಿಕಚಿನ್ನ, ಸಣಚಿನ್ನ, ಸಂದಸುಗಾರ ಚಿನ್ನಣ್ಣ, ಸಾಡಿಕಾರ ಚಿನ್ನಣ್ಣ, ಕೀವೊಟ್ಟೆ ಮರಿಪಿಡ್ಡ, ದೊಡ್ಡ ಚಿನ್ನಣ್ಣ, ಗಂಟಿಕಾರ ಚಿನ್ನಣ್ಣ–ಎಲ್ಲರೂ ತನ್ನ ಮಕ್ಕಳ ಹಗೆಗಳಾದಾರೆಂಬುದನ್ನು ಕೆಂಪನ ಮಲ್ಲನಗೌಡ ತಿಳಿದೇ ಹೇಳಿದನು. ಅವರೊಡನೆ ನ್ಯಾಯ ಬೇಡ, ಅವರು ಕೈ ಮಾಡಿದರೂ ಇವರು ಅಂಜಿ ಹಿಂದೆ ಸರಿಯಬೇಕು ; ಸೋತು ನಡೆಯಬೇಕು !

ಸುದ್ದಿ ಮುಟ್ಟಿತು ಕಂಬೇರ ಹಟ್ಟಿಗೆ. ಏಳು ಗೂಡಿನ ದನವನ್ನು ಬಿಟ್ಟು ಕೆಂಪನ ಮಲ್ಲೇಗೌಡ ಮಡಿದಿದ್ದಾನೆ. ಮಕ್ಕಳಿನ್ನೂ ಚಿಕ್ಕವರು ; ತಾವೇ ದನಗಳನ್ನು ಕಾಯುವ ನೆಪದಲ್ಲಿ ಅಷ್ಟಿಷ್ಟು ಹಸುಗಳನ್ನು ಅಪಹರಿಸುವ ಆಸೆ ಮೂಡಿತು ಮಾವಂದಿರಿಗೆ. ಏಳು ಮಂದಿಯೂ ರಾಯಕಲ್ಲೇರ ಹಳ್ಳಿಗೆ ಬಂದರು, ತಂಗಿಗೆ ಅನುಕಂಪೆಯನ್ನು ಸೂಚಿಸುವಂತೆ.

ಚಿನ್ನಮ್ಮ ಯಾವ ಭರವಸೆಯನ್ನೂ ಕೊಡಲಾರದಾದಳು. ತೇಜಸ್ವಿ ಜುಂಜಪ್ಪ ಏಳುಗೂಡಿನ ದನಗಳ ರಕ್ಷಣೆಗೆ ಮಾರಣ್ಣ ಮೈಲಣ್ಣರೊಡನೆ ತಾನೇ ನಿಂತಿದ್ದಾನೆ. ಹಿಂಡಿನ ಮುಂದೆ ಗೋಲಿ ಗಜ್ಜುಗ ಆಡಿಕೊಂಡು ದನಗಳನ್ನು

ಕಾದಿದ್ದಾನೆ. ತನ್ನ ಉಸಿರಾಗಿ ತನ್ನ ಸರ್ವವೂ ಆಗಿ ಗೋವನ್ನು ಕಂಡ ಅವನು ಉತ್ಸಾಹದಿಂದಲೇ ತನ್ನ ವಂಶದ ಹಕ್ಕನ್ನು ಕಾಯಲು ಪಣ ತೊಟ್ಟಿದ್ದಾನೆ. ಚಿನ್ನಮ್ಮ ತಿಳಿಯದಿರಲಿಲ್ಲ ತನ್ನ ಮಕ್ಕಳ ರೀತಿಯನ್ನು. ಆದರೂ ಅಣ್ಣಂದಿರ ಬಲವಂತಕ್ಕೆ ಮಣಿದು ಅತ್ತ ಬಂದಳು. ಸ್ನಾನ ಮಾಡಿ, ಮಡಿಯುಟ್ಟು, ಬಂಗಾರದ ತಟ್ಟೆಯಲ್ಲಿ ಕರಪೂರವನ್ನು ಹಚ್ಚಿ ಜುಂಜಪ್ಪನನ್ನು ಕಾಣಲು ಗೂಡಿನ ಬಳಿ ಬಂದು ನಿಂತಳು.

ಸೋದರಮಾವಂದಿರ ಸುದ್ದಿ ಅರಿಕೆಯಾಯಿತು ಜುಂಜಪ್ಪನಿಗೆ. "ಬಂದವ ರಿಗೆ ಉಣಲಿಟ್ಟು ಕಳುಹು ತಾಯಿ" ಎಂದಾಗ ಹೇಳಿದಳು, ಚಿನ್ನಮ್ಮ ಅಳುಕಿ ನಿಂದಲೆ–

ಏಳುಗೂಡಿನ ದನವ ಕಾದು ಕೊಡುತಾರಂತೆ
ಹೊಡೆದು ಕೊಡುವುದು ನಿಜನ ಹೇಳಿರಯ್ಯ

ತಾಯನುಡಿಗೆ ಕೋಪವರಿಯದ ಜುಂಜಪ್ಪ ಉರಿದೆದ್ದನು. ಒಂದು ಕ್ಷಣ ತಂದೆ, ತಾತಂದಿರು ಕಾದು ಕಾಪಾಡಿದ ಏಳು ಗೂಡಿನ ದನಗಳ ಮೇಲೆ ಮಾವದಿರ ಕಣ್ಣು ! ತಂದೆ ನೀಡಿದ್ದ ಎಚ್ಚರ ಮಿಂಚಿತು ಅಂತರಂಗದಲ್ಲಿ. ಕಣ್ಣಲ್ಲಿ ಕಿಡಿ ಕಾರುತ್ತ ಅಬ್ಬರಿಸಿದನು–

ಇನ್ನೊಂದು ಸಾರಿ ಆ ಮಾತ ಹೇಳಿದರೆ
ಅವರ ಕಾಲು ಮೆಟ್ಟಿ ನಾನು ಸಿಗಿದೇನು !

ನಡುಗಿಹೋದಳು ಚಿನ್ನಮ್ಮ ಮಗನ ಮಾತಿಗೆ. ಪೆಚು ಮೋರೆಯ ತಂಗಿಯನ್ನು ನೋಡಿಯೇ ಕಂಬೇರು ಬೆದರಿದರು. ನಡೆದುದೆಲ್ಲವನ್ನೂ ಬಣ್ಣಿಸಿ ಹೇಳಿದಳು. ಅಣ್ಣಂದಿರ ಮನ ಕರಗಬಹುದೆಂದು, ತಬ್ಬಲಿ ಮಕ್ಕಳ ಮೇಲೆ–

ಚಿಕ್ಕಮಕ್ಕಳ ಮೇಲೆ ನ್ಯಾಯ ಮಾಡಲು ಬೇಡಿ
ಸುಮ್ಮನೆ ಊರಿಗೆ ಹೋಗಿರಯ್ಯ
ಅಡಿಗೇಯ ಮಾಡುತೀನಿ ಊಟವ ಮಾಡಿಕೊಂಡು
ನಿಮ್ಮ ಊರಿಗೆ ನೀವು ಹೋಗಿರಯ್ಯ

ಕಂಬೇರ ಸಿಟ್ಟು ತಗ್ಗಲಿಲ್ಲ. ಸಿಡಿಮಿಡಿಗೊಂಡು, ಕಂಬಳಿಯನ್ನು ಒದರಿ, ದೊಣ್ಣೆಯನ್ನು ಕುಟ್ಟಿ ಏಳು ಮಂದಿಯೂ ಮೇಲೆದ್ದರು. ಒಲ್ಲದ ಮನೆಯ ಊಟ ಸೇರದಾಯಿತು ಅವರಿಗೆ. ಚಿಕ್ಕ ಮಕ್ಕಳನ್ನು ಕಟ್ಟಿಕೊಂಡು ಬಡಗಲ ರಾಜ್ಯಕ್ಕೆ

ದನಗಳನ್ನು ಕಾಯಲು ಬರದಿರುವಳೇ ! ನಮ್ಮನ್ನು ಆಶ್ರಯಿಸರೇ, ನೆರವನ್ನು ಕೋರರೇ !

ಹೊರಟುಹೋದರು ಮುನಿದ ಆ ಗೊಲ್ಲ ಗೌಡರು. ಚಿನ್ನಮ್ಮ ಕಣ್ಣಂಚಿನ ನೀರನ್ನು ಒರೆಸಿಕೊಂಡು ನಡುಗಿದಳು ಮನದಲ್ಲಿ !

ತಂದೆಯ ನುಡಿಯನ್ನು ಮರೆತಿರಲಿಲ್ಲ ಜುಂಜಪ್ಪ! ತಾಯಿಯನ್ನು ಕರೆದು ಕೊಂಡು ಅಜ್ಜದಿರ ಸಮಾಧಿಗಳನ್ನು ಅರಸುತ್ತ ಬಂದನು. ಮಿಂದು, ಮಡಿ ಯುಟ್ಟು ಗುಡ್ಡೆಯನ್ನು ಪೂಜಿಸಿ ಬೇಡಿದನು—

ಏಳು ಏಳಿರೊ ಏಳಿರಯ್ಯ ಅಜ್ಜಗಳೆ
ಮಕ್ಕಳು ಬಂದವರೆ ಏಳಿರಯ್ಯ
ನ್ಯಾಯವ ಹೇಳಿರಯ್ಯ ನೀತಿಯ ಹೇಳಿರಯ್ಯ
ಯಾವ ನ್ಯಾಯವೊ ನಮಗೆ ತಿಳಿ ಹೇಳಿ

ಉಂಗುರಿ ಮಲ್ಲೇಗೌಡ, ಕೆಂಗುರಿ ಮಲ್ಲೇಗೌಡ ಇಬ್ಬರೂ ಸಮಾಧಿಯಲ್ಲಿ ಎಚ್ಚೆತ್ತರು. ಎಳೆಯರ ಧೈರ್ಯವನ್ನು ಮೆಚ್ಚಿದರು ; ದಿಟ್ಟತನಕ್ಕೆ ತಲೆ ದೂಗಿದರು. ಸಮಾಧಿಯಿಂದಲೇ ಮಾತಾಡಿದರು—

ಹೆಚ್ಚಿನ ಸತ್ಯವ ಮೆಚ್ಚಿದೊ ಕಾಣೆರಯ್ಯ
ಹುಟ್ಟಿದಿರಲ್ಲ ನಮ್ಮ ಬಿರುದಾಗಿ
ಅರಮನೆಗೆ ಹೋಗಿರಯ್ಯ ಬಂಗಾರದ ಮಂಚದೆ
ತಲೆದಿಂಬಿನಾಗೈತೆ ಚಪ್ಪೋಡು
ಬಾಣ ಬತ್ತಳಿಕೆ ಅಲ್ಲೇಯೇ ಇರುವುದು
ಓದುತಗದು ಮಗನೆ ಕುಲವ ಕೂಡಿಸಯ್ಯ

ಜುಂಜಪ್ಪನ ಹೊಣೆ ದೊಡ್ಡದಾಯಿತು. ಅರಮನೆಯಲ್ಲೇ ಬಂಗಾರದ ಮಂಚದ ಮೇಲೆ ದಿಂಬಿನಡಿಯ ಬಂಗಾರದ ಚಪ್ಪೋಡನ್ನು ಅವರು ತಿಳಿಸಿದ್ದಾರೆ. ಬಿಲ್ಲು ಬತ್ತಳಿಕೆಗಳನ್ನು ಕಾಣಿಸಿದ್ದಾರೆ. ಚೆದರಿದ ಮೂನ್ನೂರು ಗೊಲ್ಲ ಕುಲ ವನ್ನು ಮತ್ತೆ ಕೂಡಿಸುವಂತೆ ತನಗೆ ಅಪ್ಪಣೆಯಾಗಿದೆ.

—ಎಲ್ಲರನ್ನೂ ಕೂಡಿ ಮರಳಿದನು ರಾಯ ಕಲ್ಲೇರ ಹಳ್ಳಿಗೆ !
ಕೋಲುಕಾರರನ್ನು ಕರೆಸಿದನು. ಹಟ್ಟಿಗರನ್ನು ಸೇರಿಸಿದನು ಒಂದು ಕಡೆ.

ಹಿಂದೆ ಏಳು ತಲೆಯಲ್ಲಿ ಮಾಡಿದ ಚಪ್ಪೋಡನ್ನು ಓದಿದನು.

ಬಂಗಾರದ ಚಪ್ಪೋಡು ಬರದವರೆ ಕಾಣಿರಯ್ಯ
ಕಂಡೆ ಕಾಣೇಂತ ಹೋಗಬೇಡಿ

ತಮ್ಮ ವಂಶದ ಹಕ್ಕೆಲ್ಲವನ್ನು ತಿಳಿಸಿದನು. ಮುಂದಲ ದೀಪ, ಮುಂದಲ ಛತ್ರಿ, ಹರಿವಾಣ, ಜಾಡಿ–ಎಲ್ಲ ವಿಚಾರಗಳನ್ನೂ ಉತ್ತರಿಸಿದ: ಕುಲಧರ್ಮವನು ಕುರಿತು ಹೇಳಿದ.

ನಾರಿ ಮುತ್ತೈದೇರಿಗೆ ಮೂರು ತಿಂಗಳ ಸೂತಕ
ಕಾಲುವಳ್ಳ ಸೂತಕ ನಾಲಕು ದಿವಸಂತೆ
ಜರಣಾದ ಸೂತಕ ಮೂರು ತಿಂಗಳಂತೆ
ನಡೆ ತಪ್ಪಿನ ಸೂತಕ ಕೈ ಬಿಟ್ಟೆ ಕಳಿಸ್ಯವರೆ
ನೆರೆದ ಸೂತಕ ಹನ್ನೆರಡು ದಿವಸ್ವವೂ !

ಕೆಂಗುರಿ ಮಲ್ಲೇಗೌಡ ಏಳುಗೂಡಿನ ದನಗಳನ್ನು ಕಾದು ಕಟ್ಟಿದನು. ಹಿರಿಯ ಕಲ್ಲುಗುಡ್ಡ, ಮಾದಗಿತ್ತಿ ಕಣಿವೆ, ಮತ್ತೋಡ ಕಾವಲು, ಸೂಜಿಕಲ್ಲು ಬೆಟ್ಟ, ಸಿದ್ದಗಂಗೆ ಬೆಟ್ಟ, ಶಿವಗಂಗೆ ಬೆಟ್ಟ–ಇವೆಲ್ಲವೂ ಆ ಏಳುಗೂಡಿನ ದನಗಳಿಗೆ ಸೇರಿದವು. ಆಡು ಕಾಯುವ ಅಣ್ಣನಿಗೆ ಆರು ಗಿಣ್ಣಿನ ಕೋಲು, ಕುರಿಯ ಕಾಯುವ ಅಣ್ಣನಿಗೆ ಏಳು ಗಿಣ್ಣಿನ ಕೋಲು, ದನವ ಕಾಯುವ ಅಣ್ಣನಿಗೆ 'ದ್ಯಾವ ಬೆತ್ತದ ಕೋಲು'ಗಳನ್ನು ಅವರೇ ತಿಳಿಸಿ ಹೋಗಿದ್ದಾರೆ. ಜುಂಜಪ್ಪ ಸಾರಿ ಸಾರಿ ಹೇಳಿದನು—

ತಿಳಿದರೇನಿಂಯ್ಯ ಜಗವೆಲ್ಲೋ‌ೀೀ
ಶರಣರು ಮಾಡಿದ ಚಪ್ಪೋಡು ಕಾಣಿರಯ್ಯ
ಕಂಡೇ ಕಾಣೇಂತ ಹೋಗಬೇಡಿ !

ಕುಲಧರ್ಮವನ್ನು ತಿಳಿಸಿದ ಜುಂಜಪ್ಪ ಮತ್ತೆ ದನದ ಗೂಡಿನತ್ತ ತಿರುಗಿದ. ಏಳು ಗೂಡಿನ ದನಕ್ಕೆ ಹುಲ್ಲಿಲ್ಲ : ನೀರಿಲ್ಲ, ಸರಿಯಾದ ನೆಲೆಯನ್ನು ಅರಸಿ ಬರಲಾಗಿ ತಮ್ಮ ಮಾರಣ್ಣನನ್ನು ಕಳಿಸಿದನು. ಹೋದ ಮಾರಣ್ಣ ಬರಿಕೈಯಲ್ಲಿ ಬರುವಂತಿಲ್ಲ : ಹುಲ್ಲು ನೀರಿನ ಗುರುತನ್ನು ತರಬೇಕು.

ಅಣ್ಣನ ಅಣತಿಯನ್ನು ಹೊತ್ತ ಮಾರಣ್ಣ ಕಾವಲುಗಳನ್ನೆಲ್ಲ ಅರಸುತ್ತ ನಡೆದನು. ಮಾದಿಗಿತ್ತಿ ಕಣಿವೆಯನ್ನು ಮಾತಾಡಿಸಿ ಬಂದನು. ಸೂಜಿಕಲ್ಲು ಬೆಟ್ಟವನ್ನು ಸುತ್ತಿ ಸುತ್ತಿ ಬಂದನು. ಮತ್ತೊಂದು ಕಾವಲಿಗೆ ಮತ್ತೆ ಹೋಗಿ ಬಂದನು; ಸಿದ್ದಗಂಗೆ, ಶಿವಗಂಗೆ, ಎಲ್ಲವನ್ನೂ ಸುತ್ತಿ, ಹುಲ್ಲು ನೀರಿನ ನೆಲೆಯನ್ನು ಕಂಡುಕೊಂಡನು.

ಶಿವಗಂಗೆ ಬೆಟ್ಟದ ನೆತ್ತೀಲಿ ನಿಂತುಗಂಡು
ಸುತ್ತೇಳು ಗಾವ್ದ ನೋಡುತಾನೆ

ಚೇಳೂರ ದೊರೆ ಮಕ್ಕಳ ಕಾವಲು ಕಂಡಿತು. ಹುಲ್ಲೇ ಒಂದು ಚೆಂದಕ್ಕೆ, ನೀರೇ ಒಂದು ಚೆಂದಕ್ಕೆ ತೋರುವ ಆ ಕಾವಲಿಗೆ ಬಂದು ಹಿರಿ ಹಿಗ್ಗಿದನು ಅಲ್ಲಿನ ಸಮೃದ್ಧಿಗೆ.

ಮಾರೊಳ್ಳೆ ಹುಲ್ಲು ಮಾರುದ್ದಕೆ ಬೆಳೆದೈತೆ
ಸೀರಣಿಗೆ ಹುಲ್ಲು ಸ್ಯಾರಿಂಬಿಕೆ-ಬೆಳದೈತೆ
ನೂರೊಂದು ತರದ ಹುಲ್ಲೆ ಇರುವೋದು

ನೂರೊಂದು ಬಗೆಯ ಹುಲ್ಲನ್ನು ಕಿತ್ತು ಎಡ ಕಂಕುಳಲ್ಲಿ ಇರಿಸಿ 'ಶ್ಯಾರೆ' ಯಲ್ಲಿ ನೀರನ್ನು ತೆಗೆದುಕೊಂಡು ರಾಯ ಕಲ್ಲೇರ ಹಳ್ಳಿಗೆ ಮರಳಿದ. ಜುಂಜಪ್ಪ ಮೆಚ್ಚಿದನು ತಮ್ಮನ ಸಾಹಸಕ್ಕೆ—

ಕಂಕುಳಲ್ಲಿ ತಂದ್ಹುಲ್ಲ ಕೆದರ್ಯಾನು ನೋಡಯ್ಯ
ಹಿಡಿಯಾಗೆ ತಂದ ನೀರ ಕಟ್ಟೆಗೆ-ಬಿಟ್ಟನು
ಕಾಕ್ಹಾಕಿ ದನವ ಕರೆದಾನು

ದನಿಯೆತ್ತಿ ಮತ್ತೆ ಕರೆದನು ಜುಂಜಪ್ಪ ತನ್ನ ಏಳು ಗೂಡಿನ ದನಗಳನ್ನೆಲ್ಲ.

ಅಕ್ಕಮಾರಿ ಚಿಕ್ಕಮಾರಿ ಚತುರಂಬೆ ಗೊಡ್ಡಿಗಾಳಿ
ಬಲಿರವ್ವ ಎಂದು ದನವ ಕರೆದ್ಯನೋೞೞ

ಮಾರಣ್ಣ ತಂದ ಹುಲ್ಲು ನೀರು ಏಳುಗೂಡಿನ ದನಕ್ಕೂ ಏಳು ದಿವಸವೇ ಆಯಿತು. ಇನ್ನು ಬಡಗಲ ಸೀಮೆಗೆ ದನಗಳನ್ನು ಕರೆಯಲು ಸಿದ್ಧತೆಗಳು ನಡೆದವು.

ಏಳು ಗೂಡಿನ ದನವನ್ನೂ ಬಡಗ ರಾಜ್ಯಕ್ಕೆ ಹೊಡೆಯಬೇಕು.

ಬರುವುದು ಇನ್ನೆಷ್ಟು ದಿನಕ್ಕೋ ? ದೇವರದಿಂಡರ ಸೇವೆಯಾಗಬೇಕು. ದೇವ ಲೋಕದ ಅಡಿಗೆಯನ್ನೇ ಮಾಡಿಸಿ ಎಲ್ಲರನ್ನೂ ಸಂತೋಷಗೊಳಿಸಬೇಕು! ದೇವತೆ ಗಳೇ ಬಂದು ಅಡಿಗೆ ಮಾಡಿ ಉಣಬಡಿಸಬೇಕು !

ಅಣ್ಣ ಜುಂಜಪ್ಪನ ಆಜ್ಞೆ ! ಲಿಖಿತವನ್ನೊಳಗೊಂಡ ಬಾಣವೊಂದನ್ನು ದೇವಲೋಕಕ್ಕೆಸೆದರು. ಮಾರಣ್ಣ, ಮೈಲಣ್ಣ, ಬಾಣಂತಿಯರು, ಬಸುರಿಯರು ಇರುವ ಎಡೆ; ಎಚ್ಚರವಿರಲಿ ಎಂದೇ ನುಡಿದಿದ್ದ ಕರುಣಾಳು ಜುಂಜಪ್ಪ. ಬಾಣದ ಹಿಂದೆಯೇ ದೇವತೆಗಳು ಕಲೆತರು. ದೇವಲೋಕದ ಭಕ್ಷ್ಯಭೋಜ್ಯ ಗಳು ಸಿದ್ಧವಾದಾಗ ಹಿರಿಯಣ್ಣ ಜುಂಜಪ್ಪ ಊರ ಮುಂದಿನ ದೊಡ್ಡ ಬಂಡೆ ಯೊಂದನ್ನೇರಿ ಸಾರಿದನು ಲೋಕಕ್ಕೆ–

ಹನ್ನೆರಡು ಆಳುದ್ದ ಉಪ್ಪಾರಿಗೆ ಕಲ್ಲುಮೇಲೆ
ಹತ್ತಿ ಕೂಗುತಾನೆ ಮನೆಸ್ವಾಮಿ

ಹಿರಿಯರು ಪೂಜಿಸಿದ ದೇವರಾರೊ, ದಿಂಡಿರಾರೋ, ಅವನಿಗೆ ತಿಳಿಯದು. ಅವನ ಕರೆಯನ್ನು ಕೇಳಿ ಬಂದು ಆತಿಥ್ಯವನ್ನು ಪಡೆಯಬೇಕು. ಹೆಸರೆತ್ತಿ ಕೂಗಲಾಗದ ತನ್ನನ್ನು ನಿಂದಿಸಲಾಗದು–

ಕಂಡೆನು ಕಾಣೆನು ಎನಬೇಡಿ ಕಾಣಿರಯ್ಯೊ
ದೇವಲೋಕದಡಿಗೆ ಮಾಡಿಸೀನಿ–ನೀವೀಗ
ಯಾರಾದರು ಬಂದು ಉಣಬಹುದು.

ಮೂರು ಬಾರಿ ಸೊಲ್ಲೆತ್ತಿ ಕೂಗಿದನು ಲೋಕವೆಲ್ಲ ಮೊಳಗುವಂತೆ. ಏಳುಗಾವುದವರೆಗೆ ಕೇಳಿದ ಕೂಗು ಕಂಬೇರ ಹಟ್ಟಿಗೂ ಮುಟ್ಟಿತು. ಚಿಕ್ಕ ಚಿನ್ನ ಸಣ್ಣ ಚಿನ್ನ, ಕೀವೊಟ್ಟೆ ಮರಿಪಿಡ್ಡ....ಎಲ್ಲ ಮಾವಂದಿರೂ ಬಂದರು ತಲೆ ಮರೆಸಿ ಕೊಂಡು.

ಮನೆಸ್ವಾಮಿ ಜುಂಜಯ್ಯ ಮಾಡಿಸಿದ ಅಡಿಗೆಯನ್ನು ಉಂಡು ಹೋಗದ ವರಾರು ! ಸೀಮೆಯ ದೇವರಿಗೆಲ್ಲ 'ಎಡೆ ಬಿಡಾರ' ಆಯಿತು. ಸೀಮೆಯ ಮಂದಿಯೆಲ್ಲ ಉಂಡು ಹೋದರು. ಎಲ್ಲರು ತಣಿದು ಹೋದರೆಂದೇ ಭಾವಿಸಿದ ಜುಂಜಪ್ಪ !

ಮೂಡಲ ದಿಣ್ಣೆಯಲ್ಲಿ ಗುಟಿಹಳ್ಳಿ ಭೂತ ? ಬೇವಿನಹಳ್ಳಿ ಕರಿಯಮ್ಮ

ಕಾದು ಕಾದು ಸೋತರು, ಈಗ ಕರೆದಾನು, ಆಗ ಕರೆದಾನೆಂದು–

ಮೂಡಲ ಎಲ್ಲೇಲಿ ಎಟಕೀಸಿ ನೋಡುತಾರೆ
ಯಾವಾಗ ಅಣ್ಣಯ್ಯ ಕರವ್ರೋನೋ !

ಜುಂಜಪ್ಪನಿಗೆ ತಿಳಿಯದು ತನ್ನ ಮನೆ ದೇವರನ್ನೇ ಕರೆಯೆನೆಂದು ! ಉಂಡ ಮಂದಿಯೆಲ್ಲ ಕರಗಿತು. ಉಳಿದ ಅನ್ನವನ್ನು ಜಲಧಿಯ ಜೀವಿಗಳಿಗೆ ಚೆಲ್ಲಿದರು. ಇತ್ತ ಮುನಿದೆದ್ದು ಆರ್ಭಟಿಸಿದರು ಮನೆದೇವರು, ಗಂಟಿಹಳ್ಳಿಯ ಭೂತ, ಬೇವಿನ ಹಳ್ಳಿಯ ಕರಿಯಮ್ಮ–

ದೇವಲೋಕದಡಿಗೆ ಮಾಡಿಸಿ ನಮ್ಮಣ್ಣ
ನಮಗೊಂದು ಎಡೆಯ ಕೊಡಲಿಲ್ಲ !
ಬಡಗಲ ರಾಜ್ಯಕ್ಕೆ ದನಗಳ ಹೊಡೆದಾಗ
ಅವನ ಅಂಗಾಲಗೆ ರೈತ ಹರಿಯಾಲಿ !

ಜುಂಜಪ್ಪನ ಎಡಗಾಲಲ್ಲಿ ರಕ್ತ ಹರಿಯಬೇಕು, ಎಡವಿದ ಕಲ್ಲೇ ಕಿಡಿಯಾಗಿ ಉರಿಯಬೇಕು ! ಮಾರಣ್ಣ ಮೈಲಣ್ಣ ಒಂದು ದಾರಿಯಾಗಬೇಕು. ಅವನ ಏಳುಗೂಡಿನ ದನಗಳೂ ಬೇರೆ ಆಗಬೇಕು. ಜುಂಜಪ್ಪನ ಮೇಲೆ "ಮೂಗ್ಹುತ್ತ" ಬೆಳೆದು ಹೋಗಬೇಕು !

ಮನೆದೇವರಿಬ್ಬರೂ ನೀಡಿದ ಶಾಪ ! ಅರಿಯದ ಜುಂಜಯ್ಯ ಊರನ್ನು ತೊರೆದಾಗ ದಾರಿಯಲ್ಲಿ ಘೋರ ಹಿಂಸೆಯನ್ನೇ ಸಹಿಸಿದ ! ಎಡವಿದ ಕಾಲಲ್ಲಿ ಭಯಂಕರ ಉರಿ, ಉಕ್ಕುವ ರಕ್ತ ! ನೋವನ್ನು ನುಂಗಿಕೊಂಡೇ ನಡೆದ ಏಳು ಗೂಡಿನ ದನಗಳೊಡನೆ, ಮಾರಣ್ಣ, ಮೈಲಣ್ಣರೊಡನೆ. ತಾಯಿ ಚಿನ್ನವ್ವ ಹಟ್ಟಿಯಲ್ಲೇ ಉಳಿದಳು. ಮಗ ಮರಳುವುದು ಇಪ್ಪತ್ನಾಲ್ಕು ವರ್ಷಗಳ ಮೇಲೆ ಎಂದು ಅರಿತ ಅವಳ ಕಣ್ಣಲ್ಲಿ ನೀರು ಹರಿಯಿತು ಕೋಡಿಯಾಗಿ !

ಅವರವರ ಬಿರುದನ್ನು ಧರಿಸಿದರು ಸೋದರರು. ಮನೆಸ್ವಾಮಿ ಜುಂಜಯ್ಯ ಪಟ್ಟೆಯ ದೋತುರದಲ್ಲಿ ಬಿಗಿದು ಕಚ್ಚೆಯನ್ನು ಕಟ್ಟಿದ. ಬಂಗಾರದ ರುಮಾಲನ್ನು ಸುತ್ತಿದ. ಚಿನ್ನದ ಚಪ್ಪೆಗೊಡಲಿಯನ್ನು ಹಿಡಿದು, ಬಾಣ ಬತ್ತಳಿಕೆಗಳನ್ನು ಹೆಗಲಿಗೇರಿಸಿದ. ಮಾರಣ್ಣ ಮೈಲಣ್ಣರನ್ನು ಕರೆದುಕೊಂಡು–

ಕಾಕ್ಹಾಕಿ ದನವ ಹೊಡೆದಾನು
ರಾಯ ಕಳ್ಳೇರ ಹಳ್ಳಿ ಊರ ಮುಂದೆ ಹಾಕಿದ ಕಾಕು
ಕಂಬೇರ ಹಟ್ಟಿಗೆ ಸುಳಿದಾವೊ !

ಜುಂಜಯ್ಯನ ಕೇಕೆ ಕೇಳಿಸಿತು ಕಂಬೇರ ಹಟ್ಟಿಗೆ. ಅವನು ದನಗಳನ್ನು ಬಿಟ್ಟನೆಂದು ತಟ್ಟನೆ ಅರಿತರು. ಚಿನ್ನಿಯ ಮಗ ಜುಂಜನ ಗರ್ವವನ್ನು ಮುರಿಯಲೆಂದೇ ಆ ದಿಕ್ಕಿನಲ್ಲಿಯೇ ತಮ್ಮ ದನಗಳನ್ನೂ ಬಿಟ್ಟು ಬಂದರು.

ಮುಂದಿನ ದನದೊಡನೆ ಕುಂಟುತ್ತ ಬಂದ ಜುಂಜಪ್ಪ ಕಾಲಿನ ರಕ್ತವನ್ನು ಒರೆಸಲಿಲ್ಲ. ತಾಳ್ಯವದ ದುರ್ಗಿಯ ಬಯಲು ಕಂಡಿತು. ಏಳು ಸುತ್ತಿನ ಕೋಟೆ ಕಟ್ಟಿಸಿದ್ದಾಳೆ ದುರ್ಗಿ. ಏಳು ಸುತ್ತಿನ ಪಂಜರವನ್ನು ಬಿಗಿಸಿದ್ದಾಳೆ ತನ್ನ ಕಾವಲಿಗೆ ! ಮಾರಣ್ಣ ಮೈಲಣ್ಣ ಬಂದರು. ಬಾಗಿಲು ಎಲ್ಲೂ ಕಾಣಲಿಲ್ಲ. ಜುಂಜಪ್ಪ ಯೋಚಿಸುತ್ತಾ ಕುಳಿತಾಗ ಅಣ್ಣನನ್ನು ಹುರಿದುಂಬಿಸಿದರು ಸೋದರರು—

ಉಕ್ಕಿನ ದಸಿಗಳ ಜಗ್ಗಿಸಿ ತುಳಿಯಯ್ಯ
ದನವ ಕರೆಯಯ್ಯ ದಾಟಿ ದಾಟಿ !

ಹೊಸ ಹುರುಪಿನಿಂದ ಮೇಲೆದ್ದ ಕುಲಸ್ವಾಮಿ. ತನ್ನ ಎಡಗಾಲಿನಿಂದಲೇ ಆ ಕೋಟೆಯನ್ನು ಚಿಮ್ಮಿದ ! ಉಕ್ಕಿನ ದಸಿಗಳನ್ನು ಕಿತ್ತೆಸೆದನು । ದಿಣ್ಣೆಯ ಮೇಲೆ ನಿಂತು ಕಾವಲಿಗೆ ದನವನ್ನು ಕರೆದನು. ಏಳುಗೂಡಿನ ದನವ ನುಗ್ಗಿದವು ದುರ್ಗಿಯ ಕಾವಲಿಗೆ !

ಕಂಬೇರ ದೊಡ್ಡಿಗೆ ಸುದ್ದಿ ಮುಟ್ಟಿತು. ದುರ್ಗಿಯ ಬಳಿಗೆ ಹೋಗಿ ಚಾಡಿ ಹೇಳಲೂ ಹಿಂಜರಿಯಲಿಲ್ಲ ಅವರು. ತಾಳ್ಯವದ ದುರ್ಗಿ ಆ ಮೂವರನ್ನು 'ಉಂಡೆ ಬೆರಸ' ನುಂಗಿದರೆ ಏಳು ಗೂಡಿನ ದನವೂ ನಮ್ಮ ವಶವೆಂದು ಓಗ್ಗಿ ದುರ್ಗಿಯನ್ನು ಕೆರಳಿಸಿವರು. ಎತ್ತಿನ ಗೊತ್ತಿನಾಳ ತಂಬಿಗೆ ಹಣ ಸುರಿಯುವುದಾಗಿಯೂ ನುಡಿದರು.

ದುರ್ಗಿಯ ಬಯಕೆಯಂತೆ ಅರಮನೆಯ ಮುಂದೆ ಐವತ್ತು ಆಳುದ್ದದ ದೊಡ್ಡ ಕಂದಕವನ್ನು ಅಗೆದರು ಕಂಬಿಯುಗೊಲ್ಲರು. ಅದಕ್ಕೆ ಹುಲ್ಲು ತುಂಬಿ ದೂರ ಸರಿದರು.

ದನವಿನ ಬಳಿಗೆ ಬಂದಳು ದುರ್ಗಿ. ಏಳುಗೂಡಿನ ದನವೂ ಚೆಲ್ಲಿಕೊಂಡು

ಮೇಯುತ್ತಿವೆ. ಮಾರಣ್ಣ ಮೈಲಣ್ಣ ಗೋಲಿಗೆಜ್ಜುಗವಾಡುತ್ತಿದ್ದಾರೆ. ಮನೆ ಸ್ವಾಮಿ ಜುಂಜಪ್ಪನಿಗೆ ಕಲ್ಲು ಕಟ್ಟೆಯ ಮೇಲೆ ಯಮನಿದ್ದೆ ಕವಿದಿದೆ. ದೊಡ್ಡ ಹುತ್ತ ಬೆಳೆದು ಅವನು ಮುಚ್ಚಿ ಹೋಗಿದ್ದಾನೆ. ಅಣ್ಣನನ್ನು ಕಾಣದೆ ಮಾರಣ್ಣ, ಮೈಲಣ್ಣ, ಹಲುಬಿ ಹಂಬಲಿಸಿ ದನಿಯೆತ್ತಿ ಕೂಗಿ ಕರೆಯುತ್ತ ಅಡ್ಡಾಡುವಾಗ ದುರ್ಗಿ ಕಾಣಿಸಿಕೊಂಡಳು. ಜುಂಜಪ್ಪ ತನ್ನ ಮನೆಯಲ್ಲಿದ್ದಾನೆಂದು ಒಪ್ಪಿಸಿ ಮಕ್ಕಳನ್ನು ಅತ್ತ ಕರೆತಂದಳು.

ಮೂಡಲ ದಿಣ್ಣೆಯ ಮನೆದೇವರು ಇತ್ತ ನಿಟ್ಟಿಸಿ ಬೆಚ್ಚಿ ಬಿದ್ದರು. ಗಂಟಿ ಹಳ್ಳಿ ಭೂತ, ಬೇವಿನ ಹಳ್ಳಿ ಕರಿಯಮ್ಮ ಇಬ್ಬರೂ ಅತ್ತ ಬಂದರು. ತಮ್ಮ ಶಾಪದಿಂದಲೇ ಹಿರಿಯಣ್ಣ ಜುಂಜಪ್ಪ ಹುತ್ತ ಬೆಳೆದು ಗಾಢ ನಿದ್ದೆಗೆ ತೊಡಗಿ, ಮಾರಣ್ಣ ಮೈಲಣ್ಣ ಅತ್ತ ಒಲಿದಾಗುತ್ತಿದ್ದಾರೆ. ಮಕ್ಕಳನ್ನು ಉರಿವ ಕೊಂಡ ದಿಂದ ಉಳಿಸಲೆಂದು ಓಡೋಡಿ ಬಂದರು. ಬೇವಿನಹಳ್ಳಿ ಕರಿಯಮ್ಮ ತಾಳ್ಯವದ ದುರ್ಗಿಯನ್ನು ಎಟುಕಿಸಿಕೊಂಡಳು. ಮಕ್ಕಳಿಗೆ ಮೊದಲು ತಾನೇ ಆ ದೊಡ್ಡ ಕಂದಕಕ್ಕೆ ಇಳಿದಳು. ಮಕ್ಕಳಿಬ್ಬರನ್ನೂ ಕಂದಕಕ್ಕೆ ಎಸೆದಾಗ ಮುತ್ತಿನ ಸೆರ ಗೊಡ್ಡಿ ಆತುಕೊಂಡಳು. ಮರೆ ಮಾಡಿಕೊಂಡು ಇತ್ತ ಕರೆತಂದಳು. ಒರಿಯ ಕಂದಕಕ್ಕೆ ಬೆಂಕಿಯನ್ನು ಹಾಕಿ ಬೇಯಿಸಿದರು. ಹಾಡಿ ಹಾಡಿ ಕುಣಿದರು ! ಕಾವಲಲ್ಲಿ ಹಸುಗಳೆಲ್ಲ ತಲ್ಲಣಗೊಂಡವು. ಅಕ್ಕಮಾರಿ, ಚಿಕ್ಕಮಾರಿ, ಅತಿರಂಬೆ ಗೊಡ್ಡಿಗಾಳಿ ಎಲ್ಲಾ ಅಣ್ಣ ಜುಂಜಯ್ಯನ ಎಡೆಗೆ ಓಡಿಬಂದವು. ತಮ್ಮ ಮೈಯನ್ನೇ ಉಜ್ಜಿ ಎಳಿಸಿದವು.

ಏಳೇಳು ಅಣ್ಣಯ್ಯ ಎಷ್ಟೊತ್ತು ಸುಖನಿದ್ದೆ
ಅನ್ನುತ್ತೇಳಿ ಏಳೇಳು ಜಡೆಯ ಎಳೆದಾವು

ಜುಂಜಪ್ಪನ ಏಳೇಳು ಜಡೆಯನ್ನೇ ಹಿಡಿದು ಮುಂದಲ ದನವಿಗೆ ತಂದು ಬಿಟ್ಟವು. ಮಂಡೆಯನ್ನು ಒದರಿ ಮನೆಸ್ವಾಮಿ ಜುಂಜಪ್ಪ ಮೌನವಾಗಿಯೇ, ನಿದ್ದೆಯ ಮಂಪರಿನಲ್ಲಿಯೇ ಎದ್ದು ಕುಳಿತಾಗ ಪದವನ್ನು ಹಾಡಿಕೊಂಡು ಕೂಗಿ ನಲಿಯುತ್ತ ದನಗಳನ್ನು ಹೊಡೆಯಲು ಕಂಬೇರು ಅತ್ತ ಬಂದರು. ಎದ್ದು ಕುಳಿತ ಜುಂಜಪ್ಪನ ಮುಖವನ್ನು ನೋಡಿ ಬೆದರಿ ಬೆಪ್ಪಾದರು !

ದಗಡಿಗ ಜುಂಜಪ್ಪ ಎದ್ದನು ನೋಡಮ್ಮ
ಉಳಿವದೇನೆ ನಮ್ಮ ಮನೆಮಟ

ದುರ್ಗಿಯನ್ನು ನಿಂದಿಸಿದರು. ತಮ್ಮ ಗತಿಯೇನೆಂದುಗಿದರು. ನಡುದುರ್ಗಿ ಮುನಿದೆದ್ದಳು ಅವರ ನುಡಿಗೆ. ಈಗಲೇ ಜುಂಜಪ್ಪನನ್ನು ನುಂಗಿ ಬರುತ್ತೇನೆಂದು ಮುಂದೆ ನುಗ್ಗಿದಳು.

ಗಂಟಿಹಳ್ಳಿ ಭೂತ ಎದುರಾಯಿತು. "ಅಕ್ಕಯ್ಯ" ಎಂದು ವಿನಯವಾಗಿಯೇ ನುಡಿಸಿ ಕೇಳಿದಾಗ, ಗುಡುಗಿದಳು ದುರ್ಗಿ–

ಕೇಳಲ ಎಲಭೂತ ದಗಡಿಗ ಜುಂಜನಂತೆ
ಉಂಡ ಬೆರಸೆ ನುಂಗಿ ಬರುತಿನಿ-ನಾನೀಗ
ನಿನಗೇನಾಗಬೇಕು ಹೇಳಲ

ಗಂಟಿಹಳ್ಳಿಯ ಭೂತಣ್ಣನು ಕೋಪವನ್ನು ಕಾರಿದ—

ದೇವಲೋಕದ ಅಡಿಗೆಯ ಮಾಡಿಸಿದ
ನನಗೊಂದು ಸೊಲ್ಲ ಹೇಳಲಿಲ್ಲ –ಅಕ್ಕಯ್ಯ
ನನಗೂವೆ ಹಗೆಗಾರ ನಡಿಯಮ್ಮ !

ಜೊತೆಯಲ್ಲಿ ಹೊರಟರು ಹುರುಡಿನಿಂದ. ಯಾರು ಮೊದಲು ಎನ್ನುವ ಮೇಲಾಟ ಅವರಲ್ಲಿ ! ಯಾರು ದೊಡ್ಡದಾಗಿ ಬೆಳೆಯುವರೋ ನೋಡಬೇಕೆಂದಿತು ಗಂಟಿಹಳ್ಳಿ ಭೂತ. ಬೆಳೆದಳು ದುರ್ಗಿ ಭಯ ಭೀಕರವಾಗಿ, ಮುಗಿಲೆತ್ತರಕ್ಕೆ ಅವಳಿಗೂ ಎತ್ತರಕ್ಕೆ ಬೆಳೆದ ಭೂತಣ್ಣ ! ಎರಡು ಭುಜದ ಮೇಲೂ ತನ್ನ ಪಾದವಿಟ್ಟು ಭೂಮಿಗೆ ತುಳಿದನು ಅವಳನ್ನು. ಕುಸಿದ ಕಂಗಾಲಾದ ದುರ್ಗಿ ಗತಜೀವಳಾಗಿ ಬೇಡಿದಳು ಭೂತಣ್ಣನನ್ನು. ತನ್ನ ಅರಮನೆಯ ಬೀಗವನ್ನು, ತಾಳ್ಯದ ಕಾವಲನ್ನು, ತನ್ನ ಮನೆ ಮಠಗಳನ್ನು ಜುಂಜಪ್ಪನಿಗೆ ಅರ್ಪಿಸಿ ಪಾರಾದಳು.

ಗಂಟಿಹಳ್ಳಿ ಭೂತ ದನಪಿನ ಬಳಿಗೆ ಬಂದು ಜುಂಜಯ್ಯನನ್ನು ನುಡಿಸಿತು–

ಅಣ್ಣಯ್ಯ ಮನೆಸ್ವಾಮಿ ಮಕ್ಕಳು ಎಲ್ಲಯ್ಯಾ
ಮಂಕಾಗಿ ಏಕೆ ಇರುವೇಯೋ

ಸೀಮೆಯದೇವರಿಗೆಲ್ಲ ಎಡೆ ಬಿಡಾರ ಮಾಡಿಸಿದವನವನು ; ಮನೆ ದೇವರಾದ ತಮ್ಮನ್ನು ಮರೆತವನು. ಉಳಿದ ದೇವಲೋಕದ ಅಡಿಗೆಯನ್ನು ಜಲಧಿಗೆ ಈಡಾಡಿ ದನಗಳನ್ನು ಹೊಡೆದು ತಂದವನು. ಉಂಡು ಹೋದ ಮಂದಿ ಯಾರೂ ಕಾಯಲಿಲ್ಲ !

ಹಂಗಿಸಿತು ಭೂತ ಜುಂಜಯ್ಯನನ್ನು ! ಮುಖವೆತ್ತಿ ನೋಡಿದ ಅವನ ತುಟಿಯಿಂದ ಚಿಮ್ಮಿತೊಂದು ನುಡಿ—

ಸೀಮೆಯ ದೇವರ್ಯ್ಯಾರು ನೀವ್ಯ್ಯಾರು ನನ್ನೀಗೆ
ಸರ್ವದೇವರು ಒಂದೇಯ-ಕಾಣಿರಯ್ಯ
ಅನ್ಯಾಯದ ಮಾತ ಆಡಬೇಡಿ.

ಹಿರಿಯರು ಪೂಜಿಸಿದ ದೇವರು ತಾವು ; ಮೂಡಲ ದಿಣ್ಣೆಯಲ್ಲಿ ಎಟುಕಿಸಿ ಕಾದರೂ ಒಂದು ಸೊಲ್ಲು ಕರೆಯಲಿಲ್ಲ. ದೇವಲೋಕದ ಅಡಿಗೆ ಮಾಡಿಸಿ ತಮಗೊಂದು ಎಡೆಯನ್ನು ಕೊಡದಿದ್ದುದು ಜುಂಜಯ್ಯನ ಅಪರಾಧ. ತಾಳ್ಯವದ ಕಂದಕದಲ್ಲಿ ಬೆಂದುಹೋಗುತ್ತಿದ್ದ ಮಕ್ಕಳನ್ನು ಉಳಿಸಿದವರು ತಾವು. ಏಳು ಹಳ್ಳಿಯ ಗೌಡಾಳಿಕೆಯನ್ನು ಕೂಡಿಸಿ–ನ್ಯಾಯವನ್ನು ಬಯಸಿದರು ಮನೆದೇವರು. ತಮ್ಮದೇ ಶಾಪದ ಫಲವೆಂದರು ಆ ಕಷ್ಟಕ್ಕೆ ! ಲೋಕವನ್ನೆಲ್ಲಾ ಕರೆದ ತನ್ನ ಪಾಲಿಗೆ ಅಪರಾಧವಿಲ್ಲವೆಂದೇ ನುಡಿದ ಜುಂಜಪ್ಪ. ಮನೆದೇವರಾದರೇನು ? ತಪ್ಪುಗಾಣಿಕೆ ಕೊಡದಿರುವನೆ ? ಇಂದಲ್ಲದಿದ್ದರೆ ಇನ್ನೊಮ್ಮೆ ಅವರಿಗೆ ಎಡೆ ಸಲ್ಲಿಸುವವನವನು ! ಅವರ ಮನೆಗೇ ಅವರು ಎರಡೆಣಿಸುವುದೇ !

ಕಾಣದ ಮಕ್ಕಳಿಗೆ ಶಾಪವ ಕೊಟ್ಟೋರು
ಆಡಿದ ಮಾತಿಗೆ ತಪ್ಪ ಇಡಬೇಕು !

ಅರಿಯದ ಮಕ್ಕಳಿಗೆ ಶಾಪವನ್ನು ಕೊಟ್ಟ ಅವರದೇ ತಪ್ಪು ! ಮೂರು ದುಡ್ಡ ತಪ್ಪು ಗಾಣಿಕೆ ಕೊಡಬೇಕು ಮನೆದೇವರು–

ಆಡಿದ ಮಾತು ತಪ್ಪು ! ನುಡಿದ ನಾಲಿಗೆ ತಪ್ಪು
ಅನುತಂದು ಕೈಯ ಮುಗಿದಾರು

ಮೂರು ದುಡ್ಡು ಕಾಣಿಕೆಯನ್ನು ಅರ್ಪಿಸಿದರು ಜುಂಜಪ್ಪನ ಕೈಗೆ. ತಪ್ಪುಗಾಣಿಕೆಯನ್ನು ಪಡೆದ ಜುಂಜಪ್ಪ ಶೀರ್ಯದ ಹನ್ನೆರಡು ಖಂಡುಗ ಅಕ್ಕಿಯನ್ನು ತರಿಸಿದ. ತಾಳ್ಯವದ ಕಾವಲಿನಲ್ಲಿ ದೊಡ್ಡ ರಾಶಿಯನ್ನು ಅಣಿಗೊಳಿಸಿದ. ಗಂಟಿಹಳ್ಳಿ ಭೂತ, ಬೇವಿನಹಳ್ಳಿ ಕರಿಯವ್ವ ಅನ್ನದ ರಾಶಿಯನ್ನೆಲ್ಲ ಮುಗಿಸಿದರು. ರಭಸದಲ್ಲಿ ಒಂದೊಂದು ಮೊಳ ಆಳಕ್ಕಿಳಿಯುವಂತೆ ಮಣ್ಣನ್ನು ತಿಂದರು. ಸಂತುಷ್ಟರಾಗಿ, ತೇಗಿ, ಜುಂಜಪ್ಪನ ಹೆಸರಿಗೆ ತಾಳ್ಯವದ ದುರ್ಗಿಯ ಕಾವಲನ್ನು ಕಟ್ಟುಮಾಡಿಕೊಟ್ಟರು.

ಜುಂಜಪ್ಪನ ದನಗಳು ಪುರುಷಪ್ಪನ ಕೆರೆಯ ಕಾವಲಿಗೆ ಮುಂದುವರಿದವು.

# ಏಳುಮಲೆ ಗಾತ್ರಕ್ಕೆ ಬೆಳಿಯಯ್ಯಾ

ಅಣ್ಣನ ನೆನೆದರೆ ಹೊನ್ನು ಮೂಗುಳವಾಗಿ
ಅಣ್ಣೀದ ಕೆಲಸ ಅತಿ ಬೇಗ-ಕಳ್ಳೇರ್ಹಳ್ಳಿ
ಹೊನ್ನ ಬಿಲ್ಹೋಲನ ನೆನೆದೇವು

ಜುಂಜಪ್ಪನ ದನ ಒಂದು ಕಾವಲಿನಲ್ಲಿ ನಿಂತು ಮೇಯಲಿಲ್ಲ. ಆಗಲೇ ಪುರುಷಪ್ಪನ ಕೆರೆಯ ಬಯಲಲ್ಲಿ ದನದ ಹಿಂಡನ್ನು ನೋಡಿದರು, ಕಂಬೇರ ಗೊಲ್ಲರು. ಕೊಂಕಣೆ ಪುಷ್ಪವಾಗಿ ಬೆಳೆದ ಆ ದನಗಳೆಲ್ಲಿ ! ಹಲವು ರೋಗದಲ್ಲಿ ನರಳುವ ತಮ್ಮ ದನಗಳೆಲ್ಲಿ ! ಜುಂಜಪ್ಪನ ದನಕ್ಕೂ ರೋಗ ತಗುಲಿದರೇ !

ಕೆರೆಯ ಮುಂಭಾಗದ ಜುಂಜಪ್ಪನ ದನ ನೀರಿಗೆ ಬರುವ ಕೆಸರಹಾದಿ ಕಂಬೇರ ಗೊಲ್ಲರ ದೃಷ್ಟಿಯನ್ನು ಸೆಳೆಯಿತು. ತಮ್ಮ ದನವಿನ ರೋಗಗ್ರಸ್ತ ಬಡಗರವೊಂದನ್ನು ಹಿಡಿದು ತಂದು ಆ ಅಟ್ಟೆಲಲ್ಲಿ ಅರ್ಧ ಹೂತುಹೋದರು. ಆ ದಾರಿಯಲ್ಲಿ ಬರುವ ಜುಂಜಪ್ಪನ ದನಕ್ಕೆ ರೋಗ ಹರಡಲಿ, ಸತ್ತು ಸೊಪ್ಪಾಗಲಿ ಎಂದು ಬಗೆದೇ ಬಡಗರುವನ್ನು ಬಿಟ್ಟು ಹೋದರು, ಹತ್ತಿರದ ಕಾವಲಿಗೆ. ನೀರಿಗೆ ಬಂದ ದನ ಮರಳಿದ ಮೇಲೆ ಹಿಂದೆ ಬಂದರು ಮಾರಣ್ಣ ಮೈಲಣ್ಣ. ಕೆಸರಲ್ಲಿ ಹೂತು ಹೊರಳುತ್ತಿದ್ದ ಬಡಗರುವನ್ನು ಮೇಲೆತ್ತಿ ಮೈ ತೊಳೆದು ಅಣ್ಣನ ಮುಂದೆ ತಂದು ನಿಲ್ಲಿಸಿದರು, ಕರು ತಮ್ಮದಲ್ಲ. ಈ ದಾರಿಯಲಿ ಹೋದ ಸೋದರಮಾವಂದಿರು ಕಾಣದೆ ಬಿಟ್ಟು ಹೋಗಿದ್ದಾರೆ. ಬಿಟ್ಟು ಬರಲು ಮಾರಣ್ಣ ಮೈಲಣ್ಣರನ್ನೇ ನೇಮಿಸಿದ ಜುಂಜಪ್ಪ.

'ಕರುವ ಒಪ್ಪಿಸೀ ನೀವು ಬಲಿರಯ್ಯ'

ಚೆನ್ನಿಯ ಮಕ್ಕಳು ತಂದ ರೋಗದ ಕರುವಿಗೆ ಸಿಡಿಮಿಡಿಗೊಂಡರು ಸೋದರಮಾವಂದಿರು. ತಮ್ಮ ದನಗಳ ರೋಗ ಹರಡಲೆಂದೇ ಬಂದವರು ಆ ಪೋರರು, ಅದು ತಮ್ಮ ಕರುವಲ್ಲ ! ಜುಂಜಪ್ಪನ ಹಿಂಡಿಗೆ ಸೇರಿದುದೇ. ತಮ್ಮದಲ್ಲ....ತಮ್ಮದಲ್ಲ...

ರೋಗದ ಕರುವ ಇಲ್ಲಿ ಯಾಕೆ ತಂದೀರೊ
ಹೊತ್ತು ಹೋಗಿರಯ್ಯ ನಿಮ್ಮ ದನವೀಗೆ

ಮಾರಣ್ಣ ಮೈಲಣ್ಣ ಮತ್ತೆ ಹೊತ್ತು ತಂದರು ಕರುವನ್ನು. ನ್ಯಾಯ ಮಾಡಿ ಬೆದರಿಸಿ ಕಳಿಸಿದ ಮಾತು ಜುಂಜಪ್ಪನಿಗೆ ಮುಟ್ಟಿತು. ಅದು ಅವರ ಕರುವೇ. ಮತ್ತೊಮ್ಮೆ ಸೋದರರನ್ನು ಕಳುಹಿಸಿದನು. ಹುಣಸೆಯ ಕೋಲಿನಲ್ಲಿ ಏಳು ಬಾರಿ ಹೊಡೆದು ಅಟ್ಟಿದರು ಕರುವಿನೊಡನೆ, ಮಾರಣ್ಣ ಮೈಲಣ್ಣ ಇಬ್ಬರನ್ನೂ.

ಅಳುತ ಕರೆಯುತ್ತ ಕರುವನೆ ಹೊತ್ತುಕೊಂಡು
ಅಣ್ಣಯ್ನ ಇದಿರಿಗೆ ಬರುತಾರೆ

ಹಾಲುಕಂದ, ನೀರುಕಂದ ! ಚಿಕ್ಕ ಮಕ್ಕಳಿಗೆ ಬುದ್ಧಿ ಹೇಳದೆ ಹೊಡೆದು ಕಳಿಸಿದ ಮಾವದಿರ ಬಳಿಗೆ ಜುಂಜಪ್ಪ ತಾನೇ ಹೊರಟನು. ಕರುವನ್ನು ಹೊತ್ತು ಬರುವ ಮನೆಸ್ವಾಮಿಯನ್ನು ಕಂಡರು ಕಂಬೇರು. ಹಳ್ಳದ ಸಾಲಲ್ಲಿ ಕದ್ದು ಕದ್ದು ಹೋಗಲು ಯತ್ನಿಸಿದ ಅವರನ್ನು ಬಿಡಲಿಲ್ಲ ಜುಂಜಯ್ಯ. ತಡೆದು ನಿಲ್ಲಿಸಿ ಕೇಳಿದನು.

ಬಲ್ಲಿರಯ್ಯಾ ಮಾವಗಳೆ ಕದ್ಯಾಕೆ ಹೋಗುತೀರಿ
ನ್ಯಾಯ ಮಾಡಾನ ಬಲ್ಲಿರಯ್ಯ

ಏಳು ಹಳ್ಳಿಯ ಗೌಡಗಳು ನ್ಯಾಯಕ್ಕೆ ಕಲೆತರು. ತಮ್ಮ ಕರುವಲ್ಲವೆಂದು ಕಂಬೇರು ಸೋಲದೆ ನುಡಿದರು. ಏಳು ಹಳ್ಳಿಯ ಗೌಡಾಳಿಕೆಯ ಕಣ್ಣೆದುರಿಗೆ ಜುಂಜಪ್ಪ ಕರುವನ್ನು ತಾನೇ ಒಪ್ಪಿಸಿಕೊಂಡನು. ಬಟ್ಟಣ ಬಡಮೈಲನೆಂದು ಬಡಗರುವನ್ನು ಕರೆದನು. ಹೊತ್ತು ತಂದನು ಬಡಮೈಲನನ್ನು ತನ್ನ ಏಳು ಗೂಡಿನ ದನವಿಗೆ. ಅಕ್ಕಮಾರಿ, ಚಿಕ್ಕಮಾರಿ ಎಲ್ಲ ಹಸುಗಳನ್ನೂ ಕರೆದನು. ಎಲ್ಲರೂ ಅವನಿಗೆ ಹಾಲೂಡಿ ಸಾಕಬೇಕೆಂದು ಸನ್ನೆ ಮಾಡಿದನು ಮನೆಸ್ವಾಮಿ. ಬಡಮೈಲನ ಮೈ ಸವರುತ್ತ ತುಂಬಿದ ಅಭಿಮಾನದಲ್ಲಿ ಹರಸಿದನು -

ಏಳು ಗೂಡಿನ ದನವಿನ ಹಾಲು ಕುಡಿದು
ಏಳು ಮಲೆ ಗಾತ್ರಕೆ ಬೆಳಿಯಯ್ಯ

ಜುಂಜಪ್ಪನ ದನವಿನಲ್ಲಿ ಬಡಮೈಲ ಆಡ್ಡಾಡಿ ಮೈ ತುಂಬಿಕೊಂಡನು. ಎಲ್ಲ ಹಸುಗಳ ಹಾಲು ಕುಡಿದು ಸುಪುಷ್ಟವಾಗಿ ಬೆಳೆದನು. ಏಳು ಮಲೆಯ ಗಾತ್ರಕ್ಕೇ ಬೆಳೆದು ಬೀಗದ ಅವನನ್ನು ನೋಡುತ್ತ ಹಿಗ್ಗಿದನು ಮನೆಸ್ವಾಮಿ ಜುಂಜಪ್ಪ. ಮುಂದೆ ನಾಸು ಬೇಡರ ಹೊಲದ ಒದಿಯಲ್ಲಿ ಸಾಗಿದವು ಜುಂಜಪ್ಪನ ದನಗಳು. ನಾಸು ಬೇಡರೊಡನೆ ವಿಶ್ವಾಸ ಬೆಳೆಸಿದ ಕಂಬೇರು ಮತ್ತೊಂದು ದಿಕ್ಕ

ಸಲ್ಲಿ ತಮ್ಮ ದನಗಳನ್ನು ಅತ್ತ ನಡೆಸಿದರು. ಕಂಬೇರ ಗೊಲ್ಲರ ಜಾಡಿಯ ಮಾತಿಗೆ ಕಿವಿಗೊಟ್ಟ ಬೇಡರು ಕತ್ತಿ ದೊಣ್ಣೆಗಳನ್ನು ಹೇರಿ ಸಮಯವನ್ನು ಕಾದರು.

ಮಾರಣ್ಣ ಮೈಲಣ್ಣರನ್ನು ಕರೆದು ಎಚ್ಚರಿಸಿದನು ಜುಂಜಪ್ಪ. ಏಳು ಗೂಡಿನ ದನಕ್ಕೂ ಬುದ್ಧಿ ಹೇಳಿಕೊಂಡು ಹೊಲಕ್ಕೆ ಹೋಗದಂತಿರಲು ಬಡಮೈಲನಿಗೂ ತಿಳಿಸಿದನು—

ಹೊಲದ ಬದಿಯ ಕಲ್ಲು ಕಟ್ಟೆಯ ಮೇಲೆ
ನಿದ್ರೆ ಮಾಡ್ಯಾರೊ ಸ್ವಾಮಿ ಶಿವ ಶಿವ

ಗಾಢನಿದ್ದೆಯಲ್ಲಿ ಮೈ ಮರೆತ ಜುಂಜಪ್ಪನ ತಲೆಯ ಬದಿಯಲ್ಲೇ ಬಡಮೈಲ ಮಲಗಿ ಮೆಲುಕುತ್ತಿದ್ದವನು ಕವಿದ ಕತ್ತಲಲ್ಲಿ ಮೆಲ್ಲನೆ ಮೇಲೆದ್ದು ನಡೆದ. ಅಕ್ಕಮಾರಿ, ಚಿಕ್ಕ ಮಾರಿ, ಚಕುರಂಬೆ, ಗೊಡ್ಡಿಗಾಳಿ ಎಲ್ಲರನ್ನೂ ಕರೆದು ಬುದ್ಧಿ ಹೇಳಿದನು. ನಾಸು ಬೇಡರ ಹೊಲಕ್ಕೆ ಹೋದರೆ ನ್ಯಾಯ ಬರುತ್ತದೆ. ಅಣ್ಣಯ್ಯನ ಅಪ್ಪಣೆ ಅದು. ಏಳು ಗೂಡಿನ ದನದಲ್ಲಿ ಯಾರೂ ಅತ್ತ ಸುಳಿಯಬಾರದು. ತಾನು ಒಬ್ಬನು ಹೋದರೆ ಅಡ್ಡಿಯಿಲ್ಲ. ಯಾರೂ ಅವನನ್ನು ಹಿಂಬಾಲಿಸಬಾರದು.

ಯಾವ ಗೋವೂ ಬಡ ಮೈಲನ ಹಿಂದೆ ಬರಲಿಲ್ಲ. ನಾಸು ಬೇಡರ ಹೊಲವನ್ನೆಲ್ಲ ಸುತ್ತಿ ಬಡಮೈಲ ಇರುಳೆಲ್ಲ ಮೇದು ಊರಮುಂದಿನ ಕಲ್ಲು ಕಟ್ಟೆಯ ನೀರು ಕುಡಿದು ಮರಳಿದ. ಏನನ್ನೂ ಅರಿಯದವನಂತೆ ಮತ್ತೆ ಮೆಲುಕುತ್ತ ಸ್ವಾಮಿಯ ತಲೆಯ ಬಳಿಯೇ ಮಲಗಿದ. ಮೇಲೆದ್ದ ಜುಂಜಪ್ಪ ಬಡ ಮೈಲನ ಊದಿದ ಹೊಟ್ಟೆಯನ್ನು ನೋಡಿ ಶಂಕಿಸಿದ. ನಸುಕೋಪದಲ್ಲಿ ಅಣ್ಣಯ್ಯ ಕೇಳಿದ ಮಾತಿಗೆ ಬಡಮೈಲ ಅಂಜಲಿಲ್ಲ. ವಿಚಲಿತನಾಗದೆ ಉತ್ತರಿಸಿದ–

ಪಡುವಣ ಮುಂದಾಗಿ ಮುಖಮಾಡಿ ಮಲಗಿದೆ
ಪಡವಲ ಗಾಳಿಗೆ ಹೊಟ್ಟೆ ಊದೀತು

ಬೆಳಗಾಗುವುದರಲ್ಲಿ ಗುಟ್ಟು ಬಯಲಾಯಿತು. ನಾಸು ಬೇಡರ ಹೊಲಗಳಲ್ಲಿ ಬೆಳೆಯೇ ಇಲ್ಲ. ಊರ ಮುಂದಿನ ಕಲ್ಲುಕಟ್ಟೆಯಲ್ಲಿ ನೀರಿಲ್ಲ. ಬಟ್ಟಣ್ಣ ಬಡ ಮೈಲನ ಹೆಜ್ಜೆಯ ಗುರುತು ಎದ್ದು ತೋರುತ್ತಿದೆ.

ಬೇಡರ ಹುಡುಗರಿಗೆ ಕಂಬೇರ ಗೊಲ್ಲರು ಧೈರ್ಯ ತುಂಬಿ ಕಳಿಸಿದರು. ಬಡ ಮೈಲನನ್ನು ಹಿಡಿದು ಕಟ್ಟಿ ನ್ಯಾಯ ಮಾಡಲು ಸೂಚಿಸಿದರು. ದೊಡ್ಡ

ಸರಪಣಿಯೊಡನೆ ತನ್ನೆಡೆಗೆ ಬಂದ ನಾಸು ಬೇಡರನ್ನು ನೋಡಿದ ಜುಂಜಪ್ಪ. ಅಲುಗದೆ ಮಲಗಿದ್ದ ಬಡಮ್ಮೈಲ ಎದ್ದು ನಿಂತನು. ಅಣ್ಣಯ್ಯನ ಮುಖವನ್ನು ನೋಡಿ ಧೈರ್ಯ ಹೇಳಿದನು_

ಉಂಡ ಮನೆಯಲ್ಲಿ ಉಂಡೆ ಅನುತ್ತೇಳುತ್ತೀನಿ
ಗೆದ್ದು ಬರುತೀನಿ ನ್ಯಾಯಗೋಳ

ಬಡಮ್ಮೈಲನ ಕೊರಳಿಗೆ ಸರಪಣಿಯನ್ನು ಹಾಕಿ ಕಟ್ಟಿದರು. ನೂರಿಪ್ಪತ್ತು ಜನ ನಾಸು ಬೇಡರು ಅತ್ತಿತ್ತ ಬಡ ಮೈಲನನ್ನು ಹಿಡಿದು ಸಾಗಿದರು. ಜುಂಜಪ್ಪನ ಮೇಲೆ ಯಾವ ನ್ಯಾಯವೂ ಬರದೆ ಹೋರಿಯನ್ನು ಮಾತ್ರ ಹೊಲ ದಲ್ಲಿ ಹಿಡಿತಂದರು. ಮೇದ ಹೊಲದಲ್ಲಿ ಬಡಮ್ಮೈಲನೇಕೊ ನಿಂತನು. ನ್ಯಾಯಾ ವೇನಿದ್ದರೂ ಆ ಎಡೆಯಲ್ಲಿಯೆ ಆಗಬೇಕೆಂದು ಹಟ ಮಾಡಿದನು. ಊರಿಗೆ ಎಳೆ ದೊಯ್ಯಲು ಬೇಡರ ಪ್ರಯತ್ನಗಳು ಸಾಗಲಿಲ. ಬಡಮ್ಮೈಲ ಕಾಲನ್ನು ಕೆರೆದು ಮುಗಿಲು ಸೀಳುವಂತೆ ಗುಟುರು ಹಾಕಿದನು. ಬಿರುಗಾಳಿಯೆದ್ದು ಧೂಳು ಕವಿ ಯಿತು. ತತ್ತರಿಸಿ ಎತ್ತೆತ್ತಲೋ ತೂರಿಬಿದ್ದ ನಾಸು ಬೇಡರು ಹೊಲದಂಚಿನಲ್ಲಿ ಮೈ ಮರೆತು ಮಲಗಿದರು. ಸರಪಣಿ ಹರಿದು ಚೂರಾಯಿತು. ಬಡಮ್ಮೈಲ ತಪ್ಪಿಸಿಕೊಂಡು ಮತ್ತೆ ದನವಿಗೆ ಬಂದು ಕಲೆತನು.

ದೊಡ್ಡಮ್ಮನ ಕರಿಯವರೆಯ ಹೊಲದ ಒಟ್ಟಿಗೆ ಜುಂಜಪ್ಪ ದನಗಳನ್ನು ಕರೆದನು.

ದೊಡ್ಡಮ್ಮ ಹೊಲದಲ್ಲಿ ನೂರಾಳು ಬಿಟ್ಟು ಅವರೆಯನ್ನು ಕೀಳಿಸು ತ್ತಿದ್ದಳು. 'ತಳ್ಳು ತರಸುತ್ತಿದ್ದಳು.' ದನವನ್ನು ಓರೆಯಾಗಿ ಬಿಡಲು ಜುಂಜಪ್ಪ ಹೇಳಿ ಅತ್ತ ಬಂದನು. ಜೇನುಕಲ್ಲು ದೊಡ್ಡಮ್ಮನ ಕರಿಯವರೆಗೊನೆಯ ಮೇಲೆ ದೃಷ್ಟಿ ಹರಿಸಿದ ಮನೆಸ್ವಾಮಿ. ಚೆಂದಕ್ಕೆ ಎರಡು ಗೊನೆಯನ್ನು ಬೇಡಿದ 'ಹಾದಿಹೋಕ ದಾಸಯ್ಯನೊ, ಜಂಗಮಯ್ಯನೋ....!' ಗದರಿ ಕೊಂಡಳು ದೊಡ್ಡಮ್ಮ. ಮನೆ ದೇವರಿಗೆ ಕೊಡದೆ, ದಾಸ, ಜಂಗಮರಿಗೆ ಕೊಡದೆ ಈ ಕಾಡು ಗೊರಮನಿಗೆ ಕೊಡುವಳೇ !

ಜುಂಜಯ್ಯ ಮಾತಾಡಲಿಲ್ಲ. ಅತ್ತ ಸರಿದು ತನ್ನ ಪಟ್ಟಿಯಲ್ಲಿದ್ದ ಕೊಳ ಲನ್ನು ತೆಗೆದು ಊದಿದನು. ಅಲೆಯಲೆಯಾಗಿ ಹಬ್ಬಿದ ಜುಂಜಪ್ಪನ ಕೊಳಲ ನಾದ ಹುತ್ತದೊಳಗಲ ಉರಿ ನಾಗನನ್ನು ಕರೆಯಿತು.

ಹುತ್ತದೊಳಗಲ ಉರಿನಾಗ ಬರುತಾನೆ
ಯಾಕೆ ಅಣ್ಣಯ್ಯ ಕರೆಸೀದೆ

ಜುಂಜಪ್ಪನ ಆಣತಿಯನ್ನು ಹೊತ್ತು ಮುಂದೆ ಹರಿಯಿತು ಉರಿನಾಗ. ನರರಿಗೆ ಅರಿವಿಲ್ಲದಂತೆ ನೂರಾಳ ಮುಂದೆ ಅವರೆಯ ಗೂನೆ ಬಿಡಿಸುತ್ತಿದ್ದ ಜಾವ ಕಲ್ಲು ದೊಡ್ಡಮ್ಮನ ಒಳದೊಡೆಗೆ ವಿಷವನ್ನು ಬಿಟ್ಟು ಹುತ್ತವನ್ನು ಸೇರಿತು !

ದೊಡ್ಡಮ್ಮ ತತ್ತರಿಸಿದಳು. ಬೆಂಕಿಯಂತೆ ಹಬ್ಬಿದ ಉರಿಗೆ, ತಳ್ಳು ಬಿಡಿಸುವ ಕೈಯನ್ನು ನಿಲ್ಲಿಸಿದಳು. ಬಿದ್ದು ಬಿದ್ದು ಅಳುವ ಅವಳನ್ನು ನೂರಾಳು ಬಂದು ಹಿಡಿದರೂ ತಾಳದಾದಳು. ಹೊಲದ ಬದುವಿನಲ್ಲಿ ಇಲಿಯನ್ನು ಹಿಡಿಯುತ್ತಿದ್ದ ಮಾಗಡಿ ಕೆಂಪಣ್ಣನಿಗೆ ಸುದ್ದಿ ಮುಟ್ಟಿತು. ವೀಳ್ಯವನ್ನು ಕೊಂಡು, ಒಂದು ಹಣ ದೊಡನೆ ಕಣೆಯನ್ನು ಕೇಳಲು ಬಂದನು ಜುಂಜಪ್ಪನ ಬಳಿಗೆ. ಜೇನುಕಲ್ಲ ದೊಡ್ಡಿ ಸತ್ತಳೊ ಬದುಕಿದಳೋ: ಆ 'ಗುರುತ' ಕಣೆಯಿಂದಲೇ ಅರಿಯಬೇಕಾಯಿತು. ಕೆಂಪಣ್ಣ ಕಾಡಿ ಬೇಡಿ ಪಾದಕ್ಕೆರಗಿ ಕಣ್ಣೀರನ್ನು ಹರಿಸಿದ ಮೇಲೆ ಜುಂಜಪ್ಪ ಮತ್ತೆ ಕೊಳಲನ್ನು ಹಿಡಿದು ಕರೆದನು ಎಳೆನಾಗನನ್ನು. ಉಗಿದ ತಂಬುಲವನ್ನು ಮತ್ತೆ ಮುಟ್ಟಲು ಒಪ್ಪಲಿಲ್ಲ ಉರಿನಾಗ.

ನೀನುಂಡ ಎಂಜಲು ಇನ್ನಾರು ಹಿಡಿವರು
ನೀ ಹೋಗಿ ಇಸುವ ತರಬೇಕು

ಕೊರಳಿಗೆ ಗೆಜ್ಜೆ, ಸರಪಣಿ, ಕೆನ್ನೆಗೆ ಕೆನ್ನೆಯ ಸರಪಣಿ, ಸೊಂಟಕೆ ನಡುಕಟ್ಟು ಮಾಡಿಸಿದರೂ ಉಗಿದ ತಂಬುಲವನ್ನು ಮುಟ್ಟೆನೆಂದು ಉರಿನಾಗ ಛಲವನ್ನು ಮೆರೆಯಿತು. ಮುನಿದೆದ್ದ ಜುಂಜಪ್ಪ ಮಿಡಿನಾಗನನ್ನು ಹಿಡಿದು ಈಚಲ ಮರಕ್ಕೆ ಸುತ್ತಿ ಕಡೆದಾಗ ತತ್ತರಿಸಿ ಹಲುಬಿತು—

ಬಿಡು ಬಿಡಣಯ್ಯ ಬೇಡ ಕಣೊ ಅಣ್ಣಯ್ಯ
ನಾ ಹೋಗಿ ಇಸುವ ತರುತೀನಿ

ಉರಿನಾಗ ಹೋಗಿ ವಿಷವನ್ನು ತಂದಿತು. ಶಿವಶಿವ ಎಂದು ನಿಡುಸುಯ್ದು ಮೇಲೆದ್ದಳು ದೊಡ್ಡಮ್ಮ. ಮಾಗಡಿ ಕೆಂಪಣ್ಣ ಜುಂಜಪ್ಪನ ಮಹಿಮೆಯನ್ನು ಸಾರಿ ಎಚ್ಚರಿಸಿದಾಗ ಬೆಚ್ಚಿ ಮೇಲೆದ್ದು ಪಾದಕೆರಗಿದಳು—

ಮನೆಸ್ವಾಮಿ ಎಂಬೋದ ನಾನೇನು ಬಲ್ಲೇನೊ
ತಳ್ಳು ತರಿವ ಕೈಯ ನಿಲಿಸೇನು

ನೂರಾಳ ಕೈ ನಿಂತವು ಹೊಲದಲ್ಲಿ. ಜುಂಜಪ್ಪನ ದನವನ್ನೆಲ್ಲ ಕರೆಸಿ ಹೊಲಕ್ಕೆ ಬಿಟ್ಟಳು ದೊಡ್ಡಮ್ಮ. ಕರಿಯುವರೆ ಗೊನೆ ಏನು ಮನೆಸ್ವಾಮಿಗೆ, ಬಂಗಾರದ ಅವರೆಯ ಗೊನೆಯನ್ನೇ ಮಾಡಿಸಲು ಮುಂದೆ ಬಂದಳು. ಮೂರು ತಿಂಗಳು ಅವರೆಯ ಹೊಲವನ್ನು ಮೇದು ತಣಿದವು ಜುಂಜಪ್ಪನ ಗೋವು. ಉದುರಿದ ಕಾಳನ್ನು ಆರಿಸಲು ಸಾಲಿಗೊಂದಾಳನ್ನು ಇರಿಸಿ ಆರಿಸಿದಳು. ಉದುರಿದ ಕಾಳೇ ಹನ್ನೆರಡು ಖಂಡುಗವಾಗಿ ದೊಡ್ಡಮ್ಮ ಸ್ವಾಮಿಯ ಪಾದಕ್ಕೆ ಮತ್ತೆ ಶರಣೆಂದಳು.

ಶರಣಮ್ಮ ಗುರುವಿಗೆ ಶರಣಮ್ಮ ಶಿವನಿಗೆ
ಶರಣಮ್ಮ ಏಳು ಕೋಟಿ ಲಿಂಗಕೂ
ಕೇಳಿದರೆ ಕೇಳಬೇಕು ದೊಡ್ಡೋರ ಪದಗಳ
ಕೇಳದಿದ್ದರೆದ್ದು ಹೋಗಬೇಕು-ಶಿವ ಶಿವ
ಆಕಳಿಸೋರಿರಬೇಡಿ ತೂಕಡಿಸೋರಿರಬೇಡಿ
ನಿದ್ರೆ ಮಾಡೋರು ಇರಬೇಡಿ-ಶಿವ ಶಿವ
ಬಾಗಿಲಲ್ಲೈತಂತೆ ಬಡಿಗಲ್ಲು

ಮಹಾಮಹಿಮ ಜುಂಜಪ್ಪನ ಕಥೆ ಮುಗಿದಿಲ್ಲ. ಗಣೆಯ ಇಂಪಾದ ದನಿಯೊಡನೆಯೇ ಹಾಡಿನ ಮಧುರ ಸ್ವರ್ಗ ಲೋಕದಲ್ಲಿ ಮತ್ತೆ ತೇಲಿ ಹೋಗಿದ್ದಾನೆ ಕಥೆಗಾರ.

* * * *

ಸುಂಡನೂರು ಬೊಮ್ಮಕ್ಕ ಕೋಟೆಯನ್ನೇ ಕಟ್ಟಿಸಿ ತನ್ನ ವಿಸ್ತಾರವಾದ ಕಾವಲನ್ನು ಸಂರಕ್ಷಿಸಿಕೊಂಡಿದ್ದಳು. ಕೋಟೆಯ ಬಾಗಿಲನ್ನು ಕಾಯಲು ಭೀಕರ ರಾಕ್ಷಸಿಯೊಬ್ಬಳನ್ನೇ ನೇಮಿಸಿದ್ದಳು. ದಿನಕ್ಕೆ ಒಂದು ಕೊಂಬಿನ ತಗರು, ಒಕ್ಕಳ ಅಕ್ಕಿ ಅನ್ನದ ಊಟ ಆ ರಕ್ಕಸಿಗೆ ! ಜುಂಜಪ್ಪನ ಏಳುಗೂಡಿನ ದನವನ್ನು ಕೋಟೆಯಬಾಗಿಲಲ್ಲೇ ತಡೆದು ಅಬ್ಬರಿಸಿದಳು ರಕ್ಕಸಿ. ಕಾಡುಗೊಲ್ಲರ ಹುಡುಗರೆಂದು ಚುಚ್ಚು ನುಡಿಯಾಡುತ್ತಾ ಮೇಲೆ ಬೀಳಲು ಬಂದಳು. ಅಣ್ಣನ ಸನ್ನೆಯಂತೆ ಮಾರಣ್ಣ, ಮೈಲಣ್ಣ ಬಿಲ್ಲನ್ನು ಹೆದೆಯೇರಿಸಿ ಶರಜಾಲವನ್ನು ಕರೆದರು ಎಚ್ಚರದಿಂದ. ರಕ್ಕಸಿ ಸಾಯಲಾಗದು. ಬೊಮ್ಮಕ್ಕನ ಮನೆಯವರೆಗೆ ಕೊಚ್ಚಿಕೊಂಡು ಹೋಗಿ ಬೀಳಬೇಕು !

ರಕ್ಕಸಿ ಸುಂಡನೂರು ಬೊಮ್ಮಕ್ಕನ ಬಾಗಿಲಲ್ಲಿ ಬಿದ್ದು ಗೋಳಾಡಿದಳು. ಕಾವಲಿಗೆ ದನಗಳು ಮುತ್ತಿ ಮೇಯುವ ಪರಿಯನ್ನು ಬಣ್ಣಿಸಿದಳು. ತನ್ನ ಆರ್ಭಟ ಸಾಹಸವೆಲ್ಲ ಮಣ್ಣುಪಾಲಾಗಿ, ಗದಗದ ನಡುಗುತ್ತಲೇ ನಿಂತಳು.

ಬೊಮ್ಮಕ್ಕ ಬೆರಗಾದಳು, ಹೊಸ ಸುದ್ದಿಗೆ. ತನ್ನ ಐದು ಮಂದಿ ನಾಸು ಬೇಡರಿಗೆ ಆಜ್ಞಾಪಿಸಿದಳು, ಕೋಟೆಯನ್ನು ಹತ್ತಿನೋಡಲು. ಏಣಿಯನ್ನು ಹಾಕಿ ಇಣುಕಿ ನೋಡಿದ ಬೇಡರು, ಬೊಮ್ಮಕ್ಕನ ಅಪ್ಪಣೆಯನ್ನು ಪಡೆದು ಬಿಲ್ಲನ್ನು ಹಿಡಿದು ಕಾವಲಿಗೆ ನುಸುಳಿದರು. ಮುಂದೆಯೇ ಮೇಯುತ್ತಿದ್ದ ಚತು ರಂಬೆ, ಸಣ್ಣ ಮಲ್ಲಿಗೆಯರು ಕಣ್ಣಿಗೆ ಬಿದ್ದಾಗ ಬಾಣಗಳೆನ್ನೆಸೆದರು ನಾಸು ಬೇಡರು. ಚತುರಂಬೆ ದನಿಯೆತ್ತಿ ಕೂಗಿದ ಸದ್ದು ಜುಂಜಪ್ಪನ ಕಿವಿಯನ್ನು ಮುಟ್ಟಿತು. ಮಾರಣ್ಣ ಮೈಲಣ್ಣ ಅತ್ತ ಓಡಿಬಂದರು.

ಜುಂಜಪ್ಪನ ದನವಿನ ಮೇಲೆ ಬಾಣವನ್ನೆಸೆದ ಬೇಡರ ಕಣ್ಣು ಕುರುಡಾ ಗಿತ್ತು. ದಿಕ್ಕು ದೆಸೆಯನ್ನರಿಯದೆ ನೆಲದಲ್ಲಿ ತೆವಳುತ್ತಿದ್ದಾಗ ಅವರ ಪರಿಯನ್ನು ಅಣ್ಣನಿಗೆ ಬಣ್ಣಿಸಿದರು ಸೋದರರು. ಜುಂಜಪ್ಪನ ತುಟಿಯ ಮೇಲೆ ತೆಳ್ಳನೆಯ ನಗೆ ಹಾದುಹೋಯಿತು. ಐದು ಜನಕ್ಕೂ ಐದು ಎಲೆಯಡಿಕೆಯನ್ನು ಕೊಡಲು ಮತ್ತೆ ಕಳಿಸಿದನು. ಜುಂಜಪ್ಪನ ಕೈಯ ತಾಂಬೂಲವನ್ನು ಅಗಿದು ಉಗಿದ ಬೇಡರಿಗೆ ಮತ್ತೆ ಕಣ್ಣು ಕಂಡು, ಬೆದರಿ ಓಡಿದರು ಕೋಟೆಯ ಆಚೆಗೆ !

ಸುಂಡನೂರು ಬೊಮ್ಮಕ್ಕನ ಏಳು ಮಂದಿ ಅಣ್ಣಂದಿರೂ ಬಂದರು. ಒಂದು ಕೊಂಬಿನ ತಗರು ಒಕ್ಕಳಕ್ಕಿ ಅನ್ನದ ರಕ್ಕಸಿ ಸೋತು ಬಂದಳು, ಐದು ಮಂದಿ ನಾಸು ಬೇಡರು ಬೆದರಿ ಹಿಂದಿರುಗಿದರು. ಬಂದವನು ಯಾರೋ ! ಯಾವ ರಾಯನ ದನಗಳೋ ! ಕಳವಳಗೊಂಡು ಬೊಮ್ಮಕ್ಕ ಸಮಾಲೋಚಿಸಿ ದಳು ಸೋದರರೊಡನೆ.

ಮೂರು ಮಂದಿ ದೇವತೆಯರು ಬೊಮ್ಮಕ್ಕನ ಕರೆಗೆ ಓಗೊಟ್ಟು ಬಂದರು. ದನವನ್ನೂ, ದನದ ಒಡೆಯರನ್ನೂ ತಂದು ಒಪ್ಪಿಸಲು ಬಗೆದು ಹೊರಟರು. ಹೆಂಡದ ಗಡಿಗೆಯನ್ನು ಹೊತ್ತು, ಮುಟ್ಟಿನ ಸೀರೆಯನ್ನು ಹಿರುಕಿ ಬಂದ ದೇವತೆಯರನ್ನು ನೋಡಿ ಜುಂಜಪ್ಪ ಸೋದರರೊಡನೆ ಬಾಣಗಳನ್ನೆಸೆ ದನು.

ಬಾಣವ ಬಿಟ್ಟರೆ ಬತಗೆಟ್ಟು ಹೋಗುತವೆ
ಮುಟ್ಟಿನ ಸೀರೆಯ ಕೈಯಲ್ಲಿ ಹಿಡಿದವರೆ
ಇನ್ನೇನು ಗತಿಯ ಮಾಡಲೋ

ಬಿಟ್ಟ ಬಾಣಗಳು ವ್ರತಗೆಟ್ಟು ಹುಸಿಯಾಗುತ್ತಿವೆ. ಹತ್ತಿರ ಹೋಗಿ ಎದುರಿಸಲು ಹೆಂಡದ ಗಡಿಗೆ, ಮುಟ್ಟಿನ ಸೀರೆಗಳಿವೆ ! ದನಗಳನ್ನೆಲ್ಲ ಸುತ್ತು ವರಿದು ಅತ್ತ ಅಟ್ಟ ತೊಡಗಿದ್ದಾರೆ.

ಶಿವಶಿವ ಎಂದಾನು ಶಿವಧ್ಯಾನ ಮಾಡ್ಯಾನು
ಗಂಟಿಹಳ್ಳಿ ಭೂತ ನೀ ಕಾಯಯ್ಯ

ಮನೆಸ್ವಾಮಿ ಜುಂಜಪ್ಪನ ಕರೆಯನ್ನು ಕೇಳಿ ಗಂಟಿಹಳ್ಳಿ ಭೂತರಾಯ ತ್ವರೆಯಿಂದ ಓಡಿ ಬಂದನು. ಜುಂಜಪ್ಪನಿಗೆ ಧೈರ್ಯ ಹೇಳಿ ತಾನು ಅತ್ತ ಸುಳಿ ಸುಳಿದನು.

ಮೂಗುಳ ಮೂಡೆಗಾತ್ರ ಹೊಟ್ಟೆಯ ಮಾಡಿಕೊಂಡು
ಮೂಗಿನಾಗೆ ಗೇಣುದ್ದ ಗೊಣ್ಣೆಯ ಸುರಿಸುತ
ಹೊರಳಾಡುತಾನೆ ಚಿಕ್ಕ ಹುಡುಗನು

ಕೌತುಕದ ಪಟುವನ್ನು ನೋಡಿ ಕಿಸಕ್ಕನೆ ನಕ್ಕರು ಮೂವರು ದೇವತೆ ಯರು. ಅವನ ಹೊಟ್ಟೆ, ಮೂಗಿನಲ್ಲಿ ಹರಿವ ಗೊಣ್ಣೆ, ಅವನ ಆಕಾರಕ್ಕೆ ಬೆರ ಗಾಗಿ ಹತ್ತಿರ ಸರಿದ ಅವರ ಮೈಮೇಲೆ ಏನೋ ಹರಿದಂತಾಯಿತು. ಮುಲು ಗುಟ್ಟಿತು ಮೈಯೆಲ್ಲ ; ಅಲ್ಲಿಂದ ಆಗಲೇ ಕಾಲು ಕಿತ್ತರು.

ದಾಗುಡಿಗೆ ಕಾಣಮ್ಮ ಸತ್ಯವಂತ ಜುಂಜಪ್ಪ
ಅವನ ನ್ಯಾಯ ನಮಗೆ ಹೇಳದಿರು

ಸುಂಡನೂರು ಬೊಮ್ಮಕ್ಕ ಏಳುಹಳ್ಳಿಯ ಗೌಡಾಳಿಕೆಯನ್ನು ಕರೆಸಿ ದೊಡ್ಡ ನ್ಯಾಯವನ್ನೇ ಹೂಡಿದಳು. ಊರ ಮುಂದಿನ ಪತ್ತರೆ ಜೂಜಿನ ಮರದ ಮೇಲೆ ಏಳುಗೂಡಿನ ದನಗಳೂ ಹಾರಿದರೆ ಅವಳ ಮಠಮನೆ ಕಾವಲು ಎಲ್ಲವನ್ನೂ ಜುಂಜಪ್ಪನಿಗೆ ಬಿಟ್ಟು ಬಿಡಲು ಹೇಳಿದರು ಗೌಡಗಳು. ಜುಂಜಪ್ಪ ಸೋತರೆ ಏಳುಗೂಡಿನ ದನಗಳನ್ನೂ ಒಪ್ಪಿಸಿ ಹೋಗಬೇಕು. ನ್ಯಾಯ ಮಾಡಿದ ಗೌಡಗಳಿಗೆ ಒಂದೊಂದು ಜೊತೆ ಹೋರಿಗಳನ್ನು ಹೊಡೆಯಬೇಕು ಬೊಮ್ಮಕ್ಕ.

ಬೊಮ್ಮಕ್ಕ ಜುಂಜಪ್ಪನನ್ನು ಕರೆತರಲು ತಾನೇ ಹೊರಟಳು. ಬಂಗಾರದ ತಟ್ಟೆಯಲ್ಲಿ ಕರ್ಪೂರ ಹಚ್ಚಿಕೊಂಡು ಓಲಗ, ಉತ್ಸವದೊಡನೆಯೇ ದನವಿನ ಬಳಿಗೆ ಬಂದ ಅವಳನ್ನು ದೂರದಲ್ಲಿಯೇ ಜುಂಜಪ್ಪ ನೋಡಿದನು. ದೂರ ದಲ್ಲಿಯೇ ನಿಂತು ಬೆಳಗಿದಳು ಜುಂಜಪ್ಪನಿಗೆ. ಅಲ್ಲಿಂದಲೇ ತಲೆಬಾಗಿ ನಮಸ್ಕರಿ ಸಿದಳು.

ಬಾರಯ್ಯ ನಮ್ಮಪ್ಪ ಬಾರಯ್ಯ ಜುಂಜಪ್ಪ
ಏಳ್ಹಳ್ಳಿ ಗೌಡಾಳಿಕೆ ಸೇರೈತೆ—ನನ್ನೂರ
ಮುಂದಕೆ ನೀನೀಗ ಬಾರಯ್ಯ

ತನ್ನ ತಪ್ಪಿದ್ದರೆ ತಾನೇ ಕೊಡಲು ಅವಳು ಸಿದ್ಧಳಿದ್ದಾಳೆ. ಏಳೂರು ಗೌಡಗಳು ಕಲೆತ ಊರ ಮುಂದಿನ ಚಾವಡಿಗೆ ಜುಂಜಪ್ಪ ಬಂದು ತೀರ್ಮಾನಿಸುವು ದುತ್ತಮ. ನಯವಿನಯ ಭಯಭರಿತ ಭಾವದಲಿ ಬೇಡುತ್ತಿದ್ದಾಳೆ ಬೊಮ್ಮಕ್ಕ.

ಜುಂಜಪ್ಪ ಮಾರಣ್ಣ ಮೈಲಣ್ಣರ ಮುಖವನ್ನು ನೋಡಿದ. ಹರಿಯುವ ಸರ್ಪನ ಹಿಡಿದು ತರಬಹುದು. ಉರಿವ ಬೆಂಕಿಯ ಮೇಲೆ ನಿಂತು ಮಾತಾಡ ಬಹುದು. ಧೈರ್ಯದಿಂದ ಪವಾಡಗಳನ್ನು ಗೆಲ್ಲಬಹುದು—

ಹೆಂಗಸಿನ ಮರ್ಮ ಅರಿಯದು ಅಣ್ಣಯ್ಯ
ಜೋಪಾನ ಹೋಗಿ ಬರಬೇಕು.

ಪಗಡೆಗೆ ಒಪ್ಪದಂತೆ, ಜೂಜಿಗೆ ಸಮ್ಮತಿಸದಂತೆ ಅಣ್ಣನಿಗೆ ಹೇಳಿದರು ಮಾರಣ್ಣ ಮೈಲಣ್ಣ. ಹನ್ನೆರಡು ಸಾವಿರ ಹುಲ್ಲು ಬಂದಿಗಾದರೂ ಒಪ್ಪಲಿ....ಇಲ್ಲ ಇಪ್ಪ ತ್ನಾಲ್ಕು ಸಾವಿರವನ್ನೇ ಕೇಳಲಿ....ಹುಲ್ಲು ಬಂದಿಯ ನ್ಯಾಯಕ್ಕೆ ಒಪ್ಪಿಬರ ಬೇಕೆಂದೇ ಹೇಳಿ ಬೀಳ್ಕೊಟ್ಟರು ಸೋದರರು !

ಚಪ್ಪೋಡನ್ನು ಬರೆದು ಕಾದಿದ್ದರು ಗೌಡಗಳು. ಜುಂಜಪ್ಪನ ದನಗಳು ಪತ್ತುರೆ ಜೂಜಿನ ಮರದ ಮೇಲೆ ಹಾರಬೇಕು. ಸೋತರೆ ಏಳುಗೂಡಿನ ದನವನ್ನೂ ಒಪ್ಪಿಸಲೇಬೇಕು. ಬೇಡ ಬೇಡವೆಂದರೂ ಒಪ್ಪಂದಕ್ಕೆ ತಲೆಬಾಗಿ ಜುಂಜಪ್ಪ ಮರಳಬೇಕಾಯಿತು. ಮರುದಿನ ಹನ್ನೆರಡು ಗಂಟೆಗೆ ಜೂಜಿನ ಮರದ ಬಳಿಗೆ ತನ್ನ ದನವಿನೊಡನೆ ಬರಬೇಕು ಅವನು.

ಮನೆಸ್ವಾಮಿ ಜುಂಜಪ್ಪನಿಗೆ ದುಃಖ ಉಕ್ಕಿಬಂದಿತು. ಹಿರಿಯರು ಗಳಿಸಿದ ಏಳುಗೂಡಿನ ದನಗಳೂ ಕೈಬಿಟ್ಟು ಹೋಗುವ ದಿನ ಬಂದಿತು. ಈ ಕಾವಲಿಗೆ

ಬರದಿದ್ದರೆ ದನಗಳೆಲ್ಲ ಉಳಿಯುತ್ತಿದ್ದವು. ದೇವದೇವರನ್ನೆಲ್ಲ ನೆನೆದು ಕೊರಗಿದನು ಜುಂಜಪ್ಪ. ಮನೆಸ್ವಾಮಿ ಚಿತ್ತುರಲಿಂಗ ಬಂದನು. ಹೆತ್ತಯ್ಯ ಚಿತ್ತಯ್ಯ ಎಲ್ಲಾ ಬಂದರು. ಗಂಟಿಪಳ್ಳಿ ಭೂತ, ಬೇವಿನಹಳ್ಳಿ ಕರಿಯಮ್ಮ, ಆಪತ್ತಿನಲ್ಲಿ ಆಗುವ ಭರವಸೆಯಿತ್ತವರು ಎಲ್ಲರೂ ತಲೆಯಾಡಿಸಿ ಹಿಂದೆ ಸರಿದರು. ಉಂಗುರು ಮಲ್ಲೇಗೌಡ, ಕೆಂಗುರಿ ಮಲ್ಲೇಗೌಡ, ತಂದೆ ಕೆಂಪಿನ ಮಲ್ಲೇಗೌಡ, ತಾಯಿ ಚಿನ್ನಮ್ಮ ಎಲ್ಲರನ್ನೂ ನೆನೆದನು. ಅವರೆಲ್ಲ ಉಳಿಸಿ ಬೆಳಸಿದ ದನಗಳನ್ನು ಅನ್ಯರಿಗೆ ಬಿಡುವ ಸಂಕಟದಲ್ಲಿ ಬಳಲಿದನು—

ಶಿವ ಶಿವ ಅಂದಾನು ಶಿವ ದುಃಖ ಮಾಡ್ಯಾನು
ಕಣ್ಣೀರ ಸ್ವಾಮಿ ಹರಿಸ್ಯಾನು

ಸ್ವಾಮಿಯ ಕಣ್ಣೀರು ಭೂಮಿಯ ಮೇಲೆ ಬೀಳಬಾರದು ! ಭೂಲೋಕ ಬದುಕುವುದಿಲ್ಲ, ಬೇವಿನ ಹಳ್ಳಿ ಕರಿಯಮ್ಮ ಮುತ್ತೈದೆ ಸೆರಗನ್ನು ಒಡ್ಡಿದಳು. ಏಳುಗೂಡಿನ ದನವಿನ ನಡುವೆ ಕುಳಿತು ದುಃಖಿಸುವ ಸ್ವಾಮಿಯ ಬಳಿಯಲ್ಲೇ ಬಟ್ಟಣ ಬಡ ಮೈಲನೂ ನಿಂತು ಕಂಬನಿದುಂಬಿದನು. ದನವೆಲ್ಲ ಹುಲ್ಲು ನೀರು ತೊರೆದವು.

ಅಣ್ಣ ಜುಂಜಪ್ಪನ ಕಡುದುಃಖವನ್ನು ನೋಡುತ್ತ ನಿಂತಿತ್ತು ಗಬ್ಬದ ಹಸು ಅತಿರಂಬೆ. ಹತ್ತಿರ ಸರಿದ ಆ ತಾಯಿ ಗಂಭೀರವಾಗಿ ನುಡಿದಳು–

ಬೆದರಬೇಡ ಅಣ್ಣಯ್ಯ ಹೆದರಬೇಡ ಅಣ್ಣಯ್ಯ
ಈ ಪಂತವ ನಾನು ಗೆಲುತೀನಿ

ಜುಂಜಪ್ಪ ಅತಿರಂಬೆಯ ನುಡಿಗೆ ಬೆರಗಾದನು. ಯಾವ ಗಳಿಗೆಯಲ್ಲೋ ಕರುವನ್ನು ಹಾಕಲಿರುವ ಈ ಹಸು ಬರಬಲ್ಲದೆ ತನ್ನ ಹಿಂದೆ ! ಬಡಮೈಲ ಸೋತಿದ್ದಾನೆ, ಉಳಿದ ಹಸುಗಳು ಮೌನವಾಂತಿವೆ. ತನ್ನ ಕುಲದೈವಗಳೆಲ್ಲ ತಲೆಯಾಡಿಸಿ ಹೋದ ಮೇಲೆ ಅತಿರಂಬೆಯಿಂದ ಪಂಥವನ್ನು ಗೆಲ್ಲಬಲ್ಲೆನೇ !

ಅತಿರಂಬೆ ಅಣ್ಣನನ್ನು ಮತ್ತೆ ಕಾಡಿದಳು. ಆ ಪತ್ರೆಯ ಮರಕ್ಕೆ ಪ್ರಣ್ಯ ಆಗಬೇಕು. ಮನೆ ಸ್ವಾಮಿಯ ಹಿಂದೆ ತಾನು ಹೊರಡಬೇಕು. ಕೇಕೆಯನ್ನು ಕೇಳಿದ ದನಗಳೆಲ್ಲ ತನ್ನ ಹಿಂದೆ ಬರುವಾಗ, ಮರದ ನೆತ್ತಿಗೆ ತಾನು ಹಾರುತ್ತಾಳೆ. ಹೊಟ್ಟೆಯ ಪಿಂಡ ಹಿಂದೆ ಬೀಳುತ್ತದೆ. ಮಾರಣ್ಣ, ಮೈಲಣ್ಣ ಎಚ್ಚರದಿಂದ ಕಾದು ಕರುವನ್ನು ಆತುಕೊಳ್ಳಬೇಕು.

ಹನ್ನೆರಡು ಆಳುದ್ದದ ಪತ್ರೆ ಜೂಜಿನಮರ ಸೂತಕದಿಂದ ತನ್ನ ಸತ್ಯವನ್ನು ಕಳೆದುಕೊಳ್ಳುತ್ತದೆ. ಭೂಮಿಗೆ ಇಳಿದು ಹೋಗುತ್ತದೆ. ಜನರ ಕಣ್ಣಿಗೆ ಹನ್ನೆರಡು ಆಳೆತ್ತರಕ್ಕೆ ತೋರಿದರೂ, ದನವಿನ ಕಣ್ಣಿಗೆ ಚಿಕ್ಕದೆನಿಸುವ ಮರವನ್ನು ಹಾರಿಬರಬಲ್ಲವು ಉಳಿದ ಗೋವುಗಳು !

ಮೆಚ್ಚಿದೆ ಕಾಣಮ್ಮ ಹೆಚ್ಚಿನ ಸತ್ಯವ
ಒಪ್ಪಿದೆ ನಿನ್ನ ನುಡಿಗಳ

ಜುಂಜಪ್ಪ ಜೊತೆಗೆ ಅಣಿಯಾದನು. ಏಳುಗೂಡಿನ ದನಗಳನ್ನು ಬೊಮ್ಮಕ್ಕ ಪಡೆದಳೆಂದೇ ಹುರಿದುಂಬಿಸಿದರು ಏಳುಹಳ್ಳಿಯ ಗೌಡಗಳು. ಬಂದ ಮಂದಿಗೆ ಅನ್ನದಾನವನ್ನು ಮಾಡಿ ಹಿಗ್ಗಿದಳು.

ಪುಣ್ಯವಾಯಿತು, ಪೂಜೆಯೂ ಮುಗಿಯಿತು. ಪತ್ರೆಯ ಮರ ಜುಂಜಪ್ಪನನ್ನು ನೋಡಿ, ಅವನ ಏಳುಗೂಡಿನ ದನಗಳನ್ನು ನೋಡಿ ಗಡಗಡನೆ ನಡುಗಿತು. ಹಸುವಿನ ಹಿಂದೆ ಮಾರಣ್ಣ ಮೈಲಣ್ಣ ಬಂದರು. ಮುಂದೆ ಜುಂಜಪ್ಪ ಮರವನ್ನು ಹಾರಿದ ಮೇಲೆ ಹಿಡೆಯೇ ಅತಿರಂಬೆ ಹಾರಿದಳು ಸತ್ಯದಿಂದ. ಮರದ ನೆತ್ತಿಯನ್ನು ಮುಟ್ಟುವುದರಲ್ಲಿ ಹೊಟ್ಟೆಯ ಕರು ಹಿಂದೆ ಚಿಮ್ಮಿದಾಗ ಆತುಕೊಂಡರು ಮಾರಣ್ಣ ಮೈಲಣ್ಣ. ಮರ ತಗ್ಗಿತು. ಮನೆಸ್ವಾಮಿ ಕೇಕೆ ಹಾಕಿ ದನಗಳನ್ನು ಕರೆದನು. ಎಲ್ಲವೂ ಮರವನ್ನು ಹಾರಿ ಹಾರಿ ಬಂದವು. ನ್ಯಾಯವನ್ನು ಹೇಳಿದ ಏಳು ಹಳ್ಳಿಯ ಗೌಡಗಳೂ ಕದ್ದು ಕದ್ದು ಹೋದರು. ಬೊಮ್ಮಕ್ಕನ ಅಣ್ಣಂದಿರು ತಲೆಮರೆಸಿಕೊಂಡರು. ಊರಮುಂದೆ ಸೊಪ್ಪಿನ ಗುಡಿಲೊಡ್ಡಿ ಬೊಮ್ಮಕ್ಕ ತನ್ನ ಮನೆ ಮಠ ಕಾವಲನ್ನೆಲ್ಲ ಜುಂಜಪ್ಪನಿಗೆ ಒಪ್ಪಿಸಿದಳು.

ಮಾರಣ್ಣ ಮೈಲಣ್ಣ ಮುಂದೆ ಬಂದರು. ಅವಳ ಅರಮನೆ, ಹಟ್ಟಿಯ ಕಲ್ಲು, ತಿಪ್ಪೆಯ ಗೊಬ್ಬರ ಯಾವುದೂ ತಮಗೆ ಬೇಡವೆಂದು ಅಣ್ಣನಿಗೆ ನುಡಿದರು. ಕಾವಲೊಂದು ಜುಂಜಪ್ಪನಿಗೆ ಚೆಪ್ಪೋಡಾಗಿ ಉಳಿಯಿತು. ಮೂರು ತಿಂಗಳು ಜುಂಜಪ್ಪನ ದನ ಮೇದವು ಆ ಕಾವಲನ್ನು....

ಸಾಮರಾಣಿ ಹಾಕಿ ಸ್ವಾಮಿ ನಿನ್ನ ನೆನೆದೇವೊ
ಸಾಲಬ್ಬಿ ಹಾಗೆ ಇರುವೋನೆ—ಜುಂಜಪ್ಪ
ನಾ ಸ್ವಾಮಿಯ ಮೊದಲು ನೆನೆದೇನು....

# ಗೆದ್ದು ಬಾರೋ ನನ್ನ ದನವೀಗೆ

ಶರಣೆಂಬೆ ಶಿವನಿಗೆ ಶರಣೆಂಬೆ ಗುರುವಿಗೆ
ಶರಣೆಂಬೆ ಏಳು ಕೋಟಿ ಲಿಂಗಕೂsss

ಗಣೆಯು ನಾದ ತಂಬೆಲರ ಅಲೆಯಾಗಿ ತೇಲಿ ಜುಂಜಪ್ಪನ ಕಥಾಕೌತುಕದ ರಸಲೋಕದಲ್ಲಿ ತೇಲಿಸಿದೆ....

ಸುಂಡನೂರು ಕಾವಲಿನಿಂದ ಚೇಳೂರು ಕಾವಲಿಗೆ ದನಗಳನ್ನು ಹೊಡೆದಾಗಲೂ ಕಂಬೇರ ಗೊಲ್ಲರು ಬೆನ್ನಾಡಿ ಬಂದರು. ಕಾಡುಗೊಲ್ಲರ ಹುಡುಗ ಜುಂಜಪ್ಪನಿಗೆ 'ದಾಯ ಪಗಡೆ' ಬರದೆಂದು ಪ್ರಚೋದಿಸಿ ದ್ಯೂತವನ್ನು ಒಡ್ಡಿದರು. ಅರಸು ಮಕ್ಕಳು ಸೋತರೆ ತಮ್ಮ ಕಾವಲಿನ ಜೊತೆಗೆ ರಾಜ್ಯಕೋಶಗಳನ್ನೂ ಕೊಡಬೇಕು. ಜುಂಜಪ್ಪ ಸೋತರೆ ಏಳುಗೂಡಿನ ದನಗಳನ್ನು ಅವರಿಗೆ ಅರ್ಪಿಸಬೇಕು.

ಹನ್ನೆರಡು ಮಂದಿ ಚೇಳೂರ ದೊರೆಮಕ್ಕಳೊಡನೆ ದಾಯವಾಡಿ ಗೆದ್ದನು ಜುಂಜಪ್ಪ. ಮೂರುಬಾರಿಯೂ ಸೋತು ಕಂಗೆಟ್ಟ ಅವರು ತಮ್ಮ ಸಮಸ್ತವನ್ನೂ ಅವನಿಗೆ ಅರ್ಪಿಸಿ ಹಿಂದೆ ಸರಿದರು. ಚೇಳೂರ ಕಾವಲು ಜುಂಜಪ್ಪನ ವಶವಾಯಿತು. ಗದ್ದೆಯನ್ನು ಕೊಯ್ಸಿ ಕಾಳನ್ನು ಪಡೆದು ಹರಡಿದ ಹುಲ್ಲಿಗೆ ಏಳುಗೂಡಿನ ದನಗಳನ್ನೂ ಬಿಟ್ಟನು. ಸೊಪ್ಪಿನ ಗುಡಿಲನ್ನು ಹೂಡಿ ಬಡತನದಲ್ಲಿ ಬವಣೆ ಪಡುವ ದೊರೆಮಕ್ಕಳನ್ನು ಕರುಣೆಯಿಂದ ಕಂಡ ಜುಂಜಪ್ಪ ರಾಜ್ಯಕೋಶವನ್ನು ಅವರಿಗೇ ಒಪ್ಪಿಸಿ, ಕಾವಲನ್ನು ತನ್ನ ದನವಿಗೆ ಚಪ್ಪೋಡು ಮಾಡಿದನು.

ಹನ್ನೆರಡು ವರ್ಷ ಸಂದಿತು, ಊರನ್ನು ತೊರೆದು. ತಾಯಿಯನ್ನು ನೋಡಿ ಬರಲೆಂದು ಜುಂಜಪ್ಪ ಹೊರಟು ನಿಂತನು. ಮಾರಣ್ಣ, ಮೈಲಣ್ಣರನ್ನು ಕರೆದು ಬುದ್ಧಿಯ ಮಾತು ಹೇಳಿದನು. ತಾನಿಲ್ಲವೆಂದು ಸೋದರಮಾವಗಳು ಬರಬಹುದು. ನ್ಯಾಯವನ್ನು ಹೂಡಬಹುದು. ಇಲ್ಲಸಲ್ಲದ ಅಪವಾದವನ್ನು ಹೊರಿಸಿ ಅವರ ಮೇಲೆ ಕೈ ಮಾಡಬೇಡಿರೆಂದು ಹೇಳಿ ಹೊರಟನು ಜುಂಜಪ್ಪ. ಬಟ್ಟಣ್ಣ ಬಡಮೈಲನ ಬೆನ್ನು ಸವರಿ 'ಜ್ವಾಪಾನ'ವೆಂದು ನುಡಿದು ಹೋದನು.

ರಾಯಕಳ್ಳೇರ ಹಳ್ಳಿಯಲ್ಲಿ ತಾಯಿ ಚಿನ್ನಮ್ಮ ಎಷ್ಟೋ ವರ್ಷಗಳಿಂದ

ಕಾದ ನೀರು ಎಣ್ಣೆಯೊಡನೆ ಮಕ್ಕಳ ದಾರಿ ಕಾದಿದ್ದಳು. ಆದರೆ ಬಂದವನು ಜುಂಜಪ್ಪನೊಬ್ಬನೇ. ಸಿಡಿಮಿಡಿಗೊಂಡಳು ಚಿನ್ನವ್ವ. ಎಳೆಯ ಮಕ್ಕಳನ್ನು ಬಿಟ್ಟು, ಏಳುಗೂಡಿನ ದನಗಳನ್ನು ಬಿಟ್ಟು ತಾನೊಬ್ಬನೇ ಬಂದಿದ್ದಾನೆ.

ಏನು ದುರುಮುರು ದನವೆಲ್ಲೊ ಮನೆಸ್ವಾಮಿ
ಮಕ್ಕಳ ಎಲ್ಲಿ ಬಿಟ್ಟು ಬಂದೊ
ಹಾಲುಕಂದ ನೀರುಕಂದ ಮಾರಣ್ಣ ಮೈಲಣ್ಣ
ಚಿಕ್ಕಮಕ್ಕಳ ಎಲ್ಲಿ ಬಿಟ್ಟು ಬಂದೊ !

ತಾಯಿಯ ನುಡಿಗೆ ಜುಂಜಪ್ಪ ಬೆರಗಾದನು. ದೂರದ ಹಾದಿಯನ್ನು ನಡೆದು ಹಲವು ವರ್ಷಗಳ ಹಂಬಲದಿಂದ ಬಂದ ತನ್ನನ್ನು ತಾಯಿ ಹಂಗಿಸಿದ್ದಾಳೆ ; ಮೃದುನುಡಿ ಆಡಲಿಲ್ಲ. ಕುಶಲವನ್ನು ಕೇಳಲಿಲ್ಲ. ಮೈದಡವಿ ಒಲವನ್ನು ಚೆಲ್ಲಲಿಲ್ಲ. ಅವರು ಮಾತ್ರ ಮಕ್ಕಳು, ತಾನಲ್ಲವೇ !

ತಾಯಿಯೂ ಬೇಡ. ಏಳುಗೂಡಿನ ದನಗಳೂ ಬೇಡ. ತನ್ನ ದಾರಿ ತನಗೆ !

ಜುಂಜಪ್ಪ ಮುನಿದು ಎತ್ತಲೋ ಹೊರಟನು. ರಾಯ ಕಳ್ಳೇರ ಹಳ್ಳಿಯ ಬಳಿಯ 'ರೇವುಂಡೆ' ಮರದಡಿಯಲ್ಲಿ ಬಂದು ಕುಳಿತನು. ಮುಂಗಣ್ಣ ನಿದ್ದೆ ಕವಿದು ಬಂದಿತು ಅವನಿಗೆ. ಮರದ ನೆರಳಲ್ಲಿ ಮೈಯೊಡ್ಡಿ ಮಲಗಿದನು. ಮೂರು ತಿಂಗಳ ನಿದ್ದೆಯಲ್ಲಿ ಮೈಮರೆತ ಮನೆಸ್ವಾಮಿಯನ್ನು ಯಾರೂ ಗುರುತಿಸಲೇ ಇಲ್ಲ.

'ದುರುಮುರ' ಜುಂಜಪ್ಪ ರಾಯಕಳ್ಳೇರ ಹಳ್ಳಿಗೆ ಹೋಗಿದ್ದಾನೆ. ದನವಿನ ಬಳಿ ಎಳೆಯ ಮಾರಣ್ಣ ಮೈಲಣ್ಣ ಇಬ್ಬರೇ ಇದ್ದಾರೆ. ಬಡಮೈಲನನ್ನು ಹೊಡೆದು ತರಲು ತಾನಾಗಿಯೇ ಗಳಿಗೆ ಕೂಡಿ ಬಂದಿದೆ. ಜುಂಜಪ್ಪನ ಮೇಲೆ ಸೇಡು ತೀರಿಸಿಕೊಳ್ಳುವ ಗಳಿಗೆ ಹತ್ತಿರವೇ ಆಗಿದೆ....

ಚಿಕ್ಕ ಚಿನ್ನ, ದೊಡ್ಡ ಚಿನ್ನ, ಕೀವೊಟ್ಟೆ ಮರಿಪಿಡ್ಡ ಏಳು ಮಂದಿ ಸೋದರ ಮಾವಂದಿರೂ ಚೀಳೂರ ದೊರೆಮಕ್ಕಳ ಬಳಿಗೆ ಬಂದರು. ಹನ್ನೆರಡು ಸಾವಿರ ದಂಡನ್ನು ಕೂಡು ಮಾಡಲು ಹೇಳಿದರು. ಹೋರಿಯನ್ನು ಗೆದ್ದು ಬರಬೇಕು. ಚೀಳೂರ ಗಾಜಿನ ಕಂಬಕ್ಕೆ ಬಟಣ್ಣ ಬಡಮೈಲನನ್ನು ಕಟ್ಟಬೇಕು ಎಂದೇ ಆರ್ಭಟಿಸಿ ನುಗ್ಗಿತು ಚೀಳೂರ ದೊರೆಗಳ ದಂಡು. ಆದರೆ ಅವರು ಬಿಟ್ಟ ಬಾಣ ಬಡ ಮೈಲನಿಗೆ ತಾಕಲಿಲ್ಲ. ಹಿಂದಿರುಗಿ ದಂಡನ್ನೇ ನಾಶಮಾಡಿತು.

ಮತ್ತೆ ಹನ್ನೆರಡು ಸಾವಿರ ದಂಡು ಬಂದು ಮುತ್ತಿತು. ಮತ್ತೆ ಸೋತು ಓಡಿದರು. ಯಾವ ಬಾಣವೂ ಮಾರಣ್ಣ ಮೈಲಣ್ಣರ ಹತ್ತಿರ ಸುಳಿಯಲಿಲ. ಬಟ್ಟಣ ಬಡಮೈಲನನ್ನು ಮುಟ್ಟಲಿಲ್ಲ. ಏಳುಗೂಡಿನ ದನವಿಗೂ ಬಡ ಮೈಲನೊಬ್ಬನೇ ಅಡ್ಡ ನಿಂತು ಜಯಿಸಿದ. ತಮಗಾದ ಪರಾಭವಕ್ಕೆ ಚೇಳೂರ ಅರಸುಮಕ್ಕಳು ಕಣ್ಣೀರಿಟ್ಟರು.

ಕಂಬೇರ ಮಾತ ಕೇಳಿ ಕೆಟ್ಟೆವಲ್ಲೋ ಶಿವ ಶಿವ
ಇಪ್ಪತ್ನಾಲ್ಕು ಸಾವಿರ ದಂಡೆ ಮಡಿದೋತು

ಕಂಬೇರ ಸೇಡು ಇಮ್ಮಡಿಸಿತು. ದೊರೆಗಳನ್ನು ಜರಿದು, ಕಬ್ಬಿಣದ ಸರಪಣಿಯನ್ನು ತೆಗೆದುಕೊಂಡು ತಾವೇ ಬಂದರು ಬಡಮೈಲನನ್ನು ಕಟ್ಟಲು. ದನವಿನ ಬಳಿ ಸುಳಿದ ಸೋದರಮಾವಂದಿರನ್ನು ನೋಡಿ ಬೆರಗಾದ ಮಾರಣ್ಣ ಮೈಲಣ್ಣರಿಗೆ ಅಕ್ಕರೆಯ ಸಕ್ಕರೆಯ ನುಡಿಗಳು :

ಮಾರಣ್ಣ ಮೈಲಣ್ಣ ಬನ್ನಿರಯ್ಯ ಮಕ್ಕಳೆ
ಕಡಲೆ ಬೆಲ್ಲವ ಕೊಡತೀವಿ

ಬಿಸಿಲಲ್ಲಿ ಬಳಲುವ ಮಕ್ಕಳಿಗೆ ಮರುಕದ ನುಡಿ ಆಡಿದರು. ಅಣ್ಣ ಜುಂಜಪ್ಪನೆತ್ತ ಹೋದನೆಂದು ಕೇಳಿದರು. ಮಾರಣ್ಣ ಮೈಲಣ್ಣ ಬಿಸಿಲಲ್ಲಿಯೇ ನಿಂತರು ಕೋಲೂರಿ. ಅವರ ಕಡಲೆ ಬೆಲ್ಲವನ್ನು ನಿರಾಕರಿಸಿದರು. ಹೋರಿಯ ನ್ನಾದರೂ ಹೊಡೆದುಕೊಡಲು ಕೇಳಿದರು ಕಂಬೇರು. ಅಣ್ಣ ಬರಲಿ ಎಂದು ನುಡಿದರು ದಿಟ ಸೋದರರು.

ಕಂಬೇರ ತಾಳ್ಮೆ ಅರಿತು. ಜುಂಜಪ್ಪ ಬರುವವರೆಗೆ ತಾವೇಕೆ ಕಾಯ ಬೇಕು. ಬಟ್ಟಣ ಬಡಮೈಲ ತಮ್ಮದು. ತಮ್ಮ ಹೋರಿಯನ್ನು ಹಿಡಿದು ಕಟ್ಟಲು ಈ ಹುಡುಗರ ಹಂಗೇನು?

ಅವರೇನ ಹೇಳೋದು ಅವರೇನ ಕೇಳೋದು
ಹಿಡಿದು ಕಟ್ಟೇರಿ ಅವರ ಕೈಕಾಲ

ಕಟುನುಡಿಯಾಡುತ್ತ, ಕ್ರೂರದೃಷ್ಟಿಯನ್ನು ಬೀರುತ್ತ ಹತ್ತಿರ ಬಂದ ಸೋದರಮಾವಂದಿರನ್ನು ತಡೆಯಲು ಅಂಜಿದರು ಮಾರಣ್ಣ ಮೈಲಣ್ಣ. ಅವರೊ ಡನೆ ಕಾದಾಟಕ್ಕೆ ಹೋಗದಂತೆ ಅಣ್ಣನ ಕಟ್ಟಾಜ್ಞೆಯಾಗಿದೆ. ಕೈ ಮಾಡುವ

ಗೋಜಿಗೆ ಹೋಗದೆ ಮೌನವಾಗಿ ನಿಂತ ಅವರನ್ನು ಹಗ್ಗದಿಂದ ಬಿಗಿದು ಕಾದ ಮರಳಿಗೆ ಉರುಳಿಸಿದರು ಕಂಬೇರ ಗೊಲ್ಲರು. ಒಟ್ಟಣ ಬಡಮೈಲನ ಬಳಿಗೆ ಬಂದು ಕೊರಳಿಗೆ ಸರಪಣಿಯನ್ನು ಹಾಕಿದರು. ಜುಂಜಪ್ಪನ ಆಜ್ಞೆ. ಬಡ ಮೈಲನೂ ಎದುರಿಸದೆ ನಿಂತನು. ಆದರೆ ಅವರೊಡನೆ ಹೋಗದೆ ಓಂದೆ ಜಗ್ಗಿದನು.

ಮಾರಣ್ಣ ಮೈಲಣ್ಣರನ್ನು ಬಿಟ್ಟು ಹೋಗಲಾರದೆ ದೃಢನಾಗಿ ನಿಂತ ಬಡ ಮೈಲನಿಗೆ ಇನ್ನಿಲ್ಲದ ಕಿರುಕುಳವನ್ನೇ ಕೊಟ್ಟರು ಕಂಬೇರು. ಕರಿಯ ಕಲ್ಲು ಕಿತ್ತು ಎಸೆದರು ಹೋರಿಯ ಮೇಲೆ. ಉಳಿಯಲ್ಲಿ ಅದರ ಮೈಯ ಖಂಡವನ್ನು ಕಿತ್ತರು. ಬಾಚಿಯಲ್ಲಿ ಮೈಯನ್ನು ಕೆತ್ತಿದರು. ಮೈಯ 'ರೈತ' ಕೋಡಿ ವರಿದರೂ ಬಡಮೈಲ ಮುಂದೆ ಹೆಜ್ಜೆ ಇಡಲಿಲ್ಲ.

ಮಾರಣ್ಣ ಮೈಲಣ್ಣ ಕಾದ ಮರಳಲ್ಲಿ ಬಿದ್ದು ಹೊರಳಾಡುವಾಗ ನೋಡಿದರು ಈ ಘೋರ ಹಿಂಸೆಯನ್ನು, ಹರಿಯುವ ರಕ್ತಕ್ಕೆ ಅವರ ಮನ ಕರಗಿ ನೀರಾಯಿತು, ಅವರೇ ಸಾರಿ ಹೇಳಿದರು—

ಬೇಡ ಕಾಣೊ ಬಡಮೈಲ, ಒದೆಯನ್ನ ತಿನ್ನಬೇಡ—
ಅವರ ಮನೆಯ ಆಳಾಗಿ ಹೋಗಯ್ಯ

ಬಡಮೈಲ ಅತ್ತ ತಿರುಗಿ ನೋಡಿದ. ಕಣ್ಣಂಚಿನಲ್ಲಿ ನೀರಾಡಿತು.

ಹೋಗಲಾರೆ ಕಾಣಿರಯ್ಯ ಮಾರಣ್ಣ ಮೈಲಣ್ಣ
ಕಾದ ಮರಳಲ್ಲಿ ನಿಮ್ಮ ಪ್ರಾಣ ಹೋಗೋದು
ಚಿಕ್ಕ ಮಕ್ಕಳ ಬಿಟ್ಟು ಹೋಗಲಾರೆ ಕಾಣಿರಯ್ಯಾ
ಅಣ್ಣಯ್ಯಗೆ ಏನು ನ್ಯಾಯ ಹೇಳ್ಬಲಿ

ಬಡಮೈಲನ ಮನಸ್ಸು ಕುದಿಯಿತು. ಅಣ್ಣಯ್ಯ ಒಂದು ನುಡಿಯನ್ನು ಹೇಳಿದ್ದರೂ ಕಂಬೇರ ವಂಶವನ್ನು ತೊಡೆದುಬಿಡುತ್ತಿದ್ದೆನೆಂದು ಕುದಿದನು. ಮಾರಣ್ಣ ಮೈಲಣ್ಣರ ಒತ್ತಾಯಕ್ಕೆ ಕಂಬೇರ ಜೊತೆಯಲ್ಲಿ ಹೋಗಬೇಕಾಯಿತು. ಅವರನ್ನೂ ಎಳೆದುಕೊಂಡೇ ಬಂದು ಚೇಳೂರು ಮುಂದಿನ ಗಾಜಿನ ಕಂಬದ ಬಳಿ ನಿಂತನು.

ಎರಡುವರೆ ತಿಂಗಳು ಸಂದಿದೆ. ಜುಂಜಪ್ಪ ಊರಾಚೆಯ ಮರವೊಂದರ ಕೆಳಗೆ ಮಲಗಿರುವುದನ್ನು ದನದ ಹುಡುಗರು ಕಂಡರು. ತಾಯಿ ಚನ್ನವ್ವನಿಗೆ

ಹೋಗಿ ಸುದ್ದಿಯನ್ನು ಮುಟ್ಟಿಸಿದರು. ಮಿಂದು, ಮಡಿಯುಟ್ಟು ಬಂಗಾರದ ತಟ್ಟೆಯಲ್ಲಿ ಕರಪೂರ ಹಚ್ಚಿಕೊಂಡು, ಇಮ್ಮಡಿ ತಪ್ಪುಗಾಣಿಕೆಯನ್ನು ತೆಗೆದು ಕೊಂಡು, ಮುಮ್ಮಡಿ ತಪ್ಪುಗಾಣಿಕೆಯನ್ನು ತೆಗೆದುಕೊಂಡು, ಜುಂಜಪ್ಪನ ಬಳಿಗೆ ಬಂದಳು. ಜುಂಜಪ್ಪ ಮಲಗಿ ನಿದ್ರಿಸುತ್ತಿದ್ದಾನೆ ಹಸುಗೂಸಿನಂತೆ !

ಏಳೇಳು ನನ ಕಂದ
ಆಡಿದ ಮಾತು ತಪ್ಪು ನುಡಿದ ನಾಲಗೆ ತಪ್ಪು
ಹಿಂದಕು ತಪ್ಪು ಇಡತೀನ-ಜುಂಜಪ್ಪ
ಮುಂದಕು ತಪ್ಪ ಇಡುತೀನಿ

ಜುಂಜಪ್ಪನ ನಿದ್ದೆ ಪೂರ್ಣವಾಗಿ ಹರಿದಿಲ್ಲ. ಮುಂಗಣ್ಣು ನಿದ್ದೆ ಹಾಗೆಯೇ ಉಳಿದಿದೆ. ಎರಡುವರೆ ತಿಂಗಳು ತುಂಬಿ ಕಾಲುಗಣ್ಣು ನಿದ್ದೆ ಉಳಿದುಹೋಗಿದೆ. ಹಾಗೆಯೇ ಏಳಲಾರ. ಏಳಲೇಬೇಕಾದರೆ ಗುಡ್ಡದ ಮಲ್ಲಯ್ಯನಿಗೆ ಸುದ್ದಿ ಕೊಡಬೇಕು. ಹಿಂದಕ್ಕೆ ಏಳು ಜೋಡಿ, ಮುಂದಕ್ಕೆ ಏಳು ಜೋಡಿ ಹರೆಗಳು ಬಂದು ಸದ್ದು ಮಾಡಿದರೆ ಮಾತ್ರ ತನ್ನ ನಿದ್ದೆ ಹರಿದೀತು !

ಇಪ್ಪತ್ತೆಂಟು ಹರೆಗಳ ಸದ್ದಿಗೆ ಮನೆಸ್ವಾಮಿ ಎದ್ದನು. ತಾಯಿಯೊಡನೆ ಅರಮನೆಗೆ ಬಂದನು.

ಕಂಚಿನ ಬಟ್ಟಲಾಗೆ ಮಿಂಚೆಣ್ಣೆ ಬಿಟ್ಟುಕೊಂಡು
ಕೆಂಚನು ಜುಂಜಪ್ಪನಿಗೆ ಉಗುರೆಣ್ಣೆ-ಎರಿವಾಗ
ತಮ್ಮಗಳ ಸೊಪ್ಪನ ಬೀಳೋದು !
ಬೆಳ್ಳಿಯ ಬಟ್ಟಲಾಗೆ ಹರಳೆಣ್ಣೆ ಬಿಟ್ಟುಗೊಂಡು
ನಲ್ಲನು ಜುಂಜಪ್ಪಗೆ ಉಗುರೆಣ್ಣೆ-ಎರಿವಾಗ
ಬಡಮ್ಮೈಲನ ಸುದ್ದಿ ತಿಳಿಯೋದು !

ಎಣ್ಣೆ ಮಿಯುವಾಗ ತಮ್ಮಗಳ ಸ್ವಪ್ನ ಸುಳಿದಾಡಿತು, ಜುಂಜಪ್ಪನ ಕಣ್ಣೆದು ರಿಗೆ. ಬಡಮ್ಮೈಲ ಗಾಜಿನ ಕಂಬಕ್ಕೆ ಸೆರೆಯಾಗಿ ನಿಂತ ಪರಿ ಅರಿವಾಯಿತು ಕುಲ ಸ್ವಾಮಿಗೆ. ಕಾಯುತ್ತಿದ್ದ ನೀರನ್ನು ಕಾಲಿನಲ್ಲಿ ಒದ್ದು ಮೇಲೆದ್ದನು. ಉಕ್ಕು ತ್ತಿದ್ದ ಹಾಲನ್ನು ಹಾಗೆಯೇ ಕುಡಿದನು. ತಾಯಿ ಕೊಟ್ಟ ಬುತ್ತಿಯನ್ನು ಕಂಕುಳಲ್ಲಿ ಇಟ್ಟು ರಾಯಕಳ್ಳೇರ ಹಳ್ಳಿಯನ್ನು ತೊರೆದು ಹೊರಟನು ಬಿರುಗಾಳಿ

ಯಾಗಿ. ಊರ ಮುಂದೆ ಅವನು ಎಡವಿದ ಕಲ್ಲು ಚೇಳೂರ ಕೋಟೆಗೆ ತಾಗಿ ಸದ್ದಾದಾಗ ಕಂಬೇರು ಬೆಚ್ಚಿದರು.

ಬಂದ ಕಾಣಿರೊ ದುರುಮಾರ ಜುಂಜಪ್ಪ
ಇನ್ನೇನು ಗತಿಯ ಮಾಡಲಿ

ರಾಯಕಳ್ಳೇರಹಳ್ಳಿಯನ್ನು ಬಿಟ್ಟು ಹನ್ನೆರಡು ಗಾವುದದ ದಾರಿಯನ್ನು ರಭಸವಾಗಿ ನಡೆಯುವಾಗ ಅಕ್ಕಪಕ್ಕದ ಮರಗಳೇ ಹೊತ್ತಿ ಉರಿದವು. ಕಂಬೇರು ಕಾಡುಬಿದ್ದು ಸೀಗೆಯ ಮೆಳೆಯ ಮರೆಯಲ್ಲಿ ಅಡಗಿಕೊಂಡರು. ಕಾದ ಮರಳ ಬಳಿಯಲ್ಲಿ ಮಾರಣ್ಣ ಮೈಲಣ್ಣರು ಮೈ ಮರೆತು ಒರಗಿರುವುದನ್ನು ನೋಡಿದ ಜುಂಜಪ್ಪ.

ಕಾದ ಮರಳಾಗಿದ್ದ ಮಕ್ಕಳ ಎತ್ತಿಕೊಂಡು
ಅಂಜೂರದತ್ತಿ ಮರದ ನೆರಳೀಗೆ ಹೋಗುತಾನೆ
ಮಾರಣ್ಣ ಮೈಲಣ್ಣರ ತೊಡೆಮೇಲೆ ಹಾಕಿಕೊಂಡು
ದುಃಖ ಮಾಡುತಾನೆ ಮಾಸ್ವಾಮಿ

ಬೇವಿನ ಹಳ್ಳಿಯ ಕರಿಯಮ್ಮ ಮನೆಸ್ವಾಮಿಯ ದುಃಖವನ್ನು ಕಂಡು ಓಡೋಡಿ ಬಂದಳು. ಚಿನ್ನದ ಗಿಂಡಿಯಲ್ಲಿ ಪನ್ನೀರನ್ನು ತಂದು ಮಕ್ಕಳ ಬಾಯಿಗೆ ಎರೆದಳು. ಹರಹರ ಶಿವಶಿವ ಎಂದು ಮಾರಣ್ಣ ಮೈಲಣ್ಣ ಎಚ್ಚರಗೊಂಡರು.

ಕಂಬೇರಿಗೆ ಹೋರಿಯನ್ನು ಬಿಟ್ಟುಕೊಟ್ಟಿದ್ದಾರೆ. ಕೈಕಾಲನ್ನು ಕಟ್ಟಿಸಿಕೊಂಡು ಕಾದ ಮರಳಲ್ಲಿ ಬಿದ್ದಿದ್ದಾರೆ ! ಇದೇನು ಹೇಡಿತನ !

– ಜುಂಜಪ್ಪ ಮಾರಣ್ಣ ಮೈಲಣ್ಣರನ್ನು ಚುಚ್ಚಿ ಮಾತಾಡಿದ. ಅಣ್ಣನ ಅಪ್ಪಣೆಯನ್ನು ನೆನಪಿಗೆ ತಂದರು ಮಾರಣ್ಣ, ಮೈಲಣ್ಣ. ಜುಂಜಪ್ಪ ಸುಮ್ಮನಾದನು. ತಾಯಿ ಕೊಟ್ಟ ಬುತ್ತಿಯನ್ನು ನೀಡಿ ಹತ್ತಿರದ ಕಟ್ಟೆಯ ಬಳಿಗೆ ಅವರನ್ನು ಕಳಿಸಿದನು. ಅವರು ಅತ್ತ ಹೋದಮೇಲೆ ಮಾಯಕಾರ ಜುಂಜಪ್ಪ ಒಂದು ಮಾಯವನ್ನು ಮಾಡಿದನು. ಹಂಚಿಕಡ್ಡಿಯೊಂದನ್ನು ಸೀಳಿ ಒಂದು ಏಳುಮೆಟ್ಟಿನ ವ್ಯಾಘ್ರವನ್ನು ಮಾಡಿ ಸೋದರರ ಕಡೆ ಬಿಟ್ಟನು. ಹುಲಿ ಮಾರಣ್ಣ ಮೈಲಣ್ಣರನ್ನು 'ಉಂಡೆ ಬೆರಸಿ'ನುಂಗಲಿ, ಇಲ್ಲವೇ ಅವರಲ್ಲಿ ಸತ್ಯವಿದ್ದರೆ ಇದನ್ನೇ

ಏಳು ತುಂಡಿಗೆ ಕತ್ತರಿಸಲಿ !"

ಅಣ್ಣನ ಮಾಯ ತಿಳಿಯಿತು ಮಾರಣ್ಣ ಮೈಲಣ್ಣರಿಗೆ ! ಹೆಂಚಿಕಡ್ಡಿ ಯೊಂದನ್ನು ತೆಗೆದು ಬಿಲ್ಲು ಬಾಣವನ್ನು ಮಾಡಿ ಹುಲಿಯನ್ನು ಏಳು ತುಂಡಿಗೆ ಕಡಿದು ನೆಲದಲ್ಲಿ ಕೆಡವಿ ಅಣ್ಣನ ಮುಂದೆ ಬಂದು ನಗುತ್ತ ನಿಂತರು. ಅಣ್ಣಯ್ಯ ಅವರ ಸತ್ಯವನ್ನು ಮೆಚ್ಚಿಕೊಂಡ. ಕಂಬೇರ ಮೋಸ ಅರಿವಾಯಿತು. ಚೇಳೂರ ಕಾವಲಿಂದ ದನಗಳನ್ನು ಮದಗದ ಗುಡ್ಡಕ್ಕೆ ಹೊಡೆದು ಬೆಟ್ಟದ ತುದಿಗೆ ಬಂದು ನಿಂತನು. ಸುತ್ತಲೂ ಕವಿದ ಕಗ್ಗಾಡು, ಬೆಟ್ಟಗುಡ್ಡ-ಆಚೆ ಆಚೆ ಹನ್ನೆರಡು ಗಾವುದ ದೂರದಲಿ ಚೇಳೂರು. ಊರ ಮುಂದೆ ಗಾಜಿನ ಕಂಬದಲ್ಲಿ ಅಣ್ಣನ ಆಜ್ಞೆಗೆ ಕಟ್ಟುಬಿದ್ದು ಬಡಮೈಲ ಅಸಹಾಯಕನಾಗಿ ನಿಂತಿದ್ದಾನೆ. ಸುತ್ತಲೂ ಎತ್ತರವಾದ ಚೇಳೂರ ಕೋಟೆ ತೋರಿದೆ.

ಮದಗದ ಗುಡ್ಡದ ನೆತ್ತಿಯಲ್ಲಿ ಮನೆಸ್ವಾಮಿ ಜುಂಜಪ್ಪನ ಮನಸ್ಸು ಕರಗಿತು. ಬಡಮೈಲನನ್ನು ನೆನೆದು ಹಂಬಲಿಸಿದನು ಕುಲಸ್ವಾಮಿ. ಚಿನ್ನದ ಗಣೆಯನ್ನು ತೆಗೆದು ಊದತೊಡಗಿದನು. ಆ ಕೊಳಲಗಾನ ಹಸಿದ ಕಾನನದ ತರಂಗಗಳ ಮೇಲೆ ಹಾದು ಹಾದು ಚೇಳೂರು ಕೋಟೆಯೊಳಗೆ ಅಣ್ಣನ ನೆನಪಿನಲ್ಲಿಯೇ ಕೊರಗುತ್ತಿದ್ದ ಬಡಮೈಲನ ಕಿವಿಯನ್ನು ತಲುಪಿತು ; ತಟ್ಟಿ ಎಚ್ಚರಿಸಿತು. ತಟ್ಟನೆ ಸೆಟೆದು ನಿಂತಿತು ಬಡಮೈಲ

ಕಂಚಿನ ಕದಮುರುದು ಕಬ್ಬಿಣದ ಸರವರಿದು
ಅಲ್ಲಿದ್ದಂತೆ ಕೋಟೆ ತೆನೆ ಮುರಿದು-ಬಡಮೈಲ
ಗೆದ್ದು ಬಾರೋ ನನ್ನ ದನವೀಗೆ

ಬಡಮೈಲನ ಮೈ ಪುಳಕಗೊಂಡಿತು. ಹಾಗೆಯೇ ಬರಲು ಅವನ ಮನ ಒಪ್ಪಲಿಲ್ಲ. 'ಗುಟುರಿಕೆ'ಯೊಂದಕ್ಕೆ ಅಣ್ಣನ ಅನುಮತಿಯನ್ನು ಕೋರಿದನು.

ಗುಟುರಿಕೆ ಹೊಡೆದರೆ ಪಟ್ಟಣ ಹಾಳಾಗುವುದು
ನೀ ಹೆಂಗ್ಹೋದೆ ಹಂಗೆ ಬರಬೇಕು

ಬಡಮೈಲ ಕೇಳಲಿಲ್ಲ. ಮತ್ತೆ ಮತ್ತೆ ಬೇಡಿದ—

ದಮ್ಮಯ್ಯ ಕಾಣಣ್ಣ ದತ್ತಯ್ಯ ಕಾಣಣ್ಣ
ಗುಟ್ರುಕೆಗಪ್ಪಣೆ ಕೊಡಬೇಕು !

ಪಟ್ಟಣದ ಮುಗ್ಧ ಜನರಿದ್ದಾರೆ, ಬಾಣಂತಿಯರಿದ್ದಾರೆ, ಬಸುರಿಯರಿದ್ದಾರೆ. ಬಟ್ಟಣ ಬಡಮ್ಮೈಲನ ಗುಟುರು ಪಟ್ಟಣವನ್ನೇ ನೆಲಸಮ ಮಾಡುತ್ತದೆ.

—ಅಂಜಿದನು ಜುಂಜಪ್ಪ ; ಬಡಮ್ಮೈಲ ಕೇಳಲಿಲ್ಲ. ನಾಲಿಗೆ ಹಿರಿದು ಅಲ್ಲಿಯೇ ಪ್ರಾಣ ಬಿಡುವುದಾಗಿ ಪಟ್ಟುಹಿಡಿದ. ಸಣ್ಣದೊಂದು ಗುಟುರಿಕೆಯನ್ನು ಹಾಕಲು ಮಾತ್ರ ಜುಂಜಪ್ಪ ಸಮ್ಮತಿಸಿದ. ಗಾಜಿನ ಕಂಬವನ್ನು ಮುರಿದು ಬೆನ್ನಮೇಲೆ ಹೊತ್ತು, ಕಬ್ಬಿಣದ ಸರಪಣಿಯನ್ನು ಹರಿದು, ಕಂಚಿನ ಬಾಗಿಲನ್ನು ಮುರಿದು ಅಲ್ಲಿದ್ದ ಕೋಟೆಯ ತೆನೆಯನ್ನು ಮುರಿದು ಬಡಮ್ಮೈಲ ಕಾಲು ಕೆರೆದು ಗುಟುರಿಕೆ ಹಾಕಿದನು ! ಚೇಳೂರು ಪಟ್ಟಣ ಧ್ವಂಸವಾಗಿ ಹೋಯಿತು. ಗಾಜಿನ ಕಂಬವನ್ನು ಹೊತ್ತು ಅಲ್ಲಿಂದ ಮದಗದ ಗುಡ್ಡಕ್ಕೆ ಹಾರಿ ಅಣ್ಣನ ಎದುರಿಗೆ ನಿಂತನು !

ಸೂತಕ ಕವಿದ ಬಡಮ್ಮೈಲ ಗಾಜಿನ ಕಂಬವನ್ನೇ ಹೊತ್ತು ಏಳುಮಡುವಿನಲ್ಲಿ ಮುಳುಗಿ ಬರಬೇಕಾಯಿತು. ವಿಭೂತಿಯನ್ನು ನೊಸಲಿಗಿಟ್ಟು, ಮೂರು ದುಡ್ಡು ತಪ್ಪಿಟ್ಟು ಜುಂಜಪ್ಪನ ದನವಿಗೆ ಸೇರಿದನು.

ಹಿಂದೇಳು ತಲೆಯ ಹಕ್ಕನ್ನು ಜುಂಜಪ್ಪ ಪಡೆದು, ಅಲ್ಲಿ ಹರಿವಾಣದ ದೀಪವನ್ನು ಹಚ್ಚಿದನು. ಕರುಗಳನ್ನೆಲ್ಲ ಕೆರೆಯಲ್ಲಿ ಮೀಯಿಸಿ ಹಿಂಡಿಗೊಂದು ಹೆಸರನ್ನು ಇಟ್ಟನು. ಬಟ್ಟಣ ಬಡಮ್ಮೈಲ ತಂದ ಗಾಜಿನ ಕಂಬವನ್ನು ಮದಗದ ಗುಡ್ಡದಲ್ಲಿ ದೇವರು ಮಾಡಿಸಿ ಮೂರು ತಿಂಗಳು ಆ ಕಾವಲಿನಲ್ಲಿದ್ದು ಚಿತ್ತರಗಿರಿ ಕಾವಲಿಗೆ ದನವನ್ನು ಹೊಡೆದನು.

ಮುತ್ತೋಡ ಕಾವಲನ್ನು ಮುತ್ತಿದವು,ಮುಂದೆ ಜುಂಜಪ್ಪನ ಏಳುಗೂಡಿನ ದನಗಳು. ಅವರ ಅಜ್ಜಗಳು ಪಡೆದ ಚಪ್ಪೋಡು ಇದ್ದರೂ ಅಲ್ಲಿನ ಗೌಡಗಳು ಕೋಲು ದೊಣ್ಣೆಗಳನ್ನು ಹೊತ್ತು ತಂದರು. ಅಪಾರ ಸಂಖ್ಯೆಯ ಜುಂಜಪ್ಪನ ದನಗಳನ್ನು ನೋಡಿ ಬೆದರಿ ಹಿಂದೆ ಸರಿದರು. ಮಾಟದ ಲಿಂಗಯ್ಯನನ್ನು ಕರೆಸಿ ಏಳುಕೋಟಿ ಮಾಟದ ಗೊಂಬೆಗಳನ್ನು ಬಿಡಿಸಲು ಅಣಿಯಾದರು. ಶೀರ್ಯದ ಹನ್ನೆರಡು ಕೋಣಗಳನ್ನು ಕಡಿಸಿ, ಹನ್ನೆರಡು ಹೋತಗಳನ್ನು ತರಿದು, ಹನ್ನೆರಡು ಖಂಡುಗ ಅಕ್ಕಿಯನ್ನೇ ಬೇಯಿಸಿದರು. ಏಳು ಕೋಟೆ ಗೊಂಬೆಗಳೂ ಅನ್ನದ ರಾಶಿಯನ್ನು ಗಬಗಬನೆ ತಿಂದು ದನವಿನ ಕಡೆ ನುಗ್ಗಿ ಬಂದವು. ದನವಿನ ಹುಡುಗರನ್ನು ಮೊದಲು ತಿಂದು, ಆಮೇಲೆ ದನಗಳನ್ನು ತಿನ್ನಲೆಂದು ಏರಿಬಂದವು ಗೊಂಬೆ

ಗಳು ಹುಚ್ಚು ಹೊಳೆಯಂತೆ, ಮೊರೆದು ಗರ್ಜಿಸುತ್ತ.

ಜುಂಜಪ್ಪ ನೋಡಿದನು ಅನಂತ ಸಂಖ್ಯೆಯ, ವಿಚಿತ್ರ ವೇಷದ, ಕ್ರೂರ ದೃಷ್ಟಿಯ ಗೊಂಬೆಗಳನ್ನು. ಬಾಣವನ್ನು ಬಿಟ್ಟರೆ 'ಬತಗೆಟ್ಟು' ಹೋಗುತ್ತವೆ. ಗೊಂಬೆಗಳ ಅಬ್ಬರ ಆರ್ಭಟ ಎದೆ ನಡುಗುವಂತಿದೆ. ತಮ್ಮತ್ತಲೇ ನುಗ್ಗಿ ಬರುತ್ತಿವೆ! ಮದ್ಯಮಾಂಸದಿಂದ ಜಾತಿಗೆಟ್ಟು ಬರುವ ಗೊಂಬೆಗಳನ್ನು ಎದುರಿಸುವ ಬಗೆಯನ್ನೇ ಅರಿಯದಾದನು ಜುಂಜಪ್ಪ.

ಬೇವಿನ ಹಟ್ಟಿಯ ಕರಿಯಮ್ಮ ಹಿರಿಯಣ್ಣ ಜುಂಜಪ್ಪನ ಮೊರೆಗೆ ಓಗೊಟ್ಟು ಓಡಿ ಬಂದಳು. ತನ್ನ ಉಗ್ರರೂಪವನ್ನು ಧರಿಸಿ ಏಳುಕೋಟಿ ಗೊಂಬೆಗಳನ್ನೂ ಮೂರು ಹಿಡಿಮಾಡಿ ನೀರಿಗೆ ತುಂಬಿದಳು. ಮೂರುದಿನ ಗೊಂಬೆಗಳ ಹಾದಿ ಕಾದು ಸೋತನು ಮಾಟಗಾರ ಲಿಂಗಯ್ಯ. ಕುಂಟು ಗೊಂಬೆಯನ್ನು ಹುಡುಕಿಕೊಂಡು ಬರಲು ಅತ್ತ ಅಟ್ಟಿದ. ಬಂದವನು ಜುಂಜಪ್ಪನೆಂದು ಗೊಂಬೆಯಿಂದ ಅರಿತು ಮೂರ್ಛೆಹೋದನು. 'ಸೋಳಿಜರ'ದಲ್ಲಿ ಕಂಗೆಟ್ಟು ಬಳಲಿದ ಅವನ ಸೋಲು ಮುತ್ತೋಡು ಗೌಡರನ್ನೂ ಬೆದರಿಸಿತು. ಆರು ತಿಂಗಳು ಮೇದು ಮುಂದೆ ಹೋದ ಜುಂಜಪ್ಪನ ದನಗಳನ್ನು ಎಂದೂ ಅವರು ತಡೆಯಲಿಲ್ಲ.

ಚಿತ್ರಗಿರಿಯ ಕಾವಲಿಗೆ ಜುಂಜಪ್ಪನ ದನಗಳು ಮುಂದೆ ಸಾಗಿದವು. ಚಿತ್ರಗಿರಿಯ ಹನ್ನೆರಡು ವರ್ಷದ ದೊರೆತನವೂ ಅವನಿಗೆ ದೊರೆಯಿತು. ಕಳ್ಳೀರ ಹಳ್ಳಿಯನ್ನು ತೊರೆದು ಇಪ್ಪತ್ತು ವರ್ಷಗಳು ಸಂದರೂ ಮರಳದ ಮಕ್ಕಳನ್ನು ನೆನೆದು ತಾಯಿ ಚಿನ್ನವ್ವ ಹಂಬಲಿಸಿದಳು. ಮಕ್ಕಳ ನೆಲೆ ತಿಳಿಯದಿದ್ದರೆ ತಾನು ಕೆಂಡಕೊಂಡವಾಗುವುದೇ ಮೇಲೆಂದು ಭಾವಿಸಿದಳು. ಮಾದಿಗರ ಹೋಬಯ್ಯ ಚಿತ್ರಗಿರಿಗೆ ಸುದ್ದಿಯನ್ನು ತಂದನು. ಜುಂಜಪ್ಪನಿಂದ ಉಡುಗೊರೆಗಳನ್ನು ಪಡೆದು ಕಳ್ಳೀರಹಳ್ಳಿಗೆ ಮರಳುವಾಗ ನಾಸುಬೇಡರ ಹಟ್ಟಿಯ ಬಳಿ ಬಂದನು. ತನ್ನ ಬಟ್ಟೆಬರೆಗಳನ್ನೆಲ್ಲ ತೋರಿಕೊಂಡು ಬೀಗಿದನು. ಜುಂಜಪ್ಪನ ಸಿರಿಯನ್ನು ಕೊಂಡಾಡಿದನು.

ಜುಂಜಪ್ಪನ ಕಡೆಯ ಹೋಬಯ್ಯನನ್ನು ನಾಸು ಬೇಡರ ಹುಡುಗರು ಮುಂದೆ ಬಿಡಲಿಲ್ಲ. ಜೀವಸಹಿತ ಅವನನ್ನು ನೂರೊಂದು ಗಾಡಿ ಕಲ್ಲುಗಡ್ಡೆಯಲ್ಲಿ ತುರುಕಿ ಹೊರಟುಹೋದರು. ಆಡಿನ ಚಿಕ್ಕಣ್ಣ ಕಲ್ಲುಗುಡ್ಡೆಯ ಮೇಲೆ ಕುಳಿತು ಆಡನ್ನು ಕಾಯುವಾಗ ಕಲ್ಲುಗುಡ್ಡೆಯ ಒಳಗೆ ಹೋಬಯ್ಯನ ದನಿಯನ್ನು ಕೇಳಿ

ಬೆಚ್ಚಿದನು. ಕಲ್ಲನ್ನು ಉರುಳಿಸಿಕೊಂಡು ಮೇಲೆದ್ದನು ಹೋಬಯ್ಯ. ಚಿನ್ನಮ್ಮನ ಗತಿ ಏನಾಯಿತೋ! ತನ್ನ ದಾರಿಯನ್ನು ಕಾದು ಇನ್ನೆಲ್ಲಿ ಕೊಂಡವನ್ನು ಹಾದಳೋ ಎಂದು ಕಳ್ಳೇರಹಳ್ಳಿಗೆ ಏದುಸಿರುಬಿಡುತ್ತಲೇ ಬಂದನು!

ಕಳ್ಳೇರಹಳ್ಳಿಯ ಊರ ಮುಂದೆ ನೂರೊಂದು ಗಾಡಿಯ ಶ್ರೀಗಂಧದ ಕಟ್ಟಿಗೆಯ ಕೊಂಡ ಧಗಧಗನೆ ಹೊತ್ತಿ ಉರಿಯುತ್ತಿತ್ತು. ಚಿತ್ರಗಿರಿಯ ದೊರೆತನ ಜುಂಜಪ್ಪನಿಗೆ ಸಿಕ್ಕಿತು ಎನ್ನುವ ಸುದ್ದಿ ಚಿನ್ನಮ್ಮನ ಕಿವಿಯನ್ನು ಮುಟ್ಟಿದ ಗಳಿಗೆಯಲ್ಲಿ ನೀರಾಗಿ ಹರಿಯಿತು ಕೊಂಡದ ಅಗ್ನಿ.

ಜುಂಜಪ್ಪನ ದೊರೆತನ ಕಂಬೇರ ಗೊಲ್ಲರಿಗೆ ಇನ್ನಿಲ್ಲದ ನಂಜನ್ನೇ ಬಿತ್ತಿತು ಅವರೆದೆಯಲ್ಲಿ. ಅವನನ್ನು ಮುರಿಯಲು ಏಳು ಮಂದಿ ಸೋದರಮಾವಂದಿರೂ ಹೂಡಿದ ತಂತ್ರಗಳೆಲ್ಲ ವಿಫಲವಾಗಿ ಮತ್ತೊಂದು 'ಸಂದ'ನ್ನು ಹುಡುಕಿದರು. ಚಿಕ್ಕ ಚಿನ್ನ, ದೊಡ್ಡ ಚಿನ್ನ, ಕೀವೊಟ್ಟಿ ಮರಿಪಿಡ್ಡ ಎಲ್ಲರೂ ಕಲೆತು ಆಲೋಚಿಸಿದರು. ಪ್ರೀತಿಯನ್ನು ನಟಿಸಿ ಕರೆತಂದು ಮದ್ದಿಟ್ಟು ಕೊಲ್ಲಲೆಂದು ನಿರ್ಧರಿಸಿ ಚಿತ್ರಗಿರಿಗೆ ಬಂದರು.

ತಮ್ಮ ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿದವನು ಜುಂಜಪ್ಪ. ಅವರಿಬ್ಬರ ನಡುವೆ ಯಾವ ನ್ಯಾಯ! ತಂಗಿ ಚಿನ್ನಮ್ಮನಿಗೂ ಅರಿಯದ ಮಕ್ಕಳಿಗೂ ಕಷ್ಟ ಕೊಡಲು ಅವರೇನು ಅನ್ಯರೇ! ಮಕ್ಕಳನ್ನು ಕರೆದೊಯ್ದು ಸತ್ಕರಿಸಿ ಸಂತೋಷ ಪಡಿಸಲಾಗಿಯೇ ಬಂದವರು!

ಜುಂಜಪ್ಪ ಬೆರಗಾದನು ಸೋದರಮಾವಂದಿರ ಸಿಹಿನುಡಿಗೆ. ಮಾರಣ್ಣ ಮೈಲಣ್ಣರೊಡನೆ ಸೋಜಿಗವನ್ನು ಹಂಚಿಕೊಂಡನು. ಚೇಳೂರ ಕಾದ ಮರಳಿಗೆ ಕಟ್ಟಿದ ಗಾಯ ಇನ್ನೂ ಮಾಯದ ಮುನ್ನವೇ ಇವರ ಪರಿ ಮಾರಣ್ಣ ಮೈಲಣ್ಣರಿಗೆ ಸಂಶಯವನ್ನೇ ತಂದಿತು. ಜುಂಜಪ್ಪ ಕೊನೆಯ ಕಂಟಕಕ್ಕೂ ಅಣಿಯಾಗಿ ಹೊರಟನು!

ಕುಂಬಾರ ಗುಂಡಯ್ಯನಿಗೆ ಹೇಳಿ ಏಳು ಪದರಿನ ಮಡಕೆಯನ್ನು ಮಾಡಿಸಿ ವಿಷದ ಕಜ್ಜಾಯವನ್ನು ತುಂಬಿದರು ಕಂಬೇರು. ಹಾವಿನ ಗೂಡಿನಲ್ಲಿ ಹಾಲು ಅಡಿಗೆ ಮಾಡಿಸಿ ಸೋದರಳಿಯನನ್ನು ಕರೆತಂದರು.

ಚಿನ್ನಮ್ಮನಿಗೆ ಕೆಟ್ಟಸ್ವಪ್ನ ಬಿದ್ದವು. ಬೆಚ್ಚಿ ಬೆದರಿ ಮೇಲೆದ್ದಳು.

ಕಂಬೇರ ಗೊಲ್ಲರ ನಂಬದಿರೊ ನನ ಕಂದ
ಇಂಬಾಗಿ ಹೊಡಿಯೊ ಹೊರಗೂಡ-ನನ ಕಂದ
ಇಕ್ಕೋರು ನಿನಗೆ ಉರಿಮದ್ದ !

ತಾಯಿಯ ಕರೆ ಮಾರ್ಮೊಳಗಿತು ಜುಂಜಯ್ಯನ ಅಂತರಂಗದಲ್ಲಿ. ಹುಸಿ ನಗೆಯೊಂದು ಚಿಮ್ಮಿ ಹೋಯಿತು ಅವನ ತುಟಿಯಲ್ಲಿ. ಅವನ ಹೆಜ್ಜೆ ಸೋಲ ಲಿಲ್ಲ. ಎದೆ ಅಳುಕಲಿಲ್ಲ–

ಇಕ್ಕಿದರು ಇಕ್ಕಲೇಳಿ ದಕ್ಕೋರ ಮಗನಲ್ಲ
ಇಕ್ಕಿದೇಳು ದಿನಕೆ ಉಳ್ಳಿ ಉರಿದಂಗೆ-ನನ ತಾಯಿ
ಉರಿದೆದ್ದು ನಾನು ಬರುತೀನಿ

ಕೆಂಗುರಿ ಮಲ್ಲೇಗೌಡ, ಕೆಂಪಿನ ಮಲ್ಲೇಗೌಡ ಎಲ್ಲರನ್ನೂ ನೆನೆದನು ಜುಂಜಪ್ಪ. ಕಂಬೇರ ಮೇಲೆ ನ್ಯಾಯ ಮಾಡದಂತೆ, ಸೋದರಮಾವಗಳ ಮೇಲೆ ಕೈ ಮಾಡದಂತೆ ಹೇಳಿದ್ದರು ಅವರು. ಮೀರಿದವರ ಮುರಿಯಲು ಕಾಲ ಕೂಡಿ ಬಂದಿತು. ಕೊಟ್ಟಭಾಷೆಯನ್ನು ಹಿಂದಕ್ಕೆ ನೀಡಿದನು. ಮಾರಣ್ಣ ಮೈಲಣ್ಣರನ್ನು ದನವಿನ ಬಳಿ ಬಿಟ್ಟು ಧೀರಗತಿಯಲ್ಲಿ ನಡೆದು ಬಂದನು ಜುಂಜಪ್ಪ

ಕಂಬೇರ ಹಟ್ಟಿ ಎಂಬೋದು ಸಾವಿರ ಮನೆ ಕಾಣೊ
ಕಂಬೇರ ಹಟ್ಟಿಗೆ ಬಂದಾನು.
ಹಾವಿನ ಗೂಡಿನಲ್ಲಿ ಆದರದ ಅಡಿಗೆ ಮಾಡಿ
ಸೋದರಳಿಯಾಗೇ ಕಲಸ್ಯಾರು

ತಾಯಿಯ ನುಡಿ ಮತ್ತೆ ಎಚ್ಚರಿಸಿತು ಜುಂಜಪ್ಪನನ್ನು !

ಇಕ್ಕಿದಗು ಇಕ್ಕಲೇಳಿ ದಕ್ಕೋರ ಮಗನಲ್ಲ
ಇಕ್ಕಿದೇಳು ದಿನಕೆ ಹುಟ್ಟಿ ಬರುತೀನಿ !

ಅದೇ ಕೆಚ್ಚಿನಲ್ಲಿ, ಅದೇ ನೆಚ್ಚಿನಲ್ಲಿ ದಿಟ್ಟನಾಗಿ ನಡೆದ ಮನೆಸ್ವಾಮಿ ಜುಂಜಪ್ಪ. ಕಂಬೇರ ಹೆಣ್ಣುಮಕ್ಕಳು ಆ ಧೀರ ಗಂಭೀರ ಮೂರ್ತಿಯನ್ನು ನೋಡಿ ಮರುಗಿದರು ಮನದಲ್ಲಿ. ತಂಗಿ ಮಾರವ್ವನನ್ನು ತಂದುಕೊಂಡಿದ್ದ

ಕಂಬೇರು ಅವಳ ಅಣ್ಣನಿಗೆ ವಿಷಹೂಡಲು ಹವಣಿಸಿದರು. ಕಂಬವನ್ನೊರಗಿ ಕಣ್ಣೀರಿಟ್ಟಳು ಮಾರವ್ವ.

ಅನ್ಯಾಯ ಮಾಡುತಾರೆ ಮೋಸವ ಮಾಡುತಾರೆ
ಯಾಕೆ ಬಂದೆಯೊ ಹಿರಿಯಣ್ಣ

ತಂಗಿಯ ಕಣ್ಣೀರು ಜುಂಜಪ್ಪನ ಧೈರ್ಯವನ್ನು ಕಲಕಲಿಲ್ಲ.

ಆಡಬೇಡ ತಂಗಿ ಆಡಿ ನುಡಿಯಲು ಬೇಡ
ಕೇಡು ಮಾಡೋರಿಗೆ ಕೇಡು ಬರುವುದು-ನನ ತಂಗಿ
ಮುಂದೆ ನೋಡಮ್ಮ ಪದಗಳ

ಸಾವಿರ ಸಾವಿರ ಜನ ಸೇರಿದ ಕೂಟದಲ್ಲಿ ಜುಂಜಪ್ಪ ಏಳು ಪದರಿನ ಮಡಕೆಯಲ್ಲಿ ಮಾಡಿದ ಮೊಸಲನ್ನು ತನ್ನೊಬ್ಬನಿಗೆ ಮಾತ್ರ ಬಡಿಸುವಂತೆ ಸಾರಿದನು.

ಎಕ್ಕದ ಹಾಲ ಕರೆದು ಹಸುವಿನ ಹಾಲೆಂದು
ಅಜಮಾಜಿ ಹಾಲ ಕೊಡುವರು-ನಮ್ಮಪ್ಪಗೆ
ಅಮೃತವಾಗಿ ಇರುವುದು

ವಿಷದ ಕಜ್ಜಾಯವನ್ನು ನೀಡಿದರು. ಉಂಡುಮೇಲೆದ್ದ ಮನೆಸ್ವಾಮಿ ಉದರದಲ್ಲಿ ಉರಿ ಎದ್ದಿತು. ತನು ತಳಮಳಿಸತೊಡಗಿತು.

ಲೆಕ್ಕವೆ ಇಲ್ಲದೆ ಇಕ್ಕಿದರುರಿಮದ್ದ
ತಾಳಲಾರೆನೆಂದ ಮನೆಸ್ವಾಮಿ-ಜುಂಜಪ್ಪ
ಶಿವ ಶಿವ ಎಂದೆ ಹಾರಿ ಬೀಳುತಾನೆ.

ಉರಿಯನ್ನು ತಡೆಯಲಾರದೆ, ಮೇಲೆ ಹಾರಿ ಕೆಳಗೆ ಬೀಳುತ್ತ ಧಗೆಯಲ್ಲಿ ಬೇಯಲಾರದೆ ಹರಿವ ಗಂಗೆಯ ಮಡಿಲನ್ನು ಸೇರುತ್ತ ಆಕಾಶದುದ್ದಕ್ಕೂ, ಜುಂಜಪ್ಪ ಚಿಮ್ಮಿ ಬೀಳುವಾಗ ಕಣ್ಣೀರಿಟ್ಟು ಕಂಗಾಲಾಯಿತು ನೆರೆದ ಮಂದಿ !

ಸಾವೆಯ ಹುಲ್ಲಿನಾಗೆ ಸರದಾರ ನಮ್ಮಪ್ಪ
ಸರದಾರನಾಗಿ ಮನಗ್ಯವನೆ-ಜುಂಜಪ್ಪ
ಎಕ್ಕಿ ನೋಡುತಾರೆ ದಾಯವ

ಮಾಯಕಾರ ಜುಂಜಪ್ಪ ಸಾವೆಯ ಹುಲ್ಲಿನಲ್ಲಿ ಸರದಾರನಾಗಿ ಮಲಗಿದ.

ನಿದ್ದೆ ಬಂದಂತೆ ಮಲಗಿದ. ಮೃತನಾಗಿಯೇ ಮಲಗಿದ. ತಂಗಿ ಮಾರಕ್ಕ ಬಂದು ಬಿಕ್ಕಿಬಿಕ್ಕಿ ಅತ್ತಳು ಅಣ್ಣನ ಪಾದದಲ್ಲಿ.

ಚಿತ್ರಗಿರಿಯಲ್ಲಿ ಮಾರಣ್ಣ ಮೈಲಣ್ಣರಿಗೆ ಕೆಟ್ಟ ಸ್ವಪ್ನ ಬಿದ್ದಿತು. ತಾಯಿ ಚಿನ್ನವ್ವ ಕೆಟ್ಟ ಶಕುನಗಳಿಗೆ ಬೆಚ್ಚಿ ಬೆದರಿದಳು. ಏಳು ದಿನಗಳು ಉರುಳಿದವು. ಮಲಗಿದ್ದ ಮನೆಸ್ವಾಮಿ ನಿದ್ದೆ ತಿಳಿದವನಂತೆ ಇತ್ತ ಹೊರಳಿದನು. ಕಣ್ಣನ್ನು ಉಜ್ಜಿಕೊಂಡು ಮೇಲೆದ್ದನು. ಅಣ್ಣನನ್ನು ಹುಡುಕಿಕೊಂಡು ಮಾರಣ್ಣ ಮೈಲಣ್ಣರು ಕಂಬೇರ ಹಟ್ಟಿಗೆ ಬಂದರು. ಏಳು ದಿನದ ನಿದ್ದೆಯಿಂದ ಉರಿದೆದ್ದ ಅಣ್ಣನನ್ನು ಕೂಡಿಕೊಂಡರು.

ಕಂಬೇರ ಹಟ್ಟಿಗೆ ಸುದ್ದಿ ಮುಟ್ಟಿತು. ತಂಗಿ ಮಾರಕ್ಕ ಓಡಿ ಬಂದಳು. ಅಣ್ಣ ಜುಂಜಪ್ಪನ ಪಾದದ ಮೇಲೆ ಬಿದ್ದು ಹಲುಬಿದಳು. ಕಂಬೇರ ಗೊಲ್ಲರ ಮೇಲೆ ಕರುಣೆಯನ್ನು ತೋರೆಂದು ಬೇಡಿದಳು. ಜುಂಜಪ್ಪ ಇಟ್ಟ ಹೆಜ್ಜೆಯನ್ನು ಹಿಂದೆ ತೆಗೆಯಲಿಲ್ಲ. ತಂಗಿಯ ಮಾತನ್ನು ಲೆಕ್ಕಿಸದೆ ಜುಂಜಪ್ಪ ಕಂಬೇರ ಹಟ್ಟಿಯ ಮೇಲೆ ಶರವರ್ಷವನ್ನು ಸುರಿಸಲು ಮಾರಣ್ಣ ಮೈಲಣ್ಣರಿಗೆ ಹೇಳಿದನು.

ಅವಳೇನ ಆಡೋದು ನಾವೇನ ಕೇಳೋದು
ಹೂಡೋ ಮಾರಣ್ಣ ಮರಬಿಲ್ಲ-ಕಂಬೇರಿಗೆ
ಬಾಳೆಯಕಾಯಂತೆ ಬಾಣ ಸುರಿಯಲಿ

ಮಾರಣ್ಣ ಮೈಲಣ್ಣರ ಬಾಣಗಳು ಉರಿಯನ್ನು ಉಗುಳುತ್ತ ಸಾವಿರ ಮನೆಯ ಕಂಬೇರ ಹಟ್ಟಿಯ ಮೇಲೆ ಹಾರಿಬಂದವು. ಮನೆಸ್ವಾಮಿ ಜುಂಜಪ್ಪ ಕಂಬೇರ ತಲೆಗಳನ್ನು ಚೆಂಡಾಡಿದನು. ಹಟ್ಟಿಯೆಲ್ಲ ನಾಶವಾಗಿ ಸಾವಿರ ಮನೆಯ ಕಂಬೇರು ತಾವು ಹಚ್ಚಿದ ಕಿಚ್ಚಿನಲ್ಲೇ ಉರಿದು ಹೋದರು. ತಂಗಿ ಮಾರಕ್ಕ ಳೊಬ್ಬಳನ್ನು ಉಳಿಸಿದ ಜುಂಜಪ್ಪ ಸಾವಿರ ಮನೆ ಮತ್ತೆ ಅವಳಲ್ಲಿ ಬೆಳೆಯಲಿ ಎಂದು ಹರಸಿದನು.

ಕಂಬೇರ ಹಟ್ಟಿ ಮಣ್ಣುಗೂಡಿದ ಸುದ್ದಿ ತಾಯಿಗೂ ಮುಟ್ಟಲೆಂದು ಜುಂಜಪ್ಪ ಸಾರಿ ಹೇಳಿದನು, ತನ್ನ ಕೂಗು ರಾಯಕಳ್ಳೇರಹಳ್ಳಿಯವರಗೆ ಕೇಳುವಂತೆ.

ಕಂಬೇರ ಹಟ್ಟಿಮೇಲೆ ಕಾಗೆ ಬೋರಿಟ್ಟವೆ
ಎದ್ದು ನೋಡೆ ಚಿನ್ನಿ ತೌರೂರ-ನಿಮ್ಮಪ್ಪಗಳ
ಒದ್ದಾಡಿ ಕೀಳುತವೆ ರಣಹದ್ದು

ಚಿತ್ರಗಿರಿಗೆ ಜುಂಜಪ್ಪ ಮರಳುವ ವೇಳೆಗೆ ಏಳುಗೂಡಿನ ದನಗಳೂ ಹುಲ್ಲು ನೀರನ್ನು ತೊರೆದು ಸೊರಗಿ ಮಲಗಿದ್ದವು. ಮೇದು ಮೆಲುಕುತ್ತಿದ್ದ ಬಟ್ಟಣ ಬಡಮೈಲನ ಪರಿ ತಿಳಿಯಿತು ಜುಂಜಪ್ಪನಿಗೆ ! ಚೇಳೂರ ಕೋಟೆಯನ್ನು ಮುರಿದು, ಕಂಬೇರ ಸೊಕ್ಕನ್ನು ಮುರಿದು ಬರಲು ತನ್ನನ್ನು ತಡೆದ ಹಿರಿಯಣ್ಣ ಈಗ ತಾನೇ ಆ ಕಾರ್ಯವನ್ನು ಮುಗಿಸಿ ಬಂದಿದ್ದಾನೆ !

ಏಳುಗೂಡಿನ ದನಗಳೊಡನೆ, ಮಾರಣ್ಣ ಮೈಲಣ್ಣರೊಡನೆ, ಬಟ್ಟಣ ಬಡಮೈಲನೊಡನೆ, ಚಿತ್ರಗಿರಿಯನ್ನು ತೊರೆದು ಜುಂಜಪ್ಪ, ರಾಯಕಳ್ಳೇರ ಹಳ್ಳಿಗೆ ಮರಳಿದನು. ಪೂಜಾರಿ ಕೆಂಡಪ್ಪ, ಕೆಂಗುರಿ ಮಲ್ಲೇಗೌಡ, ಕೆಂಪನ ಮಲ್ಲೇಗೌಡ ಕಾಲವಾಗಿ ಅಲ್ಲಿಗೆ ಮೂರು ತಲೆ ಕಳೆದು, ನಾಲ್ಕನೆಯ ಜುಂಜಪ್ಪ ಹಿರಿಯರ ಹೆಸರನ್ನು ಹೇಳಿ ಮೊಸರನ್ನು ಕಡೆಸಿದನು. ಹೋರಿಯನ್ನು ಮಾರಿದ ಹಣವೆಲ್ಲವನ್ನು ಏಳು ಕಣಜಕ್ಕೆ ತುಂಬಿದನು. ಏಳು ರಾಜ್ಯಗಳನ್ನು ಸುತ್ತಿ, ಏಳುಗೂಡಿನ ದನಗಳನ್ನು ಕಾದು, ಹಾಲು ಕಂದ ನೀರು ಕಂದ ಮಾರಣ್ಣ ಮೈಲಣ್ಣರೊಡನೆ ಇಪ್ಪತ್ನಾಲ್ಕು ವರ್ಷಗಳ ಯಾತ್ರೆಯನ್ನು ಮುಗಿಸಿ ರಾಯ ಕಳ್ಳೇರ ಹಳ್ಳಿಯ ದೊರೆತನಕ್ಕೆ ಬಂದನು.

ಗಂಗೇಯ ದಡದಲ್ಲಿ ಗಂಧದ ಮರ ಹುಟ್ಟಿ
ತಂದೇಯ ಹೊಟ್ಟೇಲಿ ಮಗ ಹುಟ್ಟಿ-ಜುಂಜಪ್ಪ
ಎಪ್ಪತ್ತು ರಾಜ್ಯಕೆ ಹೆಸರಾದ

ಜುಂಜಪ್ಪನ ಸುವಿಸ್ತಾರ ಕತೆಯು ಮೂರು ರಾತ್ರಿಯ ರಸಯಾತ್ರೆಯಿಂದ ಕಥೆಗಾರ ಕಣ್ಣು ತೆರೆಯುವಲ್ಲಿ ಗಣೆಯ ನಾದಲಹರಿ ಹಿಮ್ಮೇಳದವರ ಸೊಲ್ಲಿಗೆ ಮಲ್ಲಿಗೆಯ ಕಂಪನ್ನು ತುಂಬಿದೆ–

ಬಾಲೇರು ಬನ್ನಿರಮ್ಮ ಸ್ಯಾಲೇಲ್ಹೊನ್ನ ತನ್ನಿರಮ್ಮ
ಸಾಲಾದ್ಹಟ್ಟ್ಯೇನ ಪದಗಳು-ಮುಗಿಯೋ ಹೊತ್ತಿಗೆ
ಸ್ಯಾರಗಳ ಹೊನ್ನೆ ಮುಗಿದವು
ಚಿಕ್ಕ ಚಿಕ್ಕ ಪದಗಳ ಚಿಕ್ಕ ಭರಣಿಗೆ ತುಂಬಿ
ಅಪ್ಪ ನಿನ್ನನೆ ನೆನೆದೇವು
ದೊಡ್ಡ ದೊಡ್ಡ ಪದಗಳ ದೊಡ್ಡ ಭರಣಿಗೆ ತುಂಬಿ

ದೊಡ್ಡೋನು ಜುಂಜಪ್ಪ ನೆನೆದೇವು
ದೊಡ್ಡೋರ ಗುಡ್ಡಿಗೆ ಅಡ್ಡ ನಾವು ಬಿದ್ದೇವು
ದೊಡ್ಡಮ್ಮ ಹಡೆದ ಮಗನೀಗೆ-ಜುಂಜಪ್ಪಗೆ
ಅಡ್ಡ ಬಿದ್ದು ಕೈಯ ಮುಗಿದೇವು

— —

# ನಂಜುಂಡಲಿಂಗ

ಹತ್ತು ತೆಂಗಿನ ಮರ ಒತ್ತಲ್ಲಿ ಸುರಹೊನ್ನೆ
ಮತ್ತೆ ಓಲಾಡಿ ಬೆಳೆಯೋದೆ-ನಂಜನಗೂಡ
ಸ್ವಾಮಿ ನಂಜಯ್ಯ ಸಲುವಾಲಿ

ಸುರಹೊನ್ನೆ, ತೆಂಗು,ಕೌಂಗುಗಳ ದಿವ್ಯಮಡಿಲಿನಲ್ಲಿ ಶೋಭಿಸುವ ನಂಜನಗೂಡಿನ ತನ್ನ ಭವ್ಯಾಲಯದಲ್ಲಿ ಸ್ವಾಮಿ ನಂಜಯ್ಯ ತನ್ನ ಮಡದಿ ದೇವೀರಿಯ ನೆರೆಯಲ್ಲಿ ಮಲಗಿದ್ದವನಿಗೆ ಇಂದು ಏಕೋ ನಿದ್ದೆ ಹತ್ತದಾಯಿತು. ಪಾಪ ! ಬೆಳಗಿನಿಂದ ಮನೆಗೆಲಸದಲ್ಲಿ ಗೌಡಿಯರ ಜೊತೆ ಕೂಗಾಡಿ, ರೇಗಾಡಿ ಸೋತ ಸದ್ಗೃಹಿಣಿ ದೇವೀರಿ ನಿದ್ರಾಂಬುಧಿಯಲ್ಲಿ ಮುಳುಗಿ ಹೋಗಿದ್ದಾಳೆ. ನಡುರಾತ್ರಿ ಸಮೀಪಿಸಿರಬೇಕು. ತೂಗು ದೀಪಗಳ ಮಂದಪ್ರಕಾಶದಲ್ಲಿ ಮಂಚದಲ್ಲಿ ಎದ್ದು ಕುಳಿತ ನಂಜಯ್ಯನ ನೆರಳು ಮುಚ್ಚಿದ್ದ ಬಾಗಿಲಿನಷ್ಟುದ್ದಕ್ಕೂ ಬಿದ್ದಿತು. ಕದವ ತೆರೆದರೆ ಮಲಗಿದ ದೇವೀರಿ ಎಚ್ಚರಾಂತಾಳು, ಪಯಣವೆಲ್ಲಿಗೆ ಎಂದು ಪ್ರಶ್ನೆ ಮಾಡಿಯಾಳು? ನಂಜಯ್ಯ ಕ್ಷಣಹಾಗೆಯೇ ಯೋಚಿಸಿದ. ಗವಾಕ್ಷಗಳಲ್ಲಿ ಗಾಳಿ ಕಿವಿಬಿರಿಯುವಂತೆ ಭೋರ್ಗರೆಯುತಿದೆ; ಥಂಡಿ ಹೊಡೆಯುತ್ತಿದೆ. ಆದರೂ ಮನ ಅತ್ತಲೇ ಚಾಮುಂಡಿಯು ಗಿರಿಯುತ್ತಲೇ ಎಳೆಯುತ್ತಿದೆ. ಶಾಲನ್ನು ಹೊದ್ದು ನಂಜಯ್ಯ ಬೆಕ್ಕಿನಂತೆ ಕೆಳಗಿಳಿದ. ಸದ್ದಿಲ್ಲದೆ ಪಕ್ಕಕ್ಕೆ ನಡೆದು–

ಅಟ್ಟಕ್ಹಾಕ್ಯಾನೆ ಹತ್ತು ಕಾಲೇಣಿಯ
ಕಪ್ಪು ಬಂಗಾರ ಇಳಿವ್ಯಾನೆ
ಮಾಳಿಗ್ಹಾಕ್ಯಾನೆ ಆರು ಕಾಲೇಣಿಯ
ವಾಲೆ ಬಂಗಾರ ಇಳಿವ್ಯಾನೆ

ಎಲ್ಲಿಗೋ ಗಂಟು ಕಟ್ಟುತ್ತಿದ್ದಾನೆ. ಸರಿರಾತ್ರಿಯಲ್ಲಿ ಸ್ವಾಮಿಯ ಪಯಣ ಇನ್ನೆಲ್ಲಿಗೋ? ಏಕೋ ಮಡದಿಯು ಮುಖ ನೋಡುತ್ತಿದ್ದಾನೆ.

ಕಗ್ಗಲ್ಲ ಕೊರಡ ಮಗ್ಗುಲಿಗೆ ಮಲಗಿಸಿ
ಅವನೆದ್ದು ನು ಚಾಮುಂಡಿಯುರ ಮನೆಗೆ

ಸಂಜಯ್ಯ ಎಷ್ಟಾದರೂ ಚತುರ. ಮುಗ್ಧೆ ದೇವೀರಿಗೆ ಮಂಕುಬೂದಿಯನ್ನು ಹಾಕುತ್ತಿದ್ದಾನೆ. ಬಾಗಿಲ ಬಳಿ ಬಂದಾಗ, ಅದನ್ನು ಸದ್ದಾಗದಂತೆ ಬಹು ಎಚ್ಚರಿಕೆಯಿಂದ ಹಿಂದೆ ಎಳೆದಾಗ ಸಂಜಯ್ಯನ ಎದೆ ಢವಢವ ಹೊಡೆದುಕೊಳ್ಳುತ್ತಿತ್ತು. ನಡುರಾತ್ರಿಯಲ್ಲಿ ಬಾಗಿಲನ್ನು ತೆರೆದು ಹೋಗುವುದೆ? ಮಡದಿಯೊಬ್ಬಳೇ ಒಳಗೆ ಮಲಗಿದ್ದಾಳೆ. ಸಂಜಯ್ಯ ಅಲ್ಲಿಯೇ ಪಡಸಾಲೆಯಲ್ಲಿ ಗೊರಕೆ ಹೊಡೆಯುತ್ತಿದ್ದ ಬಸವಯ್ಯನನ್ನು ಚುಚ್ಚಿ ಏಳಿಸಿದ. ಮೆಲ್ಲಗೆ ಕಿವಿಯಲ್ಲಿ–

ಬಾಗಿಲು ಬಸವನೆ ಈಬತ್ತಿ ಲೋಲನೆ
ಪಟ್ಟಮಂಚದ ಮೇಲೆ ದೇವೀರಿ-ಒಬ್ಬಳೆ
ಮಲಗವಳೆ ಬಸವಯ್ಯ ಬಲು ಜೋಕೆ

ಭಾವಯ್ಯನ ಗುಟ್ಟು ಬಸವಯ್ಯನಿಗೆ ತಿಳಿಯದೆ? ಮನಸ್ಸಿನಲ್ಲಿಯೇ ಸಕ್ಕು ಮರುಪ್ರಶ್ನೆಯನ್ನು ಹಾಕದೆ 'ಹ್ಞೂಂ' ಗುಟ್ಟಿದ ಮೇಲೆ ಸಂಜಯ್ಯ ಕಂದೀಲನ್ನು ಹಿಡಿದು ಕತ್ತಲಲ್ಲಿ ಕರಗಿದ. ನಿಟ್ಟುಸಿರನ್ನು ಬಿಟ್ಟು ಅತ್ತಿತ್ತ ಹೊರಳುವುದರಲ್ಲಿ ಇನ್ನೂ ರೆಪ್ಪೆಯ ಮೇಲೆಯೇ ಇದ್ದ ನಿದ್ದೆಯ ಹೆಡೆ ಅಪ್ಪಳಿಸಿತು; ಬಸವಯ್ಯ ಹಾಯಾಗಿ ಗೊರಕೆ ಹೊಡೆದ.

* * * *

ಯಾರೋ ಹೊರಗೆ ನಡೆದು ಬರುವ ಸಪ್ಪಳ! ನಿದ್ದೆ ಬಾರದೆ ಜೋಡಿ ಮಂಚದ ಮೇಲೆ ಒಬ್ಬಳೇ ಅತ್ತಿತ್ತ ಹೊರಳಾಡಿ, ಎದ್ದು ಮನೆಯೆಲ್ಲಾ ಅಡ್ಡಾಡಿ, ಆಕಳಿಸಿ ಏನನ್ನೋ ಹಾರೈಸಿ, ಯಾರನ್ನೋ ನಿರೀಕ್ಷಿಸಿ ಸೋತ ಚಾಮುಂಡಿಗೆ ಹೊರಗೆ ಯಾರೋ ನಡೆದು ಬಂದಂತೆ ಸಪ್ಪಳ ಕೇಳಿಸಿ, ಮೈಯೆಲ್ಲಾ ಕಿವಿಯಾಯಿತು. ಸಡಗರದಿಂದ ಎದ್ದು ನಿಂತಳು. ಮೆಲ್ಲಗೆ ಆಲಿಸಿದಳು. ಯಾರಿರಬಹುದು! ಬೆರಳ ತುದಿಯಲ್ಲಿಯೇ ಕದವನ್ನು ತಟ್ಟುತ್ತಿದ್ದಾರೆ. ಅಪರಾತ್ರಿಯಲ್ಲಿ ಬಾಗಿಲನ್ನು ತೆರೆಯುವುದಾದರೂ ಎಂತು? ದೀಪದ ಕುಡಿಯನ್ನು ಹೆಚ್ಚು ಮಾಡಿದಳು. ಮುಂಗುರುಳನ್ನು ನೇವರಿಸಿಕೊಂಡು ಹೂಗೊಂಚಲಂತೆ ನಡೆದು ಬಂದಳು. ಮುಡಿದ ಹೂವಿನ ಮೂಗು ತಿವಿಯುವ ಕಂಪು ಹೊರಗೂ ಚಾಚಿರಬಹುದು. ಮೆಲುದನಿಯೊಂದು ಕೇಳಿ ಬಂದಿತು. ತಿಳಿನಗುವಿನ ಮಿಂಚೊಂದು ಅವಳ ತುಟಿಗಳ ಮೇಲೆ ಹಾದುಹೋಯಿತು.

ಸಪ್ಪಟ ಸರಿಹೊತ್ತಿನಲಿ ನಮ್ಮಟ್ಟಿಗೆ ಬಂದೋರ್ಯಾರು ?
ಹೆಸರ್ಹೇಳಿ ನಿಮ್ಮ ಕುಲವ್ಹೇಳಿ ಮಹಾಸ್ವಾಮಿ !

ಅಬ್ಬ ! ಅದೆಂಥ ವಿನಯಪೂರ್ಣ ಪ್ರಶ್ನೆ ! ತಾನು ಬಂದೆನೆಂದು ಈ ಲಲನೆಗೆ ತಿಳಿಯದೆ ? ಏಕೆ ಈ ಆತಂಕ ? ಏಕೆ ಈ ಬೆದರು. ಚಾಮುಂಡಿ ತನ್ನ ದನಿಯನ್ನು ಗುರುತಿಸದಾದಳೇ ?

ಆಯ ಉಳ್ಳೋಳು ನೀನು ಚಾಯ ಉಳ್ಳೋಳು ನೀನು
ನಿನದಂಡೆಗೊಬ್ಬನು ಬರುವೆನು-ಚಾಮುಂಡಿ
ನೀ ಬೇಗೆದ್ದು ಕದವ ತೆಗಿಬಾರೆ

ಹೊರಗಿನಿಂದ ನಂಜಯ್ಯ ಆರ್ತನಾಗಿ ಕೂಗಿದ. ಅವಳ ಪ್ರೇಮಮಧು ವನ್ನು ಅರಸಿ ನಂಜನಗೂಡಿನಿಂದ ನಡುರಾತ್ರಿಯಲ್ಲಿ ಹಾರಿ ಬಂದಿರುವ ಭೃಂಗದ ಝೇಂಕಾರ ಚಾಮುಂಡಿಯ ಕಿವಿಗೆ ಮತ್ತೂ ಇಂಪನ್ನು ತಂದಿರಬಹುದು. ತುಂಟ ತನದ ಮತ್ತೊಂದು ಪ್ರಶ್ನೆ ಹೊರಗೆ ಚಿಮ್ಮಿ ನಂಜಯ್ಯನ ಕಿವಿ ಹಿಂಡುತ್ತದೆ.

ಕರಿಯ ಕೋಳಿ ತಿನ್ನೋ ಕರಿಯ ಚಾಮುಂಡಮ್ಮ !
ನೀವು ಲಿಂಗ ಜಂಗಮರು ಬರಬಹುದೆ ?

ಎಲ್ಲಿಯಾದರೂ ಉಂಟೆ ? ಮೇಲು ಕುಲದವನಾದ ಮಡಿವಂತ ನಂಜಯ್ಯ ಹೀಗೆ ಮಾಡಬಹುದೆ? ಚಾಮುಂಡಿಯ ವರ್ಣವಾದರೋ ಕಪ್ಪು; ಅವಳ ಸೌಂದ ರ್ಯವೂ ಆಕರ್ಷಕವಾದುದಲ್ಲ; ಇನ್ನು ಕುಲದಲ್ಲಿಯಾದರೂ ಮೇಲಾದವಳೆಂದರೆ ಕರಿಯ ಕೋಳಿಯನ್ನು ತಿನ್ನುವ ಕರಿಯ ಚಾಮುಂಡಿಯಂತೆ ! ನಂಜಯ್ಯನಿಗೆ ಹೊರಗಿನ ಚಳಿಯ ನಡುಕದಲ್ಲಿಯೂ ಮೈ ಬೆವತು ಹೋಯಿತು. ಚಿನ್ನದ ಚಾಟಿಯಿಂದ ಬೆನ್ನ ಮೇಲೆ ಅಪ್ಪಳಿಸಿದಂತಿದೆ ಅವಳ ಆ ನುಡಿ. ಆದರೂ ಆ ವಾಣಿ ಎಷ್ಟು ಮಧುರವಾಗಿದೆ ; ಆ ಹೇಳುವ ರೀತಿಯಲ್ಲಿಯೇ ಅದೇನು ಬೆಡಗಿದೆ ! ಅದೇನು ವಯ್ಯಾರವಿದೆ; ಅದೇನು ಪ್ರೇಮಾಕರ್ಷಣೆಯಿದೆ. ಹೀಗೆಂದು ಹೇಳುವಾಗ ನಂಜಯ್ಯ ಒಳಗಿದ್ದಿದ್ದರೆ ಅವಳ ಕೆನ್ನೆಗೊಂದು ಬೆರಳೇ ಟನ್ನು ಬಿಗಿದು ಅವಳ ನೀಳಕೇಶವನ್ನು ಜಗ್ಗಿಸಿ ಲೇವಡಿ ಮಾಡದಿರುತ್ತಿದ್ದನೆ ? ಆದರೆ ಅವನ ದೌರ್ಭಾಗ್ಯ ! ಹೊರಗೆ ನಿಂತಿದ್ದಾನೆ. ಚಾಮುಂಡಿ ಸಮಯ ವನ್ನು ಸದ್ವಿನಿಯೋಗಪಡಿಸಿಕೊಳ್ಳುತ್ತಿದ್ದಾಳೆ. ಹೊರಗೆ ನಿಲ್ಲಿಸಿ

ಪೇಚಾಡಿಸುತ್ತಿದ್ದಾಳೆ. ಮೊದಲ ಪ್ರಶ್ನೆಗೆ ಉತ್ತರವೀಯಲು ನಂಜಯ್ಯ ತಡವರಿಸುವಾಗ ಹಿಂದೆಯೇ ಮತ್ತೊಂದು ಪ್ರಶ್ನೆ :

ಮೀನು ಮಿಟಚಿ ತಿನ್ನೊ ಉಕ್ಕುರಿ ಚಾಮುಂಡಮ್ಮ !
ನೀವು ಹುಡುಗ ಜಂಗಮರು ಬರಳಿಹುದೆ ?

ಕುಲ ಗೋತ್ರಗಳನ್ನು ನೋಡದೆ, ಹುಡುಗುಬುದ್ಧಿಯ ಜಂಗಮ ನಂಜಯ್ಯ ಹೀಗೆ ಒಂದು ನಿಂತಿರುವಾಗ,

ಮಾಸ್ವಾಮಿ ! ನಾ ಹೆಂಗೆ ಕದವ ತೆಗೆಯಲಿ ?

ಚಾಮುಂಡಿಯ ಪ್ರಶ್ನೆಗಳಿಗೆ ಉತ್ತರವೀಯುವ ಸಾಮರ್ಥ್ಯ ತನ್ನಲ್ಲಿಲ್ಲ ವೆಂದು ನಂಜಯ್ಯ ಬಲ್ಲ. ಅವಳಲ್ಲಿ ಅದಾವ ಆಕರ್ಷಣೆಯನ್ನು ಕಂಡನೋ ಹುಡುಕಿಕೊಂಡು ಬಂದಿದ್ದಾನೆ. ಅವಳ ಮೋಹಪಾಶದಲ್ಲಿ ಬಿದ್ದಿದ್ದಾನೆ. ಪವಿತ್ರ ಪ್ರೇಮ ಭೃಂಗದ ಬೆನ್ನೇರಿ ಬಂದಿರುವಾಗ ಚಾಮುಂಡಿಗೆ ಈ ಕುಲ, ಗೋತ್ರ ವರ್ಣಗಳ ವಕ್ರನುಡಿಗಳೇತಕೆ ? ಅವಳ ಒಲವಿನ ಗಾಳದಲ್ಲಿ ಸಿಲುಕಿ ತಾನು ಇನ್ನೆಲ್ಲವನ್ನೂ ತ್ಯಾಗ ಮಾಡಿ ಬಂದಿಲ್ಲವೆ ? ಅವಳ ತನು ಕಪ್ಪಿದ್ದರೇನು? ಅವಳ ಕುಲ ಕೀಳಾದರೇನು ? ಆ ನಿಷ್ಕಳಂಕ ಪ್ರೇಮ; ಆ ಸ್ಫಟಿಕಸ್ವಚ್ಛ ಹೃದಯ; ಆ ನಯ ವಿನಯ ವಯ್ಯಾರ ವೈಶಿಷ್ಟ್ಯಗಳು ಇನ್ನಾವ ಹೆಣ್ಣಿನಲ್ಲಿ ದೊರೆತಾವು ! ತನ್ನನ್ನೇ ಸರ್ವಸ್ವವೆಂದು ನಂಬಿದ ಮಡದಿ ದೇವೀರಿಯನ್ನೂ ವಂಚಿಸಿ ಚಾಮುಂಡಿಯ ನಿರ್ಮಲ ಪ್ರೇಮಮಕರಂದಕ್ಕೆ ಬಾಯಾರಿದವನಾಗಿ ಬಂದಿಲ್ಲವೆ ? ಚಾಮುಂಡಿ ತನ್ನನ್ನೇಕೆ ಹೀಗೆ ಪರಿಕಿಸುತ್ತಿದ್ದಾಳೆ ?

ಆಯ ಉಳ್ಳೋಳು ನೀನು ಚಾಯ ಉಳ್ಳೋಳು ನೀನು
ಈಗೆದ್ದು ಕದವ ತೆಗಿಬಾರೆ ಚಾಮುಂಡಿ
ನಾ ಬಾಗಿಲ ಹೊರಗೆ ಇರಲಾರೆ
ಗುಂಡಿನ ಕೈಯ್ಯ ಡಂಡಿಗೆ ಒದರುತ
ನಿನ್ನೊಂದಿಗೆ ನಾನು ಬರುತೀನಿ ಚಾಮುಂಡಿ
ನೀ ಬೇಗೆದ್ದು ಕದವ ತೆಗಿಬಾರೆ

ತನ್ನ ಇನಿಯನನ್ನು ಇನ್ನು ಕಾಯಿಸುವುದು ತರವಲ್ಲ ! ಹೊರಗೆ ನಿಲ್ಲಲು ನಂಜಯ್ಯನಿಗೆ ಇನ್ನಿಲ್ಲದ ಆತಂಕವೆಂದು ಅವನ ನಡಗುವ ದನಿಯೇ ಹೇಳುತ್ತಿದೆ.

ಯಾರು ಕಂಡಾರೋ ? ಯಾವ ನಾಯಿ ಬೊಗುಳೀತೊ ಎಂಬ ಕಳವಳ ಬೇರೆ ಅವನಿಗೆ. ನಂಜನಗೂಡಿನಿಂದ ನಡೆದು ಬಂದು ದಣಿದಿದ್ದಾನೆ. ಚಾಮುಂಡಿಗೆ ತಾನೇನು ಮಾಡುತ್ತಿದ್ದೇನೆ ಎನಿಸಿತು. ಬಾಗಿಲನ್ನು ತೆರೆದು ತನ್ನನ್ನರಸಿ ಬಂದ ಆ ಚೆಲುವ ಜಂಗಮನನ್ನು ಮುಗುಳುನಗೆಯ ಹೂಮಳೆಯಲ್ಲಿ ಆಹ್ವಾನಿಸಿದಳು. ಒಳಗೆ ಹರಿಣಿಯಂತೆ ಹಾರಿದ ನಂಜಯ್ಯ ಬಾಗಿಲನ್ನು ಭದ್ರಪಡಿಸಿ ಉಸಿರೆಳೆದು ಚೇತರಿಸಿಕೊಂಡು ಏನೋ ಅಪರಾಧವನ್ನೆಸಗಿದವನಂತೆ ಬೆವರು ಒರಸುವಾಗ– ಚಾಮುಂಡಿಯ ಹಸ್ತದ ಮೃದುಲಸ್ಪರ್ಶ ಅವನಿಗೆ ಪುಳಕಾಂಕುರವನ್ನು ತಂದಿತು. ಯಾವುದೋ ಅಪೂರ್ವ ಸ್ವಪ್ನಸದೃಶ ಸುಖನೌಕೆಯಲ್ಲಿ ತೇಲಿಸಿತು. ಹಾಗೆಯೇ ಶಿರವೆತ್ತಿ ನೋಡುತ್ತಾನೆ. ತನ್ನ ಆಗಮನಕ್ಕಾಗಿ ಮನೆಯೆಲ್ಲಾ ಎಷ್ಟು ಬಗೆಯಲ್ಲಿ ಅಲಂಕೃತವಾಗಿದೆ; ಹೊಸ ಜೀವ ಮೂಡಿದಂತೆ ವೈಭವದ ಹೊಳೆಯೇ ಅಲ್ಲಿ ಹರಿದಿದೆ.

ಚಾಮುಂಡಿಯ ಮನೆಯ ಸೂರೆಲ್ಲ ಮಲ್ಲಿಗೆ
ಜಾಜಿ ಹೂವಿನ ತಲೆದಿಂಬು

ಹೂವಿನ ಉತ್ಸವವೇ ಅಲ್ಲಿ ನಡೆದಿದೆ. ಸೂರಿನಿಂದ ಬೆಳ್ಳಿಯ ಸರಪಣಿಯಲ್ಲಿ ತೂಗಿಬಿಟ್ಟ ರತ್ನದೀಪಗಳ ಕಾಂತಿ ಮನೆಯ ತುಂಬ ಹರಡಿ ಸುಪ್ರಭಾತದ ಕನಸನ್ನು ಅಲ್ಲಿ ನೇಯುತ್ತಿರಲು, ಬಗೆಬಗೆಯ ಪುಷ್ಪಪರಿಮಳದಿಂದ ಉನ್ಮತ್ತವಾದಂತೆ ಮೆಲ್ಲೆಲರು ಬೀಗಿಬೀಗಿ ಬೀಸುತ್ತಿರಲು, ಬಣ್ಣ ಬಣ್ಣದ ರೇಶಿಮೆಯ ವಸ್ತ್ರಾಲಂಕಾರಗಳಿಂದ ತೂಗು ಮಂಚಗಳು ಕಂಗೊಳಿಸುತ್ತಿರಲು, ಗಂಧ ಕಸ್ತೂರಿಗಳ ತನಿಗಂಪು ಮನಸ್ಸಿಗೆ ಮುದುವನ್ನು ತರುತ್ತಿರಲು–ಮನ ಮೆಚ್ಚುವಂತೆ ಅಲಂಕರಿಸಿಕೊಂಡು ಪ್ರೇಮಮಯ ನುಡಿಗಳನ್ನಾಡುತ್ತ ಚಾಮುಂಡಿ ತನ್ನನ್ನು ಸ್ವಾಗತಿಸಿ ಅತ್ತ ಕರೆದೊಯ್ಯುತ್ತಿರಲು ನಂಜಯ್ಯನಿಗೆ ಇದೇನು ನಾಕದ ಕನಸೇ ಎನಿಸಿತು. ಎಂಥ ಅದ್ಭುತ ಸ್ವಾಗತ ! ಹಣ್ಣು ಹಂಪಲು; ಹಾಲು ವೀಳ್ಯಗಳ ಇದೆಂಥ ಅಪೂರ್ವ ಸತ್ಕಾರ ! ಚಾಮುಂಡಿಯ ಪ್ರೇಮ ಅಳತೆ ಮೀರಿದುದು ! ಅದ್ವಿತೀಯವಾದುದು! ನಂಜಯ್ಯನಿಗೆ ಆ ರಾತ್ರಿ ಸುಖಮಯವಾಗಿ ಕಳೆಯಿತು. ಇಂಥ ಮಧುರಮಿಲನಗಳು ಬಾಳಿನಲ್ಲಿ ನೂರು ನೂರು ಬರಲಿ ಎಂದು ಹಾರೈಸಿದ; ಹಂಬಲಿಸಿದ.

ಅದಾವ ಗಳಿಗೆಯಲ್ಲಿ ಬೆಳಗು ಸನ್ನಿಹಿಸಿತೋ. ನಂಜಯ್ಯ ಚಾಮುಂಡಿಯ

ನೆರೆಯಲ್ಲಿ ಜಗ್ಗನೆ ಎದ್ದು ಕುಳಿತ. ಸುಖನಿದ್ರೆಯಲ್ಲಿ ಮೈಮರೆತ ಅವನಿಗೆ ಇದ್ದಕ್ಕಿದ್ದಂತೆಯೇ ಮಡದಿ ದೇವೀರಿಯ ನೆನಪಾಗಿ ಭೀಕರ ಸ್ವಪ್ನವೇ ಬಿದ್ದಿರಬೇಕು. ಎಲ್ಲಿಯೋ ಹೊರಗೆ ಕೋಳಿ ಕೂಗುತ್ತಿದೆ. ಯಾರೋ ಗರತಿ ಎದ್ದು ಬೀಸುತ್ತಿದ್ದಾಳೆ. ಮೂಡು ಕೆಂಪೇರುವ ಮುನ್ನ ಕತ್ತಲೆ ತನ್ನ ಮುಸುಗು ತೆರೆದು ಮೂಡು ಬಾನಿನ ತನ್ನ ಹೊನ್ನೆದೆಯಲ್ಲಿ ರತ್ನದ ಪದಕವನ್ನು ತೋರುವ ಮುನ್ನ ಇಲ್ಲಿಂದ ಜಾರಿಕೊಂಡಿರಬೇಕು. ಚಾಮುಂಡಿಗಿನ್ನೂ ಎಚ್ಚರವೇ ಬೇಡವೆ ?

ಕೋಳಿ ಕೂಗಿತು ಮಕ್ಕಳ ಗಲಗಾಯ್ತು
ದೇವೀರಿ ನೆನಪು ಘನವಾಯ್ತು – ಚಾಮುಂಡಿ
ನಾನೋಡಿ ಹೋದೇನು ಕದ ತೆಗಿಯೆ

ಮನೆಯಲ್ಲಿ ದೀಪವಾರಿವೆ. ಕದವೆಲ್ಲಿದೆಯೋ ತನಗೆ ತಿಳಿಯದು. ಕತ್ತಲಲ್ಲಿ ತಡವರಿಸಿ ಯಾವುದರ ಮೇಲಾದರೂ ಉರುಳಿದರೂ ಆಯಿತು. ಚಾಮುಂಡಿ ಬೇಗನೆ ಎದ್ದು ಕದ ತೆಗೆಯಬಾರದೆ ?

ನಂಜಯ್ಯನ ಗಡಬಿಡಿಯಲ್ಲಿ ಚಾಮುಂಡಿಗೆ ಎಚ್ಚರವಾಯಿತು. ಇಷ್ಟು ಬೇಗ ತನ್ನನ್ನಗಲಿ ನಂಜಯ್ಯ ತೆರಳಬೇಕೆ ! ತನ್ನನ್ನು ವಿರಹದ ಬೇಗೆಗೆಸೆದು ಅವನು ಓಡಿಹೋಗಬೇಕೆ ? ಇನ್ನೂ ತುಸು ಹೊತ್ತು ಇರಬಾರದೆ ?

ಕೋಳಿ ಕೂಗಿಲ್ಲ ಮಕ್ಕಳ ಗಲಗಿಲ್ಲ
ಸ್ವಾಮಿ ನಂಜಯ್ಗೆ ಸುಖನಿದ್ರೆ ಹರಿದಿಲ್ಲ

ಈಗಲೇ ಎದ್ದು ಕೂರುವುದೆ ? ಇಲ್ಲ; ನಂಜಯ್ಯ ಹೊರಟವನು ನಿಲ್ಲಲಾಗುವುದಿಲ್ಲ. ವಿಧಿಯಿಲ್ಲದೆ ಚಾಮುಂಡಿ ಎದ್ದು ದೀಪದ ಕುಡಿಯನ್ನು ಸರಿಪಡಿಸಿದಳು. ಚಡಪಡನೆ ಎದ್ದ ನಂಜಯ್ಯ ಇನ್ನು ಬರುತ್ತೇನೆಂಬಂತೆ ಅವಳ ಮುದ್ದು ಮುಖವನ್ನು ನೋಡಿದ.

ಅವನು ಹೊರಡುದಕ್ಕೆ ಅಸಮಾಧಾನವನ್ನು ಸೂಸುತ್ತ ಚಾಮುಂಡಿ,

ಕದವ ತೆಗೆದಳೆ ಕೈಯೆತ್ತಿ ಮುಗಿದಾಳೆ
ಜೋತುರದ ಸೆರಗ ಹಿಡಿದಾಳೆ

ಏಕೋ ಜೋತುರದ ಸೆರಗನ್ನು ಹಿಡಿದು ನಿಲ್ಲಿಸಿದಳು. ಅವಳ ಕಣ್ಣುಗಳು ಏನನ್ನೋ ಬಯಸುವಂತೆ ನಂಜಯ್ಯನ ಕೊರಳಕಡೆ ಜಾರಿದವು. ನಂಜಯ್ಯನಿಗೆ

ಆ ನೋಟ ಅರ್ಥವಾಗುವ ಮುನ್ನವೇ ತನ್ನ ಕೊರಳನ್ನು ಕೊಂಕಿಸುತ್ತ ಬಳ್ಳಿಯಂತೆ ಬಳುಕುತ್ತ,

ಜೋತುರದ ಸೆರಗ ಹಿಡಿದು ಎನಂದಾಳೆ
ಕೊಟ್ಹೋಗಿ ಕೊರಳ ಪದಕವ

ಕೊರಳ ಪದಕವೇನು ನಂಜಯ್ಯ ತನ್ನ ಹೃದಯವನ್ನೇ ಅವಳಿಗರ್ಪಿಸಿದ್ದಾನೆ! ಅವಳ ಪ್ರೇಮಪೂರ್ಣ ಕೋರಿಕೆಗೆ ನಕಾರವೆತ್ತಲು ಅವನ ಮನ ಇಚ್ಛಿಸಲಿಲ್ಲವಾದರೂ ದೇವೀರಿಯ ದಿಗಿಲು ಅಸಮ್ಮತಿಯ ಅಡ್ಡಗೆರೆಯನ್ನೆಳೆಯಿತು. ತನ್ನ ಮುದ್ದಿನ ಚಾಮುಂಡಿ ಕೇಳಿದ ಉಡುಗೊರೆಯನ್ನು ಇಲ್ಲವೆನ್ನುವಾಗ ನಂಜಯ್ಯನಿಗೆ ವ್ಯಥೆಯಾದರೂ,

ಪದಕವ ಕೊಡುವುದಕೆ ನಿಂದೇನೆ ನಂದೇನೆ
ದೇವೀರಿರಣ್ಣ ಬಸವಣ್ಣ
ದೇವೀರಿರಣ್ಣ ಬಸವಣ್ಣನ ಪದಕವ
ಕೋಟ್ಹೋಗೋದೊಳ್ಳೆತನವೇನೆ ?

–ಎನ್ನಬೇಕಾಯಿತು. ನಿಜ, ಇದೊಂದು ಪದಕದಿಂದಾಗಿ ನಮ್ಮಿಬ್ಬರ ಪ್ರೇಮ ಸಂಬಂಧಕ್ಕೇ ಸಂಚಕಾರ ಬರಬಹುದು. ನಂಜಯ್ಯ ತನ್ನ ಹೃದಯ ಮಾಣಿಕ್ಯವನ್ನೇ ತನಗೆ ಮೀಸಲಿರಿಸಿರುವಾಗ ಈ ಅಲ್ಪ ಪದಕದ ಆಸೆಯೇಕೆ ? ತಾನು ಕೇಳಬಾರದಿತ್ತು, ಎನಿಸಿರಬೇಕು ಚಾಮುಂಡಿಗೆ. ಅದನ್ನು ಮರೆಸುವ ಸಲುವಾಗಿಯೋ ಏನೋ ಮತ್ತೆ ಸೆರಗೆಳೆದು ನಿಲ್ಲಿಸಿದಳು. ಮತ್ತೊಂದು ವಯ್ಯಾರದ ಕೋರಿಕೆಯನ್ನು ಮುಂದಿಟ್ಟಳು.

ಕದವ ತೆಗೆದಾಳೆ ಜೋತುರದ ಸೆರಗ ಹಿಡಿದಾಳೆ
ನಿಮ್ಮ ಹೆಸರ್ಹೇಳೆ ಸ್ವಾಮಿ ಕುಲವೇಳೆ

ಮತ್ತೆ ಹೆಸರು ಕುಲಗಳ ನೆನಪು ಮಾಡುತ್ತಿದ್ದಾಳೆ, ತುಂಟನೋಟದ ಚಾಮುಂಡಿ. ಅಷ್ಟನ್ನು ಹೇಗೆ ಇಲ್ಲವೆಂದಾನು ? ನಗು ನಗುತ್ತಾ ಅವಳ ಮೃದುಲ ಕದಪಿಗೆ ನೀಡಿದ ಹೊಮ್ಮುತ್ತಿನ ಜೊತೆಗೆ ನಂಜಯ್ಯ.

ನಂಜನಗೂಡಿನ ನಡುವೆ ತೋಪೇಲಿರುವ
ನಾ ನಂಜುಂಡಲಿಂಗ ಬಿಡೆ ಸೆರಗ

ಎಂದು ತನ್ನ ಮಾಹಿತಿಯನ್ನು ಹೇಳಿ, ಚಾಮುಂಡಿಯ ಮೋಹಕ ನೋಟದ ಮಾಯಾಜಾಲದಿಂದ ಹೊರಗೆ ಸುಸುಳಿ ಬರುವುದರಲ್ಲಿ, ಕತ್ತಲೆ ಚಾಮುಂಡಿಗಿರಿಯ ನೆತ್ತಿಯಿಂದ ಜಾರಿ ಜಾರಿ ನೆಲಕ್ಕುರುಳಿ ನೀರವವಾಗಿ ಕರಗುತಿತ್ತು. ಹಕ್ಕಿಗಳ ಕೊರಳರವ ನಂಜಯ್ಯನ ಪದಗತಿಯನ್ನು ಹೆಚ್ಚಿಸಿದವು.

ದೇವೀರಮ್ಮನಿಗೆ ಎಂದಿನಂತೆ ಮುಂಜಾವದಲ್ಲಿಯೇ ಎಚ್ಚರವಾಯಿತು. ಪತಿಯ ಹಾಸಿಗೆಯತ್ತ ಕಣ್ಣು ಹೊರಳಿಸಿ ನೋಡುವ ವಾಡಿಕೆ ; ನೋಡಿದಳು. ಚಳಿಗಾಲವಲ್ಲವೆ ? ನಂಜಯ್ಯ ಮೈ ತುಂಬ ಹೊದ್ದು ಮಲಗಿರುವಂತಿದೆ.

ಏಕೋ ಬಾಗಿಲ ಕಡೆ ನೋಡಿದಳು. ಅಗುಳಿ ತೆಗೆದಿದೆ. ನಂಜಯ್ಯನೇ ಎದ್ದು ಹೊರಗೆ ಹೋಗಿ ಬಂದಿರಬಹುದು. ಮಲಗಿರುವ ಪತಿಯನ್ನೇಕೋ ಸರಿಯಾಗಿ ದೃಷ್ಟಿನೆಟ್ಟು ನೋಡಿದಳು. ಏನೋ ಒರಟೊರಟಾಗಿ ಮುದುಡಿಕೊಂಡು ಬಿದ್ದಂತಿದೆ. ಇದೇಕೆ ? ದೇವೀರಿಗೆ ಕೌತುಕವಾಯಿತು; ಕಳವಳವೂ ಆಯಿತು. ಮೆಲ್ಲನೆ ಹೊದಿಕೆಯನ್ನು ಸರಿಸಿ ನೋಡಲು ಯತ್ನಿಸಿದಳು. ಅಲ್ಲಿ ಕಂಡ ದೃಶ್ಯ ಅವಳನ್ನು ಬೆರಗುಮಾಡಿತು. ಮಲಗಿದ್ದ ನಂಜಯ್ಯ ಕೊರಡಾಗಿದ್ದಾನೆ ! ಅಯ್ಯೋ ! ಇದೇನು ವಿಚಿತ್ರ ! ದೇವೀರಿಗೆ ನಡೆದಿರುವುದನ್ನು ಊಹಿಸಲು ತಡವಾಗಲಿಲ್ಲ. ಹೊರಗೆ ಹೋಗಿರುವುದೇನೋ ನಿಜ. ಆದರೆ ಎಲ್ಲಿಗೆ ? ಏಕೆ ? ಎಂಬುದನ್ನು ಹೇಳುವುದು ಕಷ್ಟ. ಏನೋ ವಿಚಿತ್ರ ಪ್ರಸಂಗ. ಎಂದೂ ತನಗಿಂತ ಮುಂದೆ ಎದ್ದವನಲ್ಲ ನಂಜಯ್ಯ, ತಾನೆದ್ದು ಮುಂಬಾಗಿಲಿಗೆ ರಂಗವಲ್ಲಿಯನಿಟ್ಟು, ಸ್ನಾನಕ್ಕೆ ನೀರನ್ನು ಕಾಯಿಸಿ ಪೂಜೆಗೆ ಅಣಿಮಾಡಿದ ಮೇಲೆ ನಂಜಯ್ಯ ಎದ್ದು ಬರುವುದು.

ಇಂದು ಇಷ್ಟು ಶೀಘ್ರವಾಗಿ ಹೋಗುವ ಅಗತ್ಯವೇನಿದ್ದಿತು ?

ಎದ್ದಳು ದೇವೀರಿ ಸುತ್ತಮುತ್ತ ನೋಡ್ಯಾಳು
ಬಾಗಿಲು ಬಸವನ ಹಲುಬ್ಯಾಳು

ಹೊರಗೆ ಮಲಗಿದ್ದವನು ಬಸವನೊಬ್ಬನೆ !

ಎಲ್ಲ ವಿಷಯವೂ ಅವನಿಗೆ ತಿಳಿದಿದೆ. ಹೊರಗೆ ಬಂದು ಅವನನ್ನೇ ಮೊದಲಿಗೆ ಪ್ರಶ್ನಿಸಿದಳು. ನದಿಯಲ್ಲಿ ಮಿಂದು, ಮಡಿಯುಟ್ಟು, ಹಣೆಗೆ ಎದ್ದು ಕಾಣುವಂತೆ ನಾಲ್ಕು ಪಟ್ಟೆ ವಿಭೂತಿ ಧರಿಸಿ, ಭೂಷಣವಾಗಿ ಕುಳಿತಿದ್ದವನು, ದೇವೀ

ರಮ್ಮನ ಆಗಮನವನ್ನು ಕಂಡು ಎದ್ದುನಿಂತ. ಎಷ್ಟಾದರೂ ವಿನಯಶೀಲನಲ್ಲವೆ? ದೇವೀರಮ್ಮ ಕೇಳಿದಳು–

ಬಾಕುಲು ಬಸವನೆ ಈಬತ್ತಿಲೋಲನೆ
ನಿಮ್ಮ ಭಾವರ್ಹ್ನೋಗಿದ್ದ ಬಗೆ ಹೇಳು

ಈ ಬಗೆಯ ಪ್ರಶ್ನೆ ತನಗೆ ಬೆಳಗಾಗುತ್ತಲೇ ಕಾದಿರುತ್ತದೆಯೆಂದು ಬಸವಯ್ಯ ತಿಳಿದಿದ್ದ. ನಂಜಯ್ಯನ ಪಕ್ಷಪಾತಿಯಾದ ಅವನು ತಕ್ಕ ಉತ್ತರವನ್ನೂ ಯೋಚಿಸಿ ಕೊಂಡೇ ಇದ್ದ. ಮನೆಯಲ್ಲಿ ತನ್ನ ನಿಜದಿಂದ ವಿರಸ ತಲೆದೋರೀತೆಂಬ ಭಯವೊಂದಾದರೆ ನಂಜಯ್ಯನೆಲ್ಲಿ ತಿರುಗಿಬಿದ್ದಾನೋ, ಮನೆ ಬಿಟ್ಟು ಓಡಿಸಿಯಾನೋ ಎಂಬ ದಿಗಿಲು ಇನ್ನೊಂದು ! ಏನೂ ಅರಿಯದವನಂತೆ ನಟಿಸುತ್ತ–

ಉಟ್ಟ ದೋತುರ ಮುತ್ತಿನ ಕೈಚೆಂಬು
ಭೂಮಿಮೇಲೆ ಬೆಳೆಯೊ ಬಡದುಂಬೆ-ಹೂಗಳ
ಕುಯ್ಯ್ಯಾಕ್ಹೋಗವರೆ ಉಗುರಲ್ಲಿ—

ಎಂದು ಅವನ ಚಾತುರ್ಯದ ಉತ್ತರಕ್ಕೆ ದೇವೀರಿಯೇನೊ ಬೆರಗಾದಳು. ಆದರೆ ಅದನ್ನು ಸಂಪೂರ್ಣ ಸತ್ಯವೆಂದು ನಂಬುವಂತಿಲ್ಲ. ನಂಜಯ್ಯ ಬೆಳಗಿನ ಜಾವದಲ್ಲಿ ಎದ್ದು ಹೋಗಿದ್ದರೆ ಕೊರಡನ್ನು ತನ್ನ ಪಕ್ಕದಲ್ಲೇಕೆ ಮಲಗಿಸಿ ಹೋಗುತ್ತಿದ್ದ. ಅಲ್ಲದೆ ಅವನು ಹೂ ಕುಯ್ಯುವ ಅಗತ್ಯ ತಾನೆ ಏನಿದೆ ? ಮನೆಯಲ್ಲಿ ಸಾಕಷ್ಟು ಬೆಳೆದಿದೆ. ಕುಯ್ದು ತರಲು ಗೌಡಿತಿಯರಿದ್ದಾರೆ. ಬಸವಯ್ಯನ ಮಾತಿಲ್ಲಿ ಸಟೆ ಎದ್ದುತೋರಿತು ದೇವೀರಿಗೆ. ಕ್ಷಣಕ್ಕೆ ಕಣ್ಣನು ಕೆಂಪಗೆ ಮಾಡಿಕೊಂಡು–

ಸಾಕಾದ ಸಂಪಿಗೆ ಬೇಕಾದ ಮಲ್ಲಿಗೆ
ಲೋಕದ ಮೇಲೆ ಬೆಳೆಯೊ ಬಡದುಂಬೆ-ಹೂಗಳು
ಹಾಕಿತ್ತು ನಮ್ಮ ಆರಮಲ್ಲಿ
ಹಾಕಿತ್ತು ನಮ್ಮ ಅರಮಲ್ಲಿ ಬಸವಯ್ಯ
ನಮ್ಮ ರಾಯರು ಹೋದ ಬಗೆ ಹೇಳೊ

ಬಸವಯ್ಯ ಅಕ್ಕನವರ ಕೋಪಕ್ಕೆ ತಬ್ಬಿಬ್ಬಾದ. ತನ್ನ ಉತ್ತರ ಇಷ್ಟು ಬೇಗ ತಲೆಕೆಳಗಾದೀತೆಂದು ಅವನು ಊಹಿಸಿರಲಿಲ್ಲ. ಇನ್ನು ಸುಳ್ಳು ಹೇಳಿ ಜೀರ್ಣಿಸಿಕೊಳ್ಳುವ ಶಕ್ತಿ ಅವನಿಗಿಲ್ಲವಾಯಿತು. ತಿಳಿಯದೆಂದು ಹೇಳಲೂ

ಮೊದಲು ತಿಳಿದವನಂತೆ ನುಡಿದಿದ್ದಾನೆ: ಏನೋ ಕಪಟವನ್ನು ಮರೆಮಾಚಿ ನುಡಿಯುತ್ತಿದ್ದಾನೆಂದು ಅಕ್ಕನವರು ಬೇಸರ ಪಟ್ಟುಕೊಂಡರೆ ತನ್ನ ಪರಿಸ್ಥಿತಿ ಕೆಡುತ್ತದೆ. ಮನೆಯಲ್ಲಿ ಧಣಿಯ ಕೋಪಕ್ಕೆ ಪಾತ್ರನಾಗಿ ನಾಲ್ಕುದಿನ ತಳ್ಳಿದರೂ ಗೃಹಣಿಯ ಕೋಪಕ್ಕೆ ಗುರಿಯಾಗಿ ಒಂದು ದಿನ ಉಳಿಯಲೂ ಸಾಧ್ಯವೆ ? ಗುಟ್ಟು ರಟ್ಟಾಗಲೇ ಬೇಕಾಯಿತು.

ಹೋಳು ಸೇರಡಕೆ ಬಿಳಿಯಲೆ ತಕ್ಕೊಂಡು
ಸ್ವಾಮಿ ಸೂಳೆಯ ಮನೆಗಾಗಿ.......

ಎನ್ನುತ್ತಿದ್ದಂತೆಯೇ ದೇವೀರಿಯ ಮುಖ ರಂಗುಗೆಟ್ಟಿತು. ಬಸವಯ್ಯ ಅಷ್ಟಕ್ಕೇ ತುಟಿಕಚ್ಚಿದ, ಸರಿಯಾಗಿ ಹೇಳುವಂತೆ ಮತ್ತೆ ಗದರಿಕೊಂಡಳು.

ಹೋಳು ಸೇರಡಕೆ ಬಿಳಿಯಲೆ ತಕ್ಕೊಂಡು
ಅವರ್ಹೋದರು ಚಾಮುಂಡಿಯರ ಮನೆಗೆ

ಪಿಚಕಾರಿಯಿಂದ ಬಣ್ಣವನ್ನು ಮುಖಕ್ಕೆ ಎದುರಾಗಿ ಎರಚಿದಂತೆ ಗಕ್ಕನೆ ನುಡಿದು ಬಸವಯ್ಯ ಅತ್ತ ತಿರುಗಿಕೊಂಡ. ಮಾತು ಮುಗಿಯುವ ಮುನ್ನವೇ ದೇವೀರಿಯ ರಕ್ತ ಕುದಿದೆದ್ದಿತು. ತನ್ನ ಸ್ವಾಮಿ ಎಲ್ಲಿ ಹೋದರೂ ಅವಳು ಸಹಿಸಿಯಾಳು ; ಆದರೆ ತಾನಿರುವಾಗ ಪರನಾರಿಯ ಸಂಗಕ್ಕೆಳಸುವುದೆ ? ತನಗೆ ವಂಚನೆ ಮಾಡಿ ಹೋಗಬಹುದೇ ? –ದೇವೀರಿಗೆ ವಿಷಯವನ್ನು ನಂಬಲೂ ಅಸಾಧ್ಯವಾಗಿ ತೋರಿತು. ಬಸವಯ್ಯನು ಹೇಳಿದ ಬಗೆಯೇನೋ ನಿಜವೇ ಎಂಬಂತಿದೆ. ಆದರೆ ನಂಜಯ್ಯ ಹಾಗೆ ಮಾಡಿಯಾನೆ ? ಇರುಳಲ್ಲಿ ತನ್ನನ್ನು ತೊರೆದು ಹೋದಾನೆ: ಈ ರಹಸ್ಯವನ್ನು ಗೊತ್ತು ಹಚ್ಚಿಯೇ ತೀರಬೇಕು. ಸರ್ರನೆ ಒಳಗೆ ಓಡಿದಳು ದೇವೀರಿ.

ಬಂದಳು ದೇಮಿರಿ ಸುತ್ತಮುತ್ತ ನೋಡ್ಯಾಳೆ
ಬೇಗನೆ ಗೌಡಿರ ಕರೆಸ್ಯಾಳೆ-ದೇವೀರಿ
ಪಟ್ಟದ ಕುದುರೆಯ ತರಿಸ್ಯಾಳು

ಪತಿಯನ್ನು ಹುಡುಕಿ ಬರಬೇಕು. ಎಲ್ಲಿದ್ದರೂ, ಯಾವ ಮೂಲೆಯಲ್ಲಿದ್ದರೂ ನೋಡಿ ಬರಬೇಕು. ಅವರಿವರನ್ನು ನಂಬುವುದೇತಕ್ಕೆ ? ತಾನೇ ಹೊರಟಳು ! ಪತಿಯಿಲ್ಲದ ಮನೆ ಅವಳಿಗೆ ಶೂನ್ಯವಾಗಿ ತೋರಿತು. ಪತಿಯಿಲ್ಲದಿರುವಾಗ ಅವಳ ಉತ್ಸಾಹವೆಲ್ಲ ಉಡುಗಿ ಹೋಯಿತು. ನೂರೆಂಟು ಬಗೆಯ

ಯೋಚನೆಗಳು ಎಡೆಬಿಡದೆ ಬಂದು ಕಾಡತೊಡಗಿದವು. ಇನ್ನುಳಿದ ಮಾರ್ಗ ವೊಂದೇ, ಪತಿಯನ್ನು ಕಂಡ ಕಂಡ ನೆಲೆಗಳಲ್ಲಿ ಅರಸಿ ತರುವುದು.

ಬಂದಳು ದೇವೀರಿ ಸುತ್ತ ಮುತ್ತ ನೋಡ್ಯಾಳು
ಗಂಡಾನ ಕುದುರೆಯ ತರಿಸ್ಯಾಳು

ಕುದುರೆ ಬಂದ ಮೇಲೆ ಬಸವಯ್ಯನನ್ನು ಬಾಗಿಲಲ್ಲಿ ಕಾದಿರುವಂತೆ ನೇಮಿಸಿ ತಾನು ಹೊರಟಳು.

ಪಟ್ಟದ ಕುದುರೇಯನೇರಿಕೊಂಡು ಹುಡುಕ್ಯಾಳೆ
ದಂಡಿನಲಿ ಗಂಡನ ಸುಳಿವಿಲ್ಲ

ಸೂರ್ಯ ನೆತ್ತಿಗೇರುವ ಹೊತ್ತಾಯಿತು. ಕಾಡುಮೇಡು, ದಂಡು ದಾಳಿಗಳನ್ನೆಲ್ಲಾ ದೇವೀರಿ ಸುತ್ತಿ ಸೋತಳು, ಬೆಳಗಿನಿಂದ ಉಪವಾಸ ! ಹನಿ ನೀರನ್ನು ಬಾಯಿಗೆ ಬಿಡಲೂ ಅವಳಿಗೆ ಬೇಸರ. ನಂಜಯ್ಯನಿಲ್ಲದ ಮೇಲೆ ತನಗಿನ್ನಾವ ಆಹಾರ ಬೇಕು ? ಐಶ್ವರ್ಯ ಬೇಕು ? ನಂಜಯ್ಯ ತನ್ನನ್ನು ನಿಜ ವಾಗಿಯೂ ತಿರಸ್ಕರಿಸುವನೆ ? ತನ್ನಲ್ಲಿ ರೂಪಿಲ್ಲ, ಯೌವನವಿಲ್ಲವೆಂದು ಬೇಸತ್ತಿ ರುವನೆ ? ಪತಿಯ ಮನಸ್ಸಿಗೆ ಬೇಸರವನ್ನು ತರುವ ಸತಿಯ ಬದುಕು ಸಾರ್ಥಕ ವಾದರೂ ಏನು ? ನಂಜಯ್ಯನೇಕೆ ಇಂತಾದ.

ದೇವೀರಿಯ ಕಣ್ಣಂಚಿನಲ್ಲಿ ನೀರಾಡಿತು.

ಹಸ್ತು ದೇವೀರಿ ಪರಿಸೇಲಿ-ಹುಡುಕ್ಯಾಳೆ
ಪರಿಸೇಲಿ ಪುರುಷರ ಸುಳಿವಿಲ್ಲ

ಎಲ್ಲಿಯೂ ಯಾವ ಪರಿಷೆಯಲ್ಲಿಯೂ, ಯಾವ ಪೇಟೆಯಲ್ಲಿಯೂ ನಂಜಯ್ಯನಿಲ್ಲದ ಮೇಲೆ ದೇವೀರಿಗೆ ತಲೆ ಸಿಡಿಯುವಂತಾಯಿತು. ಏಕೋ ಬಸವಯ್ಯನ ಮಾತೇ ನಿಜವೆಂಬಂತೆ ತೋರುತ್ತಿದೆ. ಇನ್ನು ಹುಡುಕಿ ಫಲ ವಾದರೂ ಏನು ? ಮನೆಗೆ ಮರಳಿ ಅಗುಳಿಯನ್ನು ಹಾಕಿ ದುಃಖ ತಪ್ತಳಾಗಿ ಮಂಚದ ಮೇಲೆ ಒರಗಿದಳು.

ನಡು ಮಧ್ಯಾಹ್ನ ಜಾರಿ, ರವಿ ತನ್ನ ರೌದ್ರತೆಯನ್ನು ಕ್ರಮ ಕ್ರಮವಾಗಿ ಕಳೆದುಕೊಂಡು ಶಾಂತನಾಗುತ್ತಿರುವಾಗ, ನಂಜಯ್ಯ ಊರನ್ನು ತಲುಪಿದ. ದೇವೀರಿ ಊಟಮಾಡಿ ಶಾಂತಳಾಗಿ ಹಾಗೆಯೇ ಮಂಚದಲ್ಲಿ ತನ್ನನ್ನು

ನಿರೀಕ್ಷಿಸುತ್ತಾ ಮಲಗಿರುತ್ತಾಳೆ. ಭಿಕ್ಷೆಗೆ ಹೋಗಿ ಮಧ್ಯಾಹ್ನ ಕಳೆಯುವವರೆಗೂ ತಿರುಗಿ ಬಸವಳಿದು ಬಂದಿರುವ ತನಗೇನು ಭಯ? ನಂಜಯ್ಯ ಜೋಳಿಗೆಯನ್ನು ಮತ್ತೆ ಮತ್ತೆ ಮುಟ್ಟಿ ನೋಡಿಕೊಳ್ಳುತ್ತ ಬಾಗಿಲ ಬಳಿ ಕಾಣಿಸಿಕೊಂಡ. ಬಸವಯ್ಯ ಎತ್ತಲೋ ಹೋಗಿದ್ದಾನೆ. ಗೌಡಿಯರ ಸುಳಿವಿಲ್ಲ. ಮನೆಯೋ ಬಿಕೋ ಎನ್ನುತ್ತಿದೆ: ಬಾಗಿಲು ಮುಚ್ಚಿದೆ. ನಂಜಯ್ಯನ ಎದೆಯಲ್ಲಿ ಸ್ವಲ್ಪ ಅಳುಕುಂಟಾಯಿತು. ಧೈರ್ಯ ತಂದುಕೊಂಡು, ದನಿಯನ್ನು ಎತ್ತರಿಸಿ—

ಮೂಡುಸೀಮೆಗ್ಹೋಗಿ ಮತ್ತೆ ಭಿಕ್ಷವಮಾಡಿ
ಜೋಳಿಗೆ ತುಂಬಿ ಭುಜ ನೊಂದೊ-ದೇವೀರಿ
ನೀನೆದ್ದು ಬಾಗಿಲ ತೆಗಿಬಾರೆ

ಮೂಡು ಸೀಮೆಯಲ್ಲಿ ಭಿಕ್ಷೆ ಮಾಡಿ ಜೋಳಿಗೆಯನ್ನು ತುಂಬಿ ತಂದಿದ್ದಾನೆ ನಂಜಯ್ಯ. ದೇವೀರಿ ತನ್ನ ಶ್ರಮವನ್ನು ನಿಜಕ್ಕೂ ಮೆಚ್ಚಿಕೊಂಡಾಡಳೆ? ಏಕೋ ಒಳಗಿನಿಂದ ಉತ್ತರವೇ ಇಲ್ಲ.

ಬಡಗು ಸೀಮೆಗ್ಹೋಗಿ ಹವಳ ಭಿಕ್ಷವ ಮಾಡಿ
ಜೋಳಿಗೆ ತುಂಬಿ ಜಡಿದಾವೆ-ದೇವೀರಿ
ನೀನೆದ್ದು ಬಾಗಿಲ ತೆಗಿಬಾರೆ

ಇನ್ನೂ ದೊಡ್ಡ ದನಿಯನ್ನು ನಂಜಯ್ಯ ಕೂಗಿ ಕದವನ್ನು ತಟ್ಟಿದ. ದೇವೀರಿ ಮಂಚದಲ್ಲಿ ಎದ್ದು ಕುಳಿತಳು. ಅತ್ತತ್ತು ಅವಳ ಕಣ್ಣುಗಳು ಕೆಂಪೇರಿದ್ದವು. ಸೆರೆ ಬಿಗುವುಗೊಂಡಿತ್ತು. ಹೀಗಿರುವಾಗ ನಂಜಯ್ಯ ಬಂದು ಕೂಗಿದೊಡನೆಯೇ ಬಾಗಿಲು ತೆರೆಯಲು ಸಾಧ್ಯವೆ?

ಬಾಗಿಲು ತೆರೆಯಾಕೆ ಯಾರೆಂದು ನಾ ಕಾಣೆ
ಸ್ವಾಮಿ ಸೂಳೆಯ ಮನೆಗ್ಹೋದರು !

ನಂಜಯ್ಯ ಭೂಮಿಗಿಳಿದ. ಇನ್ನು ಮುಂದೆ ಮಾತಾಡುವ ಧೈರ್ಯ ಅವನಿಗೆ ಬರಲಿಲ್ಲ. ತಾನಿಂದು ದೇವೀರಿಯ ದೃಷ್ಟಿಯಲ್ಲಿ ಅಪರಾಧಿ. ಬಸವಯ್ಯ ಗುಟ್ಟನ್ನು ಬಯಲು ಮಾಡಿ ರಾದ್ಧಾಂತ ಮಾಡಿದ್ದಾನೆ: ಬರುವ ವೇಳೆಗೆ ಸರಿಯಾಗಿ ಎಲ್ಲಿಯೋ ತಲೆಮರೆಸಿಕೊಂಡಿದ್ದಾನೆ. ನಂಜಯ್ಯ ಒಳಗೊಳಗೇ ಕುದಿದ.

ಹಲ್ಲುಹಲ್ಲು ಮಸೆದು, ಬಸವಯ್ಯನನ್ನು ದೃಷ್ಟಿಯಲ್ಲಿ ಸುತ್ತಲೂ ಅರಸಿದ. ಆದರೆ ಆವನೆಲ್ಲಿದ್ದಾನೆ ? ಅದೇನೋ ಮತ್ತೆ ದೇವೀರಿ ನುಡಿಯುತ್ತಿದ್ದಾಳೆ—

ಹತ್ತು ಕುರಿ ರಕುತ ಚೆಲ್ಲವೆ ನಿಮ ಮೇಲೆ
ಚಾಮುಂಡಿ ಸೂತಕ ಕಳಕೊಳ್ಳಿ
ಆರು ಕೋಳಿ ರಕುತ ಚೆಲ್ಲವೆ ನಿಮ ಮೇಲೆ
ಚಾಮುಂಡಿ ಸೂತಕ ಕಳಕೊಳ್ಳಿ

ಹೌದು; ಇನ್ನು ದೇವೀರಿಯ ಮಾತನ್ನು ನಿರಾಕರಿಸುವಂತಿಲ್ಲ. ತಾನು ಮಡಿಯಾಗುವವರೆಗೂ ದೇವೀರಿ ಬಾಗಿಲನ್ನು ತೆರೆಯುವಂತಿಲ್ಲ. ಮುದ್ದಿನ ಮಡದಿಯನ್ನು ತಾನು ಇಷ್ಟೆಲ್ಲ ಸಂಕಟಕ್ಕೆ ಗುರಿಮಾಡಬಹುದೆ ! ಈಗ ಅವಳ ಆಜ್ಞಾನುವರ್ತಿಯಾಗಿ ನಡೆದುಕೊಳ್ಳಲೇಬೇಕು ಎಂದರೆ ಸೂತಕ ಕಳೆದು ಕೊಳ್ಳುವ ಬಗೆ ? ದೇವೀರಿಯೇ ಹೇಳಿಕೊಟ್ಟಳು—

ಅರಿಸಿಣವ ಅರಕೊಳ್ಳಿ ಚಚ್ಚಿಕೊಳ್ಳಿ ಸೀಗೆಯ
ಕಪಿನಿ ಹೊಳಗ್ಹೋಗಿ ಮುಳುಗೀರಿ-ರಾಯರೆ
ಮಾಡುಂಡು ಬನ್ನಿ ಅರೆ ಮೇಲೆ

ಅರಿಸಿಣ, ಸೀಗೆಕಾಯಿಗಳನ್ನು ಅರೆದುಕೊಳ್ಳಬೇಕಂತೆ. ಹೊಳೆಯಲ್ಲಿ ಮಿಂದು ಬರಬೇಕಂತೆ. ಅಷ್ಟಾಯಿತೆಂದರೂ ಅರೆಯ ಮೇಲೆ ಅಡಿಗೆ ಮಾಡಿ ಉಂಡು ಬರಬೇಕಂತೆ. ಕಟ್ಟಾಜ್ಞೆಗೆ ನಂಜಯ್ಯ ನಡುಗಿದ. ಅಡಿಗೆಯೆಂದರೆ ಆವನಿಗೇನೂ ತಿಳಿಯದು ! ದೇವೀರಿಯೇ ಅದನ್ನೂ ತಿಳಿಸಿದಳು—

ಮೂರುಕಲ್ಲ ಮಡಗಿ ಮೇಲೆ ತಪ್ಪಲಿ ಮಡಗಿ
ತ್ಯಾಗದ ಸೌದೆ ಒಲೆಗೊಟ್ಟ—ಮಾಸ್ವಾಮಿ
ನೀವು ಮಾಡುಂಡು ಬಲ್ಲಿ ಅರೆಮೇಲೆ

ಸರಿ, ನಂಜಯ್ಯ ಒಪ್ಪಿ ಅತ್ತ ನಡೆದ.

ಅರಕೊಂಡ ಅರಿಸಿಣವ ಚಚ್ಚಿಕೊಂಡ ಸೀಗೆಯ
ಕಪಿನಿ ಹೊಳೆಗ್ಹೋಗಿ ಮುಳುಗೀದ.

ಸ್ನಾನವಾಯಿತು. ಮಡಿಯೂ ಆಯಿತು. ವಿಭೂತಿಯನ್ನು ಧರಿಸಿ ಅಡಿಗೆ ದಾಗಿ ನಂಜಯ್ಯ ಅರೆಯ ದಾರಿಯನ್ನು ಹಿಡಿದ. ಆದರೆ ಕೆಲಸ ಕೆಟ್ಟಿದೆ. ಅಡಿಗೆ

ಮಾಡುವ ಬಗೆಯನ್ನು ದೇವೀರಿ ಅದೆಂತೋ ಹೇಳಿದಳು. ಮರೆತೇ ಹೋಗಿದೆ, ಮುಂದೇನು ಮಾಡಲೂ ತೋಚದೆ ನಂಜಯ್ಯ ಧೈರ್ಯವಾಗಿ ಅರೆಯನ್ನೇರಿ—

ಎರಡು ಕಲ್ಲ ಮಡಗಿ ಮೇಲೆ ತಪ್ಪಲಿ ಮಡಗಿ
ಬಾಳಿಯ ದಿಂಡ ಒಲೆಗೊಟ್ಟ—ಉರುಬಿದರೆ
ಹೊಗಯೆದ್ದು ಕಣ್ಣ ಬಗೆದಾವು

ಛೆ! ನಂಜಯ್ಯ ಬೆಚ್ಚಿ ಹಿಂದೆ ಬಿದ್ದ. ದೇವೀರಿ ತನಗೇಕೆ ಇಂಥ ಶಿಕ್ಷೆಯನ್ನು ವಿಧಿಸಿದಳು! ನಿಷ್ಕರುಣೆಯಾದ ಹೊಗೆ ಹೀಗೆ ನೇರವಾಗಿ ಕಣ್ಣಿಗೇ ನುಗ್ಗಿ ಹಿಂಸೆ ಕೊಡುವುದೆ? ನಂಜಯ್ಯನ ಕಣ್ಣಿನಲ್ಲಿ ಹೊಗೆಯ ಇರಿತಕ್ಕೆ ನೀರು ತುಂಬಿಕೊಂಡಿತು. ಆದಂತಾಗಲೆಂದು ಸುಮ್ಮನೆ ಕೈಕಟ್ಟಿ ಕುಳಿತುಬಿಟ್ಟ.

ಇತ್ತ ಮನೆಯಲ್ಲಿ ದೇವೀರಿಗೆ ಕೂರಲೂ ಮನವಿಲ್ಲ; ನಿಲ್ಲಲೂ ಮನವಿಲ್ಲ ಎನ್ನುವಂತಾಯಿತು. ತನ್ನ ಪತಿಗೆ ಕಟ್ಟುಪಾಡುಗಳನ್ನೇನೋ ಕೋಪದ ಭರದಲ್ಲಿ ನಿಯಮಿಸಿದಳು; ಈಗ ಪರಿತಾಪಗೊಂಡಳು. ಚಾಮುಂಡಿಯ ಸಂಗಮಾಡಿದ ನಂಜಯ್ಯ ಮಡಿಯಾಗಿಯೇ ತೀರಬೇಕು. ಆದರೆ ಅವರೆಷ್ಟು ಮೌನವಾಗಿ ಅದನ್ನು ಅನುಸರಿಸಿದರು. ತನ್ನನ್ನು ಪ್ರತಿಭಟಿಸದೆ ಹೇಳಿದುದೆಲ್ಲವನ್ನೂ ಹೇಗೆ ಒಪ್ಪಿ ಹೊರಟು ಹೋದರು. ಎಂಥ ಪ್ರೇಮಮಯಿ! ತನ್ನ ಮೇಲಿನ ಮಮತೆಯಿಂದಲೇ, ಆದರದಿಂದಲೇ ಒಂದು ವೇಳೆ ಅಪರಾಧಿಯಾಗಿದ್ದರೂ––ತಾನು ಹೇಳಿದಂತೆ ನಡೆದುಕೊಂಡ ಪತಿರಾಯ ತನ್ನ ಪಾಲಿನ ಪುಣ್ಯನಿಧಿ! ಹೃದಯವೊಂದಿದ್ದರೆ ಎಂಥ ತಪ್ಪನ್ನಾದರೂ ಸರಿಪಡಿಸಿಕೊಳ್ಳಲಾಗದೆ! ನಂಜಯ್ಯ, ಓಹ್! ಎಂದೂ ಅಡಿಗೆ ಮಾಡಿ ಅರಿಯರು! ಏನೆಲ್ಲ ಪೇಚಾಟವಾಗಿದೆಯೊ! ದೇವೀರಿಗೆ ಕರುಳು ಕಿವಿಚಿಕೊಳ್ಳುವಂತಾಯಿತು. ಗೌಡಿಯರನ್ನು ಕರೆದಳು—

ತೋಟದ ಸಾಲಿನಲ್ಲಿ ಊಟಕ್ಕೆ ಹೋಗವರೆ
ಹೋಗಿ ನೋಡಿರೆ ಗೌಡೀರ

ಗೌಡಿಯರನ್ನು ಕರೆದು ನಂಜಯ್ಯನ ನೆರವಿಗೆ ಓಡಿಸಿದಳು. ತೋಟದ ಬಳಿಯ ಬಂಡೆಗೆ ಗೌಡಿಯರು ಬಂದು ನೋಡಿದರು. ನಂಜಯ್ಯ—

ಎರಡು ಕಲ್ಲ ಹೂಡಿ ಮೇಲೆ ತಪ್ಪಲಿ ಮಡಗಿ
ಬಾಳಿಯ ದಿಂಡ ಒಲೆಗೊಟ್ಟ—ಉರುಬಿದರೆ
ಹೊಗೆಯೆದ್ದು ಕಣ್ಣ ಬಗೆದಾವು

ಗೌಡಿಯರು ಫಕಾರನೆ ನಕ್ಕರು. ಹಸಿಯ ಬಾಳೆಯ ದಿಂಡು ಉರಿದೀತೆ ! ಎರಡೇ ಕಲ್ಲನ್ನು ಇಟ್ಟು ಒಲೆಯನ್ನು ಮಾಡಿಕೊಂಡರೆ ಬೀಸುವ ಗಾಳಿಗೆ ಉರಿ ನಿಲ್ಲಬಹುದೆ ! ಆದರೂ ನಂಜಯ್ಯ ಶ್ರದ್ಧೆಯಿಂದ ಒಲೆ ಊದುತ್ತಿದ್ದಾನೆ ! ಇನ್ನೆಷ್ಟು ರುಚಿಕರವಾದ ಅಡಿಗೆಯೊ !

ಊಟವಾಯ್ತು ಸ್ವಾಮಿ ಊಟವಾಯ್ತು ಶಿವನೆ
ನಮಗೊಂದು ತುತ್ತು ಕೊಡುತೀರ

ತನ್ನ ಅಸಹಾಯಕ ಸ್ಥಿತಿಯನ್ನು ನೋಡಿ ಗೌಡಿಯರೂ ಹಾಸ್ಯಮಾಡು ವಂತಾಯಿತು. ಈ ಹೆಂಗಸರ ಆಟಗಳೇ ಅರ್ಥವಾಗುವುದಿಲ್ಲ !

ಹೆಂಗಸಿನ ಮಾಯೆ ಹೆಂಗೆಂಗೂ ನಾ ಕಾಣೆ
ಮಾಡುಣ್ಣೋದ್ಹೆಂಗೆ ಗೌಡೀರಾ

ನಗುವನ್ನು ತಡೆದುಕೊಂಡು ಗೌಡಿಯರು ನಂಜಯ್ಯನಿಗೆ ಅಡಿಗೆ ಮಾಡುವ ವಿಧಾನವನ್ನು ಹೇಳಿಕೊಟ್ಟರು—

ಮೂರು ಕಲ್ಲ ಮಡಗಿ ಮೇಲೆ ತಪ್ಪಲಿ ಮಡಗಿ
ತ್ಯಾಗದ ಸೌದೆ ಒಲೆಗಿಡಿ — ಮಾಸ್ವಾಮಿ
ನೀವು ಮಾಡುಂಡು ಬನ್ನಿ ಅರಮನೆಗೆ

ಓಹೋ ! ದೇವೀರಿ ಹೇಳಿದ ಬಗೆಯೂ ಹೀಗೆಯೇ ! ಇನ್ನು ಯಾರ ನೆರವೂ ನಂಜಯ್ಯನಿಗೆ ಬೇಕಾಗಲಿಲ್ಲ. ಸೊಗಸಾಗಿ ಅಡಿಗೆಯನ್ನು ಮಾಡಿ ಊಟ ವಾದ ನಂತರ ಸಂಜೆಗೆ ಮನೆಯ ದಾರಿ ಹಿಡಿದ. 'ಶಿವ ಶಿವ' ಎಂದು ತೇಗುತ್ತ ನಂಜಯ್ಯ ಬರುವಾಗ ದೇವೀರಿ ಇನ್ನಾದರೂ ಬಾಗಿಲನ್ನು ತೆರೆದಿರಬಾರದೆ ? ಇನ್ನೂ ಯಾವ ಮಡಿ ಕಾದಿದೆಯೊ? ನಂಜಯ್ಯನಿಗೆ ಯೋಚನೆಗಿಟ್ಟುಕೊಂಡಿತು.

ಮಾಡುಂಡು ಬಂದೆ ಅರೆ ಮೇಲೆ ದೇವೀರಿ
ಈಗಾದರೂ ಕದವ ತೆಗೆ ಬಾರೆ

ಕದ ತೆರೆದುಕೊಂಡಿತು. ಸಂತುಷ್ಟಳಾಗಿ, ಸಡಗರ ಸಂಭ್ರಮಗಳಿಂದ ಪತಿಯನ್ನು ಎದುರುಗೊಂಡಳು ದೇವೀರಿ.

ಕದವ ತೆಗೆದಾಳು ಕೈಯೆತ್ತಿ ಮುಗಿದಾಳು
ಕೈ ಮೈನೆಲ್ಲ ಸವರ್ಯಾಳು

ಸತಿಯ ಈ ಪ್ರೇಮ, ಈ ಮಮತೆ ನಂಜಯ್ಯನಿಗೆ ಅಮೃತಸುಖವನ್ನು ನೀಡಿದುವು. ತನ್ನ ಲಲನೆಯ ಒಲವಿನ ಆಳವನ್ನು ಅಳೆಯಲಾರದೆ ಅವನು ಆನಂದಬಾಷ್ಪವನ್ನು ಮಾತ್ರ ಸುರಿಸಿದ. ಈ ಬಾಷ್ಪದಲ್ಲಿ ಇನ್ನೊಮ್ಮೆ ಇಂಥ ನಂಬಿದ ಹೃದಯಕ್ಕೆ ವಂಚನೆಯನ್ನೆಸಗಲಾರೆ ಎಂಬ ಆದೇಶವೂ ಇದ್ದಂತೆ ಭಾಸವಾಯಿತು ದೇವೀರಿಗೆ ! ಇಬ್ಬರ ಮನದಲ್ಲಿಯೂ ಪಶ್ಚಾತ್ತಾಪದ ತೆರೆಗಳೆದ್ದು ದಡಕ್ಕೆ ಬಡಿದು ಪರಸ್ಪರ ಪ್ರೇಮದ ರಸಜೇನನ್ನು ನೇದವು. ಎಲ್ಲಿ ಹೋಗಿದ್ದನೋ ಬಸವಯ್ಯ ಹೊರಬಾಗಿಲಲ್ಲಿ ಸುಳಿದು ತಾನೂ ಬಂದೆನೆಂಬಂತೆ ಕ್ಯಾಕರಿಸಿದ; ಕೆಮ್ಮಿದ. ವಿರಸದ ತೆರೆ ಮುಗುಚಿ ನಂಜಯ್ಯನ ಅರಮನೆಯಲ್ಲಿ ಮತ್ತೆ ಹೊಸಬೆಳಕು ಚಿಮ್ಮಿತು. ಅಲ್ಲಿಂದೀಚೆಗೆ ಅವನು ಮತ್ತೆ ಜಾಮುಂಡಿಯ ಅರಮನೆಗೆ ಹೋದನೋ ಇಲ್ಲವೋ ಯಾರಿಗೂ ತಿಳಿಯದು !

— —

# ಜಗಳವ ನೋಡಿ ನಗುತಾನೆ !

೧

ಆ ಕನಸಿನ ಕುಟ್ಮಲ ಬಿರಿದು ಹೂವಾಗಿ ಮಧುವನ್ನು ಸೂಸುವ ದಿನ ಬಳಿ ಸಾರಿದೆ. ತಮ್ಮ ಬಾಳಿನ ಪುಣ್ಯ ಪತಾಕೆ ಹಾರಲಿದೆ. ಜನ್ಮ ಸಾರ್ಥಕವಾಗಲಿದೆ....

ಒಂಬತ್ತು ತಿಂಗಳು ತುಂಬಿತು ಮಡದಿಗೆ
ಒಡೆಯ ಗಿರಿರಾಜ ಹೊರಟನು....

ವಿಶ್ವವಿಭುವಿಗೆ ತಮ್ಮೊಡಲ ಕುಡಿಯನ್ನು ಅರ್ಪಿಸುವ ಶುಭಗಳಿಗೆಯನ್ನು ....ಓಹ್ ! ನೆನೆದರೇ ಪುಳಕ ತರುವ ಆ ಸ್ವಪ್ನ ಕೌತುಕವನ್ನು ಎದುರುಗೊಳ್ಳುವ ಪರ್ವಸಮಯ ಮೆಲು ಅಡಿಗಳಿನಿಟ್ಟು ಬಂದಿದೆ ; ನವಮಾಸಗಳ ಹಿಂದೆ ಮಡದಿ ಕಂಡ ಆ ಅಪೂರ್ವ ಕನಸು—

ಉಂಡುಟ್ಟು ಗಿರಿಮಾಜಿ ಮಂಚದ ಮೇಲೆ ಮಲಗಿರಲು
ಶಿವರಾಯ ಸ್ವಪ್ನಾಕೆ ಸುಳಿದನು
ಶಿವರಾಯ ಸ್ವಪ್ನಕೆ ಸುಳಿದು ಏನೆಂದಾನೆ
ಕನ್ನೇರ್ಪುಟ್ಟಿದರೆ ಕೊಡು ನನಗೆ....

ಇದಕ್ಕೂ ಮಿಕ್ಕ ಸೌಭಾಗ್ಯವಾವುದು ತಮ್ಮ ಪಾಲಿಗೆ ? ಲೋಕನಾಯಕನಾದ ಪರಶಿವನೇ ಬಂದು ಗಿರಿಮಾಜಿಯನ್ನು ಕೇಳಿದನೆ ? ಭಕ್ತಿ ಭಾವ ಪರವಶೆಯ ಭ್ರಾಂತ ಮನಸಿನ ಹುಚ್ಚು ನುಡಿಯಿದಲ್ಲ ! ಅಂದಿನಿಂದ ಅವಳಲ್ಲಿ ಹೊಸ ಹರ್ಷ ಬೆಳದಿಂಗಳಾಗಿ ಉಕ್ಕಿದೆ ; ಅವಳ ನಡೆಯಲ್ಲಿ, ನುಡಿಯಲ್ಲಿ ಹೊಸ ಉತ್ಸಾಹ, ಮಧುಮಾಸದ ವರ್ಣಮೋಡಿಯನ್ನು ಮೆರೆದಿದೆ....ಅವಳು ಕೇಳಿದುದುಂಟು—

ಮೂರು ತಿಂಗಳ ಬಸುರಿ ಏನೇನ ಬಗೆಸ್ಯಾಳು
ಊರ ಮುಂದಲ ಎಳೆಯ ಹುಣಸೆಯ—ಹಣ್ಣನ್ನೆ
ಮಡದಿ ಗಿರಿಮಾಜಿ ಬಗೆಸ್ಯಾಳು
ಆರು ತಿಂಗಳ ಬಸುರಿ ಮತ್ತೇನ ಬಯಸ್ಯಾಳು
ಕಟ್ಟೆಯ ಹಿಂದಲ ಹೊಸಮಾವು—ಹಣ್ಣನ್ನೆ

ಮಡದಿ ಗಿರಿಮಾಜಿ ಬಗೆಸ್ಯಾಳು
ಎಂಟು ತಿಂಗಳ ಬಸುರಿ ಏನೇನ ಬಯಸ್ಯಾಳು
ಏರಿ ಹಿಂದಲ ಎಳ ಜೋಳ– ತೆನೆಯನ್ನೆ
ಮಡದಿ ಗಿರಿಮಾಜಿ ಬಗೆಸ್ಯಾಳು....

ಇಂಥವೇ.... ಈ ಬಗೆಯವೇ ನೂರಾರು ಬಯಕೆಗಳು....ಯಾವ ಹಣ್ಣನ್ನು ಮೆದ್ದೇನು, ಯಾವ ಹೂವನ್ನು ಮುಡಿದೇನು....ಯಾವ ವಸ್ತ್ರಾಭರಣವನ್ನು ತೊಟ್ಟು ನಲಿದೇನು—ಎಂಬೆಲ್ಲ ಬಯಕೆಗಳು ...ಆ ನಾಡಿನ ಶ್ರೀಮಂತನಾದ ತನ್ನಲ್ಲಿ ಇವಾವಕ್ಕೆ ಕೊರತೆ ? ಗರ್ಭವತಿಯಾದ ತನ್ನ ಮಡದಿಯನ್ನು ನಲವಿನ ಹೂಬಳ್ಳಿಯಂತೆ ನೋಡಿಕೊಳ್ಳಬಾರದೆ ?

ದಿನ ತುಂಬಿದೆ ಮಡದಿ ಗಿರಿಮಾಜಿಗೆ. ಅನುಭವಿಯಾದ ಸೂಲಗಿತ್ತಿಯನ್ನು ಕರೆತಂದು ತನ್ನರಮನೆಯಲ್ಲಿಯೇ ಇಟ್ಟುಕೊಳ್ಳುವುದೊಳ್ಳಿತು. ತಮ್ಮ ಶ್ರೀಮಂತಿಕೆಗೆ,ತಮ್ಮ ಅಗ್ಗಳಿಕೆಗೆ ಒಪ್ಪುವ ಒಬ್ಬಳೇ ಒಬ್ಬಳು ದಾದಿ 'ಸಂಗಮ್ಮ'. ಅವಳನ್ನು ಕರೆತರಲು ಆಳು ಕಳುಹಿದರಾಗದೆಂದು ನೆರೆಯೂರಿನ ದಾರಿಯಲ್ಲಿ ಗಿರಿರಾಜ ಹೊರಟಿದ್ದಾನೆ ; ಗುರುತರವಾದ ಕೆಲಸವಿದೆಂದು ತಾನೇ ಸಾಗಿದ್ದಾನೆ. ....ಇಂಥ ದಂಪತಿಗಳ ಕುವರಿಯಾಗಿ ಲೋಕಮಾತೆಯು ಅವತಾರವಾಗಬೇಕಿದೆ. ದಕ್ಷಯಜ್ಞದಲ್ಲಿ ತನ್ನ ಪತಿಯ ನಿಂದೆಯನ್ನು ತಂದೆಯಿಂದ ಕೇಳಿದ ದಾಕ್ಷಾಯಣಿ ಯೋಗಸಮಾಧಿಯಿಂದ ದೇಹತ್ಯಾಗ ಮಾಡಿದ ಮೇಲೆ ತ್ರಿಣಯನ ವಿರಹಿಯಾದುದು ನಿಜ. ಭವಾನಿಯ ಭಕ್ತೆಯಾದ ಗಿರಿಮಾಜಿಯಲ್ಲಿ ಮತ್ತೊಮ್ಮೆ ತನ್ನ ಇನಿಯೆ ಅವತಾರವೆತ್ತಬಾರದೇಕೆ ? ಮೃಡ, ಗಿರಿಮಾಜಿಯ ಕನಸಿನಲ್ಲಿ ಸುಳಿದು ತನ್ನ ಅಂತರಂಗದ ಬಯಕೆಯನ್ನು ಅವಳ ಮುಂದಿಟ್ಟಿರಲೂ ಬೇಕು ; ವಿರಹಯಾತನೆ ಹರನನ್ನೂ ಅರಸಿಹೋಯಿತೆ !

ಹಿರಿಯ ಕುಳಗಳಿಗೆ ಹಿರಿಯ ಸೇವೆಯನ್ನು ಸಲ್ಲಿಸಿ ಹಿರಿಯ ಶ್ರೀಮಂತೆಯಾಗಿದ್ದಾಳೆ ಸಂಗಮ್ಮ. ಅವಳ ಮನೆಯ ವೈಭವವನ್ನು ಕೇಳಬೇಕೆ—

ಮೂಡು ಬಾಗಿಲು ಮನೆ ಮುತ್ತಿನ ತೋರಣ
ನಡುವೆ ಬಾಗಿಲಿಗೆ ಮಣಿಗಾರೆ—ಮುತ್ತಿನ ಬೊಟ್ಟು
ಅದುವೆ ಸಂಗಮನ ಅರಮನೆ

ಆದರೂ ನಿರ್ಗವಿ, ಕಾರ್ಯಚತುರೆ, ನಿಷ್ಠಾಪೂರ್ಣೆ, ಮೇಲಾಗಿ ವಿನಯ ಸಂಪನ್ನೆ. ಗಿರಿರಾಜನ ಕೀರ್ತಿ ಪ್ರತಿಷ್ಠೆ ಆ ನಾಡಿಗೆ ಹೊಸದೇ ? ಆ ಮಹಾ ವ್ಯಕ್ತಿಯೇ ಇಲ್ಲಿಯವರೆಗೆ ನಡೆದುಬಂದಿದ್ದಾರೆ....ಸಂಗಮ್ಮ ಸಡಗರಗೊಂಡಳು ; ಸಂಭ್ರಮಗೊಂಡಳು.

ಎಂದು ಬಾರದ ಗಿರಿರಾಜ ಬಂದರಲ್ಲೆ ನಮ್ಮನೆಗೆ
ಕುಂಡುರುಕೆ ಹಾಕಿ ಮಣೆ ಹಾಕಿ

ಸೇವಕಿಯರಿಗೆ ಆಜ್ಞಾಪಿಸುತ್ತ ಗಿರಿರಾಜನಿಗೆ ಸಾದರದ ಸ್ವಾಗತವನ್ನು ಕೋರಲು ಬಾಗಿಲಿಗೆ ಬಂದಳಾದರೂ, ಮಡದಿಯೊಬ್ಬಳನ್ನೇ ಮನೆಯಲ್ಲಿ ತೊರೆದು ಬಂದ ತಾನು ಸತ್ಕಾರವನ್ನು ಕೊಳ್ಳಲು ವೇಳೆಯೆಲ್ಲಿದೆ ?

ಕುಳಿತುಕೊಳುವುದಕೆ ಮನೆಯಲ್ಲಿ ಜಾಂಬಾರ

ಸೂಕ್ಷ್ಮಮತಿಯಾದ ಸಂಗಮ್ಮನಿಗೆ ಬಿಡಿಸಿ ಹೇಳಬೇಕೆ ? ಗಿರಿಮಾಜಿ ಗರ್ಭವತಿಯಾದ ವಿಷಯ ಅವಳಿಗೇನು ತಿಳಿಯದೆ ? ತನಗೆ ಕರೆಬರುವ ದಿನ ವನ್ನು ಅದೆಷ್ಟು ಕಾತರತೆಯಿಂದ ಕಾದಿದ್ದಳು ! ತನ್ನ ಪುಣ್ಯಕ್ಕೆ ಗಿರಿರಾಜನೇ ಕರೆ ಯಲು ಬಂದಿದ್ದಾನೆ ! ಅದಕ್ಕಿಂತ ಹೆಮ್ಮೆಯುಂಟೆ ! ಅದಕ್ಕಾಗಿಯೇ –

ಕಪ್ಪನೊದ್ದ್ಯಾಳು ಕಪ್ಪು ಮುತ್ತ ಕಟ್ಯಾಳು
ಕಪ್ಪು ಕನ್ನಡಿಲಿ ಮುಖ ನೋಡಿ – ಸಂಗಮ್ಮ
ಚೆಂದಿಲ್ಲವೆಂದು ಮರುಗ್ಯಾಳು

ಗಿರಿರಾಜನ ಅರಮನೆಗೆ ಹೋಗುವಾಗ ಸಾಮಾನ್ಯ ಉಡುಪಿನಲ್ಲಿ ಹೋಗುವುದೆ ? ಬೆಲೆ ಬಾಳುವ ವಸ್ತ್ರಾಭರಣಗಳನ್ನೇ ಧರಿಸಿ ಹೋಗಬೇಕು, ನಿಜ ! ಆದರೆ ಯಾವ ಬಗೆಯ ಅಲಂಕಾರವೂ ತನ್ನ ರೂಪಿಗೆ ಸರಿದೋರಲೊ ಲ್ಲದು ! ಗಿರಿರಾಜರು ಕಾದು ನಿಂತಿದ್ದಾರೆ. ಅವರೊಡನೆ ಹೊರಡುವಾಗ ಯಾವ ವಸ್ತ್ರವೂ ಯಾವ ಒಡವೆಯೂ ಸರಿಯೆನಿಸದು ; ಯಾವ ಅಲಂಕಾರವೂ ಒಪ್ಪ ಲೊಲ್ಲದು ! ಸಂಗಮ್ಮನಿಗೆ ಸಿಟ್ಟು ಬಂದಿತು. ಎಲ್ಲವನ್ನೂ ಕಿತ್ತು ರೊಯ್ಯನೆಸೆ ದಳು. ಸನ್ನುತ ಶಿವಭಕ್ತರ ಮನೆಗೆ, ಸದ್ಗುಣಶೀಲೆ ಸದಾಚಾರೆ ಸಚ್ಚರಿತೆ

ಗಿರಿಮಾಜಿಯಲ್ಲಿಗೆ ಹೋಗಲು ಈ ಬಣ್ಣದ ಬೆಡಗೇಕೆ ಎನಿಸಿತು ವ್ಯವಹಾರೆ ಶೀಲೆ ಸಂಗಮ್ಮನಿಗೆ ! ಶ್ವೇತವಸ್ತ್ರವೇ ಅಲ್ಲಿಗೆ ಸರಿಯೆನಿಸಿರಬೇಕು—

ಬಿಳಿಯಸ್ಹೊದ್ದಾಳೆ ಬಿಳಿಮುತ್ತ ಕಟ್ಯಾಳೆ
ಬಿಳಿಯ ಕನ್ನಡಿಲಿ ಮುಖನೋಡಿ—ಸಂಗಮ್ಮ
ಚೆಂದಾಯಿತೆಂದು ಹೊರಟಳು

ಸಂಗಮ್ಮ ಬಂದ ಸುದ್ದಿ ಗಿರಿರಾಜನ ಅರಮನೆಯಲ್ಲಿ ಸಂತಸದ ಎಲರನ್ನು ನೀಡಿತು. ಗಿರಿರಾಜನ ಮನ ನೆಮ್ಮದಿಗೊಂಡಿತು. ಉಳಿದೊಂದೇ ಕುತೂಹಲ ; ಹುಟ್ಟುವ ಮಗು ಹೆಣ್ಣಾಗಲಿ....ಶಿವನ ಮಡದಿಯಾಗುವ ಭಾಗ್ಯಶೀಲೆಯಾಗಲಿ.

ಹೋದಳು ಸಂಗಮ್ಮ ನಿಂತಳು ಬಾಗಿಲಲ್ಲಿ
ನೀವಳಿಸಿ ಕಾಯ ಹೊಡೆವಾಳು—ಗಿರಿಮಾಜಿ
ಅವಳ್ಹಡದಳೆರಡು ಹೆಣ್ಣು ಮಗುವ

ಲೋಕದ ಪುಣ್ಯ...ಗಿರಿಮಾಜಿಯ ಶ್ರೀ ಗರ್ಭದಲ್ಲಿ ಜಗಜ್ಜನನಿಯರ ಅವತಾರ ! ಅವಳ ಸ್ವಪ್ನ ಸಿದ್ಧಿಸಿತು ! ಗಿರಿರಾಜನ ಬಯಕೆ ಫಲಿಸಿತು : ಆನಂದದ ಲಹರಿ ಚಿಮ್ಮಿತು. ಹರ್ಷ ಆಮೋದಗಳು ಮೊಳಗಿದವು ! ತನ್ನ ಪತಿ ಭಕ್ತಿಗೆ ಮೆಚ್ಚಿ ದೈವವೇ ಕರುಣಿಸಿದ ದಿವ್ಯವರವೆಂದು ಎರಡು ಹೆಣ್ಣನ್ನು ಹಡೆದ ಗಿರಿಮಾಜಿ ಹಿಗ್ಗಿದಳು....ಆದರೆ ಮರುಕ್ಷಣವೇ ಅಹಿತವಾರ್ತೆಯೊಂದು ವಿಷ ಗಾಳಿಯಂತೆ ಹರಡಿತು....

ಅಣ್ಣ ಗಿರಿರಾಜು ಎಣ್ಣೆ ಬಣ್ಣಗಳುಂಟು
ನಿಸ್ತ್ರೀ ಹುಟ್ಟಿದ ಮನೆಗೆ ಜಯವಿಲ್ಲ—ಈ ಶಿಶುವ
ಬಿಟ್ಟು ಬನ್ನಿ ಹರಿಯೊ ಜಲಧೀಗೆ

....ಗಿರಿರಾಜ ನೆಲಕ್ಕೆ ಕುಸಿದ ! ಸುಂದರವಾದ ಕಿರಿಯ ಶಿಶುವನ್ನು ಕುರಿತು ಸಂಗಮ್ಮ ಆಡುತ್ತಿರುವುದೇನು ! ಒಬ್ಬಳೇ ತಾಯ ಗರ್ಭದಲ್ಲಿ, ಒಂದೇ ದಿನ ಹುಟ್ಟಿದ ಈ ಮಕ್ಕಳಲ್ಲಿ ಒಬ್ಬಳು ಪಡೆದು ಬಂದ ಭಾಗ್ಯವೇನು ! ಇನ್ನೊಬ್ಬಳ ಗೊದಗಿದ ದುರ್ಗತಿಯೇನು ! ಕಣ್ಣು ಬಿಡದ ಹಸುಳೆಯನ್ನು ಹೊಳೆಗೆಸೆಯ ಬೇಕಂತೆ ! ಇಲ್ಲ, ಸಂಗಮ್ಮನ ಮಾತು ಸತ್ಯಕ್ಕೆ ದೂರ ; ಜ್ಞಾನಿಗಳೂ, ಅನುಭವಿ

ಗಳೂ ಆದ ಕುಲಪುರೋಹಿತರಲ್ಲಿ ಈ ವಿಷಯುವನ್ನುಸ್ಪಷ್ಟಪಡಿಸಿಕೊಳ್ಳಬೇಕು ; ಆದರೆ ಅಲ್ಲಿಗೆ ಓಡಿದಾಗ... ಅವರನ್ನು ಕಾತುರದಿಂದ ಪ್ರಶ್ನಿಸಿದಾಗ....

ಹಾಲು ಅನ್ನ ಉಣ್ಣೋ ಹಾರುವ ದೋಸುರಯ್ಯ
ಮುತ್ತಿನ ಪಂಚಾಂಗ ಕೈಲ್ಹಿಡಿದು – ಹೇಳ್ಯಾರೆ
ಅವಳು ಮೂಡಲ ತೊರೆಯ ಪಡೆವಾಳು—ಹಿರಿಯೋಳು
ನಾಡೀನೀಶ್ವರನ ಪಡೆದಾಳು

ಒಂದು ಶುಭವಾರ್ತೆ....ಅದನ್ನು ಮೆಟ್ಟಿ ಕರಾಳ ರೂಪಿನಿಂದ ನಿಂತ ಮತ್ತೊಂದು ಅಶುಭವಾರ್ತೆ....ಒಂದು ಮಗುವನ್ನು ಬಿಟ್ಟು ಮತ್ತೊಂದನ್ನು ದೂರ ಮಾಡಬೇಕು. ಆದರೆ ಶಿಶುಹತ್ಯೆ ! ಗಿರಿರಾಜನ ಮೈ ಬೆವರಿಕ್ಕಿತು.... ತುಟಿ ನಡುಗಿತು....

ಹುಟ್ಟಿದ ಮಕ್ಕಳ ಹೊರಗೆ ಬಿಡುವವರುಂಟೆ
ಸಾಕಕೊಡುವೆನು ನನ್ನ ಬಳಗಾಕೆ....

ದೈನ್ಯನಾಗಿ, ಗದ್ಗದನಾಗಿ ಕೇಳಿದನು, ಅಷ್ಟಾದರೂ ಪರಿಹಾರ ದೊರ ತೀತೆಂದು ! ಪುರೋಹಿತರ ಮುಷ್ಟಿ ಸಡಿಲಲಿಲ್ಲ. ಗಂಭೀರ ನಗೆಯೊಂದು ಗಿರಿ ರಾಜನ ಹೃದಯುವನ್ನೇ ಇರಿಯುವಂತೆ ಅವರ ಆನನದ ಮೇಲೆ ಹಾದು ಹೋಯಿತು.

ಸಾಕಕೊಂಡೋರಿಗೆ ಏಳಿಗೆ ಸಂತಾನಿಲ್ಲ.
ಪುತ್ರಸಂತಾನ ಮೊದಲಿಲ್ಲ....

ಗಿರಿರಾಜನ ಮುಖವನ್ನು ನೋಡಿ, ತುಸು ಗಡುಸಾಗಿಯೇ, ತುಸು ಕೋಪದಲ್ಲಿಯೇ ಪುರೋಹಿತರ ನುಡಿ ಗುಡುಗಿತು.

ಒಕ್ಕಳು ಕುಯ್ಯೋ ಕುಡಿಲು ಮೊರ ಸಹಿತ ಕನ್ನೆಯ
ಬಿಟ್ಟು ಬನ್ನಿ ಹರಿಯೊ ತೊರೆಗ್ಹೋಗಿ

ಯಾವುದೋ ದೊಡ್ಡ ಅನಾಹುತದತ್ತ ಬೆರಳು ತೋರಿ ಎಚ್ಚರಿಸಿದಂತಿತ್ತು ಆ ನುಡಿ. ಗಿರಿರಾಜನ ಬಾಯಿ ಕಟ್ಟಿತು. ಮನ ದಿಗ್ಭ್ರಾಂತವಾಯಿತು. ತಾಯಿ ಕರುಳು ಸಂಕಟದಿಂದ ತುಡಿಯಿತು. ಗಿರಿಮಾಜಿ ಬಿದ್ದುಬಿದ್ದು ಅತ್ತಳು.

'ಕನ್ನೆಯ ಬಸುರಲ್ಲಿ ಬಾಗಿದೆ ಬಳುಕಿದೆ'
ಎಂದು ಬಿಕ್ಕುತ್ತ
ಬಾಗಿದ ಶಿಶುವ ಮಡಿಲಲ್ಲಿ ಇಟ್ಟುಕೊಂಡು
ಕಂಬ ಕಂಬವನ್ನಾದು ಅಳುತಾಳೆ

ಏನನ್ನೂ ಅರಿಯದ ಮುಗ್ಧ ಮಕ್ಕಳು ಅಲೌಕಿಕ ನಗೆಯನ್ನು ಬೀರುತ್ತಿವೆ. ಆದರೆ ಶೋಕದ ಮಬ್ಬು ಮನೆಯನ್ನು ಆವರಿಸಿತು. ಸಂತೋಷದ ಹಿಂದೆಯೇ ಬೆನ್ನಟ್ಟಿ ಬಂದಿದೆ, ದುಃಖದ ಘೋರ ವ್ಯಾಘ್ರ ...ಮುಂದಿನ ವಿಪತ್ತಿನಿಂದ ಪಾರಾಗಲಲ್ಲದಿದ್ದರೂ ಉಳಿದೊಬ್ಬಳು ಮಗಳ ಕಲ್ಯಾಣದ ದೃಷ್ಟಿಯಿಂದ ಲೋಕದ ಹಿತದೃಷ್ಟಿಯಿಂದ ಗಿರಿರಾಜ ನಿಶ್ಚಲ ಮನಸ್ಕನಾದ, 'ಶಿವ ಕೊಟ್ಟ ಶಿಶುವನ್ನು ಶಿವ ಸಮರ್ಪಣ ಮಾಡಲು' ಸಿದ್ಧನಾದ.

ಕನ್ನೆಯ ತೊಟ್ಟಿಲಿಗೆ ರನ್ನದಸೇಕೆನೂಡಿ
ಅರಿಸಿನದ ಬಟ್ಟೆ ಒದರ್‍ಯಾಸಿ—ಕಂದಮನ
ಕೈಗತ್ತಿ ಕಂಬನಿಯ ಸುರಿಸ್ಯಾನೆ

ಕಂಬನಿಯ ಕೋಡಿಯೊಡೆಯಿತು....ಮುದ್ದು ಮಗುವನ್ನು ಎತ್ತಿ ತೊಟ್ಟಿಲಿಗಿಡುವಾಗ ಅವನದೊಂದು ಕಣ್ಣನ್ನು ಕೀಳುವಂತೆ ವೇದನೆಯಾಯಿತು; ಆದರೂ ಧೈರ್ಯದ ಅಡಿಗಳನ್ನಿಡಬೇಕಾಯಿತು.

ಚಿನ್ನದ ತೊಟ್ಟಿಲಿಗೆ ರನ್ನದ ಸಿವಡ್ಹೂಡಿ
ತಲೆಯ ಮೇಲದನು ಹೊತುಕೊಂಡು—ಗಿರಿರಾಜ
ತೊರೆಗ್ಹೋಗಿ ಕೂಸ ಬಿಟ್ಟುಬಂದ

ಮನೆಯ ಒಂದು ತೊಟ್ಟಿಲು ಬರಿದಾಯಿತು. ಮುಸುಕು ಹಾಕಿದ ರನ್ನದ ತೊಟ್ಟಿಲು ಗಂಗೆಯ ಮೆಲುದನಿಯ ಇನಿಯ ಜೋಗುಳದ ಅಲೆಯಲೆಯ ಲೀಲೆಯಲ್ಲಿ ತೇಲಿ ತೇಲಿ ಕ್ರಮಕ್ರಮವಾಗಿ ಮರೆಯಾಗುವಾಗ ಗಿರಿರಾಜನ ದೃಷ್ಟಿ ಮಸುಕಾಯಿತು; ಅವನ ತಗ್ಗಿದ ಮುಖದಿಂದ ಬೆಳ್ಳಿಯ ಚಿಕ್ಕೆಯಂತೆ ಫಳಫಳನೆ ಹನಿಮುತ್ತು ಜಾರಿದವು. ಮಗುವನ್ನು ಪಡೆದು ಹಿಗ್ಗಿನಿಂದ ಬೀಗಿದಂತೆ ಗಂಭೀರವಾಗಿ ಹೊಳೆ ಸಾಗಿತು!

....ಅತ್ತ ಗಿರಿರಾಜನ ಅರಮನೆಯನ್ನು ಶೋಕದ ತೆಕ್ಕೆಯಲ್ಲಿ ತಬ್ಬಿ ಕತ್ತ

ಲಾಯಿತು. ಎಷ್ಟೋ....ಎಷ್ಟೋ ಹರಿದಾರಿಗಳ ದೂರ ಇರುಳೆಲ್ಲಾ ತೊಟ್ಟಿಲು ತೇಲಿತು. ಎಲ್ಲಿಯೊ ಯಾವುದೋ ಪುಣ್ಯಘಟ್ಟವನ್ನು ಮುಟ್ಟಿದಾಗ ಮುಂಬೆಳಗು ಮೂಡಿತು. ಅವನೂ ಭಾಗ್ಯಶೀಲನೆಂದು ತೋರುತ್ತದೆ. ಅವನ ನಿಷ್ಠೆ, ಆದರ್ಶ, ಶ್ರಮಜೀವನ, ಸತ್ಯಸಂಧತೆಗಳ ಸತ್ಫಲವದೆಂದು ತೋರುತ್ತದೆ....ಎಂಥ ಶುಭ ಗಳಿಗೆಯಲ್ಲಿ ವಿಧಿ ಆವನನ್ನಲ್ಲಿಗೆ ಎಳೆತಂದಿದೆ!

ಹಾಲು ಅನ್ನ ಉಣ್ಣೊ ಬೆಸ್ತರಂಬಿಗರಣ್ಣ
ಮುತ್ತಿನ ಬಲೆಯ ಹೆಗಲಲ್ಲಿ—ಹಾಕಿಕೊಂಡು
ಬಂದಾನೊ ಹೊಳೆಯ ದಡಗೊಂಡು

ತಮ್ಮ ಕುಲವನ್ನು ತಲೆತಲಾಂತರಗಳಿಂದ ರಕ್ಷಿಸಿಕೊಂಡು ಬಂದ ಪುಣ್ಯನದಿ ಭಾಗೀರಥಿ ಬೆಳಗಿನ ಪ್ರಶಾಂತತೆಯಲ್ಲಿ ತನ್ನೆಡೆಗೆ ಅಂದಿನ ಬದುಕಿನ ದಾರಿಯನ್ನು ಅರಸಿ ತನ್ನಲ್ಲಿಗೆ ಬಂದ ಅಂಬಿಗರ ಗಂಗನೆಡೆಗೆ ಮಂದನಗೆಯನ್ನು ಚೆಲ್ಲಿದಂತಾಯಿತು! ತಾಯಿಗೆ ಕೈಮುಗಿದು, ಹೆಗಲ ಮುತ್ತಿನ ಬಲೆಯನ್ನು ಗಂಗೆಯ ಮಡಿಲಿಗೆ ಜಲ್ಲನೆ ಎಸೆದ, ಒಳ್ಳೆಯ ಬೇಟೆಯನ್ನು ಬಯಸಿ—

ಹಾಸು ಬಲೆ ಹಾಸ್ಯಾನು ಬೀಸುಬಲೆ ಬೀಸ್ಯಾನು
ಸಣ್ಣ ಬಲೆಯನ್ಹಾಕಿ ಎಳೆದಾನು....

ಏನದು! ಬಲೆ ಹಿಂದೆ ಹಿಂದೆಯೇ ಜಗ್ಗುತ್ತಿದೆ. ತೂಕದ ವಸ್ತು. ಮೊಸಳೆಯೋ? ಮರದ ತುಂಡೊ....? ತುಸು ಮುಂದೆ ಹೋಗಿ, ಧೈರ್ಯ ತಂದುಕೊಂಡು ಇನ್ನೂ ಬಲವಾಗಿಯೇ—

ಸಣ್ಣ ಬಲೆಯನ್ಹಾಕಿ ಎಳೆದನಂಬಿಗರಣ್ಣ
ಚಿನ್ನದ ತೊಟ್ಟಿಲು ಬಲೆಯಲ್ಲಿ!

ಅಚ್ಚರಿಯೇ ಆಯಿತವನಿಗೆ. ಆ ತನ್ನ ಮುದಿಗಣ್ಣುಗಳನ್ನು ನಂಬುವುದಾದರೂ ಎಂತು? ಮತ್ತೆ ಮತ್ತೆ ನೋಡಿದ....ಚಿನ್ನದ ತೊಟ್ಟಿಲು! ಒಳಗೇನಿದೆಯೊ?

ಚಿನ್ನದ ತೊಟ್ಟಿಲಿಗೆ ರನ್ನದ ಶಿವಡಿಗೆ
ತೊಟ್ಟಿಲೊಳಗೊಂದು ಹಸುಳೆಯು

ಹಸುಳೆ! ಮುದ್ದು ಮುಖದ ಬೆಳದಿಂಗಳು ಮೈಯ ಕಾಂತಿಯ ಚೆಲುವು

ಸೂಸುವ ಹಸುಳೆ ! ಇದೇನು ಪವಾಡವೋ–ಗಂಗಯ್ಯ ಬೆರಗಾಗಿ ನಿಂತ ಕ್ಷಣ ಕಾಲ! ಮಕ್ಕಳಿಲ್ಲದೆ ಶೂನ್ಯದ ದಿನಗಳನ್ನು ತಳ್ಳಿದ ತಮ್ಮ ಬದುಕನ್ನು ತುಂಬಲು ಶಿವನ ಅನಿರೀಕ್ಷಿತ ದಿವ್ಯ ವರ. ಜಾಹ್ನವಿಯೇ ಮಗುವಿನ ರೂಪಾಂತು ತನಗೆ ದೊರೆತಂತೆ !... ತನ್ನ ಭಾಗ್ಯ ಬೆಳಕಾಗಿ ಬಂದಿತೆ....!

ಅದೇನು ಸಂಭ್ರಮದಲ್ಲಿ ಅದೇನು ಸಡಗರದಲ್ಲಿ ಮನೆಗೆ ಓಡಿ ಮಡದಿಯನ್ನು ಕರೆದನೋ ಅಂಬಿಗರ ಗಂಗ !

ಅರಬಿ ಹಾಲೂದು ಗಡಿಗೆ ತುಪ್ಪವ ಹಾಕಿ
ಚೆಂದಾಗಿ ಸಾಕೆ ಈ ಶಿಶುವ

ಯಾವುದೋ ಶಿಶು ! ಹಿಗ್ಗಿ ಹಿಗ್ಗಿ ಮುದ್ದಾಡುವ ಪತಿ! ಮಡದಿಗೆ ಏನು ತಾನೆ ಅರ್ಥವಾದೀತು ? ಅವಳ ಕುತೂಹಲ ದೃಷ್ಟಿಗೆ, ಕಾತುರದ ಪ್ರಶ್ನೆಗೆ ಉತ್ತರವೀಯುವ ಅವಕಾಶವೆಲ್ಲಿದೆ ಗಂಗಯ್ಯನಿಗೆ ! ಮಗುವನ್ನು ಮಡದಿಯ ಮಮತೆಯ ತೋಳಿಗಿಟ್ಟು ಏಕೋ ಹೊರಗೆ ಓಡಿದ—

ಕೊರಮರ ಕೇರಿಗೆ ಹೋದನಂಬಿಗರಣ್ಣ
ಮಕ್ಕಳು ಮಲಗುವ ತೊಟ್ಟಿಲ—ಕೊಡಿರವ್ವ
ನನ್ನ ಮಡದ್ಯೊಂದು ಶಿಶುವ ಹಡೆದವಳೆ

ಹಾಗೆಯೇ

ಕುಂಬಾರ ಕೇರಿಗೆ ಹೋದನಂಬಿಗರಣ್ಣ
ಮಕ್ಕಳಿಗ್ಹಾಲ ಕುಡಿಸುವ—ಕುಡಿಕೆಯ
ಕೊಡಿರವ್ವ ನನ್ನ ಶಿಶುವಿಗೆ

–ಎಂದು ಬೇಡಿತರುವ ಅವನಿಗೆ ತನ್ನ ಮಡದಿಯೇ ಶಿಶುವನ್ನು ಹಡೆದಷ್ಟು ಹಿಗ್ಗು! ಆ ಮಗು ತಮ್ಮದೇ ಎಂಬೊಂದು ಹೆಮ್ಮೆ. ತನ್ನ ಮಗುವಿಗೆ ತೊಟ್ಟಿಲು ಬೇಡವೆ? ಎಲ್ಲವೂ ಬೇಕು. ತನ್ನ ಮೋಹದ ಕುವರಿಗೆ ಏನೆಲ್ಲವನ್ನು ಒದಗಿಸಿದರೂ ಗಂಗಯ್ಯನಿಗೆ ತೃಪ್ತಿಯಿಲ್ಲ....ಎಷ್ಟು ಪರಿಕರಗಳನ್ನು ಕೂಡಿ ಹಾಕಿದರೂ ನೆಮ್ಮದಿಯಿಲ್ಲ.

ಬಡವರ ಬಾಳಿನ ಭಾಗ್ಯಕಿರಣವಾದ ಕೂಸು ಗಂಗೆಯಿಂದ ಉದಿಸಿದವಳಾಗಿ 'ಗಂಗೆ'ಯೆಂಬ ಅಭಿದಾನವನ್ನು ಹೊತ್ತೇ ನಳನಳಿಸಿದಳು. ಪರ್ವತ

ರಾಜನ ಮಗಳಾದರೂ, ಸಕಲ ಸಿರಿ ಸೌಭಾಗ್ಯಗಳ ನಡುವೆ ಗಿರಿಜೆಯಂತೆಯೇ ಬೆಳೆದು ಬೆಳಗುವ ಸನ್ನಿವೇಶದಲ್ಲಿ ಹುಟ್ಟಿ ಬಂದವಳಾದರೂ ವಿಧಿಯ ವಿಕಟವಾದ ವಿಕೃತವಾದ ನಗೆಗೆ ತಕ್ಕಾಗಿ ಗಂಗೆಯು ಮಡಿಲಿನ ತನ್ನ ತಂದೆಯ ಅಕ್ಕರೆಯ ಹಸ್ತಗಳಿಂದಲೇ ಜಾರಿದವಳಾಗಿ ದೈವಯೋಗದಿಂದ ದೈವಭಕ್ತ ಗಂಗಯ್ಯನ ಮನೆಯನ್ನು ಸೇರಿ ಬೆಸ್ತರ ಬದುಕಿನಲ್ಲಿ ಹೊಸ ಜೀವನವನ್ನು ತಂದಳು, ಹೊಸ ಕಾಂತಿಯನ್ನು ತುಂಬಿದಳು ಅಪೂರ್ವ ಚೆಲುವೆ ಗಂಗೆ.

೨

ಒಬ್ಬಳನ್ನು ಹೊನಲ ತೋಳಿಗೆ ನೀಡಿದ ಗಿರಿರಾಜದಂಪತಿಗಳು ಉಳಿದೊಬ್ಬಳು ಮಗಳನ್ನು ಮಮತೆಯಿಂದ ಸಾಕಿದರು. ಗಿರಿಜೆ ರೂಪಲಾವಣ್ಯವತಿಯಾಗಿ ಬೆಳೆದು ನಿಂತಳು. ಅವಳ ಚೆಲುವಿಗೆ ಜನ ಬೆರಗಾದರು ; ಅವಳ ನಯವಿನಯ ಶೀಲ ಸೌಂದರ್ಯಗಳನ್ನು ಕೊಂಡಾಡಿದರು. ಸಿಹಿ ಸೊಲ್ಲು ಪರ್ವತ ಸಾನುಗಳಲ್ಲಿ ಸುಳಿದು, ತಪೋರೂಢನಾದ ಶಿವನ ಕಿವಿಯ ಮೇಲೂ ಚೆಲ್ಲಿತು. ಸತ್ಯಶೈವಾತುರೆಯಾಗಿ ರೂಪೋತ್ಸವದೊಡನೆ ಕಂಗೊಳಿಸುವ ಗಿರಿಜೆಯನ್ನೊಮ್ಮೆ ನೋಡಿ ಬರಬೇಕೆಂಬ ಬಯಕೆ ಕೊನರಿರಬೇಕು ! ತನ್ನ ಸಂಗಾತಿಯನ್ನು ಕಳೆದುಕೊಂಡು ಇನ್ನೆಷ್ಟು ದಿನ ಈ ಏಕಾಂತದ ಯಾತನೆಯನ್ನು ಸಹಿಸಿಯಾನು ಪರಮೇಶ್ವರ ! ಜೋಳಿಗೆಯನ್ನು ಹೆಗಲಿಗೆ ಹಾಕಿ ಗಾವುದ ಗಾವುದ ದೂರ ನಡೆದು ಬಂದನು ಆ ಗಿರಿಯ ಬೈರಾಗಿ....

ಭಿಕ್ಷಕೆ ಬಂದವರೆ ಬಿಟ್ಟಮಂಡೆ ಜಂಗಮರು
ಭಿಕ್ಷೆ ನೀಡಮ್ಮ ಸಿರಿಗಿರಿಜೆ....

ಉಪ್ಪರಿಗೆಯಮೇಲೆ ಹೂ ಕಟ್ಟುವ ಗಿರಿಜೆ ಮಿಂಚಿನಂತೆ ಮೇಲೆದ್ದಳು, ತಾಯಿಯ ಕರೆಯನ್ನು ಕೇಳಿ ! ಮುಂಜಾವಿನಲ್ಲಿಯೇ ಮನೆಯ ಮುಂದೆ ಸುಳಿದ ಬಿಟ್ಟಮಂಡೆಯ ಜಂಗಮರಾರು? ಸಹಜ ಕುತೂಹಲ. ಸುಪ್ರಭಾತದಲ್ಲಿ ಮಹಾತ್ಮರ ಆಗಮನ. ಅವರಿಗೆ ಭಿಕ್ಷೆನೀಡಿ ಧನ್ಯಳಾಗುವ ಆಕಾಂಕ್ಷೆ....ಗಿರಿಜೆ ಉಪ್ಪರಿಗೆಯ ಮೇಲಿನಿಂದ ಹಾಗೆಯೇ ಇಣಕಿ ನೋಡಿದಳು....ಒಮ್ಮೆ ಬೆಚ್ಚಿ ಹಿಂದೆ ಸರಿದಳು. 'ಜಿಡ್ಡು ಮೈಯಿನ, ಬೆಳೆದ ಗಡ್ಡದ, ಸುಕ್ಕಗೆನ್ನೆಯ ಜಂಗಮನಲ್ಲ.... ಅವಳು ಕಂಡು ಬೆವರಿದುದು ಕುಡಿಮೀಸೆಯ ಆಕರ್ಷಕ ಮೈಕಟ್ಟಿನ ಹೊಳೆವ

ವದನದ ಕೆದರಿದ ಜಡೆಯ ತರುಣ ಬೈರಾಗಿ

ಭಿಕ್ಷಕೆ ಮುಕ್ಕಣ್ಣ ತೆತ್ತೈಸಿ ನಿಂತವರೆ
ಉಪ್ಪರಿಗೆ ಮೇಲೆ ಸಿರಿಗಿರಿಜೆ— ಮುಖನೋಡಿ
ಅವರು ಭಕ್ಷಾದಂಬಲವ ಮರೆತಾರು !

ಉಪ್ಪರಿಗೆಯ ಮೇಲಿನ ಕಾತರದ ನೋಟದೊಡನೆ ಹರನ ಪ್ರೇಮದೃಷ್ಟಿ ಅರೆಕ್ಷಣದಲ್ಲಿ ಸಂಗಮವಾಗಿ ವಿವಿಧ ಭಾವತರಂಗಗಳೆದ್ದವು. ನಿಂತ ನೆಲ ಕ್ಷಣ ಕ್ಷಣಕ್ಕೆ ಕರಗಿ ಯಾವುದೋ ಸ್ವಪ್ನಲೋಕ ಕಣ್ಣೆದುರಿಗೆ ಸುರುಳಿಹೊಡೆದಂತಾಯಿತು ! ಗಿರಿಜೆಯ ಚೆಲುವನ್ನು ಹೀರಿದ ಆ ಕಂಗಳು ಅರಳಿ ನಿಂತವು. ಮನ ತಲ್ಲಣಗೊಂಡಿತು ! ತಾಯಿಯ ಆಣತಿಯನ್ನು ಮೀರಲಾರದೆ ಭಿಕ್ಷೆಯನ್ನು ತಂದ ಗಿರಿಜೆಯ ಸುಳಿವಾದೀತೆ ಅವನಿಗೆ !

ಕೋರಣ್ಯಕ್ಕೆಂದು ಶಿವರಾಯ ತೆರಳವರೆ
ಬಾಗಿಲಂಚಿನಲ್ಲಿ ಸಿರಿಗಿರಿಜೆ— ಮುಖನೋಡಿ
ಕೋರಣ್ಯದ ಸೊಲ್ಲ ಮರೆತಾರು

ಭಿಕ್ಷೆಯೊಡನೆ ಬಂದು ತನ್ನೆದುರಿನಲ್ಲಿ ದೃಷ್ಟಿಯನ್ನು ಎದುರಿಸಲಾರದೆ ಸಸು ನಾಚಿ ನಿಂತ ಚದುರೆಯ ಮುಖವನ್ನೊಮ್ಮೆ ನೋಡಿ—ಮಂದನಗೆಯ ಮಂದಾರ ವೊಂದನ್ನು ಅವಳಿಗೆ ಮುಡಿಸಿದಾಗ—ಮುಂದೆ ನೀಡಿದ ಮಂಗಳಕರಗಳಿಂದ ಭಿಕ್ಷೆಯನ್ನು ಕೊಳ್ಳಲೇಬೇಕಾಯಿತು, ಪ್ರೇಮಭಿಕ್ಷೆಗೆ ಬಂದ ಜಗದೀಶ್ವರ ! ಹಣೆಗೆ ಭಸ್ಮದ ಬೊಟ್ಟಿಟ್ಟು ಅತ್ತ ಸರಿದಾತ ಮತ್ತೆ ತಿರುಗಿ ಎಂತಹುದೋ ತುಂಟ ನೋಟವನ್ನು ಬೀರಿ ಮರೆಯಾದಾಗ ಗಿರಿಜೆ ಆ ಗಂಭೀರಗತಿಯ ತರುಣ ಯತಿಯನ್ನು ಕಣ್ತುಂಬ ನೋಡಿದಳು. ಯಾರಿವನು ಈ ಮಾಯಕಾರ ? ಸೋಜಿಗವೆನಿಸಿತು ಆ ಅನುಭವ ! ಕ್ಷಣಾರ್ಧದಲ್ಲಿ ತನ್ನ ಹೃದಯವನ್ನು ಸೂರೆಗೊಂಡು ಸಾಗಿದನೆ ಆ ಸುಂದರ ! ಉತ್ಸಾಹ ತುಳಿಕಿ ತಾಯಿಯ ಬಳಿ ಓಡಿದಳು ಗಿರಿಜೆ.

ಸಾಲು ಕಿನ್ನರಿ ಮೇಲಾದ ಸುಲಿಪಲ್ಲು
ನೋಡಿರವ್ವಯ್ಯ ಇವರಾರು— ಪರುವತದ
ಸಾಲು ಮಂಟಪದ ಶರಣರು ।

ಗಿರಿಮಾಜಿ ಮೆಲ್ಲನೆ ಮುಡಿಯೆತ್ತಿ ಮಗಳ ಮುಖವನ್ನೊಮ್ಮೆನೋಡಿದಳು.

ಅವಳ ಇಂಗಿತವನ್ನರಿತು ಮನದಲ್ಲಿಯೇ ನಕ್ಕಳು. ಶಿವಾರ್ಪಿತವಾಗಲಿರುವ ಹೃದಯದ ಮೇಲೆ ಕಳಂಕದ ಚಿಹ್ನೆಯೆ ? ಯಾರೋ ಬೀದಿಯ ಬೈರಾಗಿಗೆ ಗಿರಿಜೆ ಮನ ಸೋತಳೇ ?

ಅನ್ನದ ಆಸಿಲ್ಲ ಹೊನ್ನಿಲ್ಲ ಬಯಕಿಲ್ಲ
ಸ್ವಾಮಿ ಶಿವರಾಯ್ನ ಗುಣವಿಲ್ಲ – ಗಿರಿಜಮ್ಮ
ನೀ ಹೆಂಗೆ ಮನಸೋತೆ ಅವನಿಗೆ !

ಗಿರಿಜೆ ತಬ್ಬಿಬ್ಬಾದಳು ; ತನ್ನ ಪೀಠಿಕೆಯನ್ನು ತಾಯಿ ಅರ್ಥ ಮಾಡಿಕೊಂಡಂತಿದೆ ! ಆದರೇನು ಆ ಜಂಗಮನು ಬೀರಿ ಹೋದ ಪ್ರಭಾವಮುದ್ರೆಯ ಕಾವು ಆರುವ ಮುನ್ನ ಅವಳ ಜಿಹ್ವೆಯೂ ನಾಲ್ಕು ನುಡಿಯನ್ನಾಡಲು ಹಿಂದೆ ಬೀಳಲಿಲ್ಲ.

ಅನ್ನದ ಆಸ್ಯೆಂಟು ಹೊನ್ನಿನ ಬಯಕ್ಯೆಂಟು
ಸ್ವಾಮಿ ಶಿವರಾಯ್ನ ಗುಣವುಂಟು – ತಾಯಮ್ಮ
ಆ ಸ್ವಾಮಿಗೆ ನ....ನ್ನ....ಕೊ....

ಇದೇನು ನುಡಿಯುತ್ತಿದ್ದಾಳೆ ಗಿರಿಜೆ ? ಪ್ರೇಮೋತ್ಸಾಹದ ಭರದಲ್ಲಿ ಆತುರಾತುರವಾಗಿ ಮನ ಬಂದಂತೆ ನುಡಿಯಬಹುದೆ ? ಇಷ್ಟು ಬೇಗ ಇವಳ ಹೃದಯವನ್ನು ಸೆಳೆದ ಆ ಬೈರಾಗಿ ಯಾರೋ–ತಾನಾದರೂ ಒಮ್ಮೆ ನೋಡಬಾರದಿತ್ತೆ!

ಕಂತೆ ಸಿದ್ಧರಿಗೆ ಎಂತೊಲಿದೆ ಗಿರಿಜಮ್ಮ
ಮಂತ್ರದ ಬುತ್ತಿ ಮಡಿಲಲ್ಲಿ – ಕಟ್ಟಿಕೊಂಡು
ಬರುವಂತ ಸಿದ್ಧರಿಗೆ ಎಂತೊಲಿದೆ

ಪರ್ವತರಾಜನ ಕುವರಿಯಾಗಿ ಸಕಲಸಿರಿ ಸಂಪತ್ತುಗಳ ನಡುವೆ ಅಕ್ಕರೆಯ ಹಕ್ಕಿಯಂತೆ ಬೆಳೆದು, ತಮ್ಮ ಮನದ ಹೆಬ್ಬಯಕೆಗೆ ಅಡ್ಡಿಯಾಗಿ, ಭಿಕ್ಷೆಗೆ ಬಂದ ಬೈರಾಗಿಗೆ ಬೆರಗಾದಳೆ ಮುದ್ದು ಗಿರಿಜೆ ! ಆ ತನ್ನ ಭವ್ಯಕನಸು ನನಸಾಗುವ ದಿವ್ಯ ಮುಹೂರ್ತವನ್ನು ಎದುರು ನೋಡುತ್ತ ದಿನಗಳನ್ನು ಗುಣಿಸುವ ತಾಯಿ ತಂದೆಯರ ಗುಪ್ತಬಯಕೆ ಬಯಲಾಗುವ ಮುನ್ನವೇ ಇವಳ ಮನ ಒಡೆಯಿತು!

ಹಾದೇಲಿ ಬುಣ್ಣೋರು ಬೀದೀಲಿ ಒರಗೋರು
ತ್ಯಾಗದೆಲೆಯಲಿ ತಿರಿದುಂಬೋ । ಗೊರುವರು
ನೀ ಹೆಂಗೆ ಒಲಿದಮ್ಮ ಸಿರಿಗಿರಿಜೆ

ತಾಯಿಯ ಚುಚ್ಚು ಮಾತುಗಳು ಗಿರಿಜೆಯ ಮುಗ್ಧಮನವನ್ನು ಕದಡಿದುವು. ಕಣ್ಣು ತುಂಬಿಬಂದವು. ಯಾವುದೋ ಮಾಯೆಯ ಬಲೆಯನ್ನು ನನ್ನ ಮೇಲೆಸೆದು ಆ ಬೈರಾಗಿ ಆಕರ್ಷಿಸಿ ಹೋಗಿದ್ದಾನೆ. ಅವನ ರೂಪ, ಅವನ ಆ ನೋಟ ಇನ್ನೂ ಇನ್ನೂ, ಕಣ್ಣನ್ನು ಬೆರಗು ಮಾಡುತ್ತಿವೆ. ಇಂತೇಕೆ ತಾಯಿ ತನ್ನ ಮೇಲೆ ಮುನಿದಳು : ನೀನು ಮೆಚ್ಚಿದ ವರನನ್ನು ವರಿಸು ಕಂದ ಎಂದು ಅಕ್ಕರೆಯ ನುಡಿಯಾಡಿದವಳು ಇಂದು ಮನದ ಹಾರೈಕೆಯನ್ನು ಮುಂದಿಟ್ಟಾಗ ಇಂತೇಕೆ ಸಿಟ್ಟುಗೊಂಡಳು !

ಹಾದ್ಯವರ ಹಸೆಮಂಚ ಬೀದ್ಯವರ ಕೈಲಾಸ
ತ್ಯಾಗದೆಲೆ ಚಿನ್ನದ್ದರಿವಾಣ—ತಾಯಮ್ಮ
ಪರುವತದ ಗೊರುವರಿಗೆ ಕೊಡಿಸವ್ವ

ಗಿರಿಜೆಯ ಪೊಂಡುತನಕ್ಕೆ ಗಿರಿಮಾಜಿ ಕೆಂಡವಾದಳು. ತನ್ನೆದುರು ನಿಂತು ಯಾವನೋ ಜಂಗಮನನ್ನು ಮೆಚ್ಚಿ ಕೊಂಡಾಡುವ ಮಗಳನ್ನು ಬಿರುಗಣ್ಣಿನಲ್ಲಿ ನೋಡಿದಳು. ಪರಿಚಾರಿಕೆಯನ್ನು ಕರೆದು ಜಡಪಡಿಸಿದಳು—

ಪಟ್ಟೆಯ ಕಳಕೊಳ್ಳಿ ಬಟ್ಟುಮುತ್ತ ಬಿಚ್ಚುಕೊಳ್ಳಿ
ಅವಳಿಕ್ಕಿದಾಭರಣವ ಅಳಿಕೊಳ್ಳಿ—ಗಿರಿಜೆಯ
ಹಟ್ಟಿಯಿಂದಾಚೆ ಬಿಟ್ಟು ಬನ್ನಿ

ಸಿಟ್ಟಿನಿಂದ ಗುಡುಗಿ ರೊಯ್ಯನೆ ಒಳಗೆ ನಡೆದಳು ಗಿರಿಮಾಜಿ, ರೋಷವುಕ್ಕಿ ಬೇಯುತ್ತ ! ತುಟಿಮೀರಿ ಮಿಂಚಿದ ನುಡಿಗಳಿಗೆ ಗಿರಿಜೆಯೂ ಮಮ್ಮಲ ಮರುಗಿದಳು....ಪ್ರೇಮ ಭರದಲ್ಲಿ ಮೈಮರೆತು ಹೆತ್ತ ಕರುಳಿಗೆ ನೋವನ್ನುಂಟು ಮಾಡಿದ ತನ್ನನ್ನೇ ಶಪಿಸಿಕೊಳ್ಳುತ್ತ ಉಪ್ಪರಿಗೆಯನ್ನು ಹತ್ತಿ ಹಾಸಿಗೆಗೆ ಮುಖ ಮಾಡಿ ಕಣ್ಣೀರಿನಲ್ಲಿ ಮಿಂದಳು ! ಅಷ್ಟಾದರೂ ಆ ಜಂಗಮನ ದಿವ್ಯಮೂರ್ತಿ ಕಣ್ಣೆದುರು ಸುಳಿಯದಿರಲಿಲ್ಲ. ಹೊಳೆವ ಮಡಿಗಾವಿಯ, ಮೇಲೆ ಚರ್ಮಾಂಬರದ, ನೊಸಲು ಬಾಹುಗಳಲ್ಲಿ ಬಳಿದ ಭಸಿತದ, ಕೊರಳ ರುದ್ರಾಕ್ಷಿಯ, ವಿಶಾಲಭುಜದ ಮೇಲೆ ಸುರಳಿಯಾಡುವ ಗುಂಗುರು ಜಡೆಯ........ಆಕರ್ಷಕ ನಗೆಯ, ತುಂಟನೋಟದ ಆ ಭವ್ಯಕಾಯನಿಗೆ....

ನಮ್ಮ ತಾಯಮ್ಮ ಕೊಡರಂತೆ — ಪರ್ವತದ
ಅರವತ್ತು ಜಡೆಯ ಶರಣರಿಗೆ
ನಮ್ಮ ಅಪ್ಪಾಜಿ ನನ್ನ ಕೊಡರಂತೆ — ಪರ್ವತದ
ನೂರೊಂದು ಜಡೆಯ ಶರಣರಿಗೆ

ಬಹು ಹೊತ್ತು ಅತ್ತು ಅತ್ತು ನಿದ್ದೆ ಹೋದಳು ಮುದ್ದು ಗಿರಿಜೆ !

ಆ ಘಟನೆ ನಡೆದು ಕೆಲವು ದಿನಗಳು ಉರುಳಿದವು. ತಾನು ನೋಡಿ ಬಂದ ಕೋಮಲೆಯ ಕಮನೀಯ ಸ್ನೇಹಸೌರಭವನ್ನು ಬಯಸಿ ಹರನ ಹೃದಯ ಭ್ರಮರ ಕಾತರಿಸಿತು. ಉತ್ತಮ ಕುಲದಲ್ಲಿ ಹುಟ್ಟಿ ಉತ್ತಮ ಶೈವಾತುರೆಯಾದ ಅವಳನ್ನು ತಾನು ಪರಿಗ್ರಹಿಸದ ಹೊರತು ಮನಕ್ಕೆ ನೆಮ್ಮದಿಯಿಲ್ಲ ಎನಿಸಿತು ಶಿವರಾಯನಿಗೆ. ತನ್ನ ಪ್ರಿಯ ದಾಕ್ಷಾಯಿಣಿಯನ್ನು ಮರೆಯಲು ಗಿರಿಜೆಯ ಸಂಗವನ್ನೆಳೆಸಿತು ಅವನ ಮನ.... ಇಂತಾಗಿ–

ಗಿರಿಜೆಯ ಕೇಳೋಕೆ ಗಿರಿಯ ಮಲ್ಲಯ್ಯ ಹೊರಟ
ಗಿರಿಜೆ ಉದ್ದದ ಹೊನ್ನ ಅಳಕೊಂಡು—ಸುರಕೊಂಡು
ಸಾಲು ಬಂಡೀಲಿ ಸ್ವಾಮಿ ಹೊರಹೊಂಟ

'ಬರಿಗೈ ಬೈರಾಗಿ'ಗಳೆಂಬ ಅಪವಾದಕ್ಕೆ ತುತ್ತಾಗಿರುವಾಗ ವಧುವನ್ನು ಕೇಳಲು ಹೊರಟ ತಾವೂ ಸಂಪತ್ತನ್ನು ಅವರೆದುರು ಮೆರೆಯಬೇಕು ! ಗಿರಿರಾಜ ಹೆಮ್ಮೆಯಿಂದ ತನ್ನ ಮಗಳನ್ನು ಧಾರೆಯೆರೆದುಕೊಡುವಂತೆ ಬಂಡಿಯ ಹೊನ್ನನ್ನು ಮನೆಯ ಮುಂದೆ ಇಳುಹಬೇಕು.... ಎಂದು ಸಾಲು ಬಂಡಿಗಳೊಡನೆ ಕಾಡು ನಾಡುಗಳನ್ನು ಹಾದು ಪರಮೇಶ್ವರನ ಪರಿವಾರ ಹೊರಟಿದೆ. ಲೋಕನಾಯಕ ಲೋಕಮಾತೆಯನ್ನು ಪರಿಗ್ರಹಿಸಲು ಹೊರಟಿದ್ದಾನೆ. ಜಗತ್ತಿನ ಶುಭ ಸಂದೇಶವನ್ನು ಸಾರುತ್ತ ಸುಯ್ಯಲರು ತೀಡಿದೆ. ಹೊಳೆಗಳು ತಮ್ಮ ಜುಳುಜುಳು ನಾದದಲ್ಲಿಯೇ ಮಂಗಳ ಓಂಕಾರವನ್ನು ಜಪಿಸಿವೆ. ಖಗವಿಂಡು ಹರನನ್ನು ಕೊಂಡಾಡುತ್ತ ಕುಕಿಲಿಡುತ್ತಿವೆ.... ಇದೊ–

ಜಾಣಗಿರಿಯಿಂದ ಜಾರಿಬಂದರು ಮುನಿಗಳು
ರಾಣಿ ಸಿರಿಗಿರಿಜೆ ತರಲೆಂದು — ಜಂಗಮರು
ಹೂವಿಗುಂಗುರವ ಧರಿಸೋರು

ಬೆಟ್ಟಗಾಡುಗಳಲ್ಲಿ, ತಿಟ್ಟು ಬಯಲುಗಳಲ್ಲಿ ಸಂಭ್ರಮದಿಂದ ನಡೆದು ಬಂದ ಶಿವನ ಪರಿವಾರ ಆ ನೆಲೆಗಳನ್ನೆಲ್ಲ ಪವಿತ್ರಗೊಳಿಸಿತು. ಪರ್ವತ ರಾಜನ ನಗರಿ ಸಮೀಪಿಸಿದಂತೆಲ್ಲ ಹೊಸ ಸುದ್ದಿ ಲೋಕದ ಹರ್ಷವನ್ನು ಇಮ್ಮಡಿಸಿತು. ಗಿರಿರಾಜನ ಭಾಗ್ಯವನ್ನು ಸಮಸ್ತರೂ ಕೊಂಡಾಡತೊಡಗಿದರು. ಶಿವನನ್ನು ಸ್ವಾಗತಿಸಲು ತಮ್ಮ ಪ್ರಭುವನ್ನು ಸ್ವಾಗತಿಸಲು ಊರು ಸಿಂಗರವಾಯಿತು. ತಳಿರು ತೋರಣಗಳು ತೂಗಿದವು, ಬೀದಿಯ ಬದಿಗಳಲ್ಲಿ ಜಂಗಮರ ಪರಿವಾರವನ್ನು ನೋಡಲು ಮಂದಿ ಕಿಕ್ಕಿರಿಯಿತು....ಊರೂರಿನಿಂದ ಬಂದು ನೆರೆಯಿತು.

ಕನ್ನೆಯ ಕೇಳೋಕೆ ಚೆನ್ನಮಲ್ಲಯ್ಯ ಬಂದ
ಕನ್ನೇ ಉದ್ದದ ಹೊನ್ನ ಅಳಕೊಂಡು ಸುರಕೊಂಡು

ಶಂಖ ವಾದ್ಯಗಳು ಮೊಳಗಿದವು. ಜೈಕಾರದ ನಡುವೆ ಹರನ ಪರಿವಾರ ಕೆಂಪು ನೀರಿನ ತರಂಗಿಣಿಯಂತೆ ಬೀದಿಯಲ್ಲಿ ಹರಿದು ಗಿರಿರಾಜನ ಅರಮನೆಯ ಪಡಸಾಲೆಯನ್ನು ಸೇರಿತು. ತಮ್ಮೂರಿನ ಕನ್ಯಾಮಣಿಯನ್ನು ಕೇಳಿ ಬಂದಿದ್ದಾರೆ–ತಮಗೆಲ್ಲಾ ಕರೆ ಬಂದಿದೆ ಎಂದು ತಲೆ ನೆರೆತ ಹಿರಿಯ ಮಂದಿಯೂ ಕಲೆಯಿತು. ವೃದ್ಧ ಜಂಗಮನೊಬ್ಬ ಶಿವನ ಅಣತಿಯನ್ನು ಹೊತ್ತು ಬಂದ ಉದ್ದೇಶವನ್ನು ಸೂಚಿಸಿದ–

ಕನ್ನೆ ಉದ್ದದ ಹೊನ್ನ ಅಳಕೊಂಡು ಸುರಕೊಂಡು
ನಿಮ್ಮ ಜಾಣೆ ಪಾರ್ವತಿಯ ಕೊಡಿ ನಮಗೆ

ಕೆಲ ಗಳಿಗೆ ಮೌನ ಸಭೆಯನ್ನು ತಬ್ಬಿತು. ವೃದ್ಧರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಗುಸುಗುಸು ಮಾತಾಡಿಕೊಂಡರು. ಅವರವರಲ್ಲೇ ನಗೆಯನ್ನು ಎರಚಾಡಿದರು. ಒಬ್ಬಾತನ ದನಿ ಕಟಗುಳಿಯಂತೆ ತೇಲಿತು–

ತಾಯಿ ತಂದೇರಿಲ್ಲ ಮೇಲೆ ಬಂಧುಗಳಿಲ್ಲ
ದಾಯಾದೊರಿಲ್ಲ ಗುರುವಿಲ್ಲ– ಶಿವರಾಯ್ಗೆ
ಜಾಣೆ ಗಿರಿಜಮ್ನ ಕೊಡಲೆಂಗೆ

ಮೊದಲ ಮಾತಿನಲ್ಲಿ 'ಅಸ್ತು' ಎಂದಾರೆ ವಧುವಿನ ಬಂಧುಗಳು? ವರನ ಸ್ಥಿತಿಗತಿಗಳನ್ನು, ಬಂಧು ಬಳಗಗಳನ್ನು ತಿಳಿಯಬಾರದೆ ? ಹೊನ್ನನ್ನು ಅಳೆದು

ತಂದ ಮಾತ್ರಕ್ಕೆ ವಧುವನ್ನು ವಿಕ್ರಯಿಸುವರೆ? ಉತ್ತಮ ಸಿರಿ, ಉತ್ತಮ ಬಳಗ, ಉತ್ತಮ ಬಾಳ್ವೆ ನಡೆಸುವ ಸೌಭಾಗ್ಯ–ಇಷ್ಟಲ್ಲದೆ ಶಿವನ 'ಕೀರ್ತಿ'ಯಷ್ಟನ್ನೇ ಮೆಚ್ಚಿ ಗಿರಿಜೆಯನ್ನು ನೀಡಿಯಾರೆ ?

ಆ ಮಾತಿಗೆ ನಗುತ್ತ ಶಿವರಾಯನೇ ಉತ್ತರವೀಯಬೇಕಾಯಿತು—

ತಾಯಿ ತಂದೆಯು ನಾನೆ ಮೇಲಿ ಬಂಧುವು ನಾನೆ
ದಾಯಾದಿ ನಾನೆ ಗುರುನಾನೆ – ಗಿರಿರಾಯ್ರೆ
ನಿಮ್ಮ ಜಾಣೆ ಪಾರ್ವತಿಯ ಕೊಡಿ ನಮಗೆ

ಶಿವರಾಯನ ನುಡಿ ಎಲ್ಲರಿಗೂ ಸಮ್ಮತವೆನಿಸಿರಬೇಕು. ವಿಶಿಷ್ಟ ಬಂಧು ಬಳಗವೂ ತಾನೇ ಆಗಿ 'ಗಿರಿಜೆ'ಯನ್ನು ರಕ್ಷಿಸುವ ಹೊರೆಯನ್ನು ಹೊತ್ತ ಮೇಲೆ ಯಾರಅಡ್ಡಿಯೇನು? ಆದರೆ ವಧುವನ್ನು ನೋಡಬಯಸಿ ಯಾರೊ ಜಂಗಮರು ಗುಂಪಿನಲ್ಲಿ ಗೊಣಗುತ್ತಿದ್ದಾರೆ. ಈ ಪರೀಕ್ಷೆಯೂ ನಡೆಯಲೆಂದು,

ಬಾರೆ ಗಿರಿಜಮ್ಮ ನಿನ್ನ ಭಾವ ನೋಡ್ಯಾರಂತೆ
ಸಾಲು ಮಂಟಪದ ಶರಣರು

ಮಗಳನ್ನು ಕೈ ಹಿಡಿದು ಗಿರಿರಾಜನೇ ಕರೆತರುವಾಗ ಮತ್ತೆ ಸಭೆಯಲ್ಲಿ ಮೌನವಾಡಿತು. ಜಡೆಯ ಜಂಗಮರು ಹರಸ ಮಡದಿಗೆ ಶರಣೆಂದರು. ಮನದಲ್ಲಿಯೇ ಮಣಿದರು. ಶಿವನೊಪ್ಪಿಗೆಗೆ ಮುನ್ನ ಶಿವನ ಪರಿವಾರ ಒಪ್ಪಿದಂತಾಯಿತು. ಯಾವ ನೋಟದಲ್ಲಿಯೋ ಗುಂಪಿನ ನಡುವೆ ಎದ್ದು ತೋರುತ್ತಿದ್ದ ತನ್ನ ಚೆಲುವ ಜಂಗಮನ ಮುಖವನ್ನೂ ಗಿರಿಜೆ ಗುರುತಿಸಿ ಹಿಗ್ಗಿದ್ದಳು.

ಎಲ್ಲರ ಒಪ್ಪಿಗೆಯೂ ಮುಗಿದಂತಾದರೂ ಮಗಳ ಭವಿಷ್ಯವನ್ನು ನಿರ್ಧರಿಸಬೇಕಾದವಳು ತಾಯಿ; ಆಕೆಯೊಪ್ಪದೆ ಮುಂದಿನ ಕಾರ್ಯ ಜರುಗುವಂತಿಲ್ಲ. ತನ್ನ ಸಮ್ಮತಿಯನ್ನು ಕೇಳಬಂದವರಿಗೆ 'ಒಪ್ಪಿದೆ' ಎಂದು ದುಡುಕಿ ನುಡಿದಾಳೆ ಗಿರಿಮಾಜಿ !

ಶಿವರಾಯ ಇರುವ್ಹೋದು ಇಲ್ಲಿಗೆ ಮೂಗಾವ್ದ
ಶಿವರಾಯ್ನ ತಂಗಿ ಮಲುಗವ್ವ–ಇರುವ್ಹೋದು
ಕಲ್ಲುಮಾಳಿಗೆ ಕೈಲಾಸ....

ದೂರದ ಊರು; ಕಲ್ಲುಮಾಳಿಗೆಯಲ್ಲಿ ವಾಸಿಸುವ ಬಂಧು ಬಳಗ !

ಅಂಥವರ ನಂಟನ್ನು ಬೆಳಸಿದರೆ ಹೇಗೆ ? ತನ್ನ ಮಗಳ ಸೌಖ್ಯದ ಹೊಣೆ ತನ್ನದಲ್ಲವೆ? ಮನದಾಳದ ಒಪ್ಪಿಗೆಯನ್ನು ನಸುನಗೆಯಲ್ಲೇ ಚಿಮ್ಮುತ್ತ ಕಾಳು ಕೇರುವ ಗಿರಿಮಾಜಿ ಹಾಗೆ ನುಡಿದರೂ ಮತ್ತೆ ಜಂಗಮ–

ಮಾಳಿಗೆ ಮೇಲೆ ಕಾಳಕೇರುವ ತಾಯಿ
ವಾಲೆ ಕಿವಿಯೋಳೆ ಗಿರಿಮಾಜಿ – ಶಿವರಾಯ್ಗೆ
ಗಂಡಾಗುಂಡಿ ಜೇಡ ಕೊಡು ಮಗಳ

ಎಂದು ಒತ್ತಾಯಪಡಿಸಿದ ಮೇಲೆ ತನ್ನ ಪತಿಯ ಮುಖವನ್ನು ನೋಡಿ ನಸುನಕ್ಕಳು. ಕೊನೆಗೂ ಅವಳ ಕನಸು ನನಸಾಯಿತು. ತನ್ನ ಪೂಜೆ ಫಲಿಸಿತು. ಗಿರಿಜೆಗೆ ಅಂದು ಬಂದ ಜಂಗಮರಾರೆಂದು ತಿಳಿದಮೇಲಂತೂ ಹರ್ಷದ ಹೊನಲೇ ಹರಿಯಿತು. ಕೊನೆಗೂ ಅವಳು ಮೆಚ್ಚಿದ ವರನನ್ನೇ ಕೂಡುವಂತಾಯಿತು !

ಶಿವ ಪಾರ್ವತಿಯರ ಕಲ್ಯಾಣಕ್ಕೆ ಎಲ್ಲ ಸಿದ್ಧತೆಗಳೂ ನಡದವು.

ನರರೆಲ್ಲ ನಂದಿಯೇರಿ ಸುರರೆಲ್ಲ ರಥವೇರಿ
ಜನರೆಲ್ಲ ಕಾಲ ನಡಿಗೇಲಿ....

ಬಂದು ಹರ ಗಿರಿಜೆಯರ ಮದುವೆಯ ವೈಭವದಲ್ಲಿ ಭಾಗಿಗಳಾದರು.

ಅರುಸಿಣದಿ ಮಿಂದು ಮಡಿಯುಟ್ಟು ಗಿರಿಜಮ್ಮ
ಪುರುಷರಿಗಾರತಿ ಬೆಳಗೋದ....

ಕಂಡು ಕಂಡು ಜನ ಹಿಗ್ಗಿದರು, ಲೋಕಕಲ್ಯಾಣ ಸಾಧಿಸಿತೆಂದು ಜೈಕಾರ ಮಾಡಿದರು ; ಹರ್ಷ ಆಮೋದಗಳು ಎಲ್ಲೆಡೆಯೂ ತುಳುಕಾಡಿದವು. ಆದರೆ ಹೆಂಗಸರ ನಡುವೆ ಕುಳಿತ ಗಿರಿಮಾಜಿಯ ಕಣ್ಣಂಚಿನಲ್ಲಿ ಹನಿಯೊಂದು ಇಣುಕಿತು. ಗಿರಿಜೆಯೊಡನೆ ಹುಟ್ಟಿದರೂ ಗಂಗೆಯ ಪಾಲಾಗಿ ಏನಾಗಿಯೋ ಎಂತಾಗಿಯೋ ಮಾಯವಾದ ಆ ಶಿಶುವನ್ನು ನೆನೆದು ತಾಯ ಕರುಳು ಕೊರೆದಿರಬೇಕು ! ಇಬ್ಬರು ಮಕ್ಕಳನ್ನೂ ವೈಭವದಿಂದ ಶಿವನಿಗೆ ಧಾರೆ ಎರೆದುಕೊಡುವ ಭಾಗ್ಯವನ್ನು ನೋಡುವ ಹೆಮ್ಮೆ ಅವರ ಪಾಲಿಗಿಲ್ಲವಾಯಿತೆ !

೩

ಹರಗಿರಿಜೆಯರು ಕೈಲಾಸದಲ್ಲಿ ಹೊಸ ಸಂಸಾರವನ್ನು ಹೂಡಿ ಕೆಲವು ದಿನಗಳು ಉರುಳಿದವು. ಹೊಸ ಮಡದಿಯೊಡನೆ ಸುಖದ ದಿನಗಳನ್ನು ಕಳೆದ ಶಿವನಿಗೆ ಏಕೋ ಮರ್ತ್ಯದ ನೆನಪಾಯಿತು. ಲೋಕ ಸಂಚಾರ ಹೋಗಿ ಬರುವ ಬಯಕೆ ತಲೆದೋರಿತು. ಮುದ್ದಿನ ಮಡದಿ ಪಾರ್ವತಿಗೆ ಯಾವುದೋ ನೆಪ ಹೇಳಿ ಆದಷ್ಟು ಬೇಗ ಬಂದುಬಿಡುವುದಾಗಿ ನಂಬಿಸಿ ಶಿವರಾಯ ಯಾತ್ರೆಯನ್ನು ಕೈಗೊಂಡ.

ಇತ್ತ ಬೆಸ್ತರ ಮನೆಯ ಭಾಗ್ಯದ ಕಿರಣ ಗಂಗೆ ಯುವತಿಯಾಗಿ ಸೌಂದರ್ಯದ ಅಧಿದೇವಿಯಾಗಿ ಬೆಳೆದಳು. ಅಂಥ ರೂಪವತಿಗೆ ತಮ್ಮ ಕುಲದಲ್ಲಿ ಯಾವ ವರನನ್ನು ಹುಡುಕಿಯಾನು ಗಂಗಯ್ಯ. ಹಗಲಿರುಳೂ ಆ ದಂಪತಿಗಳಿಗೆ ಅದೇ ಯೋಚನೆಯಾಯಿತು. ತಮಗೆ ಆ ಅಪೂರ್ವನಿಧಿಯನ್ನು ಕರುಣಿಸಿದ ಹರನೇ ಅವಳಿಗೆ ವರನನ್ನು ದೊರಕಿಸಲಿ ಎಂದು ಸುಮ್ಮನಾದರು. ಕಾಲಚಕ್ರ ರಭಸವಾಗಿಯೇ ಓಡತೊಡಗಿತು....

ಹದಿನಾಲ್ಕು ವರ್ಷ ತುಂಬಿತು ಗಂಗಮಗೆ

ಹದಿನಾಲ್ಕರ ಈ ನವಯುವತಿ ಬಿಂದಿಗೆಯನ್ನು ಕೊಂಡು ಒಂದು ದಿನ ಹಳ್ಳಿಯ ನೆರೆಯ ನದಿಗೆ ಬಂದಿದ್ದಾಳೆ. ಗಂಗಯ್ಯ ಮಡದಿಯೊಡಗೂಡಿ ಎತ್ತಲೋ ಬೇಟೆಗೆ ತೆರಳಿದ್ದಾನೆ. ಊರಿನಲ್ಲಿಯೂ ಜನ ಅತ್ತಿತ್ತ ಕಾರ್ಯೋನ್ಮುಖರಾಗಿ ಹೊರಟು ಹೋಗಿದ್ದಾರೆ. ನದಿಯ ಬಳಿಯೂ ಯಾರ ಸುಳಿವೂ ತೋರದು....ಈ ಸುವೇಳೆಯಲ್ಲಿಯೆ ಯಾತ್ರಾರ್ಥಿ ಶಿವರಾಯ ನದಿಯ ತೀರವನ್ನು ಸೇರಬೇಕೆ !

ಅಂಬಾರದಿಂದ ತಂಬೂರ ಶಿವ ಬಂದ
ಗಂಗೇಲಿ ನೀರಮೊಗೆಯೋಳ—ಬಾಲೆಯ ಕಂಡು
ಅವರು ಹಾದಿ ಅಂಬಲವ ಮರೆತಾರು

ಇನ್ನೆಲ್ಲಿಯ ಪಯಣ ! ನದಿಯ ಆಚೆಯ ದಡದಲ್ಲಿ ಆ ಊರಿಗೆ ಬಂದವನಂತೆ ಪರಮೇಶ್ವರನ ದಾರಿ ಬದಲಿತು. ನದಿಯಲ್ಲಿ ಬಾಗಿ ನೀರು ಮೊಗೆಯುತ್ತಿದ್ದ ಗಂಗೆ ಏಕೋ ಮುಡಿಯೆತ್ತಿ ಅತ್ತ ನೋಡಿದಳು ! ಇದೇನು ಅಚ್ಚರಿ! ಅಪೂರ್ವ ಮೈಕಾಂತಿಯ, ಆಕರ್ಷಕ ಚೆಲುವಿನ, ಸುಂದರ ಜಂಗಮನೊಬ್ಬ ತನ್ನ

ಕಡೆ ಮುಂದನಗೆಯನ್ನು ಬೀರುತ್ತಿದ್ದಾನೆ ! ತನ್ನ ನೋಟದಲ್ಲಿ ಯಾವುದೋ ಅರ್ಥವನ್ನು ಬೆರಸಿ ಚಿತ್ತವನ್ನು ಸೆಳೆಯುತ್ತಿದ್ದಾನೆ !

ಗಂಗೇಲಿ ನೀರ ಬಾಗಿ ಮೊಗೆಯುವ ಹೆಣ್ಣೆ
ಶಿವಶರಣೆ ಯಾರ ಮಗಳಮ್ಮ ?

ಅತ್ತಣಿಂದ ಮೃದು ಮಧುರ ಪ್ರಶ್ನೆಯೊಂದು ತೇಲಿಬಂದು ಗಂಗೆ ತಬ್ಬಿಬ್ಬಾದಳು. ತನ್ನನ್ನು ನುಡಿಸಲು ಯತ್ನಿಸುತ್ತಿದ್ದಾನೆ ಈ ಹಾದಿಹೋಕ. ತನ್ನ ನುಡಿಯಲ್ಲಿ ಯಾವುದೋ ಮೋದವನ್ನು ತುಂಬಿ, ಏಕೋ ನಸುನಗೆಯನ್ನು ಚಿಮ್ಮಿ ಪ್ರಶ್ನಿಸುತ್ತಿದ್ದಾನೆ. ಅಪರಿಚಿತ ತರುಣಿಯನ್ನು ನುಡಿಸುವ ಉದ್ಧಟತನ ವೇಕೆ ಈ ಬೈರಾಗಿಗೆ ?

ಯಾರ ಮಗಳಾದರೆ ನಿಮಗೇನು ಮಾಶಿವನೆ
ಹೋಗಯ್ಯ ನಿಮ್ಮ ಹಾದಿಗೊಂಡು !

ಗಂಗೆಯ ಮಾರ್ನುಡಿಗೆ ಪರಶಿವ ತಲೆದೂಗಿದ. ಅದೇನು ವಯ್ಯಾರ ಈ ಕೋಮಲೆಯ ಕಂಠದಲ್ಲಿ ! ಶಿವ ಸುಮ್ಮನಾದಾನೆ ?

ಗಂಗೇಲಿ ನೀರಮೊಗೆಯೋಳೆ ಎಲೆ ಚೆಲುವೆ
ನಿನ್ನ ಹೆಸರ್ಹೇಳೆ ನಿಮ್ಮ ಕುಲಪ್ಹೇಳೆ !

ಬಿಂದಿಗೆಯನ್ನು ತುಂಬಿ ಮೇಲೆತ್ತುವ ತನ್ನನ್ನು ಮತ್ತೆ ಕೇಳುತ್ತಿದ್ದಾನೆ: ಮತ್ತೆ ಮತ್ತೆ ಮಾತೆತ್ತುತ್ತಿದ್ದಾನೆ. ತನ್ನ ಕುಲಗೋತ್ರಗಳ ಗೋಜೇಕೆ ? ಓಹ್ ! ಹೆಸರನ್ನು ಬೇರೆ ಹೇಳಬೇಕೆ ? ಉತ್ತಮ ಕುಲದವಳಲ್ಲ ಎಂದೇನಾದರೂ ಈ ಪ್ರಶ್ನೆಯೇ ?

ಯಾವ ಕುಲವಾದರೆ ಏನು ಕೊಟ್ಟೆ ಮಾಶಿವನೆ
ಹೋಗಯ್ಯ ನಿಮ್ಮ ಹಾದಿಗೊಂಡು !

ತಾನೇನು ಕೇಳಿಬಿಟ್ಟಳು ಗಂಗೆ ! 'ಏನು ಕೊಟ್ಟೀಯೇ ?' ಎಂದು ಬಿಡುವುದೆ ? ತುಟಿ ಕಚ್ಚಿ ಮಧುರಹಾಸವನ್ನು ಚಿಮ್ಮಿ ತಲೆತಗ್ಗಿಸಿದ ಅವಳತ್ತ ಪರಶಿವ 'ಎನ್ನನ್ನೇ ಕೊಟ್ಟೇನು' ಎನ್ನುವಂತೆ ದೃಷ್ಟಿಬೀರಿದ. ಹೊರಡಲು ಅತ್ತ ಇಟ್ಟ ಹೆಜ್ಜೆಗೆ ಮತ್ತೊಂದು ಪ್ರಶ್ನೆ ತಡೆಯಾಯಿತು—

ಹಾರುವರ ಮಗಳೇನೆ ಹರದರಿಗೆ ಸೊಸೆಯೇನೆ
ನೀ ಕುಲದಲ್ಲಿ ಅಂಬಿಗರ ಮಗಳೇನೆ !

ಆದೀಗ ಹರನಿಗೆ ಸಂಶಯ. ಅಂಬಿಗರ ಕುಲದಲ್ಲಿ ಇಂಥ ಕಡುಚೆಲುವೆ ಹುಟ್ಟಿಬರಲು ಸಾಧ್ಯವೆ ? ಶಿವನ ನುಡಿ ಗಂಗೆಯ ಮುಖಕ್ಕೆ ರಂಗನ್ನೆರಚಿತು. ಪ್ರಶ್ನೆಗಳು ಹೃದಯದ ಹತ್ತಿರ ಹತ್ತಿರಕ್ಕೆ ಜಗಿದು ಯಾವ ಯಾವ ಭಾವ ತುಮುಲಗಳನ್ನೋ ತಂದು ನೇಯುತ್ತಿವೆ....

ಹಾರುವರ ಮಗಳಲ್ಲ ಹರದರಿಗೆ ಸೊಸೆಯಲ್ಲ
ಕುಲದಲ್ಲಿ ಆಂಬಿಗರ ಮಗಳೇಯ – ಮಾಶಿವನೆ
ಹೋಗಯ್ಯ ನಿಮ್ಮ ಹಾದಿಗೊಂಡು

ತನ್ನನ್ನು 'ಹೋಗು ಹೋಗು' ಎಂದು ನುಡಿಯುತ್ತಿದ್ದರೂ ತಾನು ಮಾತ್ರ ಹೆಜ್ಜೆಯನ್ನು ಕೀಳದೆ ನಿಂತಿದ್ದಾಳೆ ಆ ಮುಗ್ಧೆ. ಉತ್ತರಗಳನ್ನೂ ಚಾತುರ್ಯದಿಂದಲೇ ನೀಡುತ್ತಿದ್ದಾಳೆ. ಅವಳ ಮಾತು ಮಾತಿಗೂ ಶಿವನ ಹೃದಯ ಅರಳಿ, ಮನಸ್ಸು ಮೋದಗೊಳ್ಳುತ್ತಿದೆ. ಪ್ರಶ್ನೆಗಳೆಲ್ಲಾ ಮುಗಿ ದಂತಾಯಿತು. ಮತ್ತೇನನ್ನು ಕೇಳಿಯಾನು ?

ಅಪ್ಪ ನಿನಗಿಲ್ಲ ಅವ್ವ ನಿನಗಿಲ್ಲ
ಮತ್ತೊಬ್ಬಳು ಬಾಲೆ ನನಗಿಲ್ಲ....

ಎಂದು ಕೊನೆಯದಾಗಿ ನುಡಿದಾಗ ಆ ಯುವಕ ಜಂಗಮನ ಸಂಚು ಇದೀಗ ಸ್ಪಷ್ಟವಾಯಿತು ಗಂಗೆಗೆ ! ಈ ಚೆಲುವನಾರು ? ಎಲ್ಲಿಂದ ಬಂದನು ? ತನ್ನನ್ನೇ ಅರಸಿ ಬಂದನೆ ? ಮೈ ಜುಮ್ಮೆನ್ನಿತು ಅವಳಿಗೆ. ಅದೆಂಥ ಮಧುರ ಅನುಭವವನ್ನು ತರುತ್ತಿದೆ ಆ ನುಡಿ !

ಮತ್ತೊಬ್ಬಳು ಬಾಲೆ ನನಗಿಲ್ಲ ಎಲೆ ನಾರಿ
ಬಂದೊರಗೆ ನನ್ನ ತುರುಬಿಗೆ

ದೈನ್ಯನಾಗಿ ಪ್ರಣಯಭಿಕ್ಷೆಯನ್ನು ಬೇಡಿ ನಿಂತ ಆಗುಂತಕನ ಮುಖವ ನ್ನೊಮ್ಮೆ ನೋಡಿದಳು ಗಂಗೆ. ಇವನಾರ ಸುಪುತ್ರನೋ–ಯಾವ ಶ್ರೇಷ್ಠ ಕುಲ ದವನೋ ! ತನ್ನ ಪ್ರೇಮಕ್ಕಾಗಿ ಎಲ್ಲವನ್ನೂ ತ್ಯಾಗಮಾಡಿಯಾನೆ ?

ನಳ್ಳಿ ಹಿಡಿಯೋರು ನಾವು ಮೀನು ಮಾರೋರು ನಾವು
ನಮಗೊಡವೆ ನಿಮಗ್ಯಾಕೆ ಶಿವರಾಯ

ಶಿವನ ಹೃದಯ ಕರಗಿತು. ನಿರ್ಮಲ ಪ್ರೇಮಮಧು ಯಾವ ಹೂವಿನಲ್ಲಿದ್ದರೇನು ? ಕುಲ ಗೋತ್ರಗಳನ್ನೆಣಿಸುವುದೆ ಹಾರಿಬರುವ ದುಂಬಿ. ಗಂಗೆಯನ್ನು ಅವನು ಮೆಚ್ಚಿದ್ದಾನೆ. ಅವಳ ಅಸದೃಶ ಸೌಂದರ್ಯಕ್ಕೆ, ವೈಯ್ಯಾರದ ನಡೆಗೆ, ಬಿಚ್ಚುನುಡಿಯ ಸ್ವಚ್ಛಮನಕ್ಕೆ ಮಾರುಹೋಗಿದ್ದಾನೆ; 'ಮತ್ತೊಬ್ಬಳು ಮಡದಿ ನನಗಿಲ್ಲ' ಎಂಬ ದೊಡ್ಡ ಸುಳ್ಳನ್ನೂ ಆಡಿಸಿದೆ ಆ ಪ್ರೇಮೋನ್ಮಾದ.

ನಳ್ಳಿ ಚೀಲವ ತಾರೆ ಒಳ್ಳೆ ಗಡಿಗೆಯ ತಾರೆ
ಬಂದೋರಗೆ ನನ್ನ ತುರುಬಿಗೆ

ಹೌದು ಗಂಗೆಯೊಬ್ಬಳು ತನ್ನೊಡನಿದ್ದರೆ ಅವರ ಕುಲದ ಕಸುಬನ್ನೇ ಮಾಡಿಯಾನು ; ಅವರಂತೆಯೇ ಬದುಕನ್ನು ಮಾರ್ಪಡಿಸಿಕೊಂಡಾನು. ಆ ರೂಪವತಿಯ ಜೊತೆಯಲ್ಲಿ ಸೊಗದ ಬಾಳನ್ನು ಮಾಡುವ ಹರನ ನಿಶ್ಚಯ ಗಂಗೆಯ ಹೃದಯವನ್ನು ಕ್ಷಣಾರ್ಧದಲ್ಲಿ ಗೆದ್ದಿತು !

ಅಪ್ಪಾಗೆ ಹೇಳಿಲ್ಲ, ಅವ್ವಾಗೆ ಹೇಳಿಲ್ಲ
ಮತ್ತೆಂಗೆ ಬರಲೋ ಮಾಶಿವನೆ

ಎಂದು ಶಂಕಿಸಿದಳಾದರೂ ಅವನನ್ನು ಕೂಡಲು ತನ್ನದೇನೂ ಅಡ್ಡಿಯಿಲ್ಲವೆಂಬುದನ್ನು ವ್ಯಕ್ತಪಡಿಸಿದಳು. ಶಿವ ನದಿಯನ್ನು ದಾಟಿ ತನ್ನ ನವವಧುವನ್ನು ಸಂಧಿಸಿದ...

ಬಳಿಯಲ್ಲೊಂದು ತಳಿತ ವೃಕ್ಷ ; ಮೇಲೆ ನಾಲ್ಕಾರು ಗಿಣಿಗಳು ಕುಳಿತು ಶಿವ-ಗಂಗೆಯರ ಪ್ರೇಮ ಸಲ್ಲಾಪವನ್ನು ಕೇಳಿ ನಗುತ್ತಿವೆ—

ಆ ಮರಕೆ ಹಾರುತ ಈ ಮರಕೆ ತೂರುತ
ಮಾಗಿದ ಹಣ್ಣ ಮೆಲುವುತ—ಗಿಣಿಗಳು
ನುಡಿಯ ಕೇಳುತ ನಗುತಾವೆ

ಗಂಗೆಯ ಒಲವನ್ನು ಸೆಳೆದುಕೊಳ್ಳುವುದರಲ್ಲೇ ಆಸಕ್ತನಾಗಿದ್ದ ಶಿವ ಗಿಣಿಗಳನ್ನು ಎಲ್ಲಿ ಗಮನಿಸಿಯಾನು ! ಕೆಲಗಳಿಗೆಯಲ್ಲಿಯೇ ಅವು ಎತ್ತಲೋ ಹಾರಿಹೋದವು.

ಹಾಲು ಅನ್ನವ ಬಟ್ಟಲಲ್ಲಿ ಕಲಸಿಟ್ಟು
ಆರಾರು ಲೋಕವ ಹುಡುಕಿದೆ – ಗಿಣಿರಾಮು
ಯಾವ ಲೋಕಕ್ಹೋಗಿ ನೀ ಬಂದೆ ?

ಅಲ್ಲಿ ಕೈಲಾಸದಲ್ಲಿ ತಾನು ಸಾಕಿದ ಗಿಣಿಗಳು ಬರಲಿಲ್ಲವೆಂದು ಪಾರ್ವತಿ ಹಾದಿ ಹಾದಿ ಕಾದು ಸೋತು ತಡವಾಗಿ ಬಂದುದಕ್ಕೆ ರೇಗಾಡಿದಳು. ಶಿವರಾಯ ಯಾತ್ರೆ ಹೊರಟ ಮೇಲೆ ಗಿಣಿಗಳೊಡನಾದರೂ ಸರಸದಿಂದ ಕಾಲಹರಣ ಮಾಡಲೆಳಸಿದ ಅವಳಿಗೆ ಹೀಗೆ ಮಾಡಬಹುದೆ ? ನಾಲ್ಕುಗಿಣಿಯ ಪ್ರಮುಖ ಗಿಣಿರಾಮು ನುಡಿದ....

ಹಾಲು ಅನ್ನದ ಮಾತು ಹಂಗಿರಲಿ ಅಕ್ಕಯ್ಯ
ಶಿವರಾಯ ನಿನ ಮೇಲೆ ಸವತೀಯ – ಗಂಗ್ಯಮನ
ತರುತಾನೆ ತನ್ನ ಜಡೆಯೊಳಗೆ

ಇದೇನು ನುಡಿಯುತ್ತಿದ್ದಾನೆ ಗಿಣಿರಾಮು ! ಗಿರಿಜೆಗೆ ಸಿಟ್ಟು ಬಂದಿತು. ಮನ ಆತಂಕಕ್ಕೊಳಗಾಯಿತು. ಗಿಣಿರಾಮು ಸುಳ್ಳಾಡುವವನಲ್ಲ; ನೆನ್ನಿನಿರುಳು ಅವಳು ದುಸ್ವಪ್ನವೊಂದನ್ನು ಕಂಡು ಬೆದರಿದ್ದಳು; ಹರ ಲೋಕಯಾತ್ರೆಗೆಂದು ಹೊರಟಾಗಲೇ ಶಂಕಿಸಿದ್ದಳು. ಅರೆಕ್ಷಣದಲ್ಲಿ ಕಣ್ಣು ತುಂಬಿಕೊಂಡವು; ಹಾಲು ಅನ್ನದ ಬಟ್ಟಲು ಕೆಳಗೆ ಕುಸಿಯಿತು.

ಹಂಗಂದ ಮಾತಿಗೆ ಹೊಂಟಳು ತೌರಿಗೆ
ನಾ ಸ್ವಪ್ನವ ಕಂಡೆ ಒಡೆದ್ಹೇಳಿ

ಮಗಳ ಅನಿರೀಕ್ಷಿತ ಆಗಮನ ಗಿರಿಮಾಜಿಯನ್ನು ಬೆರಗುಗೊಳಿಸಿತು. ಯಾವುದೋ ಕುಕನಸಿಗೆ ಬೆದರಿ ಬಂದಿದ್ದಾಳೆ. ಕನಸುಗಳನ್ನು ತಿಳಿದು ಹೇಳು ವುದರಲ್ಲಿ ಅನುಭವಿಯಾದ ಅವಳಿಗೆ ಸತ್ಯಗೋಚರವಾಗದಿರಲಿಲ್ಲ ! ನಿಡು ಸುಯ್ದು ಮಗಳನ್ನು ಸಂತೈಸಿ ಹೇಳಿದಳು....

ಆನೆಂಬುದು ಶಿವರಾಯ ನೀರೆಂಬುದು ಗಂಗೆ
ಸೊಂಡಿಲೆಂಬುದು ಕಿರುಜಡೆ – ಸವತೀಯ
ತಂದಾನು ಶಿವರಾಯ ಜಡೆಯಾಗೆ

ಪಾರ್ವತಿ ಬೆಚ್ಚಿದಳು; ಗಿಣಿ ರಾಮುವಿನ ಮಾತನ್ನೇ ತಾಯಿಯೂ ಸಮರ್ಥಿಸಿ ಹೇಳುತ್ತಿದ್ದಾಳೆ. ಶಿವರಾಯ ತನ್ನ ಮೇಲೆ ಸವತಿಯನ್ನು ತರುತ್ತಾನೆ; ತನ್ನನ್ನು ಅಲಕ್ಷ್ಯದಿಂದ ಕಾಣುತ್ತಾನೆ. ತಮ್ಮ ಪ್ರೇಮ ಜೀವನದ ನಡುವೆವಿಷ ವೃಕ್ಷವಾಗಿ ಗಂಗೆ ಹಬ್ಬಿಕೊಳ್ಳುತ್ತಾಳೆ....ಶಿವ ಅವಳಿಗೆ ಮನಸೋತಿರಬೇಕಾದರೆ ತನಗಿಂಗಿಲೂ ಅವಳು ಚೆಲುವೆಯೇ ಆಗಿರಬೇಕು ...ನೂರಾರು ಯೋಜನೆಗಳು ಗಿರಿಜೆಯ ಚಿತ್ತವನ್ನು ಬಗೆಯತೊಡಗಿದುವು. ಕಂಗೆಟ್ಟು....

ಸಿಡಿಮಿಡಿಗೊಳ್ಳುತ್ತ ಕುಡಿಬೆವರನಿಕ್ಕುತ್ತ
ಉಟ್ಟಂಥ ನೆರಿಗೆ ಚೆಲ್ಲುತ್ತ

ಕೈಲಾಸಕ್ಕೆ ಓಡಿ ಬಂದಳು. ಕಣ್ಣೀರನ್ನು ಹರಿಸುತ್ತ ಊಟವನ್ನು ತೊರೆದು ಸೊರಗಿ–

ಹಾಕ್ಯಾಳು ಕದವ ನೂಕ್ಯಾಳು ಅಗಣೀಯ
ಚಿಂತೆ ಮಾಡುತ ಮಂಚಕೊರಗ್ಯಾಳು

ಯಾರೋ ನಡೆದು ಬಂದ ಸದ್ದಾಯಿತು; ಎದ್ದು ಕುಳಿತಳು ಗೌರಿ ಮಂಚದಲ್ಲಿ.

ಹೆಬ್ಬಟ್ಟದಿಂದ ಒಬ್ಬನೆ ಶಿವ ಬಂದ
ಗಕ್ಕನೆ ಗೌರಿ ಕದ ತೆಗೆಯೆ !

ಪತಿಯ ಮಮತೆಯ ದನಿಗೆ ಗಿರಿಜೆ ಸಿಡಿಮಿಡಿಗೊಂಡಳು. ಆದರೆ ಜೊತೆಯಲ್ಲಿಯೇ ಬಂದಿರಬಹುದಾದ ಸವತಿಯನ್ನು ನೆನೆದು ರೋಷಗೊಂಡಳು. ಶಿವರಾಯನ ಆ ಮಮತೆಯ ಕರೆಯಲ್ಲಿ ಅವರ ಪ್ರೇಮಜೀವನದ ಸುರಳಿ ಬಿಚ್ಚಿತು ! ಪುಳಕಗೊಂಡು ನಿಡುಸುಯ್ದಳು–ತಾನು ಮುಡಿದು ಬಿಟ್ಟ ಹೂವನ್ನು ಅವಳು ಮುಡಿಯಲಿ ಎಂದು ಕೊಂಡಳು. ಬಾಗಿಲ ಬಳಿ ಸಾರಿ....

ಕದವ ತೆಗೆದಾಳು ಕೈಯೆತ್ತಿ ಮುಗಿದಾಳು
ತಂದಿಟ್ಟಳೆರಡು ಮಣೆಗಳ

ನಗುನಗುತ್ತ ಒಳಗೆ ಬಂದ ಹರನ ಮುಖ ಎರಡು ಮಣೆಗಳನ್ನು ಕಂಡು ಗಂಟಿಕ್ಕಿತು. ತನ್ನ ರಹಸ್ಯವೆಂತಾದರೂ ಇವಳ ಕಿವಿ ಮುಟ್ಟಿರಬಹುದೆ ?

ಇದೇನೆ ಗಿರಿಜೆ ಮಾತೊಂದು ಮಣೆಯೆರಡು
ನಿನಗಿಬ್ಬರುಂಟೇನೆ ಪುರುಷಾರು ?

ಸಿಟ್ಟಿನಿಂದಲೇ ಗುಡುಗಿದ ಹರನ ಮಾತಿಗೆ ಗಿರಿಜೆ ನಡುಗಿದಳು. ಇದೆಂಥ ಪ್ರಶ್ನೆ ? ಆ ಸಿಟ್ಟಿನ ಹಿನ್ನೆಲೆಯೂ ಅವಳಿಗೆ ತಿಳಿಯದೆ ?

ಅಂಜದಂಜಿದೆ ಅಳುಕಿದೆ ಮಾಶಿವನೆ
ನಿಮಗೊಂದು ನಿಮ್ಮ ಜಡೆಯೊಳಗೆ-ಅಡಗಿರುವ
ಗಂಗ್ಯಮ್ಮಗೊಂದು ಮಣೆಯಾದೋ

ಶಿವನ ಸಿಟ್ಟು ತಣ್ಣಗಾಯಿತು ? ಯಾರಿಂದಲೋ ರಹಸ್ಯ ಬಯಲಾಗಿ ಹೋಗಿದೆ; ಕೋಪತಾಪಗಳು ತನ್ನ ಪ್ರಮಾದವನ್ನು ಬಚ್ಚಿಡಲಾರವು ಎನಿಸಿತವನಿಗೆ. ಜಟೆಯಲ್ಲಿ ಹುದುಗಿ ಕುಳಿತ ಗಂಗೆಗೂ ಸೋಜಿಗ. ಹರ ಎಲ್ಲಿಗೋ ಕರೆತಂದಿದ್ದಾನೆ, ತನಗೆ ಮಡದಿಯಿಲ್ಲವೆಂದು ಹೇಳಿ ಮತ್ತಾರೊ ಚೆಲುವೆಯೊಡನಿಲ್ಲಿ ಸಲಿಗೆಯಿಂದ ನುಡಿಯುತ್ತಿದ್ದಾನೆ ! ತಾನೇಕೆ ಬೈಚಿಟ್ಟುಕೊಳ್ಳಬೇಕು !

ರನ್ನದ ಸಿಕ್ಕಟ್ಟಿಗೆ ಚಿನ್ನದ ಬಾಚಣಿಗೆ
ಹೊನ್ನಿನ ಬಟ್ಟಲಲಿ ಹೊಳೆವೆಣ್ಣೆ-ತುಂಬಿಕೊಂಡು
ನೆತ್ತಿಯ ಬಾಲೆ ಇಳಿದಾಳು

ರೂಪಿನಲ್ಲಿ, ಬೆಡಗು ಬಿನ್ನಾಣದಲ್ಲಿ ತನ್ನನ್ನೇ ಹಿಂದೆ ಹಾಕುವಂತಿರುವ ಆ ಸವತಿಯನ್ನು ಗಿರಿಜೆ ಬೆರಗಿನಿಂದ ನೋಡುತ್ತಿದ್ದಂತೆಯೇ—

ನಿಂಬೆಯ ಹಣ್ಣಿನಂತೆ ಇಳಿದಾಳು ಗಂಗಮ್ಮ
ಬಂದು ಕುಂತಾಳು ತೊಡೆ ಮೇಲೆ

ಗಂಗೆಯ ಈ ಉದ್ಧಟತನ ಗಿರಿಜೆಯ ಹೃದಯಕ್ಕೆ ಬೆಂಕಿ ಇಟ್ಟಂತಾಯಿತು. ತನ್ನೆದುರಿನಲ್ಲಿಯೇ ಪತಿಯ ತೊಡೆಯನ್ನೇರುವ ಅವಳ ಸೊಕ್ಕಿಗೆ ಸಿಡಿಮಿಡಿಗೊಂಡಳು. ತನ್ನನ್ನು ಬಂದು ನಮಸ್ಕರಿಸಿ ಕ್ಷಮಾಪಣೆಯನ್ನು ಕೇಳದೆ ಗರ್ವದಿಂದ ಬೀಗಿದ, ತಿರಸ್ಕಾರದಿಂದ ನೋಡಿದ ಅವಳ ಬಗೆಗೆ ರೋಷ ಉಕ್ಕಿತು. ಗಿರಿಜೆಯ ಮುಖವನ್ನು ನೋಡಿ ಹರ ಕಕ್ಕಾವಿಕ್ಕಿಯಾಗಿ ಕಂಗೆಟ್ಟು ಮುಂದಾಗುವ ಪ್ರಳಯಕ್ಕೆ ದಿಗಿಲುಗೊಂಡು ಪರಿಹಾರವನ್ನು ಯೋಚಿಸುವುದರೊಳಗೇ—

ಅಕ್ಕ ತಂಗೇರಿಗೆ ಹತ್ಯಾತೋ ಗೆಗಳವು !

ಮುಂದೇನು ಮಾಡಿಯ್ಯಾನು ? ಯಾರನ್ನು ಸಮಾಧಾನಗೊಳಿಸಿಯ್ಯಾನು ? ಮೆಲ್ಲನೆ ಹಿಂದೆ ಸರಿದು—

ಕಂಬದ ಮರೆಯಲಿ ಶಿವರಾಯ ನಿಂತುಕೊಂಡು
ಜಗಳಾವ ನೋಡಿ ನಗುತಾನೆ

ಅದೊಂದೇ ಹರನಿಗೆ ಉಳಿದ ಮಾರ್ಗ ? ಯಾರನ್ನು ನುಡಿಸುವ ಗೋಜಿಗೂ ಹೋಗದೆ ಜಗಳ ತಾನಾಗಿಯೇ ನಿಲ್ಲುವವರೆಗೆ ತನ್ನ ಮಡದಿಯರ ಹುಚ್ಚು ಆವೇಶಕ್ಕೆ, ವಿಪರೀತ ವ್ಯಾಮೋಹಕ್ಕೆ ನಕ್ಕು ಆಮೋದಗೊಳ್ಳುವುದೇ ಅವನಿಗುಳಿದ ಹಾದಿ. ಸವತಿಮತ್ಸರ ಕೈಲಾಸದ ಶಾಂತಬದುಕನ್ನೂ ಕಲಕಿಗೊಂದಲದ ಬೀಡನ್ನಾಗಿ ಮಾಡಿದರೇನಂತೆ ! ಲೋಕವನ್ನೇ ಆಳುವ ವಿಭು ಇಬ್ಬರು ಮಡದಿಯರನ್ನು ಆಳಲಾರನೆ ? ಅಕ್ಕ ತಂಗಿಯರೆಂಬ ಅರಿವಿನಿಂದ ಅವರಿಬ್ಬರನ್ನೂ ದೂರ ಮಾಡಿ, ನಡುವೆ ಕಲಹವನ್ನು ತಂದೊಡ್ಡಿ ಉಂಟಾದ ತುಸು ಕಹಿಯನ್ನು ಕುಡಿಯಲಾರನೆ ಹಾಲಾಹಲವನ್ನೇ ಕುಡಿದ ಕೆಚ್ಚೆದೆಯದಿಟ್ಟಶಿವ ! ಲೋಕದ ಬದುಕಿನಲ್ಲಿ ಲೀಲಾರ್ಥವಾಗಿ ದ್ವಂದ್ವಗಳನ್ನು ತಂದೊಡ್ಡಿ ಅದರಿಂದುದಿಸುವ ಕಹಿಯನ್ನು ನಗೆ ಮೊಗದಲ್ಲಿ ಸ್ವೀಕರಿಸಿ ನಲಿಯುವ ಪ್ರಸನ್ನ ಮೂರುತಿಯಲ್ಲವೆ ಪರಶಿವ !

—೦—

# ಬಿಟ್ಟೆ ಕಾಣೆ ಇವಳ ಜನುಮಾಕೆ

ಕಡಗದ ಕಯ್ಯನು ಬೆಡಗಲಿ ಬೀಸುತ !
ನಿಲ್ಲುತ ನಗುತ ನಿಂತು ಮಾತಾಡುತ !

ಬರುವ ಹಟ್ಟಿ ಲಕ್ಕಮ್ಮ ಬಯಲು ಸೀಮೆಯ ಗೊಲ್ಲರಿಗೆ ಕುಲದೇವತೆ. ಅವರ ಆರಾಧ್ಯದೇವತೆ. ಗೊಲ್ಲರಿಗಷ್ಟೇ ಅಲ್ಲ ; ಆ ಸುತ್ತಿನ ಒಕ್ಕಲು ಮಕ್ಕಳೂ ನಂಬಿ ಆರಾಧಿಸುವ ಸತ್ಯದೇವತೆ. ಭಕ್ತರ ಕಣ್ಣಿನಲ್ಲಿ ದೇವಿಯ ವಿವಿಧ ಕಲ್ಪನೆಗಳ ವರ್ಣಚಿತ್ರ ಮೋಡಿಯ ಹಾಡುಗಳ ವೈಖರಿಯೇ ವಿಶಿಷ್ಟ ವಾದುದು. ಕೋಗಿಲೆಯಂಥ ಅವರ ಮಧುರ ಸ್ವರ ; ಅರ್ಥಪೂರ್ಣ, ಭಾವ ಪೂರ್ಣ ಗೀತೆಗಳು. ನಾಲ್ಕು ಮಂದಿ ಗೊಲ್ಲಭಾಮೆಯರು ಕುಳಿತು ಹಾಡಲು ಉಪಕ್ರಮಿಸಿದರೆಂದರೆ, ಕೇಳುವವರು ಮೈಮರೆತಾರು ! ಭಕ್ತಿ ಪರವಶತೆ ಯಿಂದ ಪುಳಕಿತರಾದಾರು.

ವಯ್ಯಾರಿ ಲಕ್ಕಮ್ಮನ ಗುಡಿಗೆ ಸಮೀಪದ ಗಿರಿಯಲ್ಲಿಯೇ ಅವಳ ಒಲವಿನ ಪತಿ ರಂಗಯ್ಯನಿದ್ದಾನೆ.

ಅಂದದ ಹೆಣ್ಣಿಗೆ ಗಂಧದ ಸೀರೆಯ !
ಒನಪಿನ ಓಲೇನಿಟ್ಟು !

ಅವನು ನಲಿಯುವ ಬಗೆಯೇ ಬೇರೆ, ಸೊಗಸೇ ಬೇರೆ. ಮಡದಿಯ ಮೇಲೆ ಅವನಿಗೆ ಇನ್ನಿಲ್ಲದ ಆದರ ; ಇನ್ನಿಲ್ಲದ ಪ್ರೇಮ. ಅವಳ ರೂಪ ವರ್ಣಗಳಿಗೆ ಒಮ್ಮೆ ಮನಸೋತರೆ ಮತ್ತೊಮ್ಮೆ ಅವಳ ಅಂದ ಚೆಂದದ ಉಡುಗೆ ತೊಡುಗೆಗಳಿಗೆ ಹಿಗ್ಗುತ್ತಾನೆ. ಅವಳ ನಲ್ಮಾತುಗಳಿಗೆ ನಲಿಯುತ್ತಾನೆ. ಮಡದಿ ಅಲಂಕರಿಸಿಕೊಳ್ಳುವ ಸಮಯಕ್ಕೆ ಸರಿಯಾಗಿ ಬಂದು,

ದುಂಡೊಂದು ರಾಜಣವ ಮಂಡೆಯ ಒಳಗಿಟ್ಟು
ನೂರೊಂದು ರಾಜಣವ ಕೊರಳಿಗೆ ಇಟ್ಟು
ನಾರಿಯ ಕೊರಳೊಳ ಗರಿಗಳ ತಾನು
ತಿಳ್ಳುಗುರೊಳಿತ್ತುತ

ನಗುತ್ತಾನೆ. ಪ್ರೀತಿಯ ನುಡಿಗಳನ್ನಾಡುತ್ತಾನೆ. ನಾರಿಯ ಕುಡಿನೋಟಕ್ಕೆ

ಉಬ್ಬುತ್ತಾನೆ. ಹೀಗೆ,

ನಾರಿ ಲಕ್ಕಮ್ಮನ ತೋಳ ಮೇಲಾಡುವ
ಲೋಲ ರಂಗಯ್ಯ

ಒಮ್ಮೆ ದಾರಿ ತಪ್ಪುತ್ತಾನೆ. ಸತಿ-ಪತಿಯರ ನಡುವೆ ವಿರಸ ತರುವಂಥ ಕೆಲಸವೊಂದಕ್ಕೆ ಕೈ ಹಚ್ಚುತ್ತಾನೆ. ವಿಷಯವನ್ನು ತಿಳಿದ ಲಕ್ಕಮ್ಮನ ಚೊಕ್ಕ ಸಂಸಾರದಲ್ಲಿ ಅಸಮಧಾನದ ಕಿಡಿ ಹೊಗೆಯಾಡುತ್ತದೆ. ಅರ್ಥಗರ್ಭಿತವಾದ ಅವಳ ನೋಟ ಭಕ್ತರನ್ನು ಬೆದರಿಸಿದೆ. ನಿಂತು ಹಾಡುತ್ತಾರೆ. ಲಕ್ಕಮ್ಮ ತುಂಬ ಚೆಲುವೆ. ವಿಧವಿಧವಾಗಿ ಅಲಂಕರಿಸಿಕೊಂಡು ದೇಗುಲದ ತೋಪಿನ ಬಳಿ ಉಯ್ಯಾಲೆಯನ್ನಾಡುತ್ತಿದ್ದಾಳೆ. ಬೆಟ್ಟದಿಂದ ಅವಳ ದೊರೆ ರಂಗಯ್ಯ ನಲ್ಲೆಯನ್ನರಸಿ ಬರುವುದು ಭಕ್ತರ ಕಲ್ಪನೆಯ ಕಣ್ಣಿಗೆ ಕಂಡಿದೆ—

ಹಾರುವರ ಮಗಳಲ್ಲೆ ಕಾಲ ಉಂಗುರದೋಳೆ
ಮೇಲೆ ಒಳ್ಳೆಯ ಮನೆಯೋಳೆ– ಲಕ್ಕಮ್ಮ
ಉಯ್ಯಾಲೆಯನಿಳಿಯೆ ದೊರೆ ಬಂದ

ತನ್ನ ದಣಿ ಬರುವುದರ ಪರಿವೆಯೇ ಆಕೆಗೆ ಇದ್ದಂತಿಲ್ಲ. ತಾಯಿಯನ್ನು ನವುರಾದ ನುಡಿಯಲ್ಲಿ ಎಚ್ಚರಿಸುತ್ತಾರೆ—

ಹೆಣೆಗಂಟನೂಡಿ ಬೆನ್ನಮೇಲೆ ಬಿಡದಿರೆ
ಚೆನ್ನಿಗ ರಂಗಯ್ಯ ಬರುತಾನೆ– ಲಕ್ಕಮ್ಮ
ಚಿನ್ನದ ಸೆರಗ ಮರೆಮಾಡೆ

ಹೆಣೆಗಂಟನ್ನು ಬೆನ್ನ ಮೇಲೆ ಕುಣಿಸುತ್ತ ಆನಂದಮಗ್ನಳಾಗಿ ಉಯ್ಯಾಲೆ ಯನ್ನಾಡುವ ಲಕ್ಕಮ್ಮ ಪತಿ ಬರುವಾಗ ಸಡಗರದಿಂದ ಇಳಿದು ತುಂಬು ಮರ್ಯಾದೆಯಿಂದ ಅವನನ್ನು ಸ್ವಾಗತಿಸಬೇಕೆಂಬುದು ಭಕ್ತರ ಬಯಕೆ. ರಂಗಯ್ಯ ಬಂದಿರುವ ಉದ್ದೇಶ ಉತ್ತಮವಾದುದೇ :

ಅಡಿಕೆಯ ಕೈಬಣ್ಣ ಕಿಡಿಕಿಡಿಯಾರೊರವಿಕೆ
ಮಡಿಕೆಯ ದುಂಬ ಕೊಡವೋಳ– ಲಕ್ಕಮ್ಮನ
ಕಡುಕಟ್ಟ ನೋಡೆ ಶಿವ ಬಂದ

ಲಕ್ಕಮ್ಮ ಸಿರಿವಂತೆಯಷ್ಟೇ ಅಲ್ಲ. ಮಡಿವಂತೆಯೂ ಹೌದು. ಅವಳ ತನುಕಾಂತಿಯಂತೆಯೇ ಅವಳ ವಸ್ತ್ರಾಭರಣಗಳು ಕಿಡಿಯಂತೆ ಮಿಂಚುತ್ತವೆ. ಅವಳು ಮನೆಯ ಮಡಕೆಯ ಸಾಲಿನ ದುಂಬು ಹೊಡೆಯುವಂತೆಯೇ ಚೊಕ್ಕವಾಗಿ ಸಂಸಾರ ನಡೆಸುತ್ತಾಳೆ. ಅವಳ ಕಡುಕಟ್ಟನ್ನು ನೋಡಲು ಪತಿರಾಯ ಬಂದಿದ್ದಾನೆ. ಆದರೆ ಲಕ್ಕಮ್ಮನಿಗೆ ಪತಿಯ ಮೇಲೆ ಏಕೋ ಅಸಮಾಧಾನವಿದೆ. ಅವನು ಬರುವ ಸುದ್ದಿಯನ್ನು ಕೇಳುತ್ತಿದ್ದಂತೆಯೇ ಅವಳ ಮುಖವರ್ಣ ಬದಲಾಗುತ್ತಿದೆ. ಇತ್ತೀಚೆಗೆ ಅವನ ನಡತೆಯ ಬಗ್ಗೆ ಸ್ವಲ್ಪ ಬೇಸರ ಪಟ್ಟಂತೆ ಕಾಣುತ್ತಾಳೆ. ಪತಿ ಬರುವನೆಂದು ತಿಳಿದೂ ನೀರಿಗೆ ಹೊರಡಲು ಅನುವಾಗುತ್ತಾಳೆ. ರಂಗಯ್ಯ ಮುಂದೆ ಬಂದು ಅವಳನ್ನು ತಡೆದು ಕೇಳುತ್ತಾನೆ :

ನೇತುರವನುಟ್ಟು ನೀರಿಗ್ಹೊಗೋ ಹೆಣ್ಣೆ
ಯಾತರಲ್ಲಿಟ್ಟೆ ಶ್ರೀರಂಗ ?

ಪತಿಯ ಪ್ರಶ್ನೆಗೆ ಸ್ವಲ್ಪ ಬಿಗುಮಾನದಿಂದಲೇ ಉತ್ತರವನ್ನೀಯುತ್ತಾಳೆ.

ಗಂಧದುಂಡೇಲಿಟ್ಟೆ ಗಾಜಿನ ಭರಣೀಲಿಟ್ಟೆ
ಚಂದಿರು ಸಾಲೆಂಬೊ ಗರುಡೀಯ—ಸಾಲಿಗೆ
ಮಡಗಿಟ್ಟವಳೆ ಸರಸಕ್ಕೆ

ಹೀಗೆ ಸರಸಕ್ಕಿಟ್ಟು ಶ್ರೀರಂಗಿನ ಭರಣಿಯನ್ನು ಹುಡುಕುವ ಸಡಗರದಲ್ಲಿ ರಂಗಯ್ಯ ಮಗುವಿನ ತೊಟ್ಟಿಲನ್ನು ತಾಗಿಸುತ್ತಾನೆ.

ಸರಸಕಿಟ್ಟ ಭರಣಿ ತಾಗ್ಯಾವೆ ಬಾಗ್ಯಾವೆ
ತೊಟ್ಟಿಲವೆ ತೂಗಿ ಮಗನೆದ್ದ—ಕೋಪಕೆ
ಕಿತ್ತಿಟ್ಟಳು ಕೀಲು ಕಡಗವ

ನೀರಿಗೆ ಹೊರಟ ಸಮಯದಲ್ಲಿಯೇ ಮಗುವನ್ನು ಏಳಿಸುವುದೇ ? ಸಿಟ್ಟಿನಿಂದ ತನ್ನ ಕಡಗವನ್ನು ಕಿತ್ತು ಒಗೆಯುತ್ತಾಳೆ. ರಂಗಯ್ಯ ಸಮಾಧಾನ ಪಡಿಸುತ್ತಾನೆ.

ಕಿತ್ತಿಟ್ಟ ಕಡಗದ ಕಿರುಬೆರಳಲಿಡುಕೊಂಡು
ನಾನೇನೆಂದನೆ ಸತಿಯೊಳೆ—ಅನ್ನುತ
ನಂಬಿಸುತಾನೆ ಮಡದೀಯ

ಯಾವುದೋ ಸಿಟ್ಟಿದೆಂದು ರಂಗಯ್ಯನಿಗೆ ತಿಳಿದಿದೆ. ಅವಳ ಮುಖದಲ್ಲಿ ಬದಲಾಗುತ್ತಿರುವ ದುಗುಡವರ್ಣವೇ ಅವನಿಗೆ ಎಲ್ಲ ಕತೆಯನ್ನೂ ಹೇಳುತ್ತಿದೆ. ಆದರೂ ಅವನು ತಿಳಿಯದವನಂತೆ ಹೇಳುತ್ತಿದ್ದಾನೆ, ನಂಬಿಸುತ್ತಿದ್ದಾನೆ. ಮನೆಗೆ ಬಂದು ನಲ್ನುಡಿಗಳನ್ನಾಡಲು ಯತ್ನಿಸುತ್ತಾನೆ. ತಡೆಯಲಾರದ ದುಃಖದಿಂದ ಲಕ್ಕಮ್ಮ ಕೊನೆಗೆ ತನ್ನ ಮನದಾಳದ ನೋವನ್ನು ಕೊಡವಿಯೇ ನೆಮ್ಮದಿ ಪಡ ಬೇಕಾಯಿತು—

ಕಾರೆಯ ಕರುಕೆಂದು ಬೇಲದಕಾಯ್ ಒಗರೆಂದು
ಈ ನಾಡಿನ ಹೆಣ್ಣು ಕರಿದೆಂದು – ರಂಗಯ್ಯ
ತರದೀರೋ ಅವಳ ಬೆಡಗೀಯ

ರಂಗಯ್ಯ ಬೇರೊಬ್ಬಳಲ್ಲಿ ಪ್ರೇಮ ವ್ಯವಹಾರವನ್ನಿಟ್ಟುಕೊಂಡ ವಿಷಯ ಈಕೆಗೆ ತಿಳಿದಿದೆ ! ಅವಳನ್ನು ಕರೆತಂದು ತನ್ನ ಮನೆಯಲ್ಲೇ ಇಟ್ಟುಕೊಳ್ಳ ಬೇಕೆಂಬ ಅವನ ಉದ್ದೇಶವೂ ಅರ್ಥವಾಗಿದೆ. ತಾನು ಬಣ್ಣದಲ್ಲಿ ಸ್ವಲ್ಪ ಕಪ್ಪೆಂದು ಪತಿ ನಿರ್ಲಕ್ಷಿಸಿರಬಹುದೆಂದು ಶಂಕಿಸುತ್ತಾಳೆ. ಆದಕ್ಕೆ ರಂಗಯ್ಯನೇ ಸಮಾಧಾನ ಹೇಳುತ್ತಾನೆ—

ತಂದರೇನಾಯ್ತು ಅಂಗಳವ ಗುಡಿಸ್ಯಾಳು
ಬಿಂದಿಗೇಲಿ ಮೊಸರ ಕಡೆದಾಳು – ರಾತ್ರಿಗೆ
ಬಂದು ನಮ್ಮ ಮಂಚಕೆ ಒರಗ್ಯಾಳು

ಹಗಲಿನಲ್ಲಿ ಲಕ್ಕಮ್ಮನ ಸೇವೆ ಮಾಡುತ್ತಾಳೆ. ಇರುಳಲ್ಲಿ ರಂಗಯ್ಯನ ಮಂಚಕ್ಕೆ ಬರುತ್ತಾಳೆ. ಅದರಲ್ಲಿ ಲಕ್ಕಮ್ಮನಿಗಿರುವ ಅಡ್ಡಿಯೇನು ? ಅವಳೇಕೆ ಮುಖ ತಿರುವಬೇಕು?

ಒರಗಿದರೊರಗಾಲಿ ಸುರಹೊನ್ನೆ ಬಾಡಾದೆ
ನೀನೊಪ್ಪಿ ಮುಡಿದ ಪರಿಮಳ – ಪಚ್ಚೆಯ ತೆನೆಯ
ಯಾವೊಬ್ಬಳಾರ ಮುಡಿಲೇಳಿ

ಲಕ್ಕಮ್ಮ ಮುಡಿದು ಮಿಕ್ಕ ಹೂವು ತಾನು ಯಾರಾದರೂ ಮುಡಿದು ಆನಂದಿಸಲಿ ಎಂಬುದು ರಂಗಯ್ಯನ ವಾದ. ಪ್ರೇಮ ಕಲಹ ಅಲ್ಲಿಗೇ ಕೊನೆಗೊಳ್ಳುವುದಿಲ್ಲ. ನಯವಾದ ಮಾತುಗಳಲ್ಲಿ ಸಮಾಧಾನ ಪಡಿಸುತ್ತ ರಂಗಯ್ಯ ಪುರ

ಳುತ್ತಾನೆ. ಕೆಲದಿನ ಅಲ್ಲಿಗೆ ಹೋಗುವುದಿಲ್ಲವೆಂದೂ ಲಕ್ಕಮ್ಮನಿಗೆ ಸುಳ್ಳು ಭರವಸೆಯನ್ನು ಕೊಟ್ಟು ನಂಬಿಸುತ್ತಾನೆ. ಆದರೆ ಮತ್ತೆ ಸಂಜೆ ಮನೆಗೆ ಮರಳಿದಾಗ ಲಕ್ಕಮ್ಮನಿಗೆ ಸಂಶಯ. ಆಪಾದಮಸ್ತಕ ಪತಿಯನ್ನು ಸಂಶಯಾತ್ಮಕವಾಗಿಯೇ ನೋಡತೊಡಗುತ್ತಾಳೆ. ರಂಗಯ್ಯನಿಗೆ ನಗು ಬರುತ್ತದೆ—

ಹಾಗಲು ಕಾಯಂಗೆ ಕೋಗಿಲೆ ನಾಮವನಿಟ್ಟು
ಆರಾಳ ನಡುವೆ ಬರುವನು—ರಂಗಯ್ಯ
ಆಯಾ ನೋಡ್ಯಾಳೆ ಸಿರಿಲಕ್ಕು

ಸತಿಯ ದೃಷ್ಟಿಗೆ ರಂಗಯ್ಯನಿಗೆ ತುಸು ಕೋಪವೂ ಬಂದಿರಬೇಕು. ಸಿಟ್ಟಿನಲ್ಲಿ ನಿಜವನ್ನೇ ನುಡಿದುಬಿಡುತ್ತಾನೆ—

ಆಯಾ ನೋಡೋಕೆ ನಾನು ಕಳ್ಳನೇನೆ
ಹೋಗಿದ್ದೆ ತೊಳಸಿ ಅರಮನೆಗೆ

ಲಕ್ಕಮ್ಮನ ಚೆಲುಮೊಗ ಕೆಂಪುಹುಟ್ಟುತ್ತದೆ. ಪತಿ ಸರಸಕ್ಕೆ ಹೇಳತ್ತಿರಬಹುದೆಂದುಕೊಳ್ಳುತ್ತಾಳೆ. ಅಂಥ ಮಾತನ್ನು ಮತ್ತೊಮ್ಮೆ ಆಡದಿರಲಿ ; ಆ ಮಾತು ಸಟೆಯಾಗಿರಲಿ ಎಂಬುದು ಅವಳ ಬಯಕೆ.

ಉದ್ದಿನಕಾಯಂಗೆ ತಿದ್ದಿದ ನಾಮವನಿಟ್ಟು
ಬುದ್ಧಿವಂತರ ಮುಂದೆ ಬರುವೋನೆ—ರಂಗಯ್ಯನ
ಬುದ್ಧಿ ನೋಡ್ಯಾಳೆ ಸಿರಿಲಕ್ಕು

ತನ್ನ ಶೀಲಪರೀಕ್ಷೆಗೆ ನಿಂತಂತೆ ತೋರುತ್ತಾಳೆ ಮಡದಿ. ಅವನೇನು ಬುದ್ಧಿಗೆಟ್ಟವನೆ ?

ಬುದ್ಧಿ ನೋಡಾಕೆ ನಾನು ಕಳ್ಳನೇನೆ
ಹೋಗಿದ್ದೆ ತೊಳಸಿ ಅರಮನೆಗೆ

ತೊಳಸಮ್ಮನೊಡನೆ ತನಗಿರುವ ಬಿಚ್ಚುಪ್ರೇಮವನ್ನು ಮಡದಿಯೊಡನೆ ಹೇಳಿಯೇ ಬಿಡುತ್ತಾನೆ. ಬಹುದಿನದವರೆಗೆ ಈ ಮುಚ್ಚುಮರೆ ಸಲ್ಲದೆಂದು ಅವನ ನಂಬಿಕೆ. ತೊಳಸಿಯ ಸೌಂದರ್ಯಕ್ಕೆ ಮನಸೋತಿದ್ದಾನೆ ರಂಗಯ್ಯ. ಅವಳ ರೂಪವೈಭವಕ್ಕೆ ತಲೆತೂಗಿದ್ದಾನೆ. ಬಾಳೆಯ ತೋಟದಲ್ಲಿ ಹರಿವ ನೀರನ್ನು ಕುಡಿಯಹೋಗಿ ಆ ಚೆಲುವೆಯನ್ನು ಕಂಡು ಬೆರಗಾದನಂತೆ !

ಬಾಳೆಯ ತೋಟ ಹೋದನೆ ರಂಗಯ್ಯ
ಬಾಳೆಗೆ ಎರೆಯೊ ಹರಿನೀರ – ಕುಡಿಯಲ್ಹೋಗಿ
ಬಾಲೆಗೆ ರಂಗಯ್ಯ ಮನಸೋತ

ಬಾಳೆಯ ತೋಟದ ಆ ಮುದ್ದು ಬಾಲೆಗೆ ಮನಸೋತವನು ಮತ್ತೆ ಮನೆಯನ್ನೇ ಮರೆತ. ಅವಳೊಡನೆ ಕುಡಿಯಾಡುವ ಲಕ್ಕಮ್ಮನನ್ನೇ ಮರೆತ. ಲಕ್ಕಮ್ಮನಿಗೆ ಯಾರೋ ವಿಷಯವನ್ನು ಮುಟ್ಟಿಸಿದರು. ದುಃಖಭಾರಳಾಗಿ ನುಡಿಯುತ್ತಾಳೆ–

ಸೋತರೆ ಸೋಲಾಲಿ ಮನಿಗೇಕೆ ಬರಲಿಲ್ಲ
ಇರುಳ್ಹಾಕಿದ ಮಂಚ ತಲೆದಿಂಬು – ಬರಿಹಾಸಿಗೆ
ಮಾಯಕಾರನ ಮನೆಗೆ ಬರಹೇಳಿ

ರಂಗಯ್ಯ ಮೆಚ್ಚಿನ ಹೆಣ್ಣೊಂದು ತೊಳಸಿಯ ಮೇಲೆ ಭಕ್ತರಿಗಾಗಲೇ ಸ್ವಲ್ಪ ಪಕ್ಷಪಾತ ಮೂಡುತ್ತದೆ. ಅವಳಿಗೂ ಸ್ವಲ್ಪ ಆಶ್ರಯ ಕೊಡುವಂತೆ, ತನ್ನ ಅಪಾರ ಒಡವೆ ವಸ್ತ್ರಗಳಲ್ಲಿ ಕೆಲವನ್ನು ಕೊಟ್ಟು ಇಟ್ಟುಕೊಳ್ಳುವಂತೆ ವಿನಯ ದಿಂದ ಹೇಳುತ್ತಾರೆ–

ಬಣ್ಣಕಿರುದೇನೆ ಬಂಗಾರ ವಸಿಯೇನೆ
ಗಂಡು ಮಕ್ಕಳವರೆ ನಿನಗೇನೆ – ಲಕ್ಕಮ್ಮ
ಕೊಟ್ಟಾರ ಕೊಡೆ ತೊಳಸಿಗೆ

ಲಕ್ಕಮ್ಮನ ಕಣ್ಣು ಕೆಂಪೇರುತ್ತದೆ–

ಗಂಡುಮಕ್ಕಳಿದ್ದರೆ ಗಂಡನಿದ್ದಂಗೇನೆ
ಬಂಡಿಮ್ಯಾಲ್ಹೋಗೋ ಎಳವಾನೆ–ಇದ್ದರೆ
ಗಂಡನುಳ್ಳಮ್ಮ ಪತಿವ್ರತೆ

ಅದೆಲ್ಲಿ ಅಡಗಿದ್ದನೋ ರಂಗಯ್ಯ, ಆ ನುಡಿಯನ್ನು ಕೇಳಿ ಮುಂದೆ ಬರುತ್ತಾನೆ. ಮಡದಿಯನ್ನು ತಾನೂ ವಿನಯವಾಗಿ ಪ್ರಶ್ನಿಸುತ್ತಾನೆ.

ತಿರುಪತಿ ಬಣ್ಣ ತಿರುಗಂಚಿನ ಕಿರುಬಣ್ಣ
ಮುಳುಬಾಗಿಲು ಬಣ್ಣ ಎಳೆಸಣ್ಣ – ಲಕ್ಕಮ್ಮ
ಕೊಟ್ಟಾರ ಕೊಡೆ ತೊಳಸಿಗೆ

ಲಕ್ಕಮ್ಮ ತಲೆಯೆತ್ತಿ ನೋಡುತ್ತಾಳೆ. ತನ್ನ ಪತಿದೇವನೇ ಎದುರು ನಿಂತು ಕೇಳುತ್ತಿದ್ದಾನೆ. ಅವನ ವರ್ತನೆಗೆ ಬೇಸರವಿದ್ದರೂ ಮತ್ತೆ ಬಂದನಲ್ಲ ಎಂಬ ಹಿಗ್ಗು ಅವಳಿಗೆ. ಮುನಿದು ನುಡಿದರೆ ಮತ್ತೆಲ್ಲಿ ಹೊರಟಾನೋ ಎಂಬ ಭಯ.

ಮಾಯಕಾರ ರಂಗ ಮಾಯವನೆಲ್ಲಿ ಕಲಿತೆ
ಮಾಯನಾಗಿದ್ದೆ ಗಿರಿಮ್ಯಾಲೆ
ಉಟ್ಟು ಬಿಟ್ಟ ಸೀರ್ಯಾವೆ ತೊಟ್ಟು ಬಿಟ್ಟ ತಾಳ್ಯಾವೆ
ಕೊಟ್ಟು ಬಾರೋ ರಂಗಯ್ಯ ತೊಳಸಿಗೆ
ಹಾರುವರ ಮಗಳ ಮಾಯವ ಮಾಡಿ ಕರೆತಂದೆ

ಲಕ್ಕಮ್ಮನ ಚುಚ್ಚುಮಾತುಗಳು ಹೆಚ್ಚಿದಂತೆಲ್ಲಾ ರಂಗಯ್ಯ ಅವಳ ಸಿಟ್ಟಿನಲ್ಲಿಯೇ ಒಂದು ಸೌಂದರ್ಯವನ್ನು ಕಂಡು ಹಿಗ್ಗುತ್ತಿದ್ದಾನೆ—

ಮೋಸಗಾರ ರಂಗ ಮೋಸವ ಕಲಿತಾನೆ
ದಾಸನಾಗಿದ್ದೆ ಗಿರಿ ಮೇಲೆ—ಹಾರುವರ ಮಗಳ
ಮೋಸವ ಮಾಡಿ ಕರೆತಂದೆ

ಹಾಗೆಂದವನು ತನ್ನ ಬೆನ್ನ ಹಿಂದಿದ್ದ ತೊಳಸಿಯನ್ನು ಲಕ್ಕಮ್ಮನೆದುರು ತರುತ್ತಾನೆ—ಕೊನೆಯ ಪರೀಕ್ಷೆ ನಡೆದೇಹೋಗಲೆಂದು. ಲಕ್ಕಮ್ಮನ ಮುಖ ಗಂಟು ಕಟ್ಟುತ್ತದೆ. ಅವನ ಆದೇಶದಂತೆ ತೊಳಸಿ ಎಲೆಯನ್ನು ಮಡಿಸಿ ಬಾಯಿಗೆ ನೀಡುವಾಗ ಲಕ್ಕಮ್ಮನ ಕೋಪ ಮಿತಿಮೀರುತ್ತದೆ—

ಅವಳ ಗಂಡಾಗೆ ಇವಳು ಸುಣ್ಣವ ಕೊಟ್ಟು
ಕವಳಿಗೆ ಎಲೆಯ ಮಡುಮಡಿಚಿ—ಕೊಟ್ಟರೆ
ದಿಮ್ಮ ದಿಗಿಲೆಂದೊ ಇವಳಿಗೆ

ರಂಗಯ್ಯ ಇದನ್ನು ಸೂಕ್ಷ್ಮವಾಗಿ ಅರಿತುಕೊಳ್ಳುತ್ತಾನೆ. ಮತ್ತೆ ರೇಗಿಸುವ ನುಡಿಗಳನ್ನಾಡುತ್ತಾನೆ—

ದಿಮ್ಮುದಿಗಿಲನದಿರ ದಿಗಿಲುಗುಟ್ಟದಿರ
ಕಟ್ಟಕೊಳೆ ಸೀರೆ ಸೆರಗಿಗೆ—ಲಕ್ಕಮ್ಮ
ಪಟ್ಟಣದ್ಹೆಣ್ಣಿಗೆ ಮನಸೋತೆ

ಸಿಡಿಮಿಡಿಗೊಳ್ಳಬೇಡ ; ನಿನ್ನ ಸಿಟ್ಟನ್ನು ಸೀರೆಯ ಸೆರಗಿಗೆ ಕಟ್ಟಿಕೊ. ತೊಳಸಿ ಪಟ್ಟಣದ ಹೆಣ್ಣು, ಅವಳಿಗೆ ಮನಸೋತಿದ್ದೇನೆ– ಎಂದು ಅವನಾಡಿ, ಲಕ್ಕಮ್ಮನ ಸಿಟ್ಟಿನ ಮಟ್ಟವನ್ನು, ಸಹನೆಯ ಆಳವನ್ನು ಪರಿಕಿಸುತ್ತಾನೆ. ಮನದಾಳದಲ್ಲಿ ನಗೆಯ ಲಹರಿಯನ್ನು ಚಿಮ್ಮುತ್ತಾನೆ. ಮಡದಿಯ ಕೆಂಪೇರಿದ ಮುಖದ ಅತುಳ ಕಾಂತಿಗೆ, ಅಪೂರ್ವ ಸೌಂದರ್ಯಕ್ಕೆ ಹರ್ಷಿತನಾಗುತ್ತಾನೆ.

ತೊಳಸಿ ಲಕ್ಕಮ್ಮರ ನಡುವೆ ಮಾತು ನಡೆಯುತ್ತದೆ ; ಪುಟ್ಟ ಜಗಳವೇ ಜರುಗುತ್ತದೆ. ಇಬ್ಬರ ಕಿತ್ತಾಟವನ್ನು ನೋಡುವುದೇ ಅವನಿಗೊಂದು ಬಗೆಯ ನಲುಮೆಯಾಗಿದೆ_

ಬಳೆಗಾರರ ಮನೆಗೆ ಬಳಿಗೆ ನುಗ್ಗಿದಂಗೆ
ಬಾಯಲ್ಹೋರಿ ಬರೊ ಜಗಳ-ನೋಡಿಕೊಂಡು
ಮಾಯಕಾರ ರಂಗ ನಗುತಾನೆ

ಕಂಚುಗಾರ ಮನೆಗೆ ಕಂಚ ನುಗ್ಗಿದಂಗೆ
ಕೆಂಚೆರಿಬ್ಬರ ಜಗಳವ_ ನೋಡಿಕೊಂಡು
ಕಿರ‍್ಗಣ್ಣಲ್ಲಿ ರಂಗ ನಗುತಾನೆ

*　*　*　*

ಅವರಿಬ್ಬರ ಜಗಳದಲ್ಲಿ ಅಂದಿನ ಅಧ್ಯಾಯ ಕೊನೆಗೊಂಡಿತು. ಕೆಲದಿನ ಮೌನವಾಗಿದ್ದ ರಂಗಯ್ಯ ಮತ್ತೆ ತೊಳಸಿಯೊಡನೆ ಸಂಪರ್ಕ ಬೆಳೆಸುತ್ತಿರುವಂತೆ ಕಂಡಿತು. ಅವಳ ಮನ ಬೇಸತ್ತಿತು. ವೇಳೆಗೆ ಸರಿಯಾಗಿ ಪತಿ ಮನೆಗೆ ಬರುತ್ತಿಲ್ಲ. ಬಂದರೂ ಹೆಂಡತಿಯೊಡನೆ ಸರಿಯಾಗಿ ವರ್ತಿಸುತ್ತಿಲ್ಲ. ತೊಟ್ಟಿಲಲ್ಲಿರುವ ಮುದ್ದು ಮಗುವಿನೊಡನೆ ನಕ್ಕು ನಲಿಯುತ್ತಿಲ್ಲ. ಲಕ್ಕಮ್ಮ ಬಹು ನೊಂದುಕೊಂಡಳು. ಮನೆಗೆ ಪತಿ ಬರಲಿ_ಸರಿಯಾದ ಶಾಸ್ತಿ ಮಾಡಿಯೇನು ಎಂದುಕೊಂಡಳು.

ಹತ್ತು ಬೆಟ್ಟವ ಸುತ್ತಿ ಒಬ್ಬ ರಂಗಯ್ಯ ಬಂದ
ಕಗ್ಗನ್ನೊ ಲಕ್ಕು ಕದ ತೆಗಿಯೆ

ರಂಗಯ್ಯ ಬಾಗಿಲ ಬಳಿ ಬಂದು "ಒಬ್ಬನೇ ಬಂದಿದ್ದೇನೆ, ಬಾಗಿಲು ತೆಗೆ" ಎನ್ನುತ್ತಾನೆ. ಲಕ್ಕಮ್ಮನಿಗೆ ಆ ನುಡಿ ಕೇಳಿಸುತ್ತದೆ.

ಕದವ ತೆಗಿಯೋಕೆ ಬಾಲ ತೊಡಿಯ ಮೇಲೆ
ಸೀರಿಲ್ಲ ಶಿವನೆ ಹೊರಗಿರಿ

ಒಳಗಿನಿಂದ ಬಂದ ಉತ್ತರ ರಂಗಯ್ಯನನ್ನು ಬೆರಗು ಪಡಿಸಿತು. ಬಾಗಿಲನ್ನೇ ತೆಗೆಯೆನೆನ್ನುತ್ತಿದ್ದಾಳೆ, ಇದೇನು ಸೋಜಿಗ !

ಬಾಲನ ತೆಗೆದು ಗೆಜ್ಜೆ ಮಂಚಕೆ ಬಿಡೆ
ಹಸೆಯಮೇಗಲದ ಸಾಲೀಯ – ಜರತಾರಿಯ
ಒಂದುಡೆ ಒಂದ ಮುಸುಗಿಡೆ

ಪರಿಹಾರ ಕ್ರಮವನ್ನು ಅಪನೇ ಸೂಚಿಸುತ್ತಾನೆ. ಮಲಗಿಸುವ ವಿಧಾನವನ್ನು ಹೇಳಿಕೊಟ್ಟು ಹಸೆಯದಾರದ ಮೇಲೆ ಜರತಾರಿಯ ಸೀರೆಗಳಿರುವುದನ್ನು ನೆನಪು ಮಾಡಿಕೊಡುತ್ತಾನೆ. ಮತ್ತೆ ಸ್ವಲ್ಪ ಹೊತ್ತು ಮೌನ ಮೂಡುತ್ತದೆ. ಸಿಂತು ಸೋತ ರಂಗಯ್ಯ ದೈನ್ಯದಿಂದ ಹೇಳುತ್ತಾನೆ–

ತೆಗಿ ನನ್ನ ಚಿನ್ನವೇ ತೆಗಿ ನನ್ನ ರನ್ನವೆ
ತೆಗಿ ನನ್ನ ಕೊರಳ ಪದಕವೇ – ಪಟ್ಟದ ರಾಣಿ
ತೆಗಿಯೆ ವಜ್ಜುರದ ಆಗಳೀಯ

ಪತಿಯ ದೈನ್ಯದ ನುಡಿಗಳು ಲಕ್ಕಮ್ಮನ ಒಲವಿನ ಹೃದಯವನ್ನು ಚುಚ್ಚಿ ಎಚ್ಚರಿಸಿದಂತಾಯಿತು. ವಿಧಿಯಿಲ್ಲದೆ ಬಾಗಿಲನ್ನು ತೆಗಿಯಲೇ ಬೇಕಾಯಿತು. ಗೊಣಗಿಕೊಳ್ಳುತ್ತ ಎದ್ದು ಬರುತ್ತಾಳೆ. ಅವಳು ನಡೆದು ಬರುವ ರೀತಿಯಲ್ಲಿ ಸೀರೆಯ ಸೆರಗು ನಿರಿನಿರಿ ಎನ್ನುತ್ತದೆ ; ಅಷ್ಟು ವೈಖರಿಯಲ್ಲಿ ಅಷ್ಟು ವೈಯಾರದ ಸಸುಮುನಿಸನ್ನು ತೋರಿಸುತ್ತ ಬಾಗಿಲನ್ನು ತೆರೆಯುತ್ತಾಳೆ––

ಸಿಡಿಮಿಡಿಗುಟ್ಟುತ್ತ ನೆರಿಗೆ ಚೆಲ್ಲಾಡುತ್ತ
ಎಡಗೈಯ್ಯ ಲಗಣಿ ತೆಗೆದಾಳೆ

ರಂಗಯ್ಯ ಹೊರಗೆ ಕತ್ತಲಲ್ಲಿ ನಿಂತಿದ್ದಾನೆ. ಏನೊಂದೂ ಸ್ಪಷ್ಟವಾಗಿ ಕಾಣುತ್ತಿಲ್ಲ. ಆದರೂ ಲಕ್ಕಮ್ಮನಿಗೆ ಸಂಶಯ–ಬೆನ್ನ ಒಂದೆ ತೊಳಸಿ ಇದ್ದರೂ ಇರಬಹುದೆಂದು !

ಅಗಣಿ ತೆಗೆದ್ಯಾಳೆ ಕಣ್ಣೆತ್ತಿ ನೋಡ್ಯಾಳೆ
ತಂದ್ಯಾಕಳೆಂಡು ಹೊಸಮಣೆ

ನೇರವಾಗಿ ಒಳಗೆ ನಡೆದ ಲಕ್ಕಮ್ಮ ಯಾವ ಮಾತನ್ನೂ ಆಡದೆ, ದುಗುಡ ದುಮ್ಮಾನದಿಂದ ಕುಣಿಯುತ್ತ ಎರಡು ಮಣೆಗಳನ್ನು ತಂದು ಹಾಕಿದುದು ರಂಗಯ್ಯನನ್ನು ತಡೆದು ನಿಲ್ಲಿಸಿದಂತಾಯಿತು. ಹಂಗಿಸಿ ನುಡಿದಂತಾಯಿತು. ಅವನ ಮುಖದಲ್ಲಿ ಬೆವರ ಹನಿಗಳು ಚಿಮ್ಮಿದವು. ಲಕ್ಕಮ್ಮನ ಬಗ್ಗೆ ಅನು ಕಂಪವೂ ಮೂಡಿತು. ಒಲವು ಉಕ್ಕಿ ಹರಿಯಿತು--

ಯಾಕೆ ಲಕ್ಕಮ್ಮ ಮಾತೊಂದು ಮಣೆ ಎರಡು
ನಿನಗಿಬ್ಬರೇನೆ ಪುರುಷರು ?

ರಂಗಯ್ಯನ ಪ್ರಶ್ನೆ ಲಕ್ಕಮ್ಮನನ್ನು ತಿವಿದಂತಾಯಿತು. ಚೇತರಿಸಿಕೊಂಡು ಉತ್ತರವೀಯುತ್ತಾಳೆ--

ಅಂಜುವೆ ರಂಗಯ್ಯ ಅಣಕದ ಮಾತಿಗೆ
ಸುರುಳಿ ಕೆಂಜೆಡೆಯ ಮುಗಟೀನ -- ಮಂಡೇಲಿರುವ
ಸುರನಾರಿಗೊಂದು ನಿನಗೊಂದು

ರಂಗಯ್ಯ ಆಪಾದಮಸ್ತಕ ಸತಿಯನ್ನು ಈಕ್ಷಿಸುತ್ತಾನೆ. ಅವಳ ಜಾಣ ತನದ ನುಡಿಗೆ ಮೆಚ್ಚಿ ತಲೆದೂಗುತ್ತಾನೆ. ಆದರೂ ಮಾಯಕಾರನಲ್ಲವೆ ? ಮಡದಿಯ ಮನವೊಪ್ಪುವಂತೆ ನುಡಿಯುತ್ತಾನೆ--

ಒಪ್ಪಿದೆ ಕಾಣ್ಹೆಣ್ಣೆ ಕಟ್ಟಾಣಿ ಮಾತುಗಳ
ಬಿಟ್ಟೆ ಕಾಣೆ ಇವಳ ಜನುಮಾಕೆ

ಎಂದವನೆ ತೊಳಸಿಯನ್ನು ಭೂಮಿಗೆ ಇಳಿಯಬಿಡುತ್ತಾನೆ. ಆಗ ಸತಿಪತಿ ಯರ ನಡುವಿನ ವಿರಸ ಮರೆಯಾಗುತ್ತದೆ. ಒಲುಮೆಯ ಮಧುಚಂದ್ರಿಕೆ ಹರಡು ತ್ತದೆ. ಲಕ್ಕಮ್ಮನ ಕೀರ್ತಿ ಎಲ್ಲೆಲ್ಲಿಯೂ ವ್ಯಾಪಿಸುತ್ತದೆ. ಅವಳ ಛಲವಾದಿತನ ವನ್ನೂ ಪತಿಭಕ್ತಿಯನ್ನೂ ಕಂಡು ಗೊಲ್ಲರು ಮೆಚ್ಚಿಕೊಂಡು ಹಾಡುತ್ತಾರೆ. ಭಕ್ತಿಪರವಶತೆಯಲ್ಲಿ ಮೈ ಮರೆಯುತ್ತಾರೆ--

ಹಟ್ಟಿಗರುಕಾತಿ ಪಟ್ಟಣಕೆ ಗುರುಗಾತಿ
ಗೊಲ್ಲರ ಲಕ್ಕಮ್ಮ ಛಲಗಾತಿ -- ಅಂಬೋ ಸುದ್ದಿ
ದಿಳ್ಳಿ ಬಾಗಿಲಿಗೆ ಹರಿದಾವು

# ಅಣಜಿ ಹೊನ್ನಮ್ಮ.

ತ್ಯಾಗ ಬಲಿದಾನಗಳಿಗೆ ಸಂಬಂಧಿಸಿದ ಕಥೆಗಳು ನಮ್ಮ ಜನಪದ ಸಾಹಿತ್ಯದಲ್ಲಿ ವಿಪುಲವಾಗಿವೆ. 'ಅಣಜಿ ಹೊನ್ನಮ್ಮ'ನ ಕಥೆಯೂ ಈ ಪಂಕ್ತಿಗೆ ಸೇರಿದುದೇ. ಈ ಕಥೆಯನ್ನು ಹೋಲುವ ಕಥೆಗಳಿಗೇನೂ ನಮ್ಮಲ್ಲಿ ಕೊರತೆಯಿಲ್ಲ. ಅಲ್ಲಲ್ಲಿ ಪ್ರಕಟವಾದ ಜನಪದ ಕಥೆಗಳಲ್ಲಿ ಇದೇ ಬಗೆಯ ವಸ್ತುವನ್ನು ಕಂಡರೂ ಪ್ರಕೃತ ಕೃತಿ ಕಥನ ರೀತಿ, ಪರಿಸರಣ ಕಲ್ಪನೆ ಮಾನವೀಯ ದೃಷ್ಟಿಗಳಿಂದ ಇತರ ಕಥೆಗಳಿಗಿಂತ ಭಿನ್ನವಾಗಿ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ.

ಉಚ್ಚಂಗಿ ಎಲ್ಲಮ್ಮನ ಜಾತ್ರೆಗೆ ಹೋಗಿ ಬಂದ ಸಾಲು ಬಂಡಿಗಳು ಈಗಲೂ ಅಣಜಿಯ ಕೆರೆಯ ಬಳಿ ವಿಶ್ರಮಿಸಿಕೊಂಡೇ ಮುಂದೆ ಹೊರಡುತ್ತವೆ. ತಮ್ಮ ಬುತ್ತಿಯನ್ನು ಬಿಚ್ಚಿ ಊಟ ಮಾಡಿ, ಒಂದು ಪಯಣದ ದಣಿವನ್ನು ಕಳೆದು ಮುಂದೆ ಹೊರಡುತ್ತಾರೆ ಯಾತ್ರಿಕರು. ಹೊನ್ನಮ್ಮನ ಗುಡಿಗೆ ಹೋಗಿ, ಹೂವು ಹಣ್ಣುಗಳನ್ನಿಟ್ಟು ದೇವಿಗೆ ನಮಸ್ಕರಿಸಿ, ವಿಸ್ತಾರವಾಗಿ ಹರಡಿರುವ ನೀಲಜಲ ಹಾಗೂ ಎರಡು ಗುಡ್ಡಗಳನ್ನು ಕೂಡುವಂತೆ ನಿಂತಿರುವ ಸುಭದ್ರವಾದ ಏರಿಯ ಬೆನ್ನಿನಲ್ಲೇ ಇರುವ ಹೊನ್ನಮ್ಮನ ಗುಡಿಯ ಕಡೆ ಒಮ್ಮೆ ಕಣ್ಣು ಹಾಯಿಸಿ ನಿಡುಸುಯ್ಯುತ್ತಾರೆ. ಎಲ್ಲಮ್ಮನ ಪರಿಸೆಗೆ ಹೊರಡುವ ಮುನ್ನ ಅಣಜಿಯ ಕೆರೆ ಆ ಹಾದಿಯಲ್ಲಿ ಬಂದ ಯಾವ ಯಾತ್ರಿಕನನ್ನಾದರೂ ಕ್ಷಣ ನಿಲ್ಲಿಸುತ್ತದೆ. ಕೆರೆಯ ತೆರೆಯ ತೀರನ್ನೇರಿ ಮನಸ್ಸು ಹಲವು ವರ್ಷ ಹಿಂದಕ್ಕೆ ಹರಿದು ಆ ಕಥೆಯನ್ನು ಬಿತ್ತರಿಸುತ್ತದೆ....ಆ ನೀರು; ಆ ಏರಿ; ಆ ದೇಗುಲ; ಆಚೆಗಿರುವ ಅಣಜಿ; ಕೆರೆಯ ಹಳ್ಳಗಳೂ ನಿಡುಸುಯ್ಯುತ್ತವೆ, ತೆರೆಯ ಬಡಿತ ಒಂದು ನಿಮಿಷ ನಿಂತಂತೆ ಗೌರವದಿಂದ ಹೊನ್ನಮ್ಮನಿಗೆ ಮಣಿಯುತ್ತ, ಮುಂದೆ ಸಾಗುವಾಗ, ಏಕೋ ಕಣ್ಣಂಚಿನಲ್ಲಿ ನೀರಾಡಿರುತ್ತದೆ...

* * * *

ಆಗ ಈ ಅಣಜಿಯ ಕೆರೆಯೆಲ್ಲಿತ್ತು! ಆಗೊಮ್ಮೆ ಹೀಗೆಯೇ ಸಾಲು ಬಂಡಿಗಳು ಉಚ್ಚಂಗಿ ದುರ್ಗದಿಂದ ಬಾಗೂರು ಪರಿಸೆಗೆ ಹೊರಟಿದ್ದವು. ಒಂದು ಪಯಣದ ಅನಂತರ ಅಣಜಿಯ ಬಳಿ, ಪಯಣಿಗರು ಬಂಡಿಗಳ ಕೊರಳು ಬಿಚ್ಚಿ,

ಕಟ್ಟಿತಂದ ಬುತ್ತಿಯನ್ನು ಬಿಚ್ಚಿದರು. ಆದರೆ ಅಲ್ಲಿ ನೀರೆಲ್ಲಿದೆ ! ಬೇಸಿಗೆಯ ಬಿಸಿಲು ; ಸುತ್ತ ಉರಿಸೆಕೆ ; ಕಾದ ಬುವಿ ಹೊಗೆಯಾಡುವಂತಿತ್ತು. ಮಕ್ಕಳು ಮರಿಗೆ ಹಾಲಿಲ್ಲದೆ, ಕೂರಲು ನೆರಳಿಲ್ಲದೆ, ಕುಡಿಯಲು ಬೊಗಸೆ ನೀರಿಲ್ಲದೆ ಪರಿತಪಿಸುತ್ತಿದ್ದ ಭಕ್ತರ ಕೂಗು ಉಚ್ಚಂಗ್ಯಮ್ಮನ ಕಿವಿಯನ್ನು ಮುಟ್ಟದಿರಲಿಲ್ಲ. ದುರ್ಗವನ್ನಿಳಿದು ದೇವಿ ಗಳಗಳನೆ ನಡೆದು ಬಂದಳು. ಕೊರವಂಜಿಯಾಗಿ ಕಾಣಿಸಿಕೊಂಡು, ಒರತೆಗಳನ್ನು ತೋಡಿಸಿ ಭಕ್ತರಿಗೆ ಗಂಗೆಯ ದರ್ಶನ ಮಾಡಿಸಿದಳು.

ಆದರೆ ಇದು ಎಷ್ಟು ದಿನ! ದೇವಿ ಶಾಶ್ವತವಾದುದನ್ನೇ ಯೋಚಿಸಿದಳು. ಹಣ್ಣು ಹಣ್ಣು ಮುದುಕಿಯೊಬ್ಬಳು ಅಂದೇ ಅಣಜಿಯ ಪಟೇಲ ಕೆಂಚನ ಗೌಡನಿಗೆ ಕಾಣಿಸಿಕೊಂಡಳು. ಅಂದು ಅವನ ಅತಿಥಿಯಾಗಿದ್ದಳು : ನಟ್ಟಿರುಳಲ್ಲಿ ಗೌಡ ಏಕೋ ಬೆಚ್ಚಿ ಕಣ್ಣು ತೆರೆದ. ಮನೆಯನ್ನೆಲ್ಲಾ ಯಾವುದೋ ಅಪೂರ್ವ ಪ್ರಕಾಶ ತುಂಬಿದೆ, ಯಾವುದೋ ಅಪರಿಚಿತ ಧ್ವನಿ–

ಬಾರಪ್ಪ ಕೆಂಚನ ಗೌಡ
ಅಣಜಿ ಕೆರೆ ಕಟ್ಟಿಸಬೇಕು

ಎಂದಂತಾಯಿತು. ಮನೆದೇವರು ಉಚ್ಚಂಗಿ ಎಲ್ಲವ್ವನ ಧ್ವನಿಯೇ ಅದೆಂದು ಗೌಡನಿಗೆ ತಿಳಿಯದಿರಲಿಲ್ಲ. ಅಪೂರ್ವವಾದ ಕೆರೆಯನ್ನು ಕಟ್ಟಿಸಲು ಅಂದೇ ನಿರ್ಧರಿಸಿದ.

ವಡ್ಡರ ವೆಂಕಣ್ಣ ಬಂಕಣ್ಣ ಕೆರೆಯ ಕೆಲಸವನ್ನು ಒಪ್ಪಿಕೊಂಡರು. ಏಳು ಸಾವಿರ ಮಂದಿ ಆರೆಗುದ್ದಲಿಗಳನ್ನು ಹಿಡಿದು ಕೆಲಸಕ್ಕಿಳಿದರು. ಅದರೇನು ? ಏರಿ ಅಲ್ಲಲ್ಲಿ ಎದ್ದಂತೆ ತೋರಿದರೂ ಸಾವಿರಾರು ಆರೆಗುದ್ದಲಿಗಳು ಮುರಿದವು : ಏರಿಗೆ ಜೋಡಿಸಿದ ಹೆಂಟೆಗಳು ಜರುಗಿ ಬೀಳತೊಡಗಿದವು. ಒಡ್ಡರ ಪ್ರಯತ್ನವೆಲ್ಲಾ ವಿಫಲವಾಗುತ್ತ ಬಂದವು. ಗೌಡ ವಿಧಿಯಿಲ್ಲದೆ ಶಾಸ್ತ್ರದವರನ್ನು ಕರೆಸಲೇಬೇಕಾಯಿತು. ಅವರು–

ಕರಿಯ ಕಂಬಳಿನ್ಹಾಸಿ
ಇನ್ನು ಹೊತ್ತಿಗೆ ಪೂಜೆಮಾಡಿ

ಕೆಂಚನಗೌಡನ ಮುಖವನ್ನೊಮ್ಮೆ ನೋಡಿದರು.

ನಾನು ಅಂಜಿ ಹೇಳಲೇನೋ –ಕೆಂಚನಗೌಡ
ಅಂಜಾದ್ಹೇಳಲೇನೊ !

ಅವರ ಪ್ರಶ್ನೆ ವಿಚಿತ್ರವಾಗಿತ್ತು. ಕೆಂಚನಗೌಡ ಬೆಚ್ಚಿದರೂ ಎದೆಗುಂದ ದವನಂತೆ ಅಂಜದಯೆ ಹೇಳುವಂತೆ ತಿಳಿಸಿದ. ಆದರೆ ಕೆರೆಯ ಬಯಕೆ ಅವನನ್ನು ಧಸಕ್ಕನೆ ಭೂಮಿಗಿಳಿಸಿತು.

ತನ್ನ ಮಡದಿಯನ್ನು ಕೊಡುವುದೆ? ಹೆಂಡತಿಸತ್ತವನೆಂದು ಹೇಳುತ್ತಾರೆ. ಮಗ ಮಲ್ಲಣ್ಣನನ್ನು ಕೊಟ್ಟರೆ, ಮುಂದೆ ಗೌಡಿಕೆಗೆ ಯಾರೂ ಇಲ್ಲದಂತಾಗು ತ್ತದೆ. ಮಗಳು ಹೊಳಲವ್ವನನ್ನು ಕೊಡಲು ತನಗೇನು ಅಧಿಕಾರ; ಅವಳಾ ಗಲೇ ನೆರೆಮನೆಯ ಒಡತಿ. ಇನ್ನು ಉಳಿದವಳು ಸೊಸೆ ಹೊನ್ನಮ್ಮ.

ಹೊಳಲವ್ವ ಕೊಡದಿದ್ರೆ
ನಿನ್ನ ಸೊಸೆಯಾದ್ರೆ ಬೇಡ್ಯಾವೆ

ಶಾಸ್ತ್ರದವರ ಮಾತು ಗೌಡನ ಮನಸ್ಸನ್ನು ಕೆಣಕಿತು. ಒಂದು ರೀತಿಯಲ್ಲಿ ಉಚಿತವಾದ ಸಲಹೆ ! ಸೊಸೆ ಹೋದರೆ, ಮತ್ತೊಬ್ಬಳನ್ನು ತರಬಹುದು.

ಕೊಟ್ಟರೆ ಕೊಟ್ಟೇನು
ನೆರೆಮನೆ ಹೊನ್ನಮ್ನ

ಗೌಡನ ಮನಸ್ಸು ಕೊಂಚ ತೂಗಾಡಿ ಒಂದು ನಿರ್ಧಾರಕ್ಕೆ ಬಂದೇಬಿಟ್ಟಿತು. ಆದರೂ ಹಾಲಿನಂಥ ಹೊನ್ನಮ್ಮನನ್ನು ಕಳೆದುಕೊಳ್ಳುವುದೆ ? ಅಂಥ ಒಳ್ಳೆಯ ಸೊಸೆ ತನಗಿನ್ನೆಲ್ಲಿ ದೊರೆತಾಳು ? ಮನೆ ದೇವತೆಯ ಆಜ್ಞೆಯಾಗಿದೆ. ಕೆರೆ ಯನ್ನು ಕಟ್ಟಿಸಲೇಬೇಕು, ಕೆರೆಯ ಏರಿ ನಿಲ್ಲಬೇಕಾದರೆ....ನಿಲ್ಲಬೇಕಾದರೆ....

ಕೆಂಚನಗೌಡ ಅರಮನೆಗೆ ಬಂದು ಮಂಚವಿಡಿದು ಮಲಗಿದ. ಊಟ ನಿದ್ರೆ ಯಾವುದೂ ಅವನಿಗೆ ಬೇಡವಾಯಿತು.

ಮಗ ಮಲ್ಲನಗೌಡ ಮಲೆನಾಡಿಗೆ ಯಾತ್ರೆಗೆ ಹೊರಡಬೇಕಾದ ಸಂದರ್ಭ ಈಗಲೇ ಬಂದಿತು. ರೊಟ್ಟಿಬುತ್ತಿಯನ್ನು ಕಟ್ಟಿ ಹೊರಡಬೇಕಾದರೆ ಅನೇಕ ಅಪಶಕುನಗಳಾಗುತ್ತವೆ. ಹೊನ್ನಮ್ಮ ಪತಿಯ ಹಣೆಗೆಂದು ತಂದ ವಿಭೂತಿ ಎರಡು ಹೋಳಾಯಿತು ; ಜೋಡೆರಡು ಹಲ್ಲಿಗಳು ನುಡಿದವು. ಹೊರಡುವಾಗ ಮಲ್ಲಣ್ಣನ ತಲೆಗೆ ಬಾಗಿಲು ಬಡಿಯಿತು. ಅವನ ಬಿಲ್ಲು ಬಾಣಗಳು ಕೆಳಗೆ ಬಿದ್ದವು. ಆದರೂ ಅವನು ನಿಲ್ಲಲಿಲ್ಲ. ತನ್ನ ತಂದೆತಾಯಿಯರಿಗೆ "ಸೊಸೆ ಹೊನ್ನಾಲೆ ಜೋಕೆ" ಎಂದು ಹೇಳಿ ಹೋಗುತ್ತಾನೆ. ಮಗ ದೇವೇಂದ್ರನನ್ನು ಚೆನ್ನಾಗಿ ನೋಡಿಕೊಳ್ಳುವಂತೆ ತಿಳಿಸಿ ಹೋಗುತ್ತಾನೆ.

ಕೆಂಚನಗೌಡ ಕೆರೆಯ ಬಗ್ಗೆ ತನ್ನ ಮನಸ್ಸನ್ನು ಬದಲಿಸಲಿಲ್ಲ. ಕೆರೆಯನ್ನು ಕಟ್ಟಿಸಿದ್ದರಿಂದ ಗಂಗವ್ವನ ಪೂಜೆ ಮಾಡಲು ನಿರ್ಧರಿಸಿದ. ಮನೆಗೆ ಕೆಮ್ಮಣ್ಣನ್ನು ಬಳಿಯಬೇಕು. ಕೆಮ್ಮಣ್ಣನ್ನು ತರಲು ಸೊಸೆ ಹೊನ್ನಮ್ಮನೇ ಹೊರಡಬೇಕಾಯಿತು. ಅವಳ ಇಚ್ಛೆಯಂತೆ ನಾದನಿ ಹೊಳಲವ್ವನನ್ನು ಕರೆದುಕೊಂಡು ಹೋದಳು. ಹೊನ್ನವ್ವ ಮಣ್ಣನ್ನು ಕಡಿದಳು. ಹೊಳಲವ್ವ ಮಕ್ಕರಿಗೆ ತುಂಬಿದಳು. ಮಣ್ಣನ್ನು ಕಡಿದು ಕಡಿದು ಆಯಾಸವಾಗಿ ಹೊನ್ನಮ್ಮನಿಗೆ ನಿದ್ದೆ ತೂಗಿಬಂದಿತು. ಮರದ ನೆರಳಲ್ಲಿ ಹೊಳಲವ್ವನ ತೊಡೆಯ ಮೇಲೆ ತಲೆಯಿಟ್ಟು ಹಾಗೆಯೇ ಗಳಿಗೆ ಮಲಗಿದಳು. ಮಲಗಿದ ತುಸುಹೊತ್ತಿನಲ್ಲಿಯೇ ಬೆಚ್ಚಿ ಮೇಲೆದ್ದಳು. ಹೊಳಲವ್ವ ಬೆದರಿದಳು. ಅತ್ತಿಗೆಯನ್ನು ಸಂತೈಸಿ ಕೇಳಿದಾಗ—

ಕರಿಯ ಕಂಬಳಿ ಹಾಸಿತ್ತು
ನೆಲ್ಲಕ್ಕಿ ಹಸೆ ಬರೆದಿತ್ತು
ಮುತ್ತಿನ ಕಳಸ ತುಂಬಿತ್ತು
ನಿಮ್ಮಣ್ಣಗೆ ಮತ್ತೆ ಲಗ್ನವಾದ್ಹಂಗಿತ್ತು

ಎಂದು ಹೊನ್ನಮ್ಮ ನುಡಿಯುತ್ತ ಕಂಬನಿದುಂಬಿದಳು. ಇನ್ನು ಅಲ್ಲಿ ನಿಲ್ಲಲಿಲ್ಲ. ಆಗಲೇ ಸಂಜೆಯಾಗುತ್ತಿದೆ. ಬದಿಯ ಗುಡ್ಡದ ಬಳಿ ಊರ ಕುರುಬ ಮುಂದೆಯನ್ನು ತಿರುಹುತ್ತಿದ್ದ. ಊರಿನ ಸುದ್ದಿಯನ್ನು ಹೊನ್ನಮ್ಮ ಕೇಳಿದಳು. ಕುರುಬಗೌಡ, ಕಂಬಳಿಯನ್ನು ಸರಿಪಡಿಸಿಕೊಂಡು ಭಾರವಾದ ಧ್ವನಿಯಲ್ಲಿ ಹೇಳಿದ–

ಇನ್ನ ಗೌಡರ ಹೊನ್ನಮ್ಮ
ನಿನ್ನ ಕೆರೆಗೆ ಇಡುತಾರಂತೆ !

ಹೊನ್ನಮ್ಮನ ಹೆಜ್ಜೆಗಳು ಭಾರವಾದವು. ಕನಸು ದಿಟವಾದಂತೆಯೇ. ಕುರುಬ ನುಡಿದು ಹೊಳಲವ್ವನಾಗಲೇ ಮುಂದುವರಿದಿದ್ದಳು. ಕೆಂಚನಗೌಡ ಸೊಸೆ ಬರುವುದು ತಡವಾದುದನ್ನು ಕಂಡು ಊರ ಬಾಗಿಲಲ್ಲಿಯೇ ಕಾದಿದ್ದ.

ಕೆಂಚನಗೌಡ ಸೊಸೆಯನ್ನು ಕರೆದು ಹೇಳಿದ–ಈ ದಿನ 'ಒಂದ್ಹೊತ್ತು' ಇರಬೇಕೆಂದು. ತಾನು ಮಗುವಿನ ತಾಯಿ; ಉಪವಾಸಮಾಡುವುದೆ? ಹೊಳಲವ್ವ

ಇರಲಿ ಎಂದರೆ ಮಾವ ಒಪ್ಪುತ್ತಿಲ್ಲ. ಹೊನ್ನಮ್ಮನಿಗೆ ಸಂಕಟ ತಡೆಯದಾಯಿತು. ತನ್ನ ಬದುಕಿನ ಅಂಚು ತೀರ ಸಮೀಪವೇ ಆದಂತೆ ಭಾಸವಾಯಿತು. ಕೆಮ್ಮಣ್ಣು ಬಳಿಯುತ್ತ, ಸುಣ್ಣ ಬಳಿಯುತ್ತ ದುಃಖವನ್ನು ತಡೆಯಲಾರದೆ ಕಣ್ಣೀರ ಕೋಡಿಯನ್ನೇ ಹರಿಸಿದಳು. ಕೈಕಾಲು ತೊಳೆದು ಮಗುವಿನ ತೊಟ್ಟಿಲ ಬಳಿ ಬಂದು—

ಬಾರಪ್ಪ ನನ ಮಗನೆ
ನೀನು ಕುಡಿದ ಮೊಲೆ
ನಾಳೆ ಇಲ್ಲವಲ್ಲೊ !

ಎನ್ನುತ್ತ ಮಗ ದೇವೇಂದ್ರನನ್ನು ಎದೆಗೆ ಅವುಚಿಕೊಂಡಳು. 'ಬೋರೆಂದು ಅತ್ತಳು', ಕೆಂಚನಗೌಡ ಸೊಸೆಯ ಬೆನ್ನನ್ನೇ ಕಾಯುತ್ತಿದ್ದ. ಒಳಗೆ ಬಂದು ಅಡಿಗೆ ಮಾಡಿ, ಪೂಜೆಗೆ ಅಣಿ ಮಾಡುವಂತೆ ತಿಳಿಸಿದ. ಹುಗ್ಗಿ ಹೋಳಿಗೆ ಸಿದ್ಧವಾಯಿತು. ಹೆಡಿಗೆಗಳಲ್ಲಿ ಪೂಜಾ ಪದಾರ್ಥಗಳು ಅಣಿಯಾದವು. ಆದರೆ ಹೊನ್ನಮ್ಮ ಏಕೋ ತೌರನ್ನು ನೆನೆದುಕೊಂಡಳು. ಒಮ್ಮೆ ಅಲ್ಲಿಗೆ ಹೋಗಿ ಬಂದುಬಿಡುವುದಾಗಿ ಮಾವನನ್ನು ಅಂಗಲಾಚಿದಳು. ಗೌಡನಿಗೆ ಸಂಶಯ. ತಡೆದು ಅವಳ ಮನಸನ್ನು ನೋಯಿಸಲೂ ಆರ. ಕೊನೆಗೆ ಹೊಳಲವ್ವನೂ ಜೊತೆಯಲ್ಲಿ ಹೊರಟಳು. ಮಾವ ಕಾದ ಬಂಡೆಯ ಮೇಲೆ ಉಗುಳಿದ ; ಆ ಉಗುಳು ಆರುವುದರಲ್ಲಿ ನಾನು ಹಿಂದಿರುಗುವುದಾಗಿ ತಿಳಿಸಿದ್ದಳು. ಕೆರೇನಹಳ್ಳಿಯೇನು ಅಲ್ಲಿಗೆ ದೂರವೇ ; ನಾಲ್ಕು ಕೂಗಿನ ದೂರ. ಕೆರೆಯ ಆಚೆಯ ಅಂಚಿನಲ್ಲಿದೆ. ಎತ್ತಿಗೆ ಜೂಲು ಹಾಕಿ ಗೌಡ ಸಿದ್ಧಗೊಳಿಸಿದ. ಆದರೆ ಹೊನ್ನವ್ವ ತಾನು ನಡೆದುಕೊಂಡೇ ಹೋದಳು. ಹೊಳಲವ್ವ ಎತ್ತಿನ ಮೇಲೆ ಬಂದಳು.

ತಂಗಿ ಚಿಕ್ಕ ಹೊನ್ನವ್ವ ತಿಟ್ಟಿನ ಮೇಲೆ ಅಕ್ಕನ ಸುಳಿವನ್ನು ಕಂಡು ಮನೆಗೆಲ್ಲಾ ಸಾರಿ ಕುಣಿದಾಡಿದಳು. ಮನೆಗೆ ಬರುತ್ತಿದ್ದಂತೆಯೇ ಅಕ್ಕನ ಬಂಗಾರು ಪಾದ ತೊಳೆದು, ದೊಡ್ಡ ಸೀರೆ, ಮಡಿಯ ಕುಪ್ಪಸ, ತಂದಳು. ಆದರೆ ಹೊನ್ನಮ್ಮನಿಗೆ ಮಾವನೆಂದ ಮಾತು ನೆನಪಿತ್ತು—

ಎಂಜಲು ಮುಂಜಲು
ಒಂದ್ಹೊತ್ತು ಹೊನ್ನವ್ವ !

ಹೊನ್ನವ್ವ ಹೆಚ್ಚು ಹೊತ್ತು ಅಲ್ಲಿರುವಂತಿರಲಿಲ್ಲ. ತಾಯಿತಂದೆ, ಎಳು

ಮಂದಿ ಅಣ್ಣಂದಿರನ್ನೂ ಕುರಿತು ಹೇಳಿದಳು–

ನಮ್ಮತ್ತೆ ನಮ್ಮವ್ವ ಬ್ಯಾರೆ ಮಾಡ್ಯವರೆ
ಚಿಕ್ಕೋಳು ಹೊನ್ನವ್ವ ಕೊಡಿರಿವ್ವ !

ಅಲ್ಲದೆ ತನ್ನ ಗಂಡನನ್ನು ಯಾರೂ ಹೊಡೆಯದೆ ಬಡಿಯದೆ ನೋಡಿ ಕೊಳ್ಳಬೇಕೆಂದು ತಿಳಿಸಿದಳು. ತನ್ನ ಮಾತಿನಂತೆ ಅಣಜಿಗೆ ಆಕೆ ತಡಮಾಡದೆ ಬಂದುದು ಕೆಂಚನ ಗೌಡನಿಗೆ ಆನಂದವಾಯಿತು.

ಗಂಗವ್ವನ ಪೂಜೆಗೆ ಹೊರಡಲು ಸಿದ್ಧತೆಗಳಾದವು. ಹೊನ್ನವ್ವ ಮತ್ತೊಮ್ಮೆ ಕಂದ ದೇವೇಂದ್ರನನ್ನು ಅಪ್ಪಿ ಮುದ್ದಾಡಿ, ಕಣ್ಣೀರು ಹನಿಸಿ ಕರಗಿದಳು. ಹೊರಗೆ ಬಂದು ದುಃಖಭಾರದಲ್ಲಿ ಗಾಜಿನ ಕಂಬವನ್ನು ಆತು ಗಳಗಳನೆ ಅತ್ತಳು. ಕೆಂಚನ ಗೌಡ ಹೆಡಗೆಯನ್ನು ಹೊನ್ನಮ್ಮನೇ ಹೊರಬೇಕೆಂದ.

ಬ್ಯಾಸಿಗೆ ಬಿಸಿಲು ಮಾವ
ಕೂಸಿನ ತಾಯಿ ಮಾವ
ಅಂಗಾಲು ನಮಗೆ ಸುಡುತಾವೆ

ಎಂದು ಹೇಳಿದರೂ, ಕೇಳಲಿಲ್ಲ. ಉರಿಯುವ ಬಿಸಿಲಲ್ಲೇ, ಸುಡುವ ಧರೆ ಯಲ್ಲೇ ಹೊರಡಿಸಿದ. ಹೊಳಲವ್ವ ಕಳಸ ಹಿಡಿದು ಹೊರಟಳು ; ಊರ ಮುತ್ತೈದೆಯರೂ ಸಾಲುಗಟ್ಟಿ ಕೆರೆಯ ಹಾದಿಯಲ್ಲಿ ಸಾಗಿದರು. ಕೆರೆಯ ಅಂಗಳವೆಲ್ಲಾ ನೀರನ್ನು ಕಾಣದೆ ಬಿರುಕು ಬಿಟ್ಟಿದೆ. ಆ ಬಿಸಿಲ ತಾಪಕ್ಕೆ ಏರಿಯ ಗುಂಡುಗಳೆಲ್ಲಾ ಸಿಡಿಯುವಂತೆ ತೋರುತ್ತಿವೆ. ಸುಡುವ ನೆಲದಲ್ಲಿ ಹೊನ್ನಮ್ಮನ ಕಾಲುಗಳು ಸುಟ್ಟು ಬಾತು ಕೊಂಡವು. ಕಣ್ಣು ಕತ್ತಲು ಕವಿದವು. ಕಂದ ದೇವೇಂದ್ರನನ್ನು, ಗಂಡ ಮಲ್ಲಣ್ಣನನ್ನು ಏಕೋ ನೆನೆದು ಸೆರಗಿನಲ್ಲಿ ಕಣ್ಣೀರು ಒರೆಸಿದಳು. ಯಾವುದೋ ಸಾಹಸದ, ಯಾವುದೋ ಧೈರ್ಯದ, ಯಾವುದೋ ತ್ಯಾಗದ ಕಿರಣ ಅವಳ ಅಂತರಾಳವನ್ನು ವ್ಯಾಪಿಸಿತು. ಅವಳು ಮತ್ತೆ ಅಳಲಿಲ್ಲ. ಆದರೂ ಅಂಗೈ ನಡುಗುತ್ತಿವೆ ಕರಿಯ ಕಂಬಳಿಯನ್ನು ಹಾಸಿದಳು, ಮೇಲೆ ಕಳಸವನ್ನಿಟ್ಟಳು. ಬಸವಣ್ಣನ ಗದ್ದುಗೆಯನ್ನು ಮಾಡಿದಳು : ಬೆನವಣ್ಣನನ್ನು ಇಟ್ಟಳು. ಆದರೆ ಕೊಡಕ್ಕೆ ತುಂಬಲು ನೀರಿಲ್ಲ. ಆ ಬೆಂಗಾಡಿನಲ್ಲಿ ನೀರೆಲ್ಲಿ ದೊರೆಯಬೇಕು ! ಕೆಂಚನಗೌಡ ಒರತೆಯನ್ನು ತೆಗೆಯುವಂತೆ ನುಡಿದ. ಎಲ್ಲ ಸಿದ್ಧತೆಯನ್ನೂ ಹೊನ್ನವ್ವನೇ ಮಾಡ

ಬೇಕಿದ್ದಿತು. ಸುಡುವ ಮಣ್ಣು ನಡುಗುವ ಕೈ ! ಕೊನೆಗೆ ಹೊನ್ನವ್ವ ಕೈ ಹಚ್ಚಿ ಮೂರು ಹಿಡಿ ಮಣ್ಣು ತೆಗೆದುವೇ ತಡ–ಪ್ರವಾಹದಂತೆ ನೀರು ನುಗ್ಗಿ ಬಂದಿತು. ಐದು ಕೊಡಗಳನ್ನು ತುಂಬಿ ಹೊನ್ನವ್ವ ಪೂಜೆ ಮಾಡಿದಳು. ಮುತ್ತೈದೆಯರಿಗೆ ಉಡಿಯನ್ನು ತುಂಬಿದಳು. ಕೊನೆಯಲ್ಲಿ ಏಕೋ ಹಸಿವಾದಂತಾಗಿ ತನ್ನ 'ಒಂದ್ಹೊತ್ತ'ನ್ನು ಬಿಡಬಹುದೇ ? ಎಂದು ಮಾವಯ್ಯನನ್ನು ಕೇಳಿದರೆ ಗೌಡ ತಲೆಯಾಡಿಸಿ ಬಿಟ್ಟ.

ಮುತ್ತೈದೆಯರು ಕೊಡಗಳನ್ನು ಹೊತ್ತುಕೊಂಡರು. ಹೊಳಲವ್ವ ಕಳಸವನ್ನು ತೆಗೆದುಕೊಂಡಳು. ಎಲ್ಲರೂ ಮನೆಗೆ ಹೋಗುವಂತೆ ಗೌಡ ನುಡಿದಾಗ, ಹೊನ್ನವ್ವ ಮಾತಾಡಲಿಲ್ಲ. ಪೂಜಾ ಪದಾರ್ಥಗಳನ್ನು ಹೆಡಿಗೆಗೆ ಜೋಡಿಸುತ್ತಿದ್ದಳು.

ಏರಿಯ ಆಚೆ ಎಲ್ಲರೂ ಮರೆಯಾದ ಮೇಲೆ ಗೌಡ ಸೊಸೆಯೊಡನೆ ಹೊರಟ. ಏರಿಯನ್ನು ಸೇರುವಲ್ಲಿ ಮಬ್ಬು ಮುಸುಗುತಿತ್ತು. ಗೌಡ ದಣಿದವನಂತೆ ಅರೆ ನಿಮಿಷ ಅಲ್ಲಿ ಕುಳಿತ. ಹೊನ್ನಮ್ಮ ಅತ್ತ ತಿರುಗಿ ನಿಂತಳು. ಹೆಡಿಗೆ ಗೌಡನ ಪಕ್ಕದಲ್ಲೇ ಇತ್ತು. ಹೊನ್ನಮ್ಮ ಅರಿಯದಂತೆ ಕೂಡಲೇ ಬೆಳ್ಳಿಯ ಬಟ್ಟಲನ್ನು ಎತ್ತಿ ಬಚ್ಚಿಟ್ಟು ಸೊಸೆಯನ್ನು ಕೇಳಿದ—

ಏನವ್ವ ನನ್ನ ಸೊಸೆ ಕೇಳವ್ವ ನನ್ನ ಸೊಸೆ
ಎಲ್ಲಾ ತಂದಿದೀಯ ನೋಡವ್ವ

ಹೊನ್ನಮ್ಮ ಹುಡುಕಿ ನೋಡಿದಳು. ಬೆಳ್ಳಿಯ ಬಟ್ಟಲು ಮಾತ್ರ ಇರಲಿಲ್ಲ. ಕೆಂಚನಗೌಡ ಸಿಟ್ಟಾಗಲಿಲ್ಲ. ಬೇಗ ಹೋಗಿ ತರುವಂತೆ ಹೇಳಿದ. ಪೊನ್ನವ್ವ ಅಂಜಿದಳು, ಮತ್ತೆ ನಡುಗೆರೆಗೆ ಹೋಗಿ ಬರಬೇಕು. ಕತ್ತಲು ಕವಿಯುತ್ತಿದೆ ! ಗೌಡನ ಆಜ್ಞೆ ; ಮಾವನ ಆಣತಿ ! ಏರಿಯನ್ನು ಇಳಿದಳು. ಕೆರೆಗೆ ಕಾಲಿಡುತ್ತಿದ್ದಂತೆಯೇ ಏನೋ ತಂಪಾದಂತಾಯಿತು. ದಿನವೆಲ್ಲಾ ಬಿಸಿಲಲ್ಲಿ ಕಾದು ಬೇಯುತ್ತಿದ್ದ ಕೆರೆಯ ಅಂಗಳ ತಣ್ಣಗಿದೆ. ಕೆಸರು ಮೆತ್ತಿಕೊಳ್ಳುತ್ತಿದೆ ! ಹೊನ್ನವ್ವ ಮಾವನನ್ನು ಕೂಗಿ ಕೇಳಿದಳು. ಗೌಡ ಹಿಂದಿರುಗು ಎನ್ನಲಿಲ್ಲ.

ಗಡಗಡನ ಹೋಗವ್ವ ಓಡೋಡಿ ಬಾರವ್ವ
ಗಾಡನ್ಹೋಗಿ ನೀನು ತಾರವ್ವ

ಹೊನ್ನವ್ವ ಮುಂದೆ ನಡೆದಳು : ಕಾಲಿಗೆ ನೀರು ಮುತ್ತಿಟ್ಟಂತಾಯಿತು. ಪಾದ ಮುಚ್ಚಿ ಹೋದವು ! ಎಲ್ಲಿಂದ ಬಂತು ಈ ನೀರು ! ಏನಿದು ವಿಚಿತ್ರ ! ಹೊನ್ನವ್ವನಿಗೆ ಒಂದೂ ಅರ್ಥವಾಗಲಿಲ್ಲ. ಮತ್ತೆ ಮಾವನನ್ನು ಕೂಗಿ ಕೇಳಿದಳು.

"ನೀ ಗಾಡಸ್ಹೋಗಿ ತಾರವ್ವ". ಅದೇ ಮಾತು ಅದೇ ಆತುರದ ಧ್ವನಿ ! ಹೊನ್ನವ್ವ ಮುಂದುವರಿದಳು. ನೀರು ಮೇಲೇರುತ್ತಲೇ ಇದ್ದಿತು. ಮೊಣಕಾಲಿನವರೆಗೂ ಬಂದಿತು. ತೊಡೆಯನ್ನು ಮುಟ್ಟಿತು. ಸೊಂಟದವರೆಗೂ ಬಂದಿತು. ಹೊನ್ನವ್ವ ಮತ್ತೆ ನಿಂತಳು. ಗೌಡನನ್ನು ಕೂಗಿ ಕೇಳಿದಳು. ಮುಂದೆ ಹೋಗಲಾರೆ ಎಂದಳು,

"ಹೋಗವ್ವ ಹೊನ್ನವ್ವ ನೀನು ಓಡೋಡಿ ಬಾರವ್ವ" ಅದೇ ನಿರ್ದಯ ಉತ್ತರ. ಹೊನ್ನವ್ವನಿಂದ ಸಾಧ್ಯವಾಗಲಿಲ್ಲ. ನೀರು ಏರುತ್ತಲೇ ಇದೆ. ಎದೆಯನ್ನು ಮುಟ್ಟಿದೆ. ಕುತ್ತಿಗೆಯವರೆಗೂ ಬಂದುಬಿಟ್ಟಿದೆ. ಮುಂದೇನು ಮಾಡಲೂ ಅವಳಿಗೆ ತೋಚಲಿಲ್ಲ.

ಹೆಂಗೆ ಹೋಗಲಿ ಮಾವ
ನನ್ನ ಕತ್ತಿಗೆ ಬಂದವು ನೀರು

ದೈನ್ಯದ ಧ್ವನಿ ಗೌಡನ ಕಿವಿಯನ್ನು ಮುಟ್ಟಿತು. ಅವನಿಗೆ ಆವೇಶ ಬಂದಂತಾಗಿತ್ತು. ಕೊನೆಗೂ ಕೂಗಿ ನುಡಿದ,

ಬಂದರೂ ಬರಲವ್ವ
ನೀ ಗಾಢ ಹೋಗಿ ತಾರವ್ವ

ಹೊನ್ನಮ್ಮ ಅಸಹಾಯಕಳಾಗಿ ನಿಂತಳು. ಪೂಜೆ ನಡೆದ ಸ್ಥಳವನ್ನೇನೋ ಸಮೀಪಿಸಿದ್ದಳು. ಮುಂದುವರಿಯಲು ಅವಳಿಗೆ ದಾರಿ ತೋರಲಿಲ್ಲ. ಏರುತ್ತೇರುತ್ತ ನೀರು ಕಣ್ಣನ್ನು ಮುಚ್ಚಿತು. ಮಾವನನ್ನು ಕೂಗುತ್ತಲೇ ಹೆಜ್ಜೆಯನ್ನು ಕಿತ್ತಳು. ಕತ್ತಲು ಹೆಡೆಯಿಂದ ಅಪ್ಪಳಿಸಿದಂತೆ ಕೆರೆಯಲ್ಲಿ ಮಾಂರಿ ಅಲೆಗಳು ಅಪ್ಪಳಿಸಿದವು. ಹೊನ್ನವ್ವನ ಕಾಲ ಬಲ ಕುಸಿದು ಹೋಯಿತು. ತನ್ನ ಕೊನೆಯನ್ನು ನಿರ್ಧರಿಸಿಬಿಟ್ಟಳು. ಮತ್ತೊಮ್ಮೆ ಮಾವನನ್ನು ಕೂಗಿ ನುಡಿದಳು. ಆದರೆ ಹಿಂದಿರುಗಬೇಕೆಂಬ ಅಂಜಿಕೆಯಿಂದಲ್ಲ,ಕತ್ತಲಾಗುತ್ತಿದೆ, ಮಾವ ಒಬ್ಬರೇ ಇಲ್ಲೇಕೆ ಇರಬೇಕು, ಸುರಕ್ಷಿತವಾಗಿ ಮನೆ ಸೇರಿಕೊಳ್ಳಲಿ ಎಂಬ ಉದಾರ ಹೃದಯದಿಂದ.

ನಾನು ಹೋಗುತೀನಿ
ನೀವು ಹೋಗಿ ಮಾವಯ್ಯ

ಹೊನ್ನಮ್ಮ ಹೋದಳು ; ಹೊರಟೇ ಹೋದಳು. ಆ ಅನಂತ ಜಲದಲ್ಲಿ ಎಲ್ಲಿಯೋ ಐಕ್ಯವಾದಳು. ಕೆಂಚೇಗೌಡ ಕೆರೆಯ ಏರಿಯ ಮೇಲೆ ನಿಂತು ಮಗು ವಿನಂತೆ ಅತ್ತ. ದುಃಖದ ಭಾರದಲ್ಲಿ ಏರಿಯ ಮೇಲೆ ಬಿದ್ದು ಹೊರಳಾಡಿದ. ಹೊನ್ನವ್ವನನ್ನು ನೆನೆನೆನೆದು ಕೈಮುಗಿದ—

ದೇವರಾಗಿ ನೀನು ಹೋದವ್ವ

ಹೊನ್ನವ್ವ ದೇವರಾಗಿಯೇ ಹೋದಳು. ಕೆರೆಯ ಹಿಂದಣ ಶಿವಾಲಯದ ಶಿವಲಿಂಗದಲ್ಲಿ ಐಕ್ಯವಾದಳಂತೆ. ಅದನ್ನು ಹೊನ್ನಮ್ಮನ ಗುಡಿಯೆಂದೇ ಕರೆಯು ತ್ತಾರೆ.

ಮಲೆನಾಡಿಗೆ ಹೋಗಿದ್ದ ಮಲ್ಲನಗೌಡ ಮರಳಿದ. ಹೊನ್ನಮ್ಮನ ಏಳು ಮಂದಿ ಅಣ್ಣಂದಿರು ಅವನನ್ನು ಗಾಜಿನ ಕಂಬಕ್ಕೆ ಕಟ್ಟಿ ಹೊಡೆದರು. ಆದರೆ ತಂದೆ, ಹೊನ್ನಮ್ಮನ ಇಚ್ಛೆಯಂತೆ ಚಿಕ್ಕಹೊನ್ನಮ್ಮನನ್ನು ಕೊಟ್ಟು ಕೆರೆಯ ಏರಿಯ ಮೇಲೆಯೇ ಲಗ್ನ ಮಾಡಿದರು. ಹೊನ್ನಮ್ಮ, ಮಗ ದೇವೇಂದ್ರನನ್ನು ತನ್ನೆಡೆಗೆ ಕರೆದುಕೊಂಡಳು. ಈಗಲೂ ಕಾರ್ತೀಕದಲ್ಲಿ ಜನ ಅಣಜಿಯ ಕೆರೆಗೆ ಹೋಗಿ ಹೊನ್ನಮ್ಮನಿಗೆ ವೀಳ್ಯದ ಎಲೆಯನ್ನೂ, ಮಗ ದೇವೇಂದ್ರನಿಗೆ ಹಾಲನ್ನೂ ಬಿಡುತ್ತಾರೆ. ಅವಳ ಪುಣ್ಯಕಥೆಯನ್ನು ಕೇಳಿ ಭಕ್ತಿಯಿಂದ ಮಣಿ ಯುತ್ತಾರೆ.

——

# ಇಬ್ಬರಿಗೂ ವ ಮುಡಿಸ್ಯಾನೆ

ವಜ್ರದ ಗಿರಿ ಮೇಲೆ ನಿದ್ರೆಮಾಡುವ ಹೆಣ್ಣೆ
ಮುದ್ದು ಗಂಗಾಧರ ಸೆರೆ ತಂದ – ಚೆಲುವೆಣ್ಣೆ
ನೀನಿದ್ದ ಪಟ್ಟಣದ ಹೆಸರ್ಹೇಳೆ

ಶ್ರೀ ಆದಿಚುಂಚನಗಿರಿ, ಭಕ್ತರ ಕಣ್ಣಿಗೆ ವಜ್ರದ ಗಿರಿಯಾಗಿಯೇ ತೋರುತ್ತದೆ. ಸುತ್ತಮುತ್ತಿನ ಒತ್ತೊತ್ತಿನ ಗಿರಿಗಳ ನೆತ್ತಿಯನ್ನು ಮೀರಿ ಬೆಳೆದಿರುವ ಧೀರೋತ್ತುಂಗ ಅದ್ರಿಯದು. ಎತ್ತೆತ್ತ ನೋಡಿದರೂ ಸೊಂಪಾದ ವನ ಚುಂಚನಗಿರಿಯ ಶ್ರೀ ಪಾದಕ್ಕೆ ಶರಣು ಬಿದ್ದಿದೆ. ದಟ್ಟೈಸಿ ಬೆಳೆದ ದ್ರುಮರಾಜಿ ಕಣ್ಣಿಗೆ ಅನುಪಮ ಆಕರ್ಷಣೆಯನ್ನು ಬೀರಿದರೆ, ಹಸಿರು ಸಮುದ್ರದ ನಡುವೆ ಎದ್ದು ನಿಂತಂತೆ ತೋರುವ ಆ ಮಹೋನ್ನತ ಗಿರಿ ಮುಗಿಲಿಗೆ ತನ್ನ ಹೆಗಲನ್ನು ಚಾಚಿ ನಿಂತ ಬಸವನೋಪಾದಿಯಲ್ಲಿ ಭವ್ಯವಾಗಿದೆ : ಸುಂದರವಾಗಿದೆ.

ಬೆಟ್ಟದ ನಡುವೆ ಮುದ್ದು ಗಂಗಾಧರನಿಗೆ ಚೋಳರು ಕಟ್ಟಿದ ದೇವಾಲಯ ಅತ್ಯಂತ ಆಕರ್ಷಕವಾಗಿದೆ. ಬುಡದಿಂದ ನೆತ್ತಿಯವರೆಗೂ ಹಸಿರ ಉಡುಗೆಯನ್ನುಟ್ಟ ಶ್ರೀ ಗಿರಿಯಲ್ಲಿ ಬೆಳ್ಳ ಬೆಳ್ಳಗೆ ನಡು ನಡುವೆ ಗೋಚರಿಸುವ ಗುಡಿ ಗೋಪುರಗಳ ರಮಣೀಯ ಸೌಂದರ್ಯವಂತಿರಲಿ : ಇಲ್ಲಿನ ನಿಸರ್ಗಕಾಂತಿ ಅಪೂರ್ವವಾದುದು ; ಗಂಗಾಧರನ ಲೀಲಾವಿಲಾಸಗಳಿಗೆ ಸುಯೋಗ್ಯವಾದುದು. ಇಂಥ ಗಿರಿಯಲ್ಲಿಯೇ ಗಂಗಾಧರನು ಸೆರೆತಂದ ಹೆಣ್ಣು 'ಗಂಗೆಮಾಳಿ' ನಿದ್ರೆ ಮಾಡುತ್ತಾಳೆ. ಪಾರ್ವತಿ ಜೊತೆಯಲ್ಲಿದ್ದರೂ ಅವಳರಿಯದಂತೆ ಈಶ್ವರ ಇವಳನ್ನು ಜಟೆಯಲ್ಲಿ ಬೈಚಿಟ್ಟುಕೊಂಡಿಲ್ಲವೆ ? ಆಗಾಗ ಪಾರ್ವತಿಯ ದೃಷ್ಟಿಯನ್ನು ತಪ್ಪಿಸಿ ಗಂಗೆಮಾಳಿಯೊಡನೆ ನಲಿಯುವುದಿಲ್ಲವೆ ? ಆ ಮಧುರ ಪ್ರೇಮ ಸಲ್ಲಾಪಗಳನ್ನು ಜನಪದ ಕವಿಗಳು ಕಂಡ ಬಗೆಯೇ ಬೇರೆ. ಅವರ ವಿಶಿಷ್ಟ ಕಲ್ಪನೆಯು ಸೊಗಸು ಹೃದಯವನ್ನು ಸೆರೆಹಿಡಿಯುವಂಥದು.

ಕಾವಿಯ ಸೇತುರ ಕಾವಿಯ ಜೋತುರ
ಕಾವೇರ್ಹೊಳೆಯಿಂದ ಬರುವೋನೆ—ಗಂಗಾಧರ
ನಿನ್ನ ಕಾವಿ ಸಾವಿರಕೆ ಬೆಲೆಯಾದೊ

ಇದು ತ್ರೇತಾಯುಗದ ಮಾತು. ಗಂಗಾಧರ ಆಗ ಕಾವೇರೀ ತೀರದ ಚುಂಚನಕಟ್ಟೆ ಕ್ಷೇತ್ರದಲ್ಲಿ ನೆಲೆಗೊಂಡಿದ್ದನಂತೆ. ಸೀತಾಪಹರಣಾನಂತರ ತನ್ನ ಪ್ರೇಯಸಿಯನ್ನರಸುತ್ತ ಅನುಜ ಲಕ್ಷ್ಮಣನೊಡಗೂಡಿ ಗಜಾರಣ್ಯವೆಂದು ಹೆಸರು ಪಡೆದಿದ್ದ ಆ ಕ್ಷೇತ್ರಕ್ಕೆ ರಾಮನು ಬರಲು ಅವನಿಗಾಗಿ ಆ ಕ್ಷೇತ್ರವನ್ನು ಬಿಟ್ಟು ಕೊಟ್ಟು ಗಂಗಾಧರ, ಅಪೂರ್ವ ಪ್ರಕೃತಿ ಸೌಂದರ್ಯದಿಂದ ಕಂಗೊಳಿಸುತ್ತಿದ್ದ ಶ್ರೀ ಚುಂಚನಗಿರಿ ಕ್ಷೇತ್ರಕ್ಕೆ ಬಂದು :

ಕಡೆಗಲ್ಲು ಹತ್ತಿದ ಕಿಡಿಗಣ್ಣಲಿ ನೋಡಿದ
ಕಡೆಗಲ್ಲಿ ನಿಂತ ಇದೆ ಲೇಸು—ಎನ್ನುತ್ತ
ಕಿರು ಬಿದಿರಲಿ ಸ್ವಾಮಿ ನೆಲೆಗೊಂಡ

ಅಸಂಖ್ಯಾತವಾಗಿ ಬೆಳೆದುಕೊಂಡಿದ್ದ ಬಿದಿರು ಮೆಳೆಗಳಲ್ಲಿ ಉತ್ತಮ ವಾದ ಬಿದಿರೊಂದನ್ನು ಅರಸಿ ಸ್ವಾಮಿ ಅಲ್ಲಿ ನೆಲಗೊಂಡನಂತೆ. ಮುಂದೆ ಆರಣೆಯ ಪಾಳೆಯಗಾರರಿಂದ ಪ್ರೇರಿತರಾದ ಮೂವರು ಮೇದರು ಈ ಗಿರಿಗೆ ಬಂದು ಆಕರ್ಷಕವಾಗಿದ್ದ ಆ ಬಿದಿರನ್ನೇ ಕಡಿಯಲು, ನೆತ್ತರು ಹೊರಚಿಮ್ಮಿ ಅವರನ್ನು ಬೆರಗುಗೊಳಿಸಿತು. ಹಿಂದಿರುಗಿ ನೋಡದೆ ಹೊರಟು ಹೋಗುವಂತೆ ಅಶರೀರವಾಣಿಯಾಯಿತು. ಅಂತೆಯೇ ಹೊರಟವರು ಊರು ಸೇರುವುದರಲ್ಲಿ ಮನಸ್ಸಿನ ಕುತೂಹಲವನ್ನು ತಾಳಲಾರದೆ ಹಿಂದಿರುಗಿ ನೋಡಿ ಒಬ್ಬೊಬ್ಬರಾಗಿ ರಕ್ತಕಾರಿ ಮಡಿದರಂತೆ. ಬಿದಿರನ್ನು ಕಡಿದು ಶಿವನನ್ನು ಗುರುತಿಸಿದ ಬಗೆಯನ್ನು ನೆನೆಯುತ್ತಾರೆ :

ಅಪ್ಪ ಬೈರುವನ ಕೆನ್ನೆ ಕಡಿಹವರ್ಯಾರು
ಇಪ್ಪತ್ತಾಳುದ್ದ ಬಿದಿರಲ್ಲಿ—ಗಂಗಾಧರನ
ಕೆನ್ನೆ ಕಡಿದೋರು ಕೊರಮರು

ಅಂದಿನಿಂದ ಶ್ರೀ ಚುಂಚನಗಿರಿಯು ಗಂಗಾಧರೇಶ್ವರನ ಕೆನ್ನೆಯ ಒಂದು ಭಾಗ ಭಿನ್ನವಾಗಿಯೇ ಇದೆ. ಮೇದರು ಹೊರಟು ಹೋದಮೇಲೆ :

ವಡ್ಡರ ಕರಸ್ಯಾನೆ ಒಳಮಾತ ಹೇಳ್ಯಾನೆ
ಮಜ್ಜಣದ ಭಾವಿ ತೆಗೆಸ್ಯಾನೆ—ಗಂಗಾಧರ
ಮುತ್ತಿನ ಮಂಟಪವ ನಿಲಿಸ್ಯಾನೆ

ಕಲ್ಲು ಕುಟುಕರು ಕೊಲದಲಿ ಪಾಂಚಾಳರು
ಬೆಳ್ಳಿಯ ಉಳಿಯ ಕೈಲ್ಹಿಡಿದು – ಗೇದರಲ್ಲೆ
ಸ್ವಾಮಿ ಗಂಗಾಧರನ ಸಿರಿಗುಡಿಯ

ಈ ಸಿರಿಗುಡಿಯಲ್ಲಿ ಗಂಗಾಧರ ನೆಲೆಸಿದ್ದಾನೆ. ಅವನ ಗರ್ಭಾಂಕಣಕ್ಕೆ ಸೇರಿದಂತೆಯೇ ಅವನಿಬ್ಬರು ಮಡದಿಯರಾದ ಗಂಗೆ ಮತ್ತು ಪಾರ್ವತಿಯರ ಗರ್ಭಾಲಯಗಳೂ ಇವೆ. ಗಂಗೆಯನ್ನು ಭಕ್ತಾದಿಗಳು ಮಾಳವ್ವನೆಂದು ಕರೆದಿದ್ದಾರೆ, ಕಿರಿಯ ಮಡದಿಯಾದ ಅವಳನ್ನು ಬಹುವಾಗಿ ಹೊಗಳಿದ್ದಾರೆ; ಈಶ್ವರನ ಹೆಚ್ಚಿನ ಮಮತೆ ಅವಳ ಮೇಲೆಯೇ ಎಂದು ನಂಬಿದ್ದಾರೆ. ಪಾರ್ವತಿಯರಿಯದಂತೆ ಶಿವ ಅವಳನ್ನು ಎಲ್ಲಿಂದ ಕರೆತಂದನೆಂದು ಪ್ರಶ್ನಿಸುತ್ತಾರೆ. ಮಾಳವ್ವನೇ ಆ ಪ್ರಶ್ನೆಗೆ ಉತ್ತರ ನೀಡಬೇಕಾಗುತ್ತದೆ. ಶಿವನ ಭಕ್ತರೆಂದರೆ ಅವಳಿಗೆ ಅಪಾರ ಪ್ರೇಮ. ನಗುನಗುತ್ತಲೇ ಉತ್ತರ ನೀಯುತ್ತಾಳೆ :

ಪೆಸರ ಹೇಳಿದರೆ ನನ್ನ ದೆಸೆಯೋರು ನಡಿಗ್ಯಾರು
ಅಲವಂಗದ ಕೋಟೆಯ ಹಗಲೇಯ – ಕನ್ನವ ಕೊರೆದು
ಹೆಸರಿಗೆ ದೊಡ್ಡೋನು ಶಿವ ತಂದ

ತನ್ನ ನೆಲೆಯಾವುದು, ನಿಟ್ಟಾವುದು ಎಂಬುದನ್ನು ಆಕೆ ಹೇಳಲು ಇಚ್ಛಿಸಳು. ಏಕೆಂದರೆ ಗಂಗಾಧರನೊಡನೆ ಆಕೆ ಕದ್ದು ಬಂದಿದ್ದಾಳೆ. ನಾಳೆ ತನ್ನ ಕಡೆಯವರಿಗೆ ಆ ವಿಷಯ ತಿಳಿದರೆ ಅವರು ಮುನಿದಾರು ! ಆದರೂ ಭಕ್ತರ ಮೇಲಿನ ವಾತ್ಸಲ್ಯದಿಂದ ತಾನು ಬಂದ ಬಗೆಯನ್ನು ಸೂಕ್ಷ್ಮವಾಗಿ ಹೇಳುತ್ತಾಳೆ— ಅಲವಂಗದ ಕೋಟೆಯನ್ನು ಹಗಲಿನಲ್ಲಿಯೇ ಕನ್ನಕೊರೆದು ಇವಳನ್ನು ಗಂಗಾಧರ ಕರೆದು ತಂದ. ಅವನ ಧೈರ್ಯ ಅಲ್ಲಿ ಮೆಚ್ಚತಕ್ಕುದೇ ಆದರೂ ಇಲ್ಲಿ ಶ್ರೀ ಗಿರಿಯಲ್ಲಿ ಅವನ ಮಡದಿ ಪಾರ್ವತಿ ಇದ್ದಾಳೆ. ವಿಷಯವನ್ನು ತಿಳಿದ ಆಕೆ ಮನಬಂದಂತೆ ನಿಂದೆಯ ಮಾತುಗಳನ್ನಾಡುತ್ತಾಳೆ :

ತುಪ್ಪದರವಿಗೆ ಸೋತ ತೆಕ್ಕೆ ತುರುಬಿಗೆ ಸೋತ
ತುಪ್ಪ ಮಾರುವ ಕರುಬುತಿ – ಕೊರಳಲ್ಲಿ
ಮುತ್ತು ಕಂಡು ಗಂಗಾಧರ ಮನಸೋತ

ತುಪ್ಪ ಮಾರುವ ಆ ಕುರುಬುತಿಗೆ ಮನಸೋತಿದ್ದಾನೆ. ಅವಳ ತೆಕ್ಕೆ

ಇವನ ಹೃದಯವನ್ನು ಸೂರೆಗೊಂಡಿದೆ. ಅವಳ ಕೊರಳ ಮುತ್ತು ಇವನ ಕಣ್ಣು ಗಳನ್ನು ಸೆಳೆದಿದೆ. ಇವಿಷ್ಟಕ್ಕೇ ಅವನು ಸೋತನೇ ?

ಹಾಲು ಅರವಿಗೆ ಸೋತ ಜೋಲು ತುರುಬಿಗೆ ಸೋತ
ಹಾಲು ಮಾರುವ ಕುರುಬುತಿ—ಕೊರಳಲ್ಲಿ
ಮಣಿಯ ದಂಡೆಗೆ ಮನ ಸೋತ

ಈ ಹಾಲಿನ ಹುಡುಗಿಯನ್ನು ಹುಡುಕಿ ತರಬೇಕಾದರೆ ಶಿವ ಪಟ್ಟ ಪ್ರಯಾಸ ಹೆಚ್ಚಿನದು !

ಕೆಂಪೆಯ ತರಲ್ಹೋಗಿ ಸಂಪಿಗೆ ತಿರುಗಿದ
ಕೆಂಪೆ ಮಾಳವ್ವ ತರಲ್ಹೋಗಿ—ಗಂಗಾಧರ
ಸಂಪಿಗೆ ಮರವ ಒರಗವನೆ

ಆಕೆಯ ತರಲ್ಹೋಗಿ ಲೋಕವ ತಿರುಗಿದ
ಆಕೆ ಮಾಳವ್ವ ತರಲ್ಹೋಗಿ—ಗಂಗಾಧರ
ಸಿರಿ ಧೂಪದ ಮರವ ಒರಗಿದ

ರಂಭೆಯ ತರಲ್ಹೋಗಿ ಭೂಮಂಡಲ ತಿರುಗಿದ
ರಂಭೆ ಮಾಳವ್ವ ತರಲ್ಹೋಗಿ—ಗಂಗಾಧರ
ಶ್ರೀಗಂಧದ ಮರವ ಒರಗಿದ

ಭೂಮಂಡಲವನ್ನೆಲ್ಲಾ ಅಲೆದಲೆದು ಕೊನೆಗೆ ಮಾಳವ್ವನನ್ನು ಹುಡುಕಿ ತಂದ. ತನ್ನ ಮನವೊಪ್ಪುವ ಹೆಣ್ಣನ್ನು ಅರಸಿ ತಂದ. ಆದರೆ ಗಿರಿಯ ಬಳಿ ಬಂದಾಗ ಅವನ ಎದೆ ದಸಕ್ ಎಂದಿತು. ಗಿರಿಯಲ್ಲಿ ಪಾರ್ವತಿ ಕಾದಿದ್ದಾಳೆ. ಬೇಟೆಗೆ ಹೋಗುವುದಾಗಿ ಹೇಳಿ ಹೋದ ತನ್ನೊಡೆಯನಿನ್ನೂ ಏಕೆ ಬರಲಿಲ್ಲ ವೆಂದು ಕಾದು ಕುಳಿತಿದ್ದಾಳೆ. ಯಾರೋ ಹಬ್ಬಿ ಹರಡಿಕೊಂಡಿದ್ದ ಹೆಂಚಿಯ ತೆಂಡೆಯಲ್ಲಿ ಸುಳಿದಾಡಿದಂತಾಯಿತು—

ಹೆಂಚಿಯ ಹುಲ್ಲಲ್ಲಿ ಹೊಂಚಾಡೊಸಿವನಾರೆ
ಕಂಚಿನ ಗುರ್‍ವಣೆ ಕೈಲಿಲ್ಲ—ಗಂಗಾಧರ
ಹೊಂಚಾಡಿ ಹುಲಿಯ ಹೊಡೆದಿಲ್ಲ

ಹಾಗೆಯೇ ಪರಿಕಿಸಿ ನೋಡುವಲ್ಲಿ ಮತ್ತಾರೋ ಬಳಿಯಲ್ಲಿ ಸುಳಿದಾಡು ವಂತಿದೆ ! ಶಿವನ ಹಿಂದೆ ಮರೆಯಾಗಿ ನಿಂತಿದ್ದ ಮಾಳವ್ವನನ್ನು ಕಂಡು ಪಾರ್ವತಿಗೆ ಇನ್ನಿಲ್ಲದ ಕೋಪವುಂಟಾಯಿತು—ಪತಿಯ ಮೇಲೆಯೇ ಕೆರಳಿ ಬೀಳುತ್ತಾಳೆ :

ಹುಲಿಯ ಹೊಡೆದಿಲ್ಲ ಹುಲಿ ಚರ್ಮ ಸುಲಿದಿಲ್ಲ
ಕರಡಿಯ ಕಣ್ಣ ಕಳಚಿಲ್ಲ—ಗಂಗಾಧರ
ಅವಳೊಂದಿಗೆ ಹುಲ್ಲೆ ಮರಿಯಾದ

ಏನೋ ನೆಪ ಹೇಳಿ ಶಿವ ಜಾರಿಕೊಂಡ. ಅಂದಿನ ಪ್ರಸಂಗ ಹೇಗೋ ಶಾಂತವಾಯಿತು. ಕೆಲವು ದಿನಗಳು ಉರುಳಿದುವು. ಪತಿಯ ಹಾವಭಾವ ಗಳನ್ನೂ, ಸುಳಿವು ಹೊಳಹುಗಳನ್ನೂ ಪಾರ್ವತಿ ಪರೀಕ್ಷಿಸುತ್ತಲೇ ಬಂದಳು. ಆದರೂ ಗಂಗಾಧರ ಒಮ್ಮೆ ಮಾಳವ್ವನ ಬಳಿಗೆ ಜಾರಿಕೊಳ್ಳಲು ಯತ್ನಿಸಿದ. ಯಾವ ನೆಪವೂ ಪಾರ್ವತಿಯಲ್ಲಿ ನಂಬಿಕೆಯನ್ನು ಮೊಳೆಸದಂತಾದುವು. ಕಣ್ಣು ತಪ್ಪಿಸಿ ಹೊರಟಿದ್ದ ಪತಿಯನ್ನು ತಡೆದು ನಿಲ್ಲಿಸಿದಳು :

ಎಲ್ಲಿಗೆ ಲಿಂಗಯ್ಯ ಮೆಲ್ಲಗೆ ನಿನ ಪಯಣ
ಕಲ್ಲಲಿ ಬಂಡಿ ಹೊಡೆಕೊಂಡು

ಲಿಂಗಯ್ಯ ಕ್ಷಣಕಾಲ ತಬ್ಬಿಬ್ಬಾಗಬೇಕಾಯಿತು. ಈ ಪ್ರಶ್ನೆಯನ್ನು, ಪಾರ್ವತಿಯ ತಡೆಯನ್ನು ಅವನೂ ನಿರೀಕ್ಷಿಸಿರಲಿಲ್ಲ. ಆದರೂ ನಾಲಗೆಗೆ ತೋಚಿದುದನ್ನು ಹೇಳಿ ಜಾರಿಕೊಳ್ಳಲು ಯತ್ನಿಸಿದ :

ಕಲ್ಲಲಿ ಬಂಡಿಯ ಹೊಡಕೊಂಡು ಲಿಂಗಯ್ಯ
ನೆಲ್ಲಿಯ ಮರದ ನೆರಳಿಗೆ

ತನ್ನ ದೇಗುಲದ ನೆರಳು ಸಾಲದೆಂದು ನೆಲ್ಲಿಯ ಮರದ ನೆರಳಿಗೆ ವಿಹಾರ ಹೊರಟಂತೆ ನುಡಿದ. ಹರನ ಮುಖವನ್ನು ನೋಡಿ ಪಾರ್ವತಿಯ ಸಂಶಯ ಬಲ ಪಟ್ಟಿತು. ಬಂಡಿ ನೆಲ್ಲಿಯ ಮರದ ಕಡೆಗೆ ತಿರುಗಿಯೇ ಇರಲಿಲ್ಲ. ಹಿಂದೆಯೇ ಮತ್ತೊಂದು ಪ್ರಶ್ನೆ ಹಾರಿಬಂತು :

ನೆಲ್ಲಿಯ ಮರವೆಲ್ಲೊ ನೇರಿಳೆ ತೋಪೆಲ್ಲೊ
ಜಾಗುಗಲ್ಲೆಲ್ಲೊ ಜಪವೆಲ್ಲೊ—ಲಿಂಗಯ್ಯ
ನೀನು ಮೀಯುವ ಕೊಳವೆಲ್ಲೊ

ಲಿಂಗಯ್ಯನ ದೃಷ್ಟಿಯನ್ನೇ ಅನುಸರಿಸಿ ಪಾರ್ವತಿ ಸುತ್ತಲೂ ಅರಸಿದಳು. ಅವನ ಮಾತಿನಲ್ಲಿ, ಅವನ ಚಲನವಲನಗಳಲ್ಲಿ ಏನೋ ತುಂಟತನ, ಏನೋ ಕಳ ವಳ ಹುದುಗಿದ್ದಂತೆ ಕಂಡಿತು. ಏಕೋ ನೆರೆಯ ಸೀಗೆಯ ಮೆಳೆಯ ಕಡೆ ಅವಳ ದೃಷ್ಟಿ ಹರಿಯಿತು. ಇನ್ನು ಮುಚ್ಚುಮರೆ ಸಾಧ್ಯವಿಲ್ಲವೆಂಬಂತೆ ಶಿವ ಬಂಡಿಯನ್ನು ಅತ್ತಲೇ ತಿರುಗಿಸಿದ.

ಇಂದು ತನ್ನ ಎದೆಯಾಣ್ಮ, ಚೆಲವ ಗಂಗಾಧರ ಬರುವುದು ಮಾಳವ್ವ ನಿಗೆ ತಿಳಿಯದಿರಲಿಲ್ಲ. ಅವನಿಗಾಗಿ ಸಿರಿಗಂಧದ ಕುಂದಲಿಗೆಯಲ್ಲಿ ಅಕ್ಕಿ ಮುಂತಾದುವನ್ನು ತೊಳಿಸಿ ಸಿದ್ಧಪಡಿಸಿಕೊಂಡಿದ್ದಳು. ಬಹುಬಗೆಯ ಅಡಿಗೆಗಾಗಿ ವ್ಯವಸ್ಥೆ ಮಾಡಿಕೊಂಡಿದ್ದಳು. ಇದ್ದಕ್ಕಿದ್ದಂತೆಯೇ ಎರಗಿ ಬಂದ ಪಾರ್ವತಿಯ ನುಡಿ ಮುಳ್ಳು ಚುಚ್ಚಿದಂತಾಯಿತು :

ಸೀಗೆಯ ಮರದಡಿಯ ಸಿರಿಗಂಧದ ಕಲ್ಲೊರಳು
ಬಾಗಿ ರಾಜಾಣವ ತೊಳಿಸೋಳೆ—ಮಾಳವ್ವ
ನೀ ಯಾವ ರಾಯರಿಗೆ ಅಡಿಗಮ್ಮ

ತನ್ನ ತೆಳ್ಳನೆಯ ನಡುವಿಗೆ ಸೀರೆಯ ಸೆರಗನ್ನು ಬಿಗಿದು, ಒರಳಿನಲ್ಲಿ ಕುಟ್ಟಿ ಕುಟ್ಟಿ ಬೆವರು ಸೋರುತ್ತಿದ್ದ ಮುದ್ದು ಮಾಳವ್ವ ಸುಂದರವದನವನ್ನು ಮೇಲೆತ್ತಿದಾಗ ಅವಳ ಸೌಂದರ್ಯವನ್ನು ಕಂಡು ಪಾರ್ವತಿಯ ಹೃದಯದಲ್ಲಿ ಅಸೂಯೆಯ ಕುಡಿ ಮೂಡಿತು. ಇವಳು ಇಷ್ಟು ಚೆಲುವೆಯಾದುದರಿಂದಲೇ ತನ್ನೊಡೆಯ ಮನ ಸೋತಿದ್ದಾನೆ ಎಂಬುದೂ ವೇದ್ಯವಾಗಿ ಮತ್ತೆ ಮಾಳವ್ವನ ಮುಖ ನೋಡಿದಳು. ಒನಕೆಯನ್ನು ಹಿಡಿದು ಕುಟ್ಟಿದುದರಿಂದಲೋ ಎಂಬಂತೆ ಅವಳ ನೆತ್ತಿಯ ಕುರುಳು ವಿಶಾಲ ಲಲಾಟದ ಮೇಲೆ ನರ್ತಿಸುತ್ತಿತ್ತು. ಮುದ್ದು ತಾವರೆಕಣ್ಣುಗಳಲ್ಲಿ ಕೌತುಕ, ಕಳವಳ ಇಣುಕುಹಾಕುತ್ತಿದ್ದವು. ಹವಳದ ತುಟಿಗಳನ್ನು ತೆರೆದು ಏನೆಂದು ಉತ್ತರವಿತ್ತಾಳೊ ತನ್ನ ಮೋಹದ ಗಿಣಿ ಎಂದು ಗಂಗಾಧರ ನಿರುಕಿಸುತ್ತಾ ನಿಂತ. ತನ್ನ ನಗೆಮುಗುಳಿನಲ್ಲೇ ಅವಳಿಗೆ ಉತ್ತರವನ್ನು ಹೇಳಿಕೊಟ್ಟು ಕೈ ಕಟ್ಟಿ ನಿಂತುಕೊಂಡ !

ಯಾವ ರಾಯಗೆಂದರೆ ನಾ ಏನ ಹೇಳಲಿ
ಶ್ಯಾವಿರ್ಕೊನ್ನಿನ ಬಸವನ – ಮೇಲೆ ಬರುವ
ಸ್ವಾಮಿ ಲಿಂಗೈಗೆ ಅಡಿಗಮ್ಮ

ಅವಳ ಕಂಠ ಎಷ್ಟು ಮಧುರವಾಗಿದೆ. ಮೋಹಕವಾದ ರೂಪಿಗೆ ಮನ ಸೆಳೆಯುವ ದನಿ ! ಪಾರ್ವತಿ ಬೆರಗಾದಳು. ಅವಳ ದಿಟ್ಟತನದ ಉತ್ತರಕ್ಕೆ ನಿಷ್ಕಳಂಕ ಪ್ರೇಮಕ್ಕೆ ಮೆಚ್ಚಿಕೊಂಡಳಾದರೂ ಇಂಥ ಸೌಂದರ್ಯರಾಶಿಯ ಎದುರು ಶಿವ ತನ್ನನ್ನು ನಿರ್ಲಕ್ಷಿಸಿಯಾನು ಎಂದು ಶಂಕಿಸಿದಳು. ಮತ್ತೆ ಪ್ರಶ್ನಿಸಿದಳು :

ಸಾರಿಸಿದೀ ಮಲ್ಲಿ ಸಾಂಬ್ರಾಣಿ ಗಮ್ಮೆಂದೊ
ಯಾರುಣುವರಮ್ಮ ಮನೆಯಲ್ಲಿ

ಮನೆಯನ್ನೆಲ್ಲಾ ಚೊಕ್ಕವಾಗಿ ಸಾರಿಸಿದೆ, ರಂಗವಲ್ಲಿಯನ್ನು ಬಿಟ್ಟಿದೆ. ಸಾಂಬ್ರಾಣಿಯ ಹೊಗೆಯನ್ನು ಹಾಕಿದೆ. ಮನೆಯೆಲ್ಲಾ ಸುಗಂಧಯುಕ್ತ ವಾಗಿದೆ. ಸ್ವಾಮಿಯ ಸ್ವಾಗತಕ್ಕಾಗಿ ಎಷ್ಟೆಲ್ಲ ಸಡಗರ ಸಂಭ್ರಮಗಳು ! ಪಾರ್ವತಿಯ ಪ್ರಶ್ನೆಗೆ ಮಾಳವ್ವ ಉತ್ತರವೀಯಲು ಸೋಲಲಿಲ್ಲ :

ಯಾರುಣುವರಮ್ಮ ಮನೆಯಲ್ಲಿ ಬೆಟ್ಟದ
ಸ್ವಾಮುಣುವನಮ್ಮ ಮನೆಯಲ್ಲಿ

ಮುಖಕ್ಕೆ ನೀರೆರಚಿದಂತೆ ಮಾತಾಡುವ ಮಾಳವ್ವನೊಡನೆ ಮಾತಾಡಿ ಫಲವಿಲ್ಲವೆನಿಸಿತು ಪಾರ್ವತಿಗೆ. ತನ್ನ ಬಿರುಸಿನ ನುಡಿಗಳಿಗೆ ಅವಳು ಬೆದರ ಳೆಂಬುದೂ ವ್ಯಕ್ತವಾಯಿತು. ವಾದ ಪ್ರತಿವಾದದಲ್ಲಿ ರೂಪರಾಗಗಳಲ್ಲಿ ಎಲ್ಲ ದರಲ್ಲಿಯೂ ತನ್ನನ್ನು ಮೀರಿ ನಿಲ್ಲುವಂತೆ ಮೇಲುಕೈ ಆದಂತೆ ಕಂಡಳು. ಪಾರ್ವ ತಿಯ ಮುಖ ಬಣ್ಣಗೆಟ್ಟಿತು. ಇನ್ನು ಇವಳನ್ನು ನುಡಿಸಿ ಫಲವಿಲ್ಲವೆಂದು ತೋರಿದ ಮೇಲೆ ಇಷ್ಟೆಲ್ಲ ರಾದ್ಧಾಂತಕ್ಕೂ ಕಾರಣನಾದ ತನ್ನ ಪತಿಯನ್ನೇ ಪ್ರಶ್ನಿಸುವುದೊಳ್ಳೆಯದೆಂದು ಅತ್ತ ತಿರುಗಿ ಅವನನ್ನು ಅಲ್ಲಗಳೆಯುತ್ತಾಳೆ :

ಕುರುಬುತಿ ಕುಟ್ಟಾಡಿ ಕುರಿಯ ತಿಂಗಳು ಕಾದೆ
ಹಂಪೇಲಿ ಹಾಲು ಕರದುಂಡೆ—ಲಿಂಗಯ್ಯ
ಕೆಂಪೆ ಮಾಳವ್ಗೆ ಮನಸೋತೆ

ಕುರುಬುತಿಯಾದ ಗಂಗೆಮಾಳಿಯೊಡನೆ ಆಡಿಕೊಂಡು ತಿಂಗಳುಗಟ್ಟಲೆ ಕುರಿಯನ್ನು ಕಾಯಬೇಕಾಯಿತು ಬೆಟ್ಟದ ಪ್ರಭು. ಬಿದಿರ ಕೊಳವೆಯಲ್ಲಿ ಹಾಲು ಕರೆದು ಕುಡಿಯಬೇಕಾಯಿತು. ಕೆಂಪು ಮುಖದ ಆಕರ್ಷಕ ಮೈಕಟ್ಟಿನ ಮಾಳವ್ವ

ನಿಗೆ ಮನಸೋಲಬಹುದೆ? ತಾನಿದ್ದೂ ತನ್ನೊಲವಿನ ದಣಿ ಇಷ್ಟು ಮುಂದುವರಿದನೆ ? ಒಳ್ಳೆಯ ಮಾತುಗಳನ್ನಾಡಿಯಾದರೂ ತನ್ನ ದಾರಿಗೆಳೆದುಕೊಳ್ಳಲು ಯತ್ನಿಸುತ್ತಾಳೆ. ಕಣ್ಣಂಚಿನಲ್ಲಿ ಕಂಬನಿಯ ಹನಿ ಜಾರುವುದಲ್ಲಿರುತ್ತದೆ. ಆದರೂ ತೋರಗೊಡದೆ, ಕಂಠಬಿಗಿದು ಬಂದರೂ ಸಹಿಸಿಕೊಂಡು ಹೇಳುತ್ತಾಳೆ :

ಕುರಿಯ ಕಾಯಬೇಡ ಮರಿಗ್ಹುಲ್ಲ ತರಬೇಡ
ಕರಿಯ ಕಂಬಳಿಯ ನೇಯಬೇಡ –ಲಿಂಗಯ್ಯ
ನೀ ಕುರುಬರ ಮಾಳಿ ತರಬೇಡ

ಬೆಟ್ಟದ ಭೈರವ ಕುರಿಯಕಾಯುವುದೆಂದರೇನು ! ಕುರಿಮರಿಗಳಿಗೆ ಎಳೆಗರಿಕೆಯನ್ನು ತರುವುದೆಂದರೇನು, ಕುರುಬುತಿಯ ಸ್ನೇಹ ಬೆಳೆಸುವುದೆಂದರೇನು? ಪಾರ್ವತಿಯ ನುಡಿಗಳು ಶಿವನ ಹೃದಯವನ್ನು ಕಲಕಿತಾದರೂ, ಪಾರ್ವತಿಯ ಬಗ್ಗೆ ಕನಿಕರ ಮೂಡಿತಾದರೂ ತೋರಗೊಡದೆ ಸಿಟ್ಟಾದವನಂತೆ ನುಡಿಯುತ್ತಾನೆ ;

ಕುರಿಯ ಕಾಯುತೀನಿ ಮರಿಗ್ಹುಲ್ಲ ತರುತೀನಿ
ಕರಿಯ ಕಂಬಳಿ ನೇಯತೀನಿ—ಪಾರ್ವತಿ
ಕುರುಬರ ಮಾಳಿ ಬಿಡೆ ಕಾಣೆ

ಶಿವನ ಹಟವಾದಿತನ, ದೃಢನಿಶ್ಚಯ ಪಾರ್ವತಿಗೆ ಮಂದಟ್ಟಾಯಿತು. ಗಂಗೆ ಮಾಳಿಯನ್ನು ಅವನು ಬಿಡಲಾರನೆಂಬುದೂ ವೇದ್ಯವಾಯಿತು. ಸಿಟ್ಟನ್ನು ತಡೆಯಲಾರದೆ ಚಡಪಡಿಸುತ್ತ ಮಾಳಿಯ ಕಡೆ ತಿರುಗಿ :

ಗುಡ್ಡದ ಕೆಳಗೆ ಗೊಬ್ಬರವ ಚೆಲ್ಲೋಳೆ
ಜಿಡ್ಡು ಮೈಯ್ಯೋಳೆ ಕುರುಬುತಿ – ಕೊರಳಿಗೆ
ಹಾವ ಸುತ್ತೇನು ಹದಿನಾರ

ಎಂದು ಗುಡುಗುತ್ತ, ಸಿಡಿಮಿಡಿಗೊಳ್ಳುತ್ತ ಹೊರಟುಹೋಗುತ್ತಾಳೆ. ಪರಿಸ್ಥಿತಿ ವಿಷಮತೆಗೇರಿತೆಂದು ಶಿವ-ಮಾಳಿಯರಿಬ್ಬರೂ ಮೌನ ತಳೆಯುತ್ತಾರೆ· ನೆರೆ ಇಳಿದಂತೆ ಕೋಪದ ಆವೇಗ ಕಡಿಮೆಯಾಗುತ್ತದೆ. ಗಂಗಾಧರ ಮಾಳವ್ವನನ್ನು ತನ್ನ ಎರಡನೆಯ ಮಡದಿಯಾಗಿ ಸ್ವೀಕರಿಸುತ್ತಾನೆ. ಇಬ್ಬರು ಮಡದಿ

ಯರ ನಡುವೆಯೂ ಸಾಮರಸ್ಯವನ್ನು ತರಲು ಯತ್ನಿಸುತ್ತಾನೆ.

ಇಬ್ಬರನ್ನೂ ಸಮಾನ ಪ್ರೀತಿಯಿಂದ ಕಾಣುತ್ತಾನೆ. ಇಬ್ಬರನ್ನೂ ನಗಿಸುತ್ತಾನೆ, ನುಡಿಸುತ್ತಾನೆ. ಇಬ್ಬರ ನಡುವೆ ಕುಳಿತು ಆನಂದ ಪಡುತ್ತಾನೆ :

ಎಡಗಡೆ ಮಾಳವ್ವ ಬಲಗಡೆ ಪಾರ್ವತಿದೇವಿ
ಇಬ್ಬರ ನಡುವೆ ಘನಲಿಂಗು—ಕೂತುಕೊಂಡು
ಇಬ್ಬರಿಗ್ಹೂವ ಮುಡಿಸ್ಯಾನು.

— —

ಕನ್ನಡದಲ್ಲಿ ಲೇಖಕ – ಪ್ರಕಾಶಕ – ಓದುಗರ ನಡುವೆ ಗಾಢ ಸಂಬಂಧವನ್ನು ಏರ್ಪಡಿಸುತ್ತಾ, ಶ್ರೀಸಾಮಾನ್ಯರಲ್ಲಿ ಉತ್ತಮ ವಾಚನಾಭಿರುಚಿಯನ್ನು ಹಾಗೂ ಪುಸ್ತಕ ಪ್ರೀತಿಯನ್ನು ಮೂಡಿಸುತ್ತಾ ರಾಜ್ಯಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂಥ ಸ್ಥಾಯೀ ವ್ಯವಸ್ಥೆಯೊಂದನ್ನು ರೂಪಿಸಿ, ಕನ್ನಡ ಪುಸ್ತಕೋದ್ಯಮವನ್ನು ಜನಪರವಾಗಿ ಮತ್ತು ದೃಢವಾಗಿ ಬೆಳೆಸುವ ಉದ್ದೇಶದಿಂದ 'ಕನ್ನಡ ಪುಸ್ತಕ ಪ್ರಾಧಿಕಾರ' ಎಂಬ ದೀರ್ಘಕಾಲಿಕ ಯೋಜನೆಯೊಂದನ್ನು ಸರ್ಕಾರವು ರೂಪಿಸಲು ಯತ್ನಿಸುತ್ತಿದೆ. ಈ ನಿಟ್ಟಿನಲ್ಲಿ 1989–90ರ ಸಾಲಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಕೈಗೊಂಡಿರುವ 'ಜನಪ್ರಿಯ ಪುಸ್ತಕ ಮಾಲೆ' ಒಂದು ಮೊದಲ ಹೆಜ್ಜೆ. ಇಂದಿನ ಈ ಪುಸ್ತಕ ಪ್ರಕಟಣೆ ಯೋಜನೆಯು ಮುಂದೆ 'ಪುಸ್ತಕ ಪ್ರಾಧಿಕಾರ'ವಾಗಿ ಬೆಳೆದು, ಒಂದು ಸ್ವಾಯತ್ತ ಸಂಸ್ಥೆಯಾಗಿ ರೂಪುಗೊಳ್ಳಲೆಂಬುದು ಸದ್ಯದ ಆಶಯ.